

ಕರ್ನಾಟಕ ಸರಕಾರ

ಕಾದಂಬರಿ



# ಪರಮೇಶ್ವರ ಪುಲಿಕೇಶಿ

ಕೊರಟಿ ಶ್ರೀನಿವಾಸ ರಾವ್

ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ





54

# ಪರಮೇಶ್ವರ ಪುಲಿಕೇಶಿ

ಐತಿಹಾಸಿಕ ಕಾದಂಬರಿ

ಶ್ರೀನಿವಾಸರಾವ್ ಕೊರಟಿ




ವಿಶ್ವ ಕನ್ನಡ ಸಮ್ಮೇಳನ

14/3 ಎ, ನೃಪತುಂಗ ರಸ್ತೆ, ಬೆಂಗಳೂರು–560 002

PARAMESWAR PULIKESHI— A historical novel by Srinivasa Rao Korati Published by K. Jayacharya, K. A. S., Additional Director, Directorate of Kannada and Culture (Vishwa Kannada Sammelana), 14/3 A, Nrupatunga Road, Bangalore-560 002.

Pages 440 + IV, 1983—5000 Copies





ಮೂ



ಮುದ್ರಕರು.
ಫ. ಶಿ. ಭಾಂಡಗೆ
ವಿದ್ಯಾವಾಹಿನಿ ವಿದ್ಯುನ್ಮುದ್ರಣ
ಗಂಗಾಪೂರಪೇಟ, ಗದಗ-582101

883

ಆರ್. ಗುಂಡೂರಾವ್
ಮುಖ್ಯ ಮಂತ್ರಿ




ವಿಧಾನ ಸೌಧ
ಬೆಂಗಳೂರು
ದಿನಾಂಕ ೧೮-೯-೧೯೮೨

# ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡವಲ್ಲಿ ಪ್ರತಿಭಾ ವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು.



ಇಂದು ಮಹಾರಾಣಿ ದುರ್ಲಭದೇವಿಯವರಿಗೆ ಎಣೆ ಇಲ್ಲದ ಹಿಗ್ಗು. ಆರ್ಯಪುರದ ಬೆಣ್ಣಮಸೋಮಯಾಜಿಯವರ ವಿದ್ಯಾಪೀಠದಲ್ಲಿ ಗುರುಕುಲ ವಾಸ ಮಾಡುತ್ತಿದ್ದ ಮೊಮ್ಮಕ್ಕಳಾದ ಪುಲಿಕೇಶಿ ಮತ್ತು ಕುಬ್ಜವಿಷ್ಣುವರ್ಧನರು ರಾಜಧಾನಿಗೆ ಹಿಂತಿರುಗಿ ಬರುವ ದಿನ. ಅವರು ತಮ್ಮ ಶಿಕ್ಷಣವನ್ನು ಮುಗಿಸಿ ಕೊಂಡು ವಾತಾಪಿಗೆ ಹಿಂದಿರುಗುತ್ತಿದ್ದರು. ಈ ದಿನಕ್ಕಾಗಿ ಮಹಾರಾಣಿ ಯವರು ಚಾತಕಪಕ್ಷಿಯಂತೆ ಕಾಯುತ್ತಿದ್ದರು. ಆರ್ಯಪುರದಿಂದ ವಿಪ್ರೋತ್ತ ಮರು, ಘಟಿಕೋತ್ಸವ ನಡೆದಮೇಲೆ ಬಾಲಕರಿಬ್ಬರೂ ರಾಜಧಾನಿಗೆ ಬರಲಿರುವ ಸಂಗತಿಯನ್ನು ತಿಳಿಸಿದಗಲಾಯಿತು. ಮಹಾರಾಣಿಯವರು ಉತ್ಸಾಹದ ಬುಗ್ಗೆ ಯಾಗಿದ್ದರು. ವೃದ್ಧಾಪ್ಯದಿಂದ ಜೀರ್ಣವಾಗಿದ್ದ ಮುದಿ ದೇಹದಲ್ಲಿ ಮತ್ತೆ ಯೌವನೋದಯವಾದಂತೆ, ಸಂತೋಷ ಸಂಭ್ರಮಗಳಲ್ಲಿ ನಲಿಯುತ್ತಿದ್ದರು. ಮೊಮ್ಮಕ್ಕಳಿಬ್ಬರು ದೀರ್ಘಕಾಲದ ಅಗಲಿಕೆಯ ನಂತರ ರಾಜಧಾನಿಗೆ ಹಿಂದಿ ರುಗಿ ಬರುತ್ತಿದ್ದರು.

ಸುಮಾರು ಹತ್ತು ವರ್ಷಗಳ ಗುರುಕುಲವಾಸದ ನಂತರ ಊರಿಗೆ ಹಿಂದಿ ರುಗಿ ಬರುತ್ತಿದ್ದರು !

ನಾಳೆ ಸೂರ್ಯೋದಯವಾದನಂತರ, ನಾಲ್ಕು ಗಳಿಗೆಯ ಮೇಲೆ ಶಿಷ್ಯ ರನ್ನು ಕರೆತಂದು ಮಹಾರಾಣಿ ದುರ್ಲಭದೇವಿಯವರಿಗೆ ಒಪ್ಪಿಸುವುದಾಗಿ ಸ್ವಯಂ ಕುಲಪತಿಗಳೇ ಪತ್ರ ಬರೆದಿದ್ದರು. ಮಕ್ಕಳನ್ನು ಕರೆತರಲು ಆರ್ಯ ಪುರಕ್ಕೆ ರಥ ಹೋಗಿತ್ತು. ಇನ್ನೆಲ್ಲ ನಾಲ್ಕು ಜಾಮಗಳು ಕಳೆದುವೆಂದರೆ ಅವರು ಹೇಳಿದ್ದ ದಿನ ಬರುತ್ತಿತ್ತು. ಆದರೆ ಇದುವರೆಗೆ ಅತ್ಯಂತ ಸಹನೆ, ಸಂಯಮ ಗಳಿಂದ ಕಾದಿದ್ದ ಮಹಾರಾಣಿಯವರಿಗೆ ಇನ್ನೊಂದು ದಿನ ಕಾಯುವುದು ಕಷ್ಟ ವಾಗಿತ್ತು. ಮೊಮ್ಮಕ್ಕಳು ಬರುವ ದಿನ ಹತ್ತಿರ ಬಂದಂತೆ, ಅವರು ಮಕ್ಕಳನ್ನು ಹೇಗೆ ಸ್ವಾಗತಿಸಬೇಕು, ಅವರಿಗೆ ವಿದ್ಯೆಯನ್ನು ಕಲಿಸಿಕೊಟ್ಟ ಗುರುಗಳನ್ನು ಹೇಗೆ ಸತ್ಕರಿಸಬೇಕು, ಹೇಗೆ ಮರ್ಯಾದಿಸಬೇಕು, ಇವೇ ವಿಚಾರಗಳಲ್ಲಿ

ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಹಕ್ಕಿಯಂತೆ ಓಡಾಡುತ್ತಿದ್ದರು. ನಿಜಕ್ಕೂ ಮೊಮ್ಮಕ್ಕಳ ಆಗಮನದ ವಾರ್ತೆ ಕೇಳಿದಲಾಗಾಯಿತು ಅವರ ಹೃದಯ ಮನಸ್ಸುಗಳು ಹಕ್ಕಿಯಷ್ಟೇ ಹಗುರಾಗಿದ್ದವು. ಮೊಮ್ಮಕ್ಕಳ ಸಮಾಗಮದೊಂದಿಗೆ ಅವರ ಅನೇಕ ವರ್ಷಗಳ ಚಿಂತೆ, ಕಳವಳಗಳು ಪರಿಹಾರವಾಗುವುದಿತ್ತು. ಅವರ ಜೀವವನ್ನು ಕೊರೆಯುತ್ತಿದ್ದ ಅನಿಶ್ಚಿತ ಭಯ, ಭೀತಿ, ಶಂಕೆಗಳು ಇನ್ನಿಲ್ಲವಾಗುತ್ತಿದ್ದವು. ಈ ಹತ್ತು ವರ್ಷಗಳನ್ನು ಅವರು ಜೀವವನ್ನು ಹಿಡಿಯಲ್ಲಿ ಇಟ್ಟುಕೊಂಡು, ಯಾವ ಗಳಿಗೆಯಲ್ಲಿ ಯಾವ ಕೆಟ್ಟ ಸುದ್ದಿ ಇದಿರುಗೊಳ್ಳುವುದೋ; ಯಾವ ಸಮಯದಲ್ಲಿ ತಮ್ಮ ಹೊಂಗನಸೆಲ್ಲವನ್ನೂ ಪುಡಿಪುಡಿ ಮಾಡುವ ಭಯೋತ್ಪಾದಕ ವಾರ್ತೆ ಕಿವಿಗೆ ಬೀಳುವುದೋ ಎಂದು ಹೆದರಿ, ಕಂಗಾಲರಾಗಿದ್ದರು. ಇನ್ನು ಅಂತಹ ಭೀತಿ, ಕಳವಳಗಳಿಗೆ ಕಾರಣವಿಲ್ಲ. ಇನ್ನು ಒಂದು ದಿನ ಕಳೆದರೆ ಅವರ ಜೀವದ ಜೀವಾಳವಾಗಿದ್ದ, ಹೊಂಗನಸಿನ ಆಶಾದೀವಿಗೆಯಾಗಿದ್ದ, ಮೋಹದ ಮೊಮ್ಮಕ್ಕಳು ತಮ್ಮ ವ್ಯಾಸಂಗವನ್ನು ಮುಗಿಸಿಕೊಂಡು ರಾಜಧಾನಿಗೆ ಹಿಂದಿರುಗುತ್ತಿದ್ದರು. ಅವರ ಬರವಿನೊಂದಿಗೆ ಮಹಾರಾಣಿಯವರ ಮನಸ್ಸಿನ ಎಲ್ಲ ದುಗುಡವೂ ನಿವಾರಣೆಯಾಗುವುದಿತ್ತು!

ಈ ಸಂತೋಷದ ಹೆಚ್ಚಳದಲ್ಲಿ ಮಹಾರಾಣಿಯವರು ತಮ್ಮನ್ನು ತಾವು ಮರೆತು, ಹೊಂಗನಸಿನ ಲೋಕದಲ್ಲಿ ವಿಹರಿಸುತ್ತಿರುವುದನ್ನು ಕಂಡು, ಮಹಾರಾಣಿಯವರ ಆತ್ಮಸಖಿಯಾಗಿದ್ದ ಅಕ್ಕಲಬ್ಬೆ, ಬೆರಗುಗಣ್ಣುಗಳಿಂದ ನೋಡುತ್ತ, ಸಂತೋಷಾಶ್ಚರ್ಯಮಿಶ್ರಿತ ಧ್ವನಿಯಲ್ಲಿ,

"ಮಹಾರಾಣಿಯವರು, ಮೊಮ್ಮಕ್ಕಳ ಪುನರಾಗಮನದ ಸಂತೋಷದ ಹೆಚ್ಚಳದಲ್ಲಿ ಬಡ ದಾಸಿಯನ್ನು ಮರೆತಿದ್ದಾರೆ !" ಎಂದು ಪ್ರಶ್ನಿಸಿ ನಕ್ಕಳು.

ಈ ಮಾತು ಕೇಳಿ ಎಚ್ಚತ್ತ ದುರ್ಲಭದೇವಿಯವರೂ ತಮ್ಮ ಅನ್ಯಮನಸ್ಕತೆಗೆ ನಾಚುವಂತೆ ನಕ್ಕರು.

"ಮೊಮ್ಮಕ್ಕಳು ಊರಿಗೆ ಬರುತ್ತಿರುವುದು, ಮಹಾರಾಣಿಯವರಿಗೆ ಮತ್ತೆ ಹರೆಯ ಬಂದಂತೆ ಆಗಿದೆ. ಅವರ ಸ್ವಾಗತದ ಸಿದ್ಧತೆಗಳಲ್ಲಿ ಮಹಾರಾಣಿಯವರಿಗೆ ನಮ್ಮ ನೆನಪು ಮರೆಯಾಗುವುದು ಹಾಗಿರಲಿ, ಊಟ, ನಿದ್ರೆಗಳಿಗೂ ವಿರಾಮವಿಲ್ಲ !" ಎಂದು ನಕ್ಕಳು ಅಕ್ಕಲಬ್ಬೆ.

"ನಿನ್ನ ಮಾತು ಅಕ್ಷರಶಃ ನಿಜ, ಅಕ್ಕಲಾ. ನನಗೆ ಆ ಮಕ್ಕಳು ಬರುವ

ಸುದ್ದಿ ಕೇಳಿದಲಾಗಾಯಿತು, ಹೀಗೆಂದು ಹೇಳಲಾಗದ ಅವ್ಯಕ್ತ ಸಂತೋಷ ಹೃದಯ ಮನಸ್ಸುಗಳನ್ನು ತುಂಬಿಕೊಂಡಿದೆ. ಮಕ್ಕಳನ್ನು ಕಾಣುವ ತವಕದಲ್ಲಿ ನನಗೆ ಅನ್ನನೀರುಗಳು ಒಂದೂ ಬೇಡವಾಗಿದೆ. ಪಾಪ ! ತಾಯಿತಂದೆಗಳಿಲ್ಲದ ತಬ್ಬಲಿ ಮಕ್ಕಳು....ಹತ್ತು ವರ್ಷಗಳ ಅನಂತರ ಊರಿಗೆ ಮರಳುತ್ತಿದ್ದಾರೆ. ನಿನಗೂ ಇಂತಹ ಮಕ್ಕಳು ಇದ್ದಿದ್ದರೆ, ಪುತ್ರಸಮಾಗಮದ ಸಂತೋಷವೇನೆಂದು ತಿಳಿಯುತ್ತಿತ್ತು !" ಎಂದು ಮಹಾರಾಣಿಯವರು ಹೇಳಿ ನಕ್ಕರು.

ಈ ಮಾತು ಕೇಳಿ ಉತ್ಸಾಹಭಂಗಗೊಂಡು ಅಕ್ಕಲಬ್ಬೆ ಮುಖ ಕೆಳಗೆ ಮಾಡಿದಳು. ಇದನ್ನು ಸೂಕ್ಷ್ಮವಾಗಿ ಗುರುತಿಸಿದ ಮಹಾರಾಣಿಯವರು, "ನನ್ನ ಮಾತಿನಿಂದ ನಿನಗೆ ನೋವುಂಟಾಗಿದ್ದರೆ ಕ್ಷಮಿಸು ಅಕ್ಕಲಾ ? ನಿನಗೆ ನೋವುಂಟು ಮಾಡಲು ನಾನು ಹಾಗೆ ಹೇಳಲಿಲ್ಲ. ಮಕ್ಕಳ ಮೇಲಿನ ವ್ಯಾಮೋಹ ಆ ಮಾತನಾಡಿಸಿತು. ನಿನಗೂ ತಿಳಿದಿದೆ....ಆ ಮಕ್ಕಳಿಗೆ ನಾನಲ್ಲದೆ ಬೇರೆ ಯಾರಿದ್ದಾರೆ ದಿಕ್ಕು ? ಆ ದಿನ ಕೀರ್ತಿವರ್ಮ ಮಕ್ಕಳಿಬ್ಬರನ್ನೂ ನನ್ನ ಉಡಿಗೆ ಹಾಕಿ ಹೇಳಿದ ಮಾತನ್ನು ನೀನು ಮರೆತೆಯಾ ?" ಎಂದು ಹೇಳಿ ಗತಕಾಲದ ಸ್ಮೃತಿಯಲ್ಲಿ ಮೈಮರೆತರು.

ಆ ದಿನ ಕೀರ್ತಿವರ್ಮನು, ರಾಜಯಕ್ಷ್ಮದಿಂದ ಹಾಸಿಗೆ ಹಿಡಿದು ಮಲಗಿ ದವನು, ತಾನು ಇನ್ನು ಉಳಿಯುವುದಿಲ್ಲವೆಂದು ಖಚಿತವಾದಮೇಲೆ, ತಾಯಿ ಮರ್ಲಭದೇವಿಯನ್ನು ಬಳಿಗೆ ಕರೆಸಿಕೊಂಡು, ಅವರ ಉಡಿಯಲ್ಲಿ ತಲೆಯಿಟ್ಟು ಕಣ್ಣೀರಿಡುತ್ತಾ ಹೇಳಿದ್ದ :

"ಅಬ್ಬೆ, ನಾನು ಈ ಭಯಂಕರ ವ್ಯಾಧಿಯಿಂದ ಗುಣಮುಖನಾಗುವುದಿಲ್ಲ. ಆ ಆಸೆ ನನಗಿಲ್ಲ. ನಾನು ಸಾಯಲು ಅಂಜುವುದಿಲ್ಲ, ಆದರೆ...." ಭಯಂಕರ ವಾದ ಕೆಮ್ಮಿನ ದಾಳಿಯಿಂದ ಮಾತು ಅಷ್ಟಕ್ಕೇ ನಿಂತಿತ್ತು.

"ನೀನು ಅಧೀರನಾಗುವ ಕಾರಣವಿಲ್ಲ ಮಗು. ನೀನು ಮಾಡಿದ ದಾನ, ಧರ್ಮ, ಯಜ್ಞ-ಯಾಗಗಳೂ, ನೀನು ನಿರ್ಮಿಸಿದ ದೇವಮಂದಿರಗಳೂ, ದೇವತೋಪಾಸನೆಯೂ ನಿನ್ನನ್ನು ಈ ಕಷ್ಟದಿಂದ ಪಾರುಮಾಡುತ್ತವೆ. ಗರಳ ಕಂಠನಾದ ಶ್ರೀಮಕುಟೇಶ್ವರನಾಥನೇ ನಿನ್ನನ್ನು ಕಾಪಾಡುತ್ತಾನೆ. ಲೋಕ ರಕ್ಷಕನಾದ ಶ್ರೀಮನ್ಮಹಾವಿಷ್ಣುವೇ ನಿನ್ನನ್ನು ರಕ್ಷಿಸುತ್ತಾನೆ. ನೀನು ಭಯ ಪಡಬಾರದು ಮಗು !"

ಎಂದು ಮಹಾರಾಣಿ ದುರ್ಲಭದೇವಿ ಮಗನಿಗೆ ಧೈರ್ಯ ಹೇಳಿದರು.

ಈ ಮಾತು ಕೇಳಿ ಕೀರ್ತಿವರ್ಮನು ವಿಷಣ್ಣನಾಗಿ ನಕ್ಕನು. "ಶ್ರೀ ಮಕುಟೇಶ್ವರನ ಕೃಪೆ ಇದ್ದಿದ್ದರೆ ನನಗೆ ಈ ಭಯಂಕರ ವ್ಯಾಧಿ ತಲೆದೋರು ತ್ತಿತ್ತೆ ? ಆ ಮಹಾವಿಷ್ಣುವಿನ ಅನುಗ್ರಹವಿದ್ದಿದ್ದರೆ, ನಾನು ನಿರ್ಮಿಸಿದ ದೇವ ಮಂದಿರದಲ್ಲೇ ಆ ಮಹಾಸತಿಯ ಜೀವಹರಣವಾಗುತ್ತಿತ್ತೆ ? ಇಲ್ಲ ಅಬ್ಬೆ, ನಾನು ಪರಮ ಪಾಪಿ ! ಇಲ್ಲದೆ ಇದ್ದರೆ ನಾನು ಮಾಡಿದ ಪುಣ್ಯಕಾರ್ಯಗಳು ನನ್ನ ಬೆನ್ನು ಕಾಯದೆ ಹೋಗುತ್ತಿದ್ದವೆ ?....ನಾನು ಇನ್ನು ಉಳಿಯಲಾರೆ...." ಅಲ್ಲಿ ಸ್ವರ್ಗದಲ್ಲಿ ನನಗಾಗಿ ಕಾದಿರುವ ಮಹಾದೇವಿಯನ್ನು ಕೂಡಿಕೊಳ್ಳಲು ಹೊರಟಿದ್ದೇನೆ. ಆದರೆ ತಾಯಿಯಿಲ್ಲದ ಈ ಮಕ್ಕಳನ್ನು ತಬ್ಬಲಿಮಾಡಿ ಹೋಗುತ್ತಿರುವುದಕ್ಕೆ ನನಗೆ ವ್ಯಥೆಯಾಗುತ್ತಿದೆ....ಅದಕ್ಕಾಗಿ ನನಗೆ ದುಃಖ ವಾಗುತ್ತಿದೆ. ಇನ್ನು ಮಕ್ಕಳಿಗೆ ನೀವೇ ದಿಕ್ಕು ! ಅವರನ್ನು ನಿಮ್ಮ ಉಡಿಗೆ ಹಾಕಿ ಹೋಗುತ್ತಿದ್ದೇನೆ. ಅವರ ಯೋಗಕ್ಷೇಮ ನಿಮ್ಮದು...."

ಎಂದು ಹೇಳಿ ಮತ್ತೆ ಕೆಮ್ಮಿನ ದಾಳಿಗೆ ಸಿಕ್ಕಿ ಜರ್ಜರಿತನಾಗಿದ್ದನು.

"ಮಗು, ಮಕ್ಕಳ ಚಿಂತೆಯನ್ನು ಹಚ್ಚಿಕೊಳ್ಳಬೇಡ. ನಾನು ಬದುಕಿರುವ ತನಕ ಅವರು ಮುಡಿದ ಹೂ ಬಾಡದಂತೆ ನೋಡಿಕೊಳ್ಳುತ್ತೇನೆ. ಇಷ್ಟರ ಮೇಲೆ ದೈವೇಚ್ಛೆಯಿದ್ದಂತೆ ಆಗಲಿ."

"ಅಬ್ಬೆ, ನಾನು ನಿಮ್ಮ ಮೇಲೆ ಎಂತಹ ಜವಾಬ್ದಾರಿಯನ್ನು ಹೊರಿಸಿ ಹೋಗುತ್ತಿರುವೆನೆಂದು ನನಗೆ ತಿಳಿದಿದೆ....ಆದರೆ, ಆ ಬಗ್ಗೆ ನಾನು ಏನೂ ಮಾಡ ಲಾಗದ ಅಸಹಾಯಕ ಸ್ಥಿತಿಯಲ್ಲಿ ಇದ್ದೇನೆ. ನನಗೆ ಇರುವ ತಂದೆತಾಯಿ, ಬಂಧು ಬಳಗ, ಗುರುದೈವ ಸಮಸ್ತವೂ ನೀವೇ ಆಗಿದ್ದೀರಿ. ಪತಿವಿಯೋಗದಿಂದ ಜರ್ಜರಿತರಾಗಿರುವ ನಿಮಗೆ, ಈಗ ಈ ಮೊಮ್ಮಕ್ಕಳ ಪೋಷಣೆಯ ಭಾರವನ್ನೂ ಹೊರಿಸಿ ಹೋಗುತ್ತಿದ್ದೇನೆ ಮಾತ್ರವಲ್ಲ; ವಿಶಾಲವಾದ ಚಾಲುಕ್ಯಸಾಮ್ರಾಜ್ಯದ ಹೊರೆಯನ್ನೂ ಹೊರಿಸಿ ಹೋಗುತ್ತಿದ್ದೇನೆ. ನೀವು ಅದರ ಅಧಿಷ್ಠಾತ್ರಿಯಾಗಿ ನಿಂತು, ಶತ್ರುಗಳಿಂದ ಕಾಪಾಡಿ, ಮಕ್ಕಳಿಗೆ ಅದನ್ನು ಭದ್ರಪಡಿಸಿಕೊಡಬೇಕು. ಇದು ಎಂತಹ ಮಹತ್ತರವಾದ ಜವಾಬ್ದಾರಿ ಎಂಬುದನ್ನು ನಾನು ಬಲ್ಲೆ, ಅಬ್ಬೆ! ಆದರೆ ನಿರ್ವಾಹವಿಲ್ಲದೆ, ಅರಮನೆಯ ರಾಜಹಂಸಿಯಾಗಿ ನೆಮ್ಮದಿಯಿಂದ ಇರಬೇಕಾದ ನಿಮ್ಮ ಹೆಗಲಿಗೆ, ನಾನು ಕುಮಾರರ ಹಾಗೂ ಸಾಮ್ರಾಜ್ಯದ

ನೂರು ಚಿಂತೆಗಳ ಹೊರೆಯನ್ನು ಹೊರಿಸಿ ಹೋಗುತ್ತಿದ್ದೇನೆ. ಆದರೆ ದೈವ ಹತನಾದ ನಾನು..." ಮುಂದೆ ಮಾತನಾಡಲು ಸಾಧ್ಯವಾಗದೆ ಮೇಲುಸಿರು ಬಿಡಲು ತೊಡಗಿದ್ದನು. ಅಷ್ಟರಲ್ಲಿ ರಾಜವೈದ್ಯರು ಬಂದು,

"ತಾಯಿ, ಸಾಮ್ರಾಟರಿಗೆ ವಿಪರೀತ ದಣಿವಾದರೆ, ದೇಹಸ್ಥಿತಿ ಹದಗೆಡುತ್ತದೆ. ಅವರಿಗೆ ಈಗ ವಿಶ್ರಾಂತಿ ಅಗತ್ಯ. ಅಲ್ಲದೆ ಮಾನಸಿಕವಾದ ಯಾವುದೇ ಚಿಂತೆಗೆ ಅವಕಾಶವಿರಬಾರದು"—ಎಂದರು.

ಮಹಾರಾಣಿ ದುರ್ಲಭದೇವಿ, ಒತ್ತಿ ಬರುತ್ತಿದ್ದ ದುಃಖವನ್ನು ತಡೆದುಕೊಂಡು, "ಮಗು, ಕೀರ್ತಿವರ್ಮ! ನಾನು ಬದುಕಿರುವತನಕ ನೀನು ಯಾವುದಕ್ಕೂ ಚಿಂತಿಸುವ ಕಾರಣವಿಲ್ಲ. ನಾನು ಜೀವಂತವಿರುವತನಕ ಆ ಮಕ್ಕಳನ್ನು ತಬ್ಬಲಿ ಮಾಡುವುದಿಲ್ಲ! ಸಾಮ್ರಾಜ್ಯವನ್ನು ಅನಾಥವಾಗಿ ಮಾಡುವುದಿಲ್ಲ! ಶ್ರೀ ಮಕುಟೇಶ್ವರನಾಣೆಗೂ ನನ್ನ ಮಾತು ಸತ್ಯ. ನೀನು ಈ ಬಗ್ಗೆ ನಿಶ್ಚಿಂತನಾಗು. ದೈವಾನುಗ್ರಹದಿಂದ ಎಲ್ಲವೂ ಒಳ್ಳೆಯದಾಗುತ್ತದೆ. ನಿನಗೆ ಬಂದಿರುವ ವ್ಯಾಧಿಯು ಗುಣಮುಖವಾಗುತ್ತದೆ....ನೀನು ಹತಾಶನಾಗುವ ಕಾರಣವಿಲ್ಲ!" ಎಂದು ಧೈರ್ಯ ಹೇಳಿದ್ದರು.

ಆದರೆ ಈ ಧೈರ್ಯ ಎಷ್ಟು ಪೊಳ್ಳುಭರವಸೆ ಎಂಬುದು ಕೀರ್ತಿವರ್ಮನಿಗೆ ಚೆನ್ನಾಗಿ ತಿಳಿದಿತ್ತು. ಅವನ ನಿರೀಕ್ಷೆ ವ್ಯರ್ಥವಾಗಲಿಲ್ಲ. ಅವನು ಅದೇ ದಿನ ಅಧಿಕ ಯಾತನೆಯಿಂದ ನರಳಿ, ಇಹಲೋಕದ ನೋವು ನಲಿವುಗಳಿಂದ ಮುಕ್ತನಾಗಿದ್ದ. ಕಡೆಗೂ ರಾಜಯಕ್ಷ್ಮ ಅವನನ್ನು ಬಲಿತೆಗೆದುಕೊಂಡಿತ್ತು.

ಈಗ ಮುಂದೇನು ಮಾಡಬೇಕೆಂಬ ಪ್ರಶ್ನೆ ಮಹಾರಾಣಿ ದುರ್ಲಭದೇವಿಯನ್ನು ಎದುರುಗೊಂಡಿತ್ತು.

ಕೀರ್ತಿವರ್ಮನು ತನಗೆ ಹೊರಿಸಿ ಹೋಗಿದ್ದ ಜವಾಬ್ದಾರಿ, ಎಂದೆಂದು ಅವರಿಗೆ ತಿಳಿದಿತ್ತು. ಅದು ಅತ್ಯಂತ ಸೂಕ್ಷ್ಮವೂ, ಜಟಿಲವೂ ಮತ್ತು ಅಪಾಯಕಾರಿಯೂ ಆಗಿದ್ದ ಜವಾಬ್ದಾರಿಯಾಗಿತ್ತು. ಇತ್ತ ತಂದೆ ತಾಯಿಗಳಿಲ್ಲದ ತಬ್ಬಲಿ ಮಕ್ಕಳಾದ ಪುಲಿಕೇಶಿ ಹಾಗೂ ವಿಷ್ಣುವರ್ಧನರನ್ನು ಜೋಪಾನ ಮಾಡಬೇಕಾಗಿತ್ತು. ಅವರಿಗೆ ಅನಾಥವಾಗಿದ್ದ ಚಾಲುಕ್ಯ ಸಿಂಹಾಸನವನ್ನೂ, ಸಾಮ್ರಾಜ್ಯವನ್ನೂ ಭದ್ರಪಡಿಸಿಕೊಡಬೇಕಾಗಿತ್ತು. ಇದಕ್ಕೆ ಅನೇಕ ಬಗೆಯ ಕಂಟಕಗಳಿದ್ದವು. ಕೀರ್ತಿವರ್ಮನು ಮಡಿದ ಕೂಡಲೇ ಸಿಂಹಾಸನವನ್ನೂ, ಸಾಮ್ರಾಜ್ಯ

ವನ್ನೂ ಕಬಳಿಸಲು ಕಾಯುತ್ತಿದ್ದ ಒಳಗಿನ ಹಾಗೂ ಹೊರಗಿನ ಶತ್ರುಗಳು ಅನೇಕರಿದ್ದರು. ಹೊರಗಿನ ಕುಲಶತ್ರುಗಳಾದ ಪಲ್ಲವರಷ್ಟೇ ಭಯಂಕರವಾದ ಒಳಗಿನ ಹಿತಶತ್ರುಗಳು ಸಿಂಹಾಸನದ ಮೇಲೆ ಕಣ್ಣಿಟ್ಟದ್ದರು. ಇವರಲ್ಲಿ ಕೀರ್ತಿವರ್ಮನ ಮಲಸೋದರನಾದ ಮಂಗಳೇಶನು ಪ್ರಮುಖನಾಗಿದ್ದನು.

ಅವನು ಕೀರ್ತಿವರ್ಮನ ಕಾಲದಲ್ಲೇ ಅತ್ಯಂತ ಪ್ರಬಲ ದಂಡನಾಯಕನೂ ಪ್ರಭಾವಶಾಲಿಯಾದ ರಾಜಕಾರಿಣಿಯೂ ಆಗಿದ್ದು, ಜನತೆಯ ಅಭಿಮಾನಕ್ಕೆ ಪಾತ್ರನಾಗಿದ್ದನು. ಈಗ ಅವನು ಸಿಂಹಾಸನಕ್ಕೆ ಹಕ್ಕುದಾರನಾಗಿದ್ದುದು ಮಾತ್ರವಲ್ಲ; ಕೀರ್ತಿವರ್ಮನ ಕಡೆಗಾಲದಲ್ಲಿ, ಆಡಳಿತವನ್ನೆಲ್ಲಾ ತನ್ನ ಕೈಯಲ್ಲಿ ಭದ್ರಪಡಿಸಿಕೊಂಡಿದ್ದನು. ಅವನ ದುಷ್ಟ ಆಲೋಚನೆಗಳ ವಿರುದ್ಧ ಸಿಂಹಾಸನವನ್ನು ರಕ್ಷಿಸಬೇಕಾಗಿತ್ತು.

ಇದೇ ಸಮಯವನ್ನು ಸಾಧಿಸಿ ಸಾಮಂತರಾಗಿದ್ದ ಕದಂಬರೂ ಗಂಗರೂ ತಾವು ಸ್ವತಂತ್ರರಾಗಲು ನೋಡುತ್ತಿದ್ದರು. ಕುಲಶತ್ರುಗಳಾಗಿದ್ದ ಪಲ್ಲವರು ಚಾಲುಕ್ಯ ಸಾಮ್ರಾಜ್ಯವನ್ನು ಧೂಳೀಪಟಗೊಳಿಸಿ, ಹಿಂದೊಮ್ಮೆ ತಮ್ಮದಾಗಿದ್ದ ವಾತಾಪಿಯಲ್ಲಿ ತಮ್ಮ ಧ್ವಜವನ್ನು ಮೆರೆಸಲು ಹಾತೊರೆಯುತ್ತಿದ್ದರು. ಅವರಿಗೆ ತಮ್ಮ ಸೇಡನ್ನು ತೀರಿಸಿಕೊಳ್ಳಲು ಚಾಲುಕ್ಯ ಸಾಮ್ರಾಜ್ಯದಲ್ಲಿ, ಕೀರ್ತಿವರ್ಮನ ಮರಣದಿಂದ ಉಂಟಾಗಿದ್ದ ಅರಾಜಕತೆ ಒಂದು ಸುಸಂಧಿಯನ್ನು ಕಲ್ಪಿಸಿಕೊಟ್ಟಿತ್ತು. ಪಲ್ಲವ ದೊರೆ ಮಹೇಂದ್ರವರ್ಮನು ವಾತಾಪಿಯ ಮೇಲೆ ದಂಡೆತ್ತಿ ಬರಲು ನೋಡುತ್ತಿದ್ದನು. ಇಂಥ ಪರಿಸ್ಥಿತಿಯಲ್ಲಿ ಮಹಾರಾಣಿ ದುರ್ಲಭದೇವಿಗೆ ಮೊಮ್ಮಕ್ಕಳ ಹಾಗೂ ಸಾಮ್ರಾಜ್ಯದ ಜವಾಬ್ದಾರಿ ಹೆಗಲಿಗೆ ಬಿದ್ದಿತ್ತು.

ಮಹಾರಾಣಿ ದುರ್ಲಭದೇವಿ ಅಧೈರ್ಯ ಪಡಲಿಲ್ಲ. ತಾನು ಕೀರ್ತಿವರ್ಮನಿಗೆ ಕೊಟ್ಟಿದ್ದ ವಚನವನ್ನು ಪಾಲಿಸಿಕೊಳ್ಳಲು ನಿರ್ಧರಿಸಿದ್ದರು. ಅವರು ಎಂಥ ಪ್ರಸಂಗಬಂದರೂ ಸಾಮ್ರಾಜ್ಯವು ಮೊಮ್ಮಕ್ಕಳ ಕೈಯಿಂದ ತಪ್ಪಿಹೋಗಲು ಅವಕಾಶ ಕೊಡಬಾರದೆಂದು ಶಪಥಮಾಡಿದ್ದರು. ತಮ್ಮ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳಲು ತಮ್ಮ ಸರ್ವಸ್ವವನ್ನೂ ಮೀಸಲಿಟ್ಟಿದ್ದರು. ಈ ಉದ್ದಿಶ್ಯ ಸಾಧನೆಗಾಗಿ ಅವರು ಅಹರ್ನಿಶಿ ದುಡಿದಿದ್ದರು.

ಈ ಹತ್ತು ವರ್ಷಗಳು ಮಹಾರಾಣಿ ದುರ್ಲಭದೇವಿ ಸಿಂಹಾಸನವನ್ನು ಮೊಮ್ಮಕ್ಕಳ ಸಲುವಾಗಿ ಭದ್ರಪಡಿಸಿಕೊಳ್ಳಲು ಹೊರಗಿನ ಹಾಗೂ ಒಳಗಿನ

ಶತ್ರುಗಳ ವಿರುದ್ಧ ಹೋರಾಟ ನಡೆಸಿದ್ದರು. ಇದನ್ನು ಅವರೆಂದಿಗೂ ಮರೆಯು ವಂತೆ ಇರಲಿಲ್ಲ. ದಿನದಿನವೂ ಒಂದೊಂದು ಹೊಸ ಚಿಂತೆ, ಹೊಸ ಕಳವಳಗಳು ಕಾಣಿಸಿಕೊಳ್ಳುತ್ತಿದ್ದುವು.ಕೊಂಚ ಎಚ್ಚರ ತಪ್ಪಿದರೂ ಅವರ ಹಾಗೂ ಕುಮಾರರ ಜೀವ ಗಂಡಾಂತರಕ್ಕೆ ಬೀಳುತ್ತಿತ್ತು.ಸಿಂಹಾಸನ ದ್ರೋಹಿಗಳ ಪಾಲಾಗುತ್ತಿತ್ತು. ಸಾಮ್ರಾಜ್ಯ ಶತ್ರುಗಳ ವಶವಾಗುತ್ತಿತ್ತು. ಕುಮಾರರ ವಿರುದ್ಧ, ಸಾಮ್ರಾಜ್ಯದ ವಿರುದ್ಧ ಶತ್ರುಗಳು ನಡೆಸುವ ಕಾರಸ್ಥಾನ, ದ್ರೋಹಚಿಂತನೆಗಳ ವಿರುದ್ಧ ಅವ ರನ್ನು ರಕ್ಷಿಸಲು ದುರ್ಲಭದೇವಿ ಮೈಯೆಲ್ಲಾ ಕಣ್ಣಾಗಿಸಿಕೊಂಡು, ಎಚ್ಚರದಿಂದ ಇರಬೇಕಾಗಿತ್ತು. ಒಂದೊಂದು ದಿನ ಕಳೆಯುವುದು ಒಂದೊಂದು ಗಂಡಾಂತರ ವಾಗಿತ್ತು. ಸುತ್ತಲೂ ದ್ರೋಹಿಗಳೂ, ಸ್ಪರ್ಧಿಗಳೂ ಸಾಮ್ರಾಜ್ಯದ ಹಿತಾಸಕ್ತಿ ಗಳನ್ನು ತಮ್ಮ ಸ್ವಾರ್ಥಕ್ಕೆ ಬಲಿಕೊಡಲು ನೋಡುತ್ತಿದ್ದಾಗ, ಮಹಾರಾಣಿ ದುರ್ಲಭದೇವಿಯವರು ಚಾಲುಕ್ಯ ಸಾಮ್ರಾಜ್ಯದ ಅಧಿಷ್ಠಾತ್ರಿಯಾಗಿ, ರಕ್ಷಾ ಮಣಿಯಾಗಿ ನಿಂತಿದ್ದರು. ತಾವು ಮಗನಿಗೆ ಕೊಟ್ಟಿದ್ದ ವಚನಪರಿಪಾಲನೆ ಎಷ್ಟು ಕಷ್ಟಸಾಧ್ಯವೆಂದು ಅವರಿಗೆ ತಿಳಿದುದು ಆಗಲೇ !

ಸತ್ಯಾಶ್ರಯ, ರಣವಿಕ್ರಮ, ಶ್ರೀಪೃಥ್ವೀವಲ್ಲಭ ಮುಂತಾದ ಬಿರುದುಗಳಿಂದ ಹೊಗಳಿಸಿಕೊಂಡ ಮೊದಲನೆಯ ಪುಲಿಕೇಶಿಯು ವಾತಾಪಿಯಲ್ಲಿ ಚಾಲುಕ್ಯ ಸಿಂಹಾಸನವನ್ನು ಭದ್ರವಾಗಿ ನೆಲೆಗೊಳಿಸಿದಮೇಲೆ, ಅವನು ಅಶ್ವಮೇಧಯಾಗದ ನೆಪದಲ್ಲಿ ವಿಜಯಯಾತ್ರೆಯನ್ನು ಕೈಗೊಂಡು, ಕದಂಬ, ಗಂಗ, ಪಲ್ಲವರನ್ನು ಗೆದ್ದು "....ವಿಕ್ರಮ ಯಜ್ಞವಿಧಾನ ಮಂಥರಾಚಕ್ರಮೆ ಮೆಚ್ಚಿ" ಬಣ್ಣಿಸುವಂತೆ ಅಶ್ವಮೇಧಯಾಗವನ್ನು ಮಾಡಿ, ಹದಿನೈದು ವರ್ಷಗಳವರೆಗೆ ವೈಭವದಿಂದ ಆಳಿ ಕೀರ್ತಿಶೇಷನಾದನು.

ಈ ಪುಲಿಕೇಶಿಗೆ ಇಬ್ಬರು ಪತ್ನಿಯರಿದ್ದರು. ಇದರಲ್ಲಿ ಹಿರಿಯ ರಾಣಿಯಾದ ದುರ್ಲಭದೇವಿಯು ರೇವತಿ ದ್ವೀಪದ ಬಟ್ಪೂರ ವಂಶದ ಅರಸುಕುವರಿಯಾಗಿ ದ್ದಳು.ಇವಳ ಹೊಟ್ಟೆಯಲ್ಲಿ ಕೀರ್ತಿವರ್ಮನೆಂಬ ಮಗನೂ, ಇನ್ನೊಬ್ಬ ರಾಣಿಯ ಹೊಟ್ಟೆಯಲ್ಲಿ ಮಂಗಳೇಶನೂ ಹುಟ್ಟಿದ್ದರು. ತಂದೆಯ ಮರಣಾಂತರ ಹಿರಿಯ ಮಗನೂ, ಸಾಮ್ರಾಜ್ಯಕ್ಕೆ ಉತ್ತರಾಧಿಕಾರಿಯೂ ಆಗಿದ್ದ ಕೀರ್ತಿವರ್ಮನು ಸಿಂಹಾಸನವನ್ನೇರಿದನು. ಮಂಗಳೇಶನು ಯುವರಾಜನಾಗಿ ನೇಮಿತನಾಗಿ ಅಣ್ಣ ನಿಗೆ ರಾಜ್ಯಾಡಳಿತದಲ್ಲೂ ದಂಡಯಾತ್ರೆಗಳಲ್ಲೂ ನೆರವಾದನು.

ಕೀರ್ತಿವರ್ಮನು ಸಮರ್ಥನಾದ ದೊರೆಯಾಗಿದ್ದನು. ಅವನು ತಂದೆ ಹಾಕಿಕೊಟ್ಟ ಹೆದ್ದಾರಿಯಲ್ಲಿ ನಡೆದು, ಬನವಾಸಿಯ ಕದಂಬರನ್ನೂ, ಕೊಂಕಣದ ಮೌರ್ಯರನ್ನೂ ಸೋಲಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದನು. ಕೊಂಕಣ ರಾಜ್ಯದಲ್ಲಿ ತನ್ನ ಸಮೀಪದ ಬಂಧುವಾಗಿದ್ದ ಸತ್ಯಾಶ್ರಯ ಧೃವರಾಜ ಇಂದು ವರ್ಮನನ್ನು ಮಾಂಡಲೇಶ್ವರನಾಗಿ ನೇಮಿಸಿದನು. ಇಷ್ಟರಿಂದಲೇ ತೃಪ್ತನಾಗದೆ ಕೀರ್ತಿವರ್ಮನು ಸಾಮ್ರಾಜ್ಯದ ದಕ್ಷಿಣದ ಗಡಿಯಲ್ಲಿ ಹಿಂದಿನಿಂದಲೂ ಕಿರುಕುಳ ಕೊಡುತ್ತಿದ್ದ ನಳರನ್ನೂ, ಗಂಗರನ್ನೂ ಸೋಲಿಸಿ, ರಾಜಧಾನಿಗೆ ಹಿಂತಿರುಗಿ ಬಹುಸುವರ್ಣ, ಅಗ್ನಿಸ್ತೋಮ ಮುಂತಾದ ಯಜ್ಞಗಳನ್ನುಮಾಡಿ, ಗೆದ್ದು ತಂದ ಐಶ್ವರ್ಯವನ್ನೆಲ್ಲಾ ದೇವಾಲಯಗಳಿಗೂ, ಬ್ರಾಹ್ಮಣರಿಗೂ ಹಂಚಿದನು.

ಇವನು ತನ್ನ ಆಳ್ವಿಕೆಯಲ್ಲಿ ಅನೇಕ ಜನೋಪಯೋಗಿ ಕೆಲಸಗಳನ್ನು ಮಾಡಿದುದಲ್ಲದೆ, ಪುಣ್ಯಸಂಚಯನಾರ್ಥವಾಗಿ ಅನೇಕ ಧರ್ಮಕಾರ್ಯಗಳನ್ನೂ ಮಾಡಿದನು. ಇವನು ಸಿಂಹಾಸನವನ್ನೇರಿದ ಹನ್ನೆರಡನೆಯ ವರ್ಷದ ಸವಿನೆನಪಿಗಾಗಿ, ಕ್ರಿ. ಶ. ೫೭೮ನೇ ಸಂವತ್ಸರ ಅಕ್ಟೋಬರ್ ೩೧ ರಂದು ಬಾದಾಮಿಯ ಗುಡ್ಡದಲ್ಲಿ ಒಂದು ಅಪೂರ್ವವಾದ ಗುಹಾಂತರ್ದೇವಾಲಯವನ್ನು ಕೊರೆಯಿಸಿ, ಮಹಾವಿಷ್ಣುವನ್ನು ಪ್ರತಿಷ್ಠಾಪಿಸಿದನು. ಈ ಕಾರ್ಯದಲ್ಲಿ ಮಂಗಳೇಶನು ಕೀರ್ತಿವರ್ಮನಿಗೆ ನೆರವಾದನು. ಕೀರ್ತಿವರ್ಮನು ದೇವಾಲಯ ನಿರ್ಮಾಣದ ಸಂದರ್ಭದಲ್ಲಿ ಬ್ರಾಹ್ಮಣರಿಗೆ ಅನೇಕ ಬಗೆಯ ದಾನಗಳನ್ನು ಕೊಟ್ಟುದಲ್ಲದೆ, ಸ್ವಾಮಿಯ ಪೂಜಾ ನೈವೇದ್ಯಗಳ ಸಲುವಾಗಿ ಲಂಜೀಶ್ವರ (ನಂದಿಕೇಶ್ವರ) ಎಂಬ ಹಳ್ಳಿಯನ್ನು ಉಂಬಳಿಯಾಗಿ ಹಾಕಿಕೊಟ್ಟನು. ಹೀಗೆ ಪುಣ್ಯಸಂಚಯನದ ದಾರಿಯಲ್ಲಿ ಅವನು ನಡೆದರೂ ವಿಧಿ ಕೀರ್ತಿವರ್ಮನನ್ನು ಬಿಡಲಿಲ್ಲ. ಅವನು ಇನ್ನೂ ನಡುಹರೆಯದಲ್ಲಿ ಇರುವಾಗಲೇ ಪತ್ನಿವಿಯೋಗವಾಯಿತು. ಈ ಪೆಟ್ಟಿನಿಂದ ಅವನು ಚೇತರಿಸಿಕೊಳ್ಳುವಷ್ಟರಲ್ಲಿಯೇ ಕೀರ್ತಿವರ್ಮನು ಭಯಂಕರ ವ್ಯಾಧಿಯಾದ ರಾಜಯಕ್ಷ್ಮಕ್ಕೆ ಬಲಿಯಾಗಿ ಹಾಸಿಗೆ ಹಿಡಿಯಬೇಕಾಯಿತು.

ಕೀರ್ತಿವರ್ಮನು ಸೇಂದ್ರಿಕ ಮನೆತನದ ಅರಸುಕುವರಿಯೂ, ರಾಜಾವಲ್ಲಭ ಸೇನನ ಸೋದರಿಯೂ ಆಗಿದ್ದ ಮಹಾದೇವಿಯನ್ನು ವಿವಾಹವಾಗಿದ್ದನು. ಮಹಾದೇವಿಯು ಅನುಪಮ ಸೌಂದರ್ಯ ನಿಧಿಯಾಗಿದ್ದಂತೆ ಪರಮಪತಿವ್ರತೆಯೂ ದೈವ ಭಕ್ತಳೂ ಆಗಿದ್ದಳು. ಅವಳು ಕೀರ್ತಿವರ್ಮನ ಕೈಹಿಡಿದು, ಸಾಮ್ರಾಟನ

ಮಡದಿಯಾಗಿ, ಈಗ ರಣವಿಕ್ರಮ ಪುಲಿಕೇಶಿಯನ್ನು ಹೆತ್ತು ಸಾಮ್ರಾಟನ ಜನನಿ ಯೆನಿಸಿಕೊಂಡಳು. ಅವರ ದಾಂಪತ್ಯಜೀವನ ಸುಖಸಂಪತ್ತುಗಳ ಆಗರವಾಗಿ ಅವರ ಜೀವನನದಿ ತುಂಬು ಹೊನಲಾಗಿ ಹರಿದಿರುವಾಗ, ಮಹಾದೇವಿ ಮತ್ತೆ ಗರ್ಭಧರಿಸಿದಳು. ಅವಳಿಗೆ ನವಮಾಸ ತುಂಬಿ, ಹೆರಿಗೆಯ ದಿನಗಳು ಸಮೀಪಿಸು ತ್ತಿದ್ದವು. ಹೀಗಿರುವಲ್ಲಿ ಒಂದು ದಿನ ಮಹಾದೇವಿಗೆ ಒಂದು ದುಸ್ವಪ್ನ ಬಂತು. ಸ್ವಪ್ನದಲ್ಲಿ ತಾನು ಒಂದು ಹಾವಿನಮರಿಯನ್ನು ಹಡೆದಂತೆ ಕನಸು ಕಂಡಳು. ಇದರಿಂದ ಅವಳ ಚಿತ್ತಶಾಂತಿ ಕದಡಿತು. ಅವಳು ಅನಿಷ್ಟ ಸ್ವಪ್ನದ ಪರಿಹಾರಾ ರ್ಥವಾಗಿ ನೂತನವಾಗಿ ನಿರ್ಮಿಸಲ್ಪಟ್ಟಿದ್ದ ವಿಷ್ಣುದೇವಾಲಯಕ್ಕೆ ಹೋಗಿ ಸ್ವಾಮಿಗೆ ಅನೇಕ ಬಗೆಯ ಕೈಂಕರ್ಯಗಳನ್ನು ಮಾಡಿಸಿದಳು. ಅವಳು ಪೂಜೆ ಮುಗಿಸಿಕೊಂಡು ತೀರ್ಥಪ್ರಸಾದಗಳನ್ನು ಸ್ವೀಕರಿಸಿ, ಅರಮನೆಗೆ ಹಿಂದಿರುಗಿ ಬರುತ್ತಿದ್ದಾಗ, ದೇವಾಲಯದ ಮೆಟ್ಟಲುಗಳನ್ನು ಇಳಿಯುತ್ತಿದ್ದಾಗ, ಅನ್ಯ ಮನಸ್ಕತೆಯಿಂದ ಕಾಲುಜಾರಿ ನೆಲಕ್ಕೆ ಉರುಳಿದಳು. ಜನ ಅವಳ ನೆರವಿಗೆ ಬರುವುದರೊಳಗಾಗಿ, ನಡೆಯಬಾರದ ಹತ್ಯಾಕಾಂಡ ನಡೆದುಹೋಗಿತ್ತು !

ಮಹಾದೇವಿಯ ಕಿಬ್ಬೊಟ್ಟೆಗೆ ಕೊಂಚ ಪೆಟ್ಟು ತಗುಲಿತ್ತು. ರಾಜ ವೈದ್ಯರು ಮಾಡಿದ ಎಲ್ಲ ಔಷಧೋಪಚಾರಗಳು ವ್ಯರ್ಥವಾದವು. ಮಹಾದೇವಿಗೆ ಬಹಳ ಕಷ್ಟದಿಂದ ಹೆರಿಗೆಯಾಯಿತು. ಅವಳು ಊನಗೊಂಡ ಗಂಡುಮಗುವಿಗೆ ಜನ್ಮಕೊಟ್ಟು ಪ್ರಸೂತಿಕಾಗೃಹದಲ್ಲೇ ತೀರಿಕೊಂಡಳು.

ಮಗುವಿಗೆ ಅಂಗಾಂಗಗಳು ಮಾಟವಾಗಿದ್ದರೂ, ಬಿದ್ದ ಪೆಟ್ಟಿನಿಂದ ಸೊಂಟ ಊನಗೊಂಡು ಬೆನ್ನು ಬಾಗಿತ್ತು. ಆದರೂ ಮಗುವಿನ ಮುಖದಲ್ಲಿ ಒಳ್ಳೆ ಕಳೆ ಇತ್ತು. ಅವನಿಗೆ ವಿಷ್ಣುವರ್ಧನನೆಂದು ಹೆಸರು ಇಟ್ಟು ತುಂಬಾ ಜಾಗರೂಕತೆ ಯಿಂದ ಬೆಳೆಸಿದರು. ಮುಂದೆ ಅವನಿಗೆ ಕುಬ್ಜವಿಷ್ಣುವರ್ಧನನೆಂಬ ಹೆಸರೇ ರೂಢಿಗೆ ಬಂದಿತು.

ಈ ಘಟನೆಯಾದ ಮೇಲೆ ಕೀರ್ತಿವರ್ಮನು ಹೆಚ್ಚುಕಾಲ ಬದುಕಿರಲಿಲ್ಲ. ಅವನು ಪತ್ನಿವಿಯೋಗದ ಪೆಟ್ಟಿನಿಂದ ಚೇತರಿಸಿಕೊಳ್ಳಲಿಲ್ಲ. ಮೇಲಿಂದ ಮೇಲೆ ದಂಡಯಾತ್ರೆಗಳಲ್ಲಿ ದಣಿದ ದೇಹ, ಪತ್ನಿಯ ವಿಯೋಗದಿಂದ ಜರ್ಜರಿತವಾದ ಮನಸ್ಸು ರಾಜಯಕ್ಷ್ಮಕ್ಕೆ ದಾರಿಮಾಡಿಕೊಟ್ಟವು. ಅವನು ರಾಜಯಕ್ಷ್ಮದಿಂದ ಹಾಸಿಗೆ ಹಿಡಿದು ಮಲಗಿದವನು ಮತ್ತೆ ಮೇಲೇಳಲಿಲ್ಲ. ತನ್ನ ಜೀವಿತದ ಮಹ

ತ್ಕಾರ್ಯಗಳನ್ನೆಲ್ಲ ನಡುಗಾಲದಲ್ಲೇ ಕೈಬಿಟ್ಟು ಕೀರ್ತಿವರ್ಮನು ಕ್ರಿ. ಶ. ೫೯೭ ರಲ್ಲಿ ಕೀರ್ತಿಶೇಷನಾದನು.

ತಂದೆ ಸಾಯುವಾಗ ಪುಲಿಕೇಶಿಗೆ ಇನ್ನೂ ಆರು ವರ್ಷ, ವಿಷ್ಣುವರ್ಧನನಿಗೆ ನಾಲ್ಕು ವರ್ಷ ವಯಸ್ಸಾಗಿತ್ತು. ಈ ವಯಸ್ಸಿಗೇ ಜಗತ್ತಿನ ನಿಷ್ಠುರಬಾಳ್ವೆ ಅವರನ್ನು ಎದುರುಗೊಂಡಿತ್ತು. ಅವರು ತಾಯಿ ತಂದೆಗಳಿಲ್ಲದೆ ತಬ್ಬಲಿಗಳಾದು ದಲ್ಲದೆ, ಶತ್ರುಗಳ ವಿರುದ್ಧ ವಿಶಾಲವಾದ ಸಾಮ್ರಾಜ್ಯವನ್ನು ಉಳಿಸಿಕೊಳ್ಳುವ ಗುರುತರವಾದ ಹೊಣೆಗಾರಿಕೆ ಅವರ ಹೆಗಲಿಗೆ ಬಿದ್ದಿತ್ತು. ತಂದೆಯ ಮರಣಾ ನಂತರ ರಾಜ್ಯಕ್ಕೆ ಪುಲಿಕೇಶಿಯೇ ಹಕ್ಕುದಾರನೆಂಬುದನ್ನು ಸ್ವಾಮಿನಿಷ್ಠ ಸೇವಕ ರಾದ ಅಮಾತ್ಯರೂ, ಆಸ್ಥಾನಿಕರೂ, ದಂಡನಾಯಕರೂ, ಇನ್ನಿತರ ಸಾಮಂತ ವರ್ಗದವರೂ, ಅರಮನೆಯ ಹಿರಿಯರೂ, ಹಿತೈಷಿಗಳೂ ನಿಷ್ಕರ್ಷಿಸಿದರೂ ಪುಲಿ ಕೇಶಿಯು ಪ್ರಾಪ್ತ ವಯಸ್ಕನಾಗುವ ತನಕ ರಾಜ್ಯವನ್ನು ರಾಜ್ಯಾಡಳಿತ ನಿಪುಣ ನಾದ ಮಂಗಳೇಶನೇ ಆಳಬೇಕೆಂದು ಅವರು ತೀರ್ಮಾನಿಸಿದರು.

ಮಹಾರಾಣಿ ದುರ್ಲಭದೇವಿಯು, ಒಮ್ಮೆ ಸಿಂಹಾಸನ ಮಂಗಳೇಶನ ಕೈಗೆ ಸೇರಿದರೆ ಅದನ್ನು ಅವನಿಂದ ಕಸಿದುಕೊಳ್ಳುವುದು ಕಷ್ಟವೆಂದು ಬಗೆದು ಪುಲಿ ಕೇಶಿಯು ಪ್ರಾಪ್ತವಯಸ್ಕನಾಗುವ ತನಕ ತಾನೇ ರಾಜಮಾತೆಯಾಗಿ ಆಳಲು ಪ್ರಯತ್ನಿಸಿದರು. ಆದರೆ ಶತ್ರುಗಳಿಂದ ಚಾಲುಕ್ಯ ಸಿಂಹಾಸನವನ್ನು ಕಾಪಾಡಲು ಅವರಿಂದ ಅಸಾಧ್ಯವೆಂದು ಅರಿತಿದ್ದ ಸ್ವಾಮಿನಿಷ್ಠ ಸೇವಕರು ರಾಜಪ್ರತಿನಿಧಿಯಾಗಿ ಮಂಗಳೇಶನನ್ನೇ ಆರಿಸಿದರು. ದುರ್ಲಭದೇವಿಯು, ಗತಿಸಿದ ಕೀತಿವರ್ಮನ ತಾಯಿಯೂ, ಪುಲಿಕೇಶಿಯ ಮಡದಿಯೂ ಆಗಿದ್ದುದರಿಂದ ತನ್ನ ಇಚ್ಛೆಯಂತೆ ಮಂಗಳೇಶನು ರಾಜ್ಯಾಡಳಿತ ನಡೆಸಲು ಒಪ್ಪುವುದಾದರೆ ಮಾತ್ರ ತಾವು ಸಾಮ್ರಾಜ್ಯದ ಹಿತೈಷಿಗಳ ತೀರ್ಮಾನಕ್ಕೆ ಬದ್ಧವಿರುವುದಾಗಿ ಹಠಹಿಡಿದರು. ಮಂಗಳೇಶನು ನಿರ್ವಾಹವಿಲ್ಲದೆ ಈ ಏರ್ಪಾಡಿಗೆ ಒಪ್ಪಿದನು. ಒಮ್ಮೆ ಅಧಿಕಾರ ತನ್ನ ಕೈಯಲ್ಲಿ ಭದ್ರವಾದಮೇಲೆ ದುರ್ಲಭದೇವಿಯನ್ನು ಗಣನೆಗೆ ತಾರದೆ, ತಾನೇ ಸರ್ವಸ್ವತಂತ್ರ ಸಾಮ್ರಾಟನಾಗಿ ಮೆರೆಯುವ ದುರಾಲೋಚನೆ ಅವನದು. ಅವನು ತನ್ನ ಮಲತಾಯಿಯೊಂದಿಗೆ ಸೌಹಾರ್ದಯುತವಾಗಿ ನಡೆದುಕೊಂಡು, ತಾನು ಅವರ ಆಜ್ಞಾನುವರ್ತಿ, ರಾಜಕರ್ಮಾಚಾರಿ ಎಂಬ ಸೋಗು ಹಾಕಿ, ಕೆಲಕಾಲ ದುರ್ಲಭದೇವಿಗೆ ಅಡಿಯಾಳಾಗಿ ರಾಜ್ಯಭಾರ ನಡೆಸಿದನು. ಆದರೆ

ಅಧಿಕಾರ ಸೂತ್ರ ತನ್ನ ಕೈಯಲ್ಲಿ ಭದ್ರಗೊಂಡಮೇಲೆ ತನ್ನ ದುಷ್ಟಕಾರಾಸ್ಥಾನ ವನ್ನು ಕಾರ್ಯಗತಗೊಳಿಸಲು ಪ್ರಯತ್ನಿಸುತ್ತಿದ್ದನು.

ಮಂಗಳೇಶನು ಮಹತ್ವಾಕಾಂಕ್ಷಿಯಾದ ವ್ಯಕ್ತಿ. ಅವನು ತಂದೆಯ ಕಾಲದಲ್ಲೇ ಸಾಮ್ರಾಟನಾಗಿ ಮೆರೆಯುವ ಕನಸು ಕಟ್ಟಿದ್ದನು. ಆದರೆ ಹಿರಿಯ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದ್ದ ಕೀರ್ತಿವರ್ಮನಿಗೆ ಚಾಲುಕ್ಯ ಸಿಂಹಾಸನ ದೊರಕಿತು. ಅವನು ಅದನ್ನು ಪ್ರತಿಭಟಿಸದೆ ಇರಲಿಲ್ಲ. ಆಗ ರಾಜಪುತ್ರರಲ್ಲಿ ಉಂಟಾದ ಈ ವೈಮನಸ್ಯ ಬೆಳೆದು, ಸಾಮ್ರಾಜ್ಯವನ್ನು ನುಂಗುವ ಕಾಳ್ಗಿಚ್ಚಾಗ ಬಾರದೆಂದು, ಸಾಮ್ರಾಜ್ಯನಿಷ್ಠ ಸೇವಕರು ಮಂಗಳೇಶನನ್ನು ಯುವರಾಜನನ್ನಾಗಿ ಮಾಡಿದ್ದರು. ಕೀರ್ತಿವರ್ಮನ ಮರಣಾನಂತರ, ಯುವರಾಜನಾದ ತಾನೇ ಚಾಲುಕ್ಯಸಿಂಹಾಸನಕ್ಕೆ ಹಕ್ಕುದಾರನೆಂದು ಅವನು ಹೇಳಿಕೊಂಡರೂ, ಪುಲಿಕೇಶಿ, ವಿಷ್ಣುವರ್ಧನರು ಬದುಕಿರುವತನಕ ಅವನ ಹಕ್ಕು ಊರ್ಜಿತವಾಗುವಂತೆ ಇರಲಿಲ್ಲ. ಈಗ ತಾನು ದುಡುಕಿದರೆ ಕೆಲಸ ಕೆಡುವುದೆಂದು ಯೋಚಿಸಿ, ಅವನು ತನ್ನ ಹಂಚಿಕೆಯನ್ನು ಉಪಾಯದಿಂದ ಈಡೇರಿಸಿಕೊಳ್ಳಲು ನಿಶ್ಚಯಿಸಿದನು. ಕುಟಿಲನೂ, ಸ್ವಾರ್ಥಿಯೂ, ರಾಜ್ಯಲೋಭಿಯೂ ಆಗಿದ್ದ ಮಂಗಳೇಶನು ತಾನು ಅಧಿಕಾರಕ್ಕೆ ಬಂದಕೂಡಲೇ ದುರ್ಲಭದೇವಿಯನ್ನೂ, ಪುಲಿಕೇಶಿ ಹಾಗೂ ವಿಷ್ಣು ವರ್ಧನರನ್ನೂ ಹೇಗಾದರೂ ಮಾಡಿ ನಿವಾರಿಸಿಕೊಂಡು ತನಗೆ ದೊರೆತ ಸಿಂಹಾ ಸನವನ್ನು ವಂಶಪಾರಂಪರ್ಯವಾಗಿ ತಾನೇ ಉಳಿಸಿಕೊಳ್ಳಬೇಕೆಂದು ಹೃದ ಯಾಂತರಾಳದಲ್ಲಿ ಯೋಚಿಸಿದನು.

ಅವನು ರಾಜಪ್ರತಿನಿಧಿಯಾಗಿ ಅಧಿಕಾರಕ್ಕೆ ಬಂದ ಕೂಡಲೇ ತನ್ನ ದುಷ್ಟ ಆಲೋಚನೆಗಳನ್ನು ಕಾರ್ಯಗತಗೊಳಿಸಲು ಒಂದೊಂದೇ ಕ್ರಮ ಕೈಗೊಂಡಿ ದ್ದನು. ಮೊದಲು ಅರಮನೆಯಲ್ಲಿದ್ದ ಪುಲಿಕೇಶಿಯ ಪಕ್ಷಪಾತಿಗಳನ್ನೆಲ್ಲಾ ಕೆಲಸ ದಿಂದ ತೆಗೆದುಹಾಕಿ ಅಲ್ಲಿ ತನ್ನ ಬೆಂಬಲಿಗರನ್ನು ತುಂಬಿದನು. ಆಸ್ಥಾನದಲ್ಲೂ, ಸೈನ್ಯದಲ್ಲೂ ತನ್ನ ಕಡೆಯ ಜನರನ್ನು ತುಂಬಿದನು. ಇದನ್ನೆಲ್ಲಾ ದುರ್ಲಭ ದೇವಿ ಪ್ರತಿಭಟಿಸಿದರೂ, ಅವರ ಮಾತನ್ನು ಮಂಗಳೇಶನು ಲಕ್ಷ್ಯಕ್ಕೆ ತಾರದೆ, ತಾನೇ ನಿರಂಕುಶ ಪ್ರಭುವಂತೆ ವರ್ತಿಸುತ್ತಿದ್ದನು.

ಇದನ್ನೆಲ್ಲಾ ಕಂಡು ದುರ್ಲಭದೇವಿಗೆ ಹೆದರಿಕೆ ಕಳವಳಗಳು ಏಕಕಾಲ ದಲ್ಲಿ ಉಂಟಾದವು. ಅವರಿಗೆ ಮಂಗಳೇಶನ ಕಾರಾಸ್ಥಾನವೇನೆಂದು ತಿಳಿಯದೆ

ಹೋಗಲಿಲ್ಲ. ಅರಮನೆಯಲ್ಲಿ ಪುಲಿಕೇಶಿ ಹಾಗೂ ವಿಷ್ಣುವರ್ಧನರನ್ನು ಇಟ್ಟಿದ್ದರೆ, ತಾನು ಎಷ್ಟು ಎಚ್ಚರದಿಂದ ಇದ್ದರೂ, ಅವರ ಜೀವಕ್ಕೆ ಮಂಗಳೇಶನಿಂದ ಕೇಡು ತಪ್ಪಿಲ್ಲವೆಂದು ಮನವರಿಕೆಯಾಯಿತು. ಆದರೆ ಅವರ ಜೀವವನ್ನು ಉಳಿಸಲು ಬೇರೆ ಮಾರ್ಗವಿರಲಿಲ್ಲ. ತಾವು ತಮ್ಮ ಅರಮನೆಯಲ್ಲೇ ಮಂಗಳೇಶನ ಬಂಧಿಯೆಂದೂ, ಯಾವ ಕ್ಷಣದಲ್ಲಾದರೂ ಅವನು ತಮ್ಮನ್ನು ನಾಶಪಡಿಸಬಹುದೆಂದೂ ದುರ್ಲಭದೇವಿಗೆ ತಿಳಿಯಲು ಹೆಚ್ಚುಕಾಲ ಬೇಕಾಗಲಿಲ್ಲ. ಆದರೆ ರಾಜ್ಯಲೋಭಿಯೂ, ಅಧಿಕಾರೋನ್ಮತ್ತನೂ, ಕುಟಿಲನೂ, ಆಗಿದ್ದ ಮಂಗಳೇಶನ ಕೈಯಿಂದ ಮಕ್ಕಳನ್ನು ಹೇಗೆ ಪಾರುಮಾಡುವುದೆಂದು ತಿಳಿಯದೆ ಹೋಗಿತ್ತು.

ಹೇಗಾದರೂ ಮಾಡಿ ಪುಲಿಕೇಶಿ ಹಾಗೂ ವಿಷ್ಣುವರ್ಧನರನ್ನು ಮಂಗಳೇಶನ ವಕ್ರದೃಷ್ಟಿಯಿಂದ ಪಾರುಮಾಡಿ, ಅವರು ಪ್ರಾಪ್ತವಯಸ್ಕರಾಗುವತನಕ ಕಾಪಾಡಬೇಕೆಂದು ಅವರು ಯೋಚಿಸುತ್ತಿದ್ದಾಗ, ಧರ್ಮಕರ್ಮ ಸಂಯೋಗದಿಂದಲೆಂಬಂತೆ, ಆರ್ಯಪುರದ ಬೆಣ್ಣಮಸೋಮಯಾಜಿಗಳ ಗುರುಕುಲ ನೆನಪಿಗೆ ಬಂದಿತ್ತು. ಗುರುಕುಲವಾಸದ ನೆಪದಲ್ಲಿ ಮೊಮ್ಮಕ್ಕಳನ್ನು ರಾಜಧಾನಿಯಿಂದ ದೂರವಿಟ್ಟು, ಅವರನ್ನು ದುಷ್ಟನಾದ ಮಂಗಳೇಶನ ಕೈಯಿಂದ ಪಾರುಮಾಡಬೇಕೆಂದು ಮಹಾರಾಣಿ ದುರ್ಲಭದೇವಿ ಸಂಕಲ್ಪಿಸಿದರು. ಇದರಿಂದ ಮಕ್ಕಳ ಮುಂದಿನ ಜೀವನಕ್ಕೆ ಬೇಕಾದ ಒಳ್ಳೆಯ ಅಡಿಪಾಯ ಹಾಕುವದರ ಜೊತೆಗೆ ರಾಜ್ಯಲೋಭಿಯಾದ ಮಂಗಳೇಶನ ಕೈಯಿಂದ ಅವರನ್ನು ಪಾರುಮಾಡಿದಂತೆ ಆಗುತ್ತಿತ್ತು. ಬೆಣ್ಣಮಸೋಮಯಾಜಿಗಳ ಭದ್ರಕವಚದಲ್ಲಿ ಕುಮಾರರ ಜೀವ ಸುರಕ್ಷಿತವಾಗಿರುವದೆಂಬ ನಂಬಿಕೆ ಅವರಿಗಿತ್ತು.

ಆದರೆ ಇದಕ್ಕೆ ಮಂಗಳೇಶನ ಅನುಮತಿ ಬೇಕಾಗಿತ್ತು. ಮಹಾರಾಣಿ ದುರ್ಲಭದೇವಿ ಬೆಣ್ಣಮಸೋಮಯಾಜಿಗಳನ್ನು ಯಾವುದೋ ನಿಮಿತ್ತದಲ್ಲಿ ರಾಜಧಾನಿಗೆ ಕರೆಸಿಕೊಂಡರು. ಅವರನ್ನು ಅಂತರಂಗದಲ್ಲಿ ಕಂಡು ತಮ್ಮ ಹೃದ್ಗತವನ್ನು ತೋಡಿಕೊಂಡರು. ಅನಂತರ, "ಸ್ವಾಮಿ, ನೀವು ನಮ್ಮ ಭಾಗ್ಯಕ್ಕೆ ದೇವರು ಬಂದಂತೆ ಬಂದಿದ್ದೀರಿ. ಹೇಗಾದರೂ ಮಾಡಿ ಈ ದುಷ್ಟನ ಕೈಯಿಂದ ಬಾಲಕರನ್ನು ಪಾರು ಮಾಡಬೇಕು. ಅವರನ್ನು ನಿಮಗೊಪ್ಪಿಸುತ್ತೇನೆ. ಈಗ ನೀವೇ ನಮಗೆ ದಿಕ್ಕು!" ಎಂದು ಹೇಳಿದರು.

"ನೀವು ಈ ಬಗ್ಗೆ ಅಧೈರ್ಯಪಡುವ ಕಾರಣವಿಲ್ಲ ತಾಯಿ. ಕುಮಾರರ

ರಕ್ಷಣೆಯ ಭಾರವನ್ನು ನಾನು ಸಂತೋಷದಿಂದ ಹೊತ್ತುಕೊಳ್ಳುತ್ತೇನೆ. ನಾನು ಹೊತ್ತಿರುವ ರಾಜಋಣ ಹೀಗಾದರೂ ತೀರಲಿ!" ಎಂದು ಬೆಣ್ಣಮಸೋಮ ಯಾಜಿಗಳು ಹೇಳಿದರು.

ಮೊದಲು ಗುರುಕುಲವಾಸಕ್ಕೆ ರಾಜಪುತ್ರರಾದ ಪುಲಿಕೇಶಿ, ವಿಷ್ಣುವರ್ಧನ ರನ್ನು ಸಾಮಾನ್ಯ ಬಾಲಕರಂತೆ ಕಳುಹಿಸಿಕೊಡಲು ಮಂಗಳೇಶನು ಒಪ್ಪಲಿಲ್ಲ. ಆದರೆ, ದುರ್ಲಭದೇವಿ ಈ ಬಗ್ಗೆ ಹಠ ಹಿಡಿದ ಮೇಲೆ ನಿರ್ವಾಹವಿಲ್ಲದೆ ಮಂಗಳೇಶನು ಒಪ್ಪಿದನು. ಅವನಿಗೆ ಆರ್ಯಪುರದ ವಿದ್ಯಾಪೀಠದ ಬಗ್ಗೆ ಅಭಿಮಾನವಿದ್ದುದರಿಂದಲೂ, ಬೆಣ್ಣಮಸೋಮಯಾಜಿಗಳ ವಿಷಯದಲ್ಲಿ ಗೌರವವಿದ್ದುದರಿಂದಲೂ ಪುಲಿಕೇಶಿ ಹಾಗೂ ವಿಷ್ಣುವರ್ಧನರನ್ನು ಆರ್ಯಪುರಕ್ಕೆ ಕಳುಹಿಸಲು ಒಪ್ಪಿದನು. ಬೆಣ್ಣಮಸೋಮಯಾಜಿಗಳ ವಿದ್ಯಾಪೀಠ ರಾಜಧಾನಿಗೆ ತೀರ ಸಮೀಪದಲ್ಲಿದ್ದ ಆರ್ಯಪುರದಲ್ಲಿ ಇದ್ದುದರಿಂದಲೂ, ಅದಕ್ಕೆ ರಾಜಾಶ್ರಯ ವಿದ್ದುದರಿಂದಲೂ ಅವರಿಂದ ಯಾವುದೇ ಬಗೆಯ ದ್ರೋಹನಡೆಯಲಾರದೆಂದು ಮಂಗಳೇಶನ ಭಾವನೆಯಾಗಿತ್ತು. ಅಲ್ಲದೆ, ಬೇಟಿ ತನ್ನ ಕಣ್ಣು ತಪ್ಪಿದರೂ ಇನ್ನೂ ತನ್ನ ಅಧಿಕಾರ ವಲಯದಲ್ಲೇ ಇದ್ದುದರಿಂದ ಅದನ್ನು ಯಾವಾಗ ಬೇಕಾದರೂ ಹಿಡಿಯಬಹುದೆಂಬ ಧೈರ್ಯದಿಂದ ಪುಲಿಕೇಶಿ, ವಿಷ್ಣುವರ್ಧನರನ್ನು ಗುರುಕುಲವಾಸಕ್ಕೆ ಒಪ್ಪಿಸಿದನು.

ಈಗ ಬಿಜಾಪುರ ಜಿಲ್ಲೆಯ ನರಗುಂದ ತಾಲೂಕಿನಲ್ಲಿರುವ ಐಹೊಳೆಯು ಆ ಕಾಲದಲ್ಲಿ ಆರ್ಯಪುರವೆಂಬ ಹೆಸರಿನಲ್ಲಿ ಪ್ರಖ್ಯಾತವಾಗಿದ್ದ ಮಹಾನಗರ ವಾಗಿತ್ತು. ಅಲ್ಲಿ ಚತುರ್ವಿದ್ಯಾಪಂಡಿತರಾದ ಐನೂರು ಮಂದಿ ವಿದ್ವಾಂಸರು ವಾಸವಾಗಿದ್ದರು. ನಲಂದ, ತಕ್ಷಶೀಲ, ನವದ್ವೀಪ ಮುಂತಾದ ಹೆಸರಾಂತ ವಿದ್ಯಾ ಪೀಠಗಳಿಗೆ ಸರಿಸಾಟಿಯಾದ ಒಂದು ವಿದಾಪೀಠವು ಅಲ್ಲಿ ಇತ್ತು. ಅಲ್ಲಿನ ವಿದ್ಯಾ ಪೀಠದಲ್ಲಿ ನಾಲ್ಕು ಬಗೆಯ ವರ್ಣದವರಿಗೂ ತಕ್ಕಚತುರ್ವಿದ್ಯೆಯನ್ನು ಕಲಿಸು ತ್ತಿದ್ದರು. ಆಸ್ತಿಕ ಜನತೆಯಲ್ಲಿ ಸನಾತನಧರ್ಮ ಹಾಗೂ ದೈವಭಕ್ತಿಗಳನ್ನು ನೆಲೆಗೊಳಿಸಲು ಅನೇಕ ಧರ್ಮಸಂಸ್ಥೆಗಳೂ, ದೇವಾಲಯಗಳೂ ಇದ್ದವು. ಬೆಣ್ಣಮಸೋಮಯಾಜಿಗಳು ಆರ್ಯಪುರದ ಧರ್ಮಾಧಿಕಾರಿಗಳಾಗಿದ್ದುದಲ್ಲದೆ, ವಿದ್ಯಾಪೀಠದ ಕುಲಪತಿಗಳು ಆಗಿದ್ದರು. ಅವರ ವಿದ್ಯಾಪೀಠದಲ್ಲಿ ಐದು ಸಾವಿರ ಮಂದಿ ವಿದ್ಯಾರ್ಥಿಗಳು ವಿದ್ಯಾರ್ಜನೆಯಲ್ಲಿ ತೊಡಗಿದ್ದರು.

ಆರ್ಯಪುರದಲ್ಲಿ ವಿದ್ಯಾಪೀಠ ಸ್ಥಾಪನೆಯಾದುದೇ ಒಂದು ಸ್ವಾರಸ್ಯವಾದ ಕತೆ. ಹಿಂದೆ ಚಾಲುಕ್ಯ ಕುಲತಿಲಕ ಪುಲಿಕೇಶಿಯು ಧರಾತಲವು ಮೆಚ್ಚುವಂತೆ ಅಶ್ವಮೇಧಯಾಗವನ್ನು ಮಾಡಿದನಷ್ಟೆ. ಈ ಯಜ್ಞಕ್ಕೆ ದೇಶವಿದೇಶಗಳಿಂದ ಮಹಾವಿದ್ವಾಂಸರೂ, ಘನಪಾಟಿಗಳೂ ಆಹ್ವಾನಿಸಲ್ಪಟ್ಟಿದ್ದರು. ಪುಲಿಕೇಶಿಯು ಋತ್ವಿಜರಾಗಿ ಬಂದ ಬ್ರಾಹ್ಮಣರ ಪಾಂಡಿತ್ಯಕ್ಕೂ, ಸೌಜನ್ಯಕ್ಕೂ, ಸ್ವಾರ್ಥ ರಹಿತ ಜೀವನ, ಸತ್ಯಪ್ರೀತಿ, ಪೂಜೆ, ಧ್ಯಾನ, ತಪಸ್ಸುಗಳಿಗೂ ಮನಸೋತು ಅವರನ್ನು ತನ್ನ ರಾಜ್ಯದಲ್ಲಿಯೇ ನಿಲ್ಲಿಸಿಕೊಳ್ಳಲು ಆಶಿಸಿದನು. ಅವನು ವಿದ್ವಾಂಸರ ಮನವೊಲಿಸಿಕೊಂಡು, ಅವರಿಗೆ ಮಲಪ್ರಭೆಯ ತೀರದಲ್ಲಿ ಆರ್ಯ ಪುರವೆಂಬ ಹೆಸರಿನ ಅಗ್ರಹಾರವನ್ನು ಕಟ್ಟಿಸಿಕೊಟ್ಟು ಅವರ ಜೀವನಕ್ಕೆ ಬೇಕಾಗುವ ಎಲ್ಲ ಸೌಲಭ್ಯಗಳನ್ನೂ ಕಲ್ಪಿಸಿಕೊಟ್ಟನು.

ಒಂದೆಡೆಯಲ್ಲಿ ಸಕಲ ವಿದ್ಯಾಸಂಪನ್ನರೂ, ಚತುರ್ವಿದ್ಯಾಪಂಡಿತರೂ ಸೇರಿದಮೇಲೆ ಆರ್ಯಪುರವು ಸರಸ್ವತಿಯ ಪೀಠವಾಗಿ ಪರಿಣಮಿಸಿದುದರಲ್ಲಿ ಅಚ್ಚರಿ ಏನು ? ಅಲ್ಲಿನ ವಿದ್ವಾಂಸರ ವಿದ್ವತ್ತು, ಪಾಂಡಿತ್ಯಗಳ ಕೀರ್ತಿ ಕೇಳಿ ದೇಶದ ಮೂಲೆಮೂಲೆಗಳಿಂದ ವಿದ್ಯಾರ್ಥಿಗಳು ಶಿಕ್ಷಣಪಡೆಯಲು ಬರುತ್ತಿದ್ದರು. ಪುಲಿಕೇಶಿಯು ಆರ್ಯಪುರವನ್ನು ಸರಸ್ವತಿ ಮಂದಿರವಾಗಿ ಮಾಡಲು ಅಲ್ಲಿಗೆ ವಿದ್ಯಾರ್ಜನೆಗೆಂದು ಬರುವ ವಿದ್ಯಾರ್ಥಿಗಳಿಗೆ ಇರಲು ಉಚಿತ ವಸತಿ, ಪ್ರಸಾದ ನಿಲಯಗಳನ್ನು ಕಟ್ಟಿಸಿಕೊಟ್ಟು, ಅಲ್ಲಿ ಉಚ್ಚದರ್ಜೆಯ ವಿದ್ಯಾಪೀಠ ರೂಪು ಗೊಳ್ಳಲು ಕಾರಣನಾದನು. ವಿದ್ಯಾಪೀಠಕ್ಕೆ ಅನೇಕ ಗ್ರಾಮಗಳನ್ನು ಉಂಬಳಿ ಯಾಗಿ ಹಾಕಿಕೊಟ್ಟುದಲ್ಲದೆ, ಆರ್ಯಪುರವ ವಣಿಕರ ಮೇಲೆ ತೆರಿಗೆ, ಸುಂಕ ಗಳನ್ನು ವಿಧಿಸುವ ಹಕ್ಕನ್ನೂ ಧರ್ಮಾಧಿಕಾರಿಗೆ ಕೊಟ್ಟಿದ್ದನು. ಹೀಗಾಗಿ ಆರ್ಯಪುರವು ಅತ್ಯಲ್ಪಕಾಲದಲ್ಲಿ ದಕ್ಷಿಣಾಪಥದಲ್ಲೆಲ್ಲಾ ಪ್ರಸಿದ್ಧಿ ಪಡೆದ, ಶ್ರೇಷ್ಠ ದರ್ಜೆಯ ವಿದ್ಯಾಪೀಠವಾಗಿ ಪರಿಣಮಿಸಿತ್ತು. ಇದು ಬೆಣ್ಣಮಸೋಮಯಾಜಿ ಗಳ ದಕ್ಷಮೇಲ್ವಿಚಾರಣೆಯಲ್ಲಿ ಭರತಖಂಡದ ವಿಶ್ವವಿದ್ಯಾಲಯಗಳ ಪಂಕ್ತಿ ಯಲ್ಲಿ ಒಂದಾಗಿ ಮೆರೆದಿತ್ತು.

ಬೆಣ್ಣಮಸೋಮಯಾಜಿಗಳ ಕೀರ್ತಿ ಕೇಳಿ, ಅವರ ಬಳಿ ಶಿಷ್ಯವೃತ್ತಿ ಯನ್ನು ಕೈಗೊಳ್ಳಲು ಅನೇಕ ವಿದ್ವಾಂಸರೇ ಬರುತ್ತಿದ್ದರೆಂದಮೇಲೆ ಸಾಮಾನ್ಯರ ಮಾತು ಹೇಳುವುದು ಬೇಡ ! ಆರ್ಯಪುರದಲ್ಲಿ ಶಿಕ್ಷಣ ಪಡೆದವನಿಗೆ ಭರತ

ವರ್ಷದಲ್ಲೆಲ್ಲಾ ಮನ್ನಣೆ, ಗೌರವಗಳು ಇದ್ದವು. ಅಭ್ಯರ್ಥಿಗಳು ಸೋಮಯಾಜಿಗಳ ಬಳಿ ಶಿಷ್ಯರಾಗಿ ಸೇರುವುದು ತಮ್ಮ ಭಾಗ್ಯ ವಿಶೇಷವೆಂದು ತಿಳಿದಿದ್ದರು. ಅಂಥವರ ಕೈಗೆ ತನ್ನ ಮೊಮ್ಮಕ್ಕಳ ಭವಿತವ್ಯವನ್ನು ಒಪ್ಪಿಸುವುದರಲ್ಲಿ ದುರ್ಲಭದೇವಿಗೂ ಹೆಮ್ಮೆ ಇತ್ತು. ಆದರೂ ತಾನು ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸುತ್ತಿದ್ದ, ರತ್ನಗಳಂತೆ ಜೋಪಾನಮಾಡಿಕೊಂಡು ಬಂದಿದ್ದ ಮಕ್ಕಳನ್ನು ಅವರಿಗೆ ಒಪ್ಪಿಸಿಕೊಡುವಾಗ ಮಾತೃಸಹಜವಾದ ವಾಂಛಲ್ಯದಿಂದ ಅವರು,

"ಸ್ವಾಮಿ, ಈ ತಬ್ಬಲಿ ಮಕ್ಕಳನ್ನು ನಾನು ನಿಮ್ಮ ಉಡಿಗೆ ಹಾಕುತ್ತಿದ್ದೇನೆ. ಇವರಿಗೆ ಇನ್ನು ಮುಂದೆ ನೀವೇ ತಾಯಿ ತಂದೆ, ಬಂಧು ಬಳಗ. ಇವರ ಸಮಸ್ತ ಪೋಷಣೆಯ ಭಾರ ನಿಮ್ಮದು" ಎಂದು ಹೇಳಿ ಕಣ್ಣೀರು ಮಿಡಿದಿದ್ದರು, ಬೆಣ್ಣಮಸೋಮಯಾಜಿಯವರೊಂದಿಗೆ ಮಕ್ಕಳನ್ನು ಕಳುಹಿಸಿಕೊಡುವುದೆಂದರೆ, ತಮ್ಮ ಕರುಳನ್ನೇ ಕಿತ್ತು ಅವರಿಗೆ ಕೊಟ್ಟಂತೆ ಭಾಸವಾಗಿತ್ತು. ಕಣ್ಣೀರು ಮಿಡಿದ ಮಹಾರಾಣಿಯವರನ್ನು ಸಮಾಧಾನಮಾಡುತ್ತಾ ಸೋಮಯಾಜಿಗಳು ಹೀಗೆಂದು ಹೇಳಿದ್ದರು :

"ತಾಯಿ, ನೀವು ಮಕ್ಕಳ ಯೋಗಕ್ಷೇಮದ ಬಗ್ಗೆ ಚಿಂತಿಸಬಾರದು. ಈ ಗಳಿಗೆಯಿಂದ ಅವರು ನನ್ನ ಶಿಷ್ಯರಲ್ಲ—ನನ್ನ ಮಕ್ಕಳೇ ಆಗಿದ್ದಾರೆ. ಇಂದಿಗೆ ಸರಿಯಾಗಿ ಹತ್ತು ವರ್ಷಗಳನಂತರ ನಿಮ್ಮ ಮಕ್ಕಳನ್ನು ಕರೆತಂದು ನಿಮಗೆ ಒಪ್ಪಿಸಿಕೊಡುತ್ತೇನೆ. ಈ ಅವಧಿಯಲ್ಲಿ ಅವರಿಗೆ ಕ್ಷತ್ರಿಯ ಉಚಿತವಾದ ಎಲ್ಲ ವಿದ್ಯೆಗಳಲ್ಲಿ ಶಿಕ್ಷಣ ಕೊಟ್ಟು ಅವರನ್ನು ಆದರ್ಶ ಸಾಮ್ರಾಟರಾಗಿ ಮಾಡುವ ಜವಾಬ್ದಾರಿ ನನ್ನದು. ಅವರ ಬಗ್ಗೆ ನೀವು ಯಾವುದೇ ಚಿಂತೆ ಹಚ್ಚಿಕೊಳ್ಳುವ ಕಾರಣವಿಲ್ಲ !"

"ಸ್ವಾಮಿ, ಹತ್ತು ವರ್ಷಗಳ ಕಾಲ ಅವರನ್ನು ಹೇಗೆ ಬಿಟ್ಟಿರಲಿ ?" ಎಂದು ಗದ್ಗದ ಕಂಠದಲ್ಲಿ ಹೇಳಿದರು ಮಹಾರಾಣಿ ದುರ್ಲಭದೇವಿ.

"ತಾಯಿ, ಶಿಕ್ಷಣದ ಕಾಲ ತುಸು ದೀರ್ಘವಾಯಿತೇನೋ ದಿಟ. ಆದರೆ ಬೆಣ್ಣೆಯಮುದ್ದೆಗಳಂತೆ ಇರುವ ಅವರು ರಣಕಲಿಗಳಾಗಿ ತಯಾರಾಗಲು ಇಷ್ಟು ಕಾಲ ಏನೂ ಸಾಲದು; ಮುಗ್ಧ ಬಾಲಕರಂತಿರುವ ಅವರು ಶ್ರೇಷ್ಠರಾಜಕಾರಣಿಗಳಾಗಿ ಮಾರ್ಪಡಲು ಇಷ್ಟುಕಾಲ ಏನೂ ಸಾಲದು; ಸಾಮಾನ್ಯ ವ್ಯಕ್ತಿಗಳಾಗಿ ಇರುವ ಕುಮಾರರು ರಾಷ್ಟ್ರಶಿಲ್ಪಿಗಳಾಗಿ ರೂಪುಗೊಳ್ಳುವಂತೆ ಮಾಡಲು ಜೀವಿತ

ವನ್ನು ಮುಡುಪಿಟ್ಟರೂ ಸಾಲದು! ಒಂದು ಮಾತಿನಲ್ಲಿ ಹೇಳುವುದಾದರೆ, ಜಗತ್ತಿನ ಜ್ಞಾನ ಭಂಡಾರವನ್ನು ಗ್ರಹಿಸಲು ಅನೇಕ ಜನ್ಮಗಳನ್ನೆತ್ತಿದರೂ ಸಾಲದಾಗುವಾಗ, ಕೇವಲ ಹತ್ತುವರ್ಷಗಳ ಶಿಕ್ಷಣ ದೀರ್ಘವಾಯಿತೇ ತಾಯಿ?" ಎಂದು ಹೇಳಿ ನಕ್ಕರು.

"ಸ್ವಾಮಿ, ಸರ್ವಜ್ಞರಾದ ತಮಗೆ ಅಜ್ಞಳಾದ ನಾನು ಹೇಳುವುದೇನು ? ಮಾತೃಸಹಜ ವಾಂಛಲ್ಯದಿಂದ ಈ ಮಾತು ಹೇಳುತ್ತಿದ್ದೇನೆ. ತಂದೆತಾಯಿ ಗಳಿಲ್ಲದ ತಬ್ಬಲಿ ಬಾಲಕರನ್ನು ವರ್ಷಕ್ಕೊಮ್ಮೆಯಾದರೂ ನೋಡುವ ಅವಕಾಶ ವನ್ನು ತಾವು ನಮಗೆ ಕರುಣಿಸಬೇಕು."

"ನೀವು ಮೇಲಿಂದ ಮೇಲೆ ಬಂದು ಬಾಲಕರನ್ನು ನೋಡುವುದರಿಂದ ಅವರ ಶಿಕ್ಷಣದಲ್ಲಿ ಆಸಕ್ತಿ ಕಡಿಮೆಯಾಗಿ, ಮನೆಯ ಕಡೆ ಮನಸ್ಸು ಹರಿಯ ಬಹುದು. ಇದರಿಂದ ಶಿಕ್ಷಣದಲ್ಲಿ ಏಕಾಗ್ರತೆ ಹಾಗೂ ತನ್ಮಯತೆಗೆ ಲೋಪ ಬರಬಹುದು. ನಿಮಗೆ ಮೊಮ್ಮಕ್ಕಳ ವಿಷಯದಲ್ಲಿ ಎಂತಹ ಪ್ರೀತಿ–ಮೋಹಗಳು ಇವೆ ಎಂಬುದನ್ನು ನಾನು ಬಲ್ಲೆ. ಅವರ ಸಲುವಾಗಿ ಈ ಮಾತು ಹೇಳು ತ್ತಿದ್ದೇನೆ. ಬಾಲಕರು ನಿಮ್ಮನ್ನು ನೋಡಲು, ದೈಹಿಕವಾಗಿ ಮಾನಸಿಕವಾಗಿ ಸಿದ್ಧರಾಗುವವರೆಗೆ ನೀವು ಅವರನ್ನು ಕಾಣಲು ಬರಬಾರದು. ಆದರೆ ಅವರ ಶಿಕ್ಷಣದ ಪ್ರಗತಿಯ ಬಗ್ಗೆ ಆಗಿಂದಾಗ್ಗೆ ಪತ್ರ ಬರೆದು ತಿಳಿಸಿರುತ್ತೇನೆ. ಅವರನ್ನು ನೋಡಲೇಬೇಕೆನಿಸಿದರೆ, ಮೊದಲೇ ತಿಳಿಸಿದರೆ ಒಳ್ಳೆಯದು. ನಿಮ್ಮ ಭೇಟಿಗೆ ಅವರನ್ನು ಸಿದ್ಧಗೊಳಿಸಿರುತ್ತೇನೆ. ನನ್ನ ಸಲಹೆ ಸ್ವೀಕರಿಸುವುದಾದರೆ ಈ ಹತ್ತು ವರ್ಷಗಳ ಕಾಲ ನೀವು ಮಕ್ಕಳನ್ನು ನೋಡಲು ಬರುವುದು ಅಷ್ಟಾಗಿ ಒಳ್ಳೆಯ ದಲ್ಲ. ಒಮ್ಮೆ ಮಕ್ಕಳ ಜವಾಬಾರಿಯನ್ನು ನಮಗೆ ವಹಿಸಿ ಮೇಲೆ ನೀವು ಈ ಬಗ್ಗೆ ನಿಶ್ಚಿಂತೆಯಿಂದ ಇರಬೇಕೆಂಬುದೇ ನಮ್ಮ ಅಭಿಲಾಶೆ. ಇಷ್ಟರಮೇಲೆ ತಮ್ಮ ಚಿತ್ತ !" ಎಂದು ಹೇಳಿದರು ಸೋಮಯಾಜಿಗಳು.

"ನಿಮಗೆ ಹೇಗೆ ಸಮ್ಮತವೋ ಹಾಗೇ ಮಾಡಿ, ಸ್ವಾಮಿ! ಈ ಗಳಿಗೆ ಯಿಂದ ಅವರು ನನ್ನ ಮೊಮ್ಮಕ್ಕಳಲ್ಲ—ನಿಮ್ಮ ಮೊಮ್ಮಕ್ಕಳು !" ಎಂದು ಹೇಳಿ ಮಹಾರಾಣಿ ದುರ್ಲಭದೇವಿ ವಿಷಣ್ಣವಾಗಿ ನಕ್ಕರು. ಗುರುಕುಲದ ನಿಯಮಗಳು ಇಷ್ಟು ನಿಷ್ಠುರವಾಗಿ ಇರುವುದೆಂದು ಅವರು ತಿಳಿದಿರಲಿಲ್ಲ. ಶಿಸ್ತು, ಸಂಯಮ ಗಳಿಲ್ಲದ ಶಿಕ್ಷಣ ವ್ಯರ್ಥವೆಂದು ತಿಳಿದಿದ್ದ ಬೆಣ್ಣಮಸೋಮಯಾಜಿಗಳು ಶಿಕ್ಷಣದ

ವಿಷಯದಲ್ಲಿ ಕಠೋರ ನಿಯಮಗಳನ್ನು ಹಾಕಿಕೊಂಡಿದ್ದರು. ಇದೇ ಅವರ ಕೀರ್ತಿಯ ರಹಸ್ಯವಾಗಿತ್ತು. ನಿಷ್ಠುರಪತ್ನಿಯರ ಮೇಲೆ ನಿಂತ ಅವರ ಜೀವನ ಹಾಗೂ ದರ್ಶನಗಳು ಸತ್ಯದಷ್ಟೇ ಉಜ್ವಲವಾಗಿದ್ದುದರಲ್ಲಿ ಆಶ್ಚರ್ಯವೇನು ?

ಇಂದು ಮಹಾರಾಣಿ ದುರ್ಲಭದೇವಿಗೆ ಹಿಂದಿನದೆಲ್ಲ ಯೋಚಿಸಿದಂತೆ, ಮಕ್ಕಳನ್ನು ಕಾಣದೆ ಕಳೆದಿದ್ದ ಆ ಹತ್ತು ವರ್ಷಗಳು ಅವರ ಭಾಗಕ್ಕೆ ನೂರು ವರ್ಷಗಳಷ್ಟು ದೀರ್ಘವಾಗಿ ಕಾಣಿಸಿದ್ದುವು. ಹತ್ತು ವರ್ಷಗಳ ಕಾಲ ಮೊಮ್ಮಕ್ಕಳನ್ನು ಕಾಣದೆ ಕಳೆದಿದ್ದುವು! ಕೇವಲ ಎಂಟು ವರ್ಷದ ಬಾಲಕನಾಗಿ ಗುರುಕುಲಕ್ಕೆ ತೆರಳಿದ್ದ ಪುಲಿಕೇಶಿ ಈಗ ಹದಿನೆಂಟು ವರ್ಷಗಳ ಬಾಲಕನಾಗಿ ರಾಜಧಾನಿಗೆ ಹಿಂದಿರುಗಲಿದ್ದ! ವಿಷ್ಣುವರ್ಧನನು ಈಗ ಹದಿನಾರು ವರ್ಷದ ಬಾಲಕನಾಗಿದ್ದನು. ಇನ್ನೆರಡು ವರ್ಷಗಳ ಶಿಕ್ಷಣ ಮುಗಿದರೆ, ಅವನ ಗುರುಕುಲವಾಸವೂ ಮುಗಿಯುತ್ತಿತ್ತು. ಆದರೆ ದುರ್ಲಭದೇವಿಯ ಒತ್ತಾಸೆಯಂತೆ, ವಿಷ್ಣುವರ್ಧನನೊಬ್ಬನನ್ನೇ ಹಿಂದೆ ಬಿಟ್ಟಿರಲು ಮನವಾಗದೆ, ಬೆಣ್ಣಮಸೋಮಯಾಜಿಗಳು ಇಬ್ಬರನ್ನೂ ಜೊತೆಯಲ್ಲಿ ಕರೆದುಕೊಂಡು ಬಂದಿದ್ದರು—ಅದೂ ಹತ್ತು ವರ್ಷಗಳ ಹಿಂದೆ ತಾವು ಹೇಳಿದ್ದ ದಿನಕ್ಕೆ ಸರಿಯಾಗಿ.

ಮಹಾರಾಣಿ ದುರ್ಲಭದೇವಿಯು ರಾಜಪುರೋಹಿತರು, ಆಪ್ತಮಂತ್ರಿ ಸಮಂತಭದ್ರ ಮತ್ತಿತರ ಪರಿಜನರೊಡನೆ ನಗರದ ಹೊರವಲಯದಲ್ಲೇ ರಥದಲ್ಲಿ ಬಂದ ಮೊಮ್ಮಕ್ಕಳನ್ನೂ, ಬೆಣ್ಣಮಸೋಮಯಾಜಿಗಳನ್ನೂ ರಾಜಮರ್ಯಾದೆಯಿಂದ ಸ್ವಾಗತಿಸಿ, ಅರಮನೆಗೆ ಕರೆದೊಯ್ದರು. ಇದರಲ್ಲಿ ಮಂಗಳೇಶನು ಮಾತ್ರ ಪಾಲುಗೊಳ್ಳಲಿಲ್ಲ. ಅವನು ದೇಹಾಲಸ್ಯದ ಸೋಗು ಹಾಕಿ ಅರಮನೆಯಲ್ಲೇ ಉಳಿದನು. ಇದರಿಂದ ಪುಲಿಕೇಶಿಯ ಮನಸ್ಸಿಗೆ ಖೇದ ಉಂಟಾದರೂ, ಅವನಿಗೆ ಮಹಾರಾಣಿ ದುರ್ಲಭದೇವಿಯಿಂದ ಮಂಗಳೇಶನ ನಿಜವಾದ ಸ್ವರೂಪದ ಬಗ್ಗೆ ಸಾಕಷ್ಟು ಸಂಗತಿಗಳು ತಿಳಿದಿದ್ದುದರಿಂದ ಅವನು ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅವನ ಬಗ್ಗೆ ಬೆಣ್ಣಮಸೋಮಯಾಜಿಗಳು 'ತಾಯಿ ಪ್ರಭುಗಳೆಲ್ಲಿ, ಕಾಣುವುದಿಲ್ಲ?' ಎಂದು ವಿಚಾರಿಸಿದಾಗ ಮಹಾರಾಣಿಯವರೇ 'ಅವರಿಗೆ ದೇಹಾಲಸ್ಯವಾಗಿದೆಯಂತೆ' ಎಂದು ಹೇಳಿ ಆ ವಿಷಯವನ್ನು ತೇಲಿಸಿಬಿಟ್ಟರು.

ಪರಸ್ಪರ ಕುಶಲಪ್ರಶ್ನೆ ಅತಿಥಿ ಸತ್ಕಾರಗಳು ಮುಗಿದ ಮೇಲೆ ಬೆಣ್ಣಮ

ಸೋಮಯಾಜಿಗಳು ಮಹಾರಾಣಿಯವರಿಗೆ ಅವರ ಮೊಮ್ಮಕ್ಕಳನ್ನು ಒಪ್ಪಿಸುತ್ತಾ,

"ಮಹಾರಾಣಿಯವರೇ, ನಿಮ್ಮ ಮೊಮ್ಮಕ್ಕಳನ್ನು ಹಿಂದಕ್ಕೆ ಒಪ್ಪಿಸಿಕೊಳ್ಳಿ ನಿಮಗೆ ಕೊಟ್ಟಿದ್ದ ವಚನದಂತೆ ಕುಮಾರರಿಬ್ಬರಿಗೂ ಕ್ಷತ್ರಿಯೋಚಿತವಾದ ಎಲ್ಲ ವಿದ್ಯೆಯನ್ನೂ ಕಲಿಸಿ, ಪರಿಣತರನ್ನಾಗಿ ಮಾಡಿದ್ದೇನೆ. ಇನ್ನೆರಡು ವರ್ಷಗಳ ಶಿಕ್ಷಣ ಮುಗಿದರೆ ವಿಷ್ಣುವರ್ಧನನ ಗುರುಕುಲವಾಸವೂ ಮುಗಿಯುತ್ತದೆ. ಆದರೂ ನಿಮ್ಮ ಕೋರಿಕೆಯಂತೆ ಅವನನ್ನೂ ಜೊತೆಗೆ ಕರೆತಂದಿದ್ದೇನೆ. ನಿಮ್ಮ ಒಡವೆಯನ್ನು ನೀವು ಸ್ವೀಕರಿಸಬೇಕು" ಎಂದು ವಿನಯದಿಂದ ಶಿಷ್ಯರನ್ನು ಮಹಾರಾಣಿಗೆ ಒಪ್ಪಿಸಿಕೊಟ್ಟರು.

ಮೊಮ್ಮಕ್ಕಳಿಬ್ಬರೂ ಗುರುತು ಸಿಕ್ಕದಷ್ಟು ಬೆಳೆದು ದೊಡ್ಡವರಾಗಿದ್ದರು. ರಾಮಲಕ್ಷ್ಮಣರನ್ನು ಯಜ್ಞರಕ್ಷಣೆಗೆಂದು ಕರೆದೊಯ್ದು ಉಚಿತ ಶಿಕ್ಷಣ ಕೊಟ್ಟು ಹಿಂದಕ್ಕೆ ಕರೆತಂದ ವಿಶ್ವಾಮಿತ್ರನಂತೆ ಅವರನ್ನು ಹಿಂದಕ್ಕೆ ತಂದೊಪ್ಪಿಸಿದ್ದರು ಬೆಣ್ಣಮಸೋಮಯಾಜಿಗಳು. ಬಾಲಕರಿಬ್ಬರೂ ಅಜ್ಜಿಗೆ ನಮಸ್ಕರಿಸಲು ಬಗ್ಗಿದಾಗ, ದುರ್ಲಭದೇವಿಯು ಅವರಿಬ್ಬರನ್ನೂ ಮೇಲಕ್ಕೆತ್ತಿ, ಪ್ರೀತಿಯಿಂದ ಆಲಂಗಿಸಿ, ಅವರ ತಲೆಯನ್ನು ಆಘ್ರಾಣಿಸಿ, ಆನಂದಬಾಷ್ಪ ಸುರಿಸುತ್ತಾ,

"ಕಂದಮ್ಮಗಳಿರಾ, ನೀವು ರಾಮಲಕ್ಷ್ಮಣರಂತೆ ಆಯುಷ್ಮಂತರಾಗಿ ಬಾಳಿ. ಕೀರ್ತಿವಂತರಾಗಿ ಬಾಳಿ" ಎಂದು ಹೃದಯಾಂತರಾಳದಿಂದ ಹಾರೈಸಿದರು. ಗುರುಗಳಿಗೆ ರಾಜಯೋಗ್ಯವಾದ ಉಡುಗೊರೆಯನ್ನೂ, ಅಮೂಲ್ಯವಾದ ಒಡವೆವಸ್ತುಗಳನ್ನೂ ಗುರುಭಕ್ತಿಯ ಕಾಣಿಕೆಯಾಗಿ ಅರ್ಪಿಸಲು, ಪುಲಿಕೇಶಿಗೆ ಹೇಳಿದರು.

"ಪೂಜ್ಯರೇ, ನೀವು ಕಡೆದ ವಿಗ್ರಹಗಳು ಈ ಮಕ್ಕಳು. ಕಗ್ಗಲ್ಲಿನಂತೆ ಇದ್ದ ಇವರನ್ನು ಕಡೆದು ಸುಂದರ ಶಿಲ್ಪಾಕೃತಿಯಾಗಿ ರೂಪಿಸಿದ್ದೀರಿ. ವ್ಯಕ್ತಿತ್ವದ ರೂವಾರಿಗಳಾದ ತಮಗೆ ನಾವು ಎಷ್ಟು ಋಣಿಯಾಗಿದ್ದರೂ ಅಲ್ಪವೇ. ಎಷ್ಟು ಗುರುದಕ್ಷಿಣೆ ಕೊಟ್ಟರೆ ತಾನೇ ನಿಮ್ಮ ಋಣವನ್ನು ನಾವು ತೀರಿಸಬಲ್ಲೆವು? ಆದರೂ ನಮ್ಮ ಭಕ್ತಿಯ ಪ್ರತೀಕವಾಗಿ ಈ ಅಲ್ಪ ಗುರುದಕ್ಷಿಣೆಯನ್ನು ಸ್ವೀಕರಿಸಿ, ಕುಮಾರರನ್ನು ಆಶೀರ್ವದಿಸಬೇಕು" ಎಂದರು.

"ತಾಯಿ, ನೀವು ನನ್ನ ವಿಷಯದಲ್ಲಿ ಹೇಳಿದ ಮಾತುಗಳಿಗೆ ನಿಮ್ಮ ಅಭಿಮಾನವೇ ಕಾರಣ. ಅದಕ್ಕೆ ನಾನು ಸರ್ವಥಾ ಬಾಧ್ಯನಲ್ಲ. ನಾನು ವಿದ್ಯೆ ಕಲಿತುದಕ್ಕೆ ಸತ್ಪಾತ್ರರಿಗೆ ಅದನ್ನು ಧಾರೆ ಎರೆಯುವುದು ನನ್ನ ಕರ್ತವ್ಯ.

ಅದನ್ನಷ್ಟೇ ನಾನು ಮಾಡಿದ್ದೇನೆ. ನಾನು ಈ ಮಕ್ಕಳನ್ನು ನನ್ನ ಮಕ್ಕಳಂತೆ ಸಾಕಿದ್ದೇನೆ, ದಿಟ. ವಿದ್ಯೆ ಬುದ್ಧಿ ಕಲಿಸಿಕೊಟ್ಟದ್ದೇನೆ, ದಿಟ. ಆದರೆ ವಿದ್ಯೆ ಕಲಿಸಿಕೊಡಲು ಇಂತಹ ಸತ್ಪಾತ್ರರು ಎಷ್ಟು ಮಂದಿ ತಾನೇ ನನಗೆ ದೊರಕ ಬಲ್ಲರು ? ಇವರನ್ನು ಶಿಷ್ಯರಾಗಿ ಪಡೆದುದರಲ್ಲಿ ನನ್ನ ಕರ್ತವ್ಯವನ್ನು ಮಾತ್ರವೇ ನೆನೆಯಲಿಲ್ಲ; ನನ್ನದೇ ಆದ ಸ್ವಾರ್ಥವೂ ಇತ್ತು. ಈ ದೇಹ ಸಾಮ್ರಾಟರ ಉಪ್ಪಿನಿಂದ ಬೆಳೆದು ದೊಡ್ಡದಾಗಿದೆ. ಪೂಜ್ಯರಾದ ಪುಲಿಕೇಶಿ ಸಾರ್ವಭೌಮರು ಎಲ್ಲಿಂದಲೋ ಬಂದ ನಮ್ಮನ್ನು ಒಂದು ನೆಲೆಗೆ ತಂದರು. ಮಾತ್ರವಲ್ಲ, ನನ್ನ ಅಲ್ಪ ವಿದ್ಯೆಗೆ ಗೌರವ ಕೊಟ್ಟು ನನ್ನನ್ನು ವಿದ್ಯಾಪೀಠಕ್ಕೆ ಕುಲಪತಿಯಾಗಿ ನೇಮಿಸಿದರು. ನನ್ನ ಜನ್ಮ ಪಾವನವಾಗಲು ಸಹಕಾರಿಯಾದರು; ಅವರ ಋಣ ವನ್ನು ನಾನು ಈ ರೀತಿಯಲ್ಲಿ ತೀರಿಸಲು ಅವಕಾಶ ದೊರೆತುದಕ್ಕೆ ನಾನು ನಿಮಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದು...

"ಆದರೂ ನೀವು ನನ್ನಿಂದ ವಿದ್ಯೆ ಕಲಿತುದಕ್ಕೆ, ನೀವು ನನ್ನ ಶಿಷ್ಯರೆಂಬ ಕಾರಣದಿಂದ ಈ ಕೆಲವು ಮಾತು ಹೇಳುತ್ತಿದ್ದೇನೆ. ಇದು ನಿಮಗೆ ಕೊಡುವ ಉಪದೇಶವಲ್ಲ, ಬುದ್ಧಿವಾದವೂ ಅಲ್ಲ. ಆದರೆ ನಿಮ್ಮ ಸ್ವರೂಪ ಪರಿಚಯಮಾತ್ರ. ನೀವು ಯಾರು ? ನಿಮ್ಮ ಜೀವಿತದ ಗುರಿ ಏನು ? ನೀವು ಸಾಧಿಸಬೇಕಾಗಿರುವು ದೇನು ಎಂಬ ಸಂಗತಿಗಳ ಬಗ್ಗೆ ನಡೆಸಲು ಇದೊಂದು ದಾರಿದೀಪ. ನೀವು ನನ್ನ ಮಾತುಗಳನ್ನು ಗಮನವಿಟ್ಟು ಕೇಳಿ...."

"ನೀವು ಪವಿತ್ರವಾದ ಚಂದ್ರವಂಶದಲ್ಲಿ ಹುಟ್ಟಿದವರು. ಶ್ರೀಮಾನ್ ನ್ನಾರಾಯಣನೇ ನಿಮ್ಮ ಮೂಲಪುರುಷ. ಅವನ ನಾಭಿಕಮಲದಲ್ಲಿ ಬ್ರಹ್ಮನೂ, ಅವನಿಂದ ಪರಂಪರೆಯಾಗಿ ಚಂದ್ರನೂ, ಬುಧನೂ, ಪುರೂರವನೂ, ಆಯುವೂ, ಆಯುಷನೂ ಹುಟ್ಟಿದರು. ಕಡೆಯವನಿಂದ ಉದಯನವರೆಗೆ ಹೀಗೆ ಐವತ್ತೊಂಬತ್ತು ಅರಸರು ಅಯೋಧ್ಯೆಯನ್ನು ಆಳಿ ಅಜರಾಮರವಾದ ಕೀರ್ತಿಗೆ ಪಾತ್ರರಾದರು."

"ಈ ವಂಶದಲ್ಲಿ ಹುಟ್ಟಿದ ವಿಜಯಾದಿತ್ಯನ ವಿಷಯವನ್ನಷ್ಟೇ ಹೇಳು ತ್ತಿದ್ದೇನೆ. ಅವನು ಹೊಸ ರಾಜ್ಯವನ್ನು ಸಂಪಾದಿಸುವ ಸಲುವಾಗಿ ತೆಂಕಣ ಮುಖವಾಗಿ ಹೊರಟು, ವಿಂಧ್ಯಗಿರಿಯನ್ನು ದಾಟಿಬಂದನು. ಅವನು ತ್ರಿಲೋಚನ ಮಲ್ಲನೆಂಬ ಪಲ್ಲವ ಅರಸನೊಡನೆ ಯುದ್ಧಮಾಡುತ್ತಿದ್ದಾಗ ದುರ್ದೈವದಿಂದ

ಅವನು ರಣರಂಗದಲ್ಲಿ ಮಡಿದು, ವೀರಸ್ವರ್ಗವನ್ನೇರಿದನು. ಆ ಸಮಯದಲ್ಲಿ ಅವನ ಪತ್ನಿ ತುಂಬಿದ ಬಸುರಿ. ಗರ್ಭಿಣಿಯಾದ ಅವಳಿಗೆ ವಿಷ್ಣುಸೋಮಯಾಜಿ ಎಂಬ ವಿಪ್ರೋತ್ತಮನು ಆಶ್ರಯಕೊಟ್ಟನು. ಅವನ ಮನೆಯಲ್ಲಿ ರಾಜಪತ್ನಿ ಗಂಡು ಶಿಶುವೊಂದನ್ನು ಹಡೆದು ಪರಲೋಕದಲ್ಲಿದ್ದ ಪತಿಯನ್ನು ಕೂಡಿ ಕೊಂಡಳು. ಬ್ರಾಹ್ಮಣ ದಂಪತಿಗಳು ಆ ರಾಜಪುತ್ರನಿಗೆ ವಿಷ್ಣುವರ್ಧನನೆಂದು ಹೆಸರು ಇಟ್ಟು, ಅವನನ್ನು ಸಾಕಿ ದೊಡ್ಡವನನ್ನಾಗಿ ಮಾಡಿದರು. ಅನಂತರ ಅವನಿಗೆ ಕ್ಷತ್ರಿಯೋಚಿತವಾದ ರಣವಿದ್ಯೆಗಳನ್ನೂ, ವೇದಶಾಸ್ತ್ರಗಳನ್ನೂ ಕಲಿಸಿ ಕೊಟ್ಟು ಮಹದ್ ವ್ಯಕ್ತಿಯಾಗಿ ಮಾಡಿದರು.

"ವಿಷ್ಣುವರ್ಧನನು ಬೆಳೆದು ದೊಡ್ಡವನಾದ ಮೇಲೆ ತನ್ನನ್ನು ಈ ಸ್ಥಿತಿಗೆ ತರಲು ಕಾರಣರಾದ ಬ್ರಾಹ್ಮಣ ದಂಪತಿಗಳಿಗೆ ಹೇಗೆ ಕೃತಜ್ಞನಾಗಿರಲು ಬಯಸಿದಾಗ ಆ ವಿಪ್ರೋತ್ತಮನು ಹೀಗೆಂದನು :"

"ವಿಷ್ಣುವರ್ಧನ, ನೀನು ಇಂದಲ್ಲ ನಾಳೆ ಸಾಮ್ರಾಟನಾಗುವವನು. ನಿನ್ನದು ಘನತೆವೆತ್ತ ಚಂದ್ರವಂಶ. ವಂಶದ ಘನತೆಗೆ ತಕ್ಕಂಥ ಮಹತ್ಕಾರ್ಯಗಳನ್ನು ಸಾಧಿಸಿ ಕೀರ್ತಿವಂತನಾಗು. ನೀನು ಗೋಬ್ರಾಹ್ಮಣರನ್ನೂ, ಅನಾಥರೆಂದು ಬಂದವರನ್ನೂ ರಕ್ಷಣೆಮಾಡು. ನಂಬಿದವರನ್ನು ಸಲಹು. ದುಷ್ಟರನ್ನು ಶಿಕ್ಷಿಸಿ, ಸಜ್ಜನರನ್ನು ಕಾಪಾಡು. ಎಂತಹ ಪ್ರಸಂಗ ಬಂದರೂ ಧರ್ಮವನ್ನು ಕೈಬಿಡಬೇಡ. ಸತ್ಯಪ್ರತಿಜ್ಞನಾಗಿರು. ಸಕಲ ಧರ್ಮಗಳೂ ಒಂದೇ. ನಿನ್ನಿಂದ ದೈವ ದ್ರೋಹವಾಗದಂತೆ, ಧರ್ಮದ್ರೋಹ ನಡೆಯದಂತೆ ನೋಡಿಕೋ ! ಇದೇ ನಿನ್ನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿ, ವಿದ್ಯಾಬುದ್ಧಿ ಕಲಿಸಿಕೊಟ್ಟು ದಕ್ಕೆ ನಾನು ಅಪೇಕ್ಷಿಸುವ ಪ್ರತಿಫಲ."

"ಆ ವಿಪ್ರೋತ್ತಮನ ಹಾರೈಕೆಯಿಂದ ವಿಷ್ಣುವರ್ಧನನು ಸೈನ್ಯ ಕಟ್ಟಿ, ಕೈಬಿಟ್ಟುಹೋಗಿದ್ದ ರಾಜ್ಯವನ್ನು ಮರಳಿಪಡೆದನು. ಮಾತ್ರವಲ್ಲ ಅವನು ಕದಂಬರನ್ನೂ, ಗಂಗರನ್ನೂ ಸೋಲಿಸಿ ಓಡಿಸಿದನು. ಅವರಿಂದ ಶ್ವೇತಛತ್ರಿಯನ್ನೂ, ಶಂಖ, ಪಂಚ ಮಹಾಶಬ್ದ, ವರಹಾಲಾಂಛನ, ಪಿಂಛ, ಜೋಡು ನಗಾರಿ, ಸಿಂಹಾಸನ, ಮಕರ ತೋರಣ ಮತ್ತು ಗಂಗಾಯಮುನಾ ಮೂರ್ತಿಗಳನ್ನೂ ದೊರಕಿಸಿಕೊಂಡು, ಆಸೇತು ನರ್ಮದೆಯವರೆಗೆ ಆಳಿ ದಿಗಂತ ಕೀರ್ತಿಯನ್ನು ಪಡೆದನು. ಅವನು ವಿಪ್ರೋತ್ತಮನಿಗೆ ಕೊಟ್ಟಿದ್ದ ವಚನದಂತೆ ಧರ್ಮದಿಂದ

ರಾಜ್ಯವಾಳಿದನು. ಅವನ ಆದರ್ಶವನ್ನು ಕೀರ್ತಿಶೇಷರಾದ ವಿಜಯಾದಿತ್ಯ, ಪುಲಿಕೇಶಿ, ಕೀರ್ತಿವರ್ಮರು ಎತ್ತಿಹಿಡಿದು ಧರ್ಮದಿಂದ ರಾಜ್ಯವಾಳಿದರು. ನೀನೂ ಅವರ ಪರಂಪರೆಯನ್ನು ನಡೆದು, ಅವರಿಗೂ ದೊಡ್ಡ ಸಾಮ್ರಾಟನಾಗಿ ಮೆರೆದು ಇತಿಹಾಸದಲ್ಲಿ ನಿನ್ನ ಹೆಸರನ್ನು ಸುವರ್ಣಾಕ್ಷರಗಳಲ್ಲಿ ಬರೆಯಬೇಕೆಂಬುದೇ ನನ್ನ ಆಶಯ. ಇದೇ ನೀನು ನನಗೆ ಸಲ್ಲಿಸಬೇಕಾಗಿರುವ ಯೋಗ್ಯ ಗುರುದಕ್ಷಿಣೆ” ಎಂದು ಹೇಳಿ ಒತ್ತಿಬರುತ್ತಿದ್ದ ಕಣ್ಣೀರನ್ನು ಒರಸಿಕೊಂಡರು.

## ೨

ಬೆಣ್ಣಮುಸೋಮುಷಾಜಿಗಳನ್ನು ಯಥೋಚಿತ ರೀತಿಯಲ್ಲಿ ಸತ್ಕರಿಸಿ ಬೀಳ್ಕೊಟ್ಟ ಮೇಲೆ ಪುಲಿಕೇಶಿಯು ಮಂಗಳೇಶನನ್ನು ಕಾಣಲು ಅವನ ಅರಮನೆಗೆ ಹೋದನು. ಅವನು ತಮ್ಮನ್ನು ಸ್ವಾಗತಿಸಲು ಬಾರದಿರುವುದರ ಕಾರಣ ದೇಹಾಲಸ್ಯವಲ್ಲ—ಮಾತ್ಸರ್ಯನೆಂದು ತಿಳಿದಿದ್ದರೂ ಸದ್ಯಕ್ಕೆ ಸಾಮ್ರಾಟನಾಗಿದ್ದ ಅವನನ್ನು ಇಷ್ಟು ಬೇಗ ಎದುರು ಹಾಕಿಕೊಳ್ಳಲಿಚ್ಛಿಸದೆ, ದುರ್ಲಭದೇವಿಯ ಸಲಹೆಯಂತೆ ಅವನನ್ನು ನೋಡಲು ತಾನೇ ಹೊರಟಿದ್ದನು. ಈ ಹತ್ತು ವರ್ಷಗಳ ಅವಧಿಯಲ್ಲಿ ಮಂಗಳೇಶನ ಸ್ವಭಾವದಲ್ಲಿ ಆಗಿದ್ದ ಮಾರ್ಪಾಟು, ರಾಜ್ಯಾಡಳಿತದಲ್ಲಿ ನಡೆದಿದ್ದ ಬದಲಾವಣೆಗಳು ಸೂಕ್ಷ್ಮವಾಗಿ ಪುಲಿಕೇಶಿಗೆ ತಿಳಿದಿದ್ದುವು. ಆದರೆ ಅವನ್ನು ಕಣ್ಣಿಂದ ನೋಡಿ, ಕಿವಿಯಿಂದ ಕೇಳಿದ ಹೊರತು ಈ ಬಗ್ಗೆ ಯಾವುದೇ ಪೂರ್ವಾಭಿಪ್ರಾಯಕ್ಕೆಎಡೆಗೊಡಬಾರದೆಂದು ಪುಲಿಕೇಶಿಯು ಮಂಗಳೇಶನ ವಿಷಯದಲ್ಲಿ ಮೊದಲಿನ ಸದ್ಭಾವನೆಯನ್ನೇ ಹೊಂದಿದ್ದನು.

ಮಂಗಳೇಶನು ಸಾಮ್ರಾಜ್ಯನಿಷ್ಠ ಸೇವಕರ ಆದೇಶದಂತೆ. ಪುಲಿಕೇಶಿಯು ಪ್ರಾಪ್ತವಯಸ್ಕನಾಗುವವರೆಗೆ, ರಾಜ್ಯಾಡಳಿತದ ಅಧಿಕಾರ ಸೂತ್ರವನ್ನು ಕೈಗೆ ತೆಗೆದುಕೊಂಡಾಗ, ತಾನು ರಾಜಪ್ರತಿನಿಧಿ ಎಂದು ಘೋಷಿಸಿಕೊಂಡಿದ್ದರೂ, ಅಧಿಕಾರ ತನ್ನ ಕೈಯಲ್ಲಿ ಭದ್ರವಾದ ಮೇಲೇ ತಾನೇ ಸಾಮ್ರಾಟನೆಂಬಂತೆ ಮೆರೆದಿದ್ದನು. ತನ್ನ ಅಧಿಕಾರ ಸ್ಥಿರಗೊಳಿಸಲು ಬೇಕಾದ ಕಾರಾಸ್ಥಾನವನ್ನು

ನಡೆಸಿದ್ದನು. ಮೊದಲು ಅರಮನೆಯ ಒಳಗೆ ಹೊರಗೆ ಸೈನ್ಯ, ಮಂತ್ರಿಮಂಡಳ, ಸಾಮಂತರಲ್ಲಿ ತನ್ನ ಪಕ್ಷದವರು ಯಾರು, ಪುಲಿಕೇಶಿಯ ಪಕ್ಷದವರು ಯಾರು ಎಂಬುದನ್ನು ತಿಳಿಯಲು ತನ್ನವರೇ ಆದ ಬೇಹುಗಾರರನ್ನು ನೇಮಿಸಿದನು. ಅನಂತರ ಆಡಳಿತದ ಮುಖ್ಯ ಹುದ್ದೆಗಳಲ್ಲಿದ್ದ ತನ್ನ ವಿರೋಧ ಪಕ್ಷದವರನ್ನೆಲ್ಲಾ ಒಂದಲ್ಲಾ ಒಂದು ಕಾರಣ ಮುಂದುಮಾಡಿಕೊಂಡು ಅವರನ್ನು ಅಧಿಕಾರಚ್ಯುತ ರನ್ನಾಗಿ ಮಾಡಿ ಆ ಸ್ಥಳಗಳಿಗೆ ತನ್ನ ಬೆಂಬಲಿಗರನ್ನು ನೇಮಿಸಿದನು. ಅತ್ಯಲ್ಪ ಕಾಲದಲ್ಲಿ ಅರಮನೆ–ಗುರುಮನೆಗಳಲ್ಲೂ, ಮಂತ್ರಿಮಂಡಲ–ಸೈನ್ಯಗಳಲ್ಲೂ ಮಂಗಳೇಶನ ಪಕ್ಷದವರೇ ತುಂಬಿಹೋದರು. ಆದರೂ ಪ್ರಧಾನ ಅಮಾತ್ಯ ಪದವಿಯಿಂದ ಸಾಮಂತಭದ್ರನನ್ನಾಗಲೀ, ದಂಡನಾಯಕ ಪದವಿಯಿಂದ ಎರಪ್ಪ ನಾಯಕನನ್ನಾಗಲೀ ಅಧಿಕಾರದಿಂದ ಉರುಳಿಸಲು ಮಂಗಳೇಶನಿಂದ ಸಾಧ್ಯ ವಾಗಲಿಲ್ಲ. ಅವರ ಮುಂದೆ ಮಂಗಳೇಶನ ಆಟ ನಡೆಯುತ್ತಿರಲಿಲ್ಲ. ಅವರನ್ನು ನಿವಾರಿಸಿಕೊಳ್ಳದ ಹೊರತು ಮಂಗಳೇಶನಿಗೆ ತನ್ನ ಸ್ಥಾನ ಭದ್ರವಲ್ಲವೆಂದು ತಿಳಿದಿತ್ತು. ಚಾಣಾಕ್ಷರಾದ ಅವರು ಮಂಗಳೇಶನ ಯಾವ ಕುತಂತ್ರಕ್ಕೂ ಬಲಿಯಾಗದೆ, ದುರ್ಲಭರಾಣಿಗೆ ಅತ್ಯಂತ ನಿಷ್ಠೆಯಿಂದಿದ್ದರು. ಅವರ ಬೆಂಬಲಿ ಗರೂ ಅಭಿಮಾನಿಗಳೂ ಇನ್ನೂ ಸಾಮ್ರಾಜ್ಯದಲ್ಲಿ ಅಧಿಕ ಸಂಖ್ಯೆಯಲ್ಲಿ ಇದ್ದುದ ರಿಂದ ಮಂಗಳೇಶನಿಗೆ ಪುಲಿಕೇಶಿಗೆ ಸಲ್ಲಬೇಕಾಗಿದ್ದ ಸಿಂಹಾಸನವನ್ನು ತಾನೇ ದುರಾಕ್ರಮಿಸಿಕೊಳ್ಳುವಷ್ಟು ಧೈರ್ಯ ಬಂದಿರಲಿಲ್ಲ. ತಾನು ದುಡುಕಿದರೆ ಕಾರ್ಯ ಕೆಡುವುದೆಂದು ಇನ್ನೂ ತಾನು ರಾಜಪ್ರತಿನಿಧಿ ಎಂದು ಹೇಳಿಕೊಳ್ಳುತ್ತಾ ರಾಜ್ಯಭಾರ ನಡೆಸುತ್ತಿದ್ದನು. ವಾಸ್ತವವಾಗಿ–ಅವನು ರಾಜ್ಯಾಡಳಿತದಲ್ಲಿ ದುರ್ಲಭದೇವಿಯ ಸಲಹೆ ಸ್ವೀಕರಿಸದೆ, ಚಾಲುಕ್ಯ ಸಿಂಹಾಸನ ತನ್ನದೆಂಬಂತೆ ನಿರಂಕುಶ ರೀತಿಯಲ್ಲಿ ಆಡಳಿತ ನಡೆಸುತ್ತಿದ್ದನು.

ಮಂಗಳೇಶನಿಗೆ ಜನತೆಯ ಬೆಂಬಲವಿಲ್ಲದೆ ತನ್ನ ರಾಜತ್ವ ಉಳಿಯುವು ದಿಲ್ಲವೆಂದು ತಿಳಿದಿತ್ತು. ಪ್ರಜೆಗಳನ್ನು ತನ್ನ ಪಕ್ಷಕ್ಕೆ ಒಲಿಸಿಕೊಳ್ಳಲು ಅನೇಕ ಜನೋಪಕಾರಿ ಕೆಲಸಗಳನ್ನೂ, ಧರ್ಮಕಾರ್ಯಗಳನ್ನೂ ಮಾಡಿ ಅವರ ಅಭಿಮಾನಕ್ಕೆ ಪಾತ್ರನಾಗಲು ಪ್ರಯತ್ನಿಸಿದ್ದನು. ನಾಳೆ ಸಿಂಹಾಸನಕ್ಕಾಗಿ ತನಗೂ ಪುಲಿಕೇಶಿಗೂ ಹೋರಾಟ ನಡೆದಾಗ, ಜನ ತನ್ನ ಪಕ್ಷಕ್ಕೆ ನಿಲ್ಲ ಬೇಕೆಂಬುದೇ ಅವನು ಹೃದಯಾಂತರಾಳದ ಆಸೆಯಾಗಿತ್ತು. ಅವನ ಪ್ರಜೆಗಳು

ತನ್ನ ಆಳ್ವಿಕೆಯನ್ನು ಒಳ್ಳೆಸುವಂತೆ ಮಾಡಲು, ತನ್ನ ಸ್ವಾರ್ಥವನ್ನು ಅವರ ಕಣ್ಣಿನಿಂದ ಮುಚ್ಚಿಡಲು ಅಧಿಕಾರ, ಪದವಿ, ಕೀರ್ತಿಗಳ ಮೋಹ ತನಗೆ ಇಲ್ಲ ವೆಂಬಂತೆ, ವೈರಾಗ್ಯದ ಸೋಗುಹಾಕಿದ್ದನು. ಪುಲಿಕೇಶಿಯು ಸಾಮ್ರಾಜ್ಯದ ಅಧಿ ಕಾರ ಸೂತ್ರಗಳನ್ನು ಕೈಹಿಡಿಯಲು ಸಮರ್ಥನಾದ ಕೂಡಲೇ, ಅವನಿಗೆ ರಾಜ್ಯ ವನ್ನು ಒಪ್ಪಿಸಿ, ತಾನು ರಾಜಕಾರಣದಿಂದ ನಿವೃತ್ತನಾಗಿ, ಧರ್ಮಾಚರಣೆಯಲ್ಲೂ, ಕ್ಷೇತ್ರ ಯಾತ್ರೆಯಲ್ಲೂ ಕಳೆಯುವುದಾಗಿ ಬಹಿರಂಗದಲ್ಲಿ ಹೇಳಿಕೊಳ್ಳುತ್ತಿದ್ದನು.

ಆದರೆ ಮಹಾರಾಣಿ ದುರ್ಲಭದೇವಿಯಾಗಲೀ ಅಮಾತ್ಯ ಸಮಂತಭದ್ರ ನಾಗಲೀ ಇದಕ್ಕೆ ಮೋಸಹೋಗಿರಲಿಲ್ಲ. ಅವರು ಮೊದಲಿಂದಲೂ ಮಂಗಳೇಶನ ಮಹತ್ವಾಕಾಂಕ್ಷೆಯೇನೆಂಬುದನ್ನು ತಿಳಿದಿದ್ದುದರಿಂದ ಅವನ ಬಗ್ಗೆ ತಮ್ಮ ಎಚ್ಚರ ದಲ್ಲಿ ಇದ್ದರು. ಅವರು ಮಂಗಳೇಶನ ಪಕ್ಷದವರಿಂದ ತಮಗಾಗಲೀ, ಕುಮಾರರಿ ಗಾಗಲಿ, ಯಾವುದೇ ಬಗೆಯ ವಿಪತ್ತು ಒದಗದಂತೆ ಮೈಯೆಲ್ಲಾ ಕಣ್ಣಾಗಿಸಿ ಕೊಂಡು ಈ ಹತ್ತುವರ್ಷಗಳನ್ನು ಕಳೆದಿದ್ದರು.

ಈಗ ಪುಲಿಕೇಶಿಯು ಗುರುಕುಲವಾಸ ಮುಗಿಸಿಕೊಂಡು ರಾಜಧಾನಿಗೆ ಹಿಂತಿರುಗಿದ್ದನು. ಅಧಿಕಾರಸೂತ್ರ ಕೈಹಿಡಿಯಲು ಪ್ರಾಪ್ತವಯಸ್ಕನಾಗಿದ್ದನು. ಉಪಾಯವಾಗಿ, ಮಂಗಳೇಶನ ಕೈಯಿಂದ ರಾಜ್ಯಸೂತ್ರಗಳನ್ನು ಕಸಿದುಕೊಂಡು, ಸಿಂಹಾಸನವನ್ನು ಪುಲಿಕೇಶಿಗೆ ಭದ್ರಪಡಿಸಿಕೊಟ್ಟರೆ, ಅಲ್ಲಿಗೆ ತಾವು ಕೀರ್ತಿವರ್ಮ ನಿಗೆ ಕೊಟ್ಟಿದ್ದ ವಚನಪಾಲನೆಯಾಗುವುದೆಂದು ಮಹಾರಾಣಿ ದುರ್ಲಭದೇವಿ ತಿಳಿದಿದ್ದರು. ಅವರಿಗೆ ಮಂಗಳೇಶನ ದುಷ್ಟ ಆಲೋಚನೆಗಳು ಏನೆಂದು ತಿಳಿ ದಿದ್ದರೂ, ತಾವು ದುಷ್ಟ ಶಿಕ್ಷಣಕ್ಕಾಗಿ ಶಕ್ತಿ ಸಂಚಯನಮಾಡಿಕೊಳ್ಳದೆ, ದುಷ್ಟ ರನ್ನು ಎದುರು ಹಾಕಿಕೊಳ್ಳುವುದು ಆತ್ಮಘಾತವೆಂದು ತಿಳಿದಿದ್ದುದರಿಂದ ದುರ್ಲಭ ದೇವಿಯೇ ಪುಲಿಕೇಶಿಯನ್ನು ಮಂಗಳೇಶನ ಬಳಿಗೆ ಕಳುಹಿಸಿಕೊಟ್ಟಿದ್ದರು. ಆದರೆ ಜೊತೆಯಲ್ಲಿ ಬೆಂಗಾವಲಿಗೆ ಇರಲೆಂದು ಪ್ರಧಾನ ಅಮಾತ್ಯ ಸಮಂತಭದ್ರನನ್ನು ಕಳುಹಿಸಿ ಕೊಡಲು ಮರೆಯಲಿಲ್ಲ.

ಮಂಗಳೇಶನಿಗೆ, ತನ್ನನ್ನು ನೋಡಲು ಪುಲಿಕೇಶಿಯೇ ಬಂದಾಗ ಆಶ್ಚರ್ಯ ವಾಯಿತು... ಮೊದಲು ಅವನಿಗೆ ಪುಲಿಕೇಶಿಯ ಗುರುತು ಸಿಕ್ಕದೆ ದಿಗ್ಭ್ರಾಂತ ನಾದನು. ಅವನು ಹಿಂದೆ ನೋಡಿದ್ದಾಗ ಪುಲಿಕೇಶಿಯು ಆರೆಂಟುವರ್ಷಗಳ ಬಾಲಕನಾಗಿದ್ದನು. ಈಗ ಅವನು ಹದಿನೆಂಟು ವರ್ಷಗಳ ನವಯೌವ್ವನ

ತರುಣನಾಗಿದ್ದನು. ಗುರುಕುಲದಲ್ಲಿ ನಡೆಸಿದ್ದ ಸಂಯಮದ ಜೀವನ, ಸಂತತ ಅಂಗಸಾಧನೆಗಳಿಂದ ಅವನು ದೃಢಕಾಯನಾಗಿದ್ದನು. ಅವನ ದೇಹ ಉಕ್ಕಿನಂತೆ ಗಟ್ಟಿಯಾಗಿತ್ತು. ಅವನು ಎಂಥ ಕಷ್ಟದ ಕೆಲಸವನ್ನಾದರೂ ನಿರಾಯಾಸವಾಗಿ ಮಾಡುತ್ತಿದ್ದ. ದೇಹ ವಜ್ರಕಠೋರವಾಗಿದ್ದರೂ, ಮನಸ್ಸು ಮಾತ್ರ ಕುಸುಮ ಕೋಮಲವಾಗಿತ್ತು. ಆದರೆ ಅನ್ಯಾಯದ ವಿರುದ್ಧ ಅದೂ ವಜ್ರ ಕಠೋರವೇ ಆಗುತ್ತಿತ್ತು. ಮುಖದಲ್ಲಿ ಸಾಮ್ರಾಟರಿಗೆ ತಕ್ಕ ಘನತೆ, ಗಾಂಭೀರ್ಯಗಳು ಮನೆ ಮಾಡಿಕೊಂಡಿದ್ದವು. ಯೋಗ್ಯಗುರುಗಳಲ್ಲಿ ದೊರೆತ ಯೋಗ್ಯಶಿಕ್ಷಣ ಅವನನ್ನು ಮಹಾಪುರುಷರ ಹೆದ್ದಾರಿಯಲ್ಲಿ ನಡೆಸಿತ್ತು. ತಾನು ಪ್ರಜಾವತ್ಸಲನಾದ ಸಾಮ್ರಾಟನಾಗಬೇಕು, ಅಖಂಡ ಭೂಮಂಡಲೈಕ ಚಕ್ರಾಧಿಪತಿಯಾಗಿ ಮೆರೆದು ಚಾಲುಕ್ಯ ಸಿಂಹಾಸನದ ದವಳ ಕೀರ್ತಿಯನ್ನು ದಶದಿಕ್ಕುಗಳಲ್ಲಿ ಹರಡಬೇಕೆಂಬ ಮಹತ್ವಾಕಾಂಕ್ಷೆಯನ್ನು ಎದೆಯಲ್ಲಿ ಹೊತ್ತಿದ್ದನು. ಇದಕ್ಕೆ ಬೇಕಾಗಿದ್ದ ಸಿದ್ಧತೆ ಗುರುಕುಲದಲ್ಲಿ ವಿದ್ಯಾರ್ಥಿಯಾಗಿರುವಾಗಲೇ ಮಾಡಿಕೊಂಡಿದ್ದನು.

ಅವನು ಜ್ಞಾನ ಭಂಡಾರವನ್ನು ಹೆಚ್ಚಿಸಿಕೊಳ್ಳಲು ಸಾಹಿತ್ಯ ಸಂಗೀತ ಮೊದಲಾದ ಲಲಿತ ಕಲೆಗಳಲ್ಲೂ, ವೈದ್ಯಜ್ಯೋತಿಷಗಳಲ್ಲೂ ಅಸಾಧಾರಣವಾದ ಪಾಂಡಿತ್ಯವನ್ನು ಪಡೆದಿದ್ದನು. ಈಗ ಲೋಕ ಶಿಕ್ಷಣಾರ್ಥವಾಗಿ ಗುರುಕುಲದಿಂದ ಹೊರಬಿದ್ದಿದ್ದನು. ರಾಜ್ಯಾಡಳಿತದಲ್ಲಿ ಲೋಕೋತ್ತರ ವ್ಯಕ್ತಿಯಾಗಲು, ಸಣ್ಣ ಜಗತ್ತಿನಿಂದ ಹೊರಬಿದ್ದು ವಿಶಾಲ ಪ್ರಪಂಚಕ್ಕೇ ಬಂದಿದ್ದನು.

"ಯಾಕೆ ಅಪ್ಪಾಜಿ, ನನ್ನ ಗುರುತು ಸಿಕ್ಕಲಿಲ್ಲವೇ ? ನಾನು ಪುಲಿಕೇಶಿ, ನಿಮ್ಮ ಪ್ರೀತಿಯ ಕೇಶಣ್ಣ !" ಎಂದು ಹೇಳಿದಾಗಲೇ ಮಂಗಳೇಶನಿಗೆ ತಾನು ಕಾಣುತ್ತಿದ್ದ ಸುಂದರ ಯುವಕ ತನ್ನ ಹಿತಶತ್ರುವಾದ ಪುಲಿಕೇಶಿ ಎಂದು ತಿಳಿದುದು. ಅವನು ತನ್ನ ಹೃದಯಾಂತರಾಳದ ಯಾವ ಭಾವನೆಯನ್ನೂ ಹೊರಗೆ ಹಾಕದೆ ಕೃತಕ ವಿಶ್ವಾಸ ನಟಿಸುತ್ತಾ,

"ಬಾ ಮಗು, ಬಾ. ನೀನು ಊರಿಗೆ ಯಾವಾಗ ಬಂದೆ ? ಆರೋಗ್ಯವಾಗಿದ್ದೀ ತಾನೇ ?" ಎಂದು ಹೇಳಿ ಪುಲಿಕೇಶಿಯ ಮೈಯನ್ನು ತಡವಿದನು.

"ಇದೀಗ ತಾನೆ ಊರಿಗೆ ಬಂದೆ ಅಪ್ಪಾಜಿ. ನಿಮಗೆ ದೇಹಾಲಸ್ಯವೆಂದು ತಿಳಿಯಿತು. ನಿಮ್ಮನ್ನು ನೋಡಿಹೋಗಲು ಬಂದೆ ! ನೀವು ಸ್ವಸ್ಥವಾಗಿದ್ದೀರಿ ತಾನೆ ?"

"ನನ್ನ ಆರೋಗ್ಯದ ಕತೆ ಏನು ಕೇಳುತ್ತಿ ಕೇಶಣ್ಣ! ಜನ್ಮಕ್ಕೆ ಅಂಟಿರುವ

ರಕ್ತದ ಒತ್ತಡದ ಕಾಹಿಲೆ ಇಷ್ಟು ಸುಲಭವಾಗಿ ಎಲ್ಲಿ ಹೋಗುತ್ತದೆ! ನೀನು ಬರಲಿರುವ ಸುದ್ದಿ ಕೇಳಿ, ನಿನ್ನನ್ನು ಸ್ವಾಗತಿಸಲು ನಾನೇ ಬರಬೇಕೆಂದಿದ್ದೆ.ಆದರೆ ವೈದ್ಯರು ಅದಕ್ಕೆ ಅವಕಾಶ ಕೊಡಲಿಲ್ಲ. ಅವರು ನನಗೆ ಹಾಸಿಗೆಯ ಶಿಕ್ಷೆ ವಿಧಿಸಿದ್ದಾರೆ. ಹೀಗಾಗಿ ನಿನ್ನನ್ನು ನೋಡಲು ಬರಲಿಲ್ಲ. ನೀನು ಮನಸ್ಸಿಗೆ ಬೇಸರಗೊಳ್ಳಲಿಲ್ಲ ತಾನೆ? ಗುರುಗಳೂ ಬೇಸರಗೊಳ್ಳಲಿಲ್ಲ ತಾನೆ?"

ಆತಂಕದ ಧ್ವನಿಯಲ್ಲಿ ಮಂಗಳೇಶನು ಹೇಳಿದ. ಮಂಗಳೇಶನಿಗೆ ರಕ್ತದ ಒತ್ತಡದ ಕಾಹಿಲೆ ಇದ್ದುದು ದಿಟವಾದರೂ,ಅದನ್ನು ತನ್ನ ಅನುಕೂಲಕ್ಕೆ ಹೇಗೆ ಬಳಸಿಕೊಳ್ಳಬಹುದೆಂಬುದು ಚಾಣಾಕ್ಷನಾದ ಅವನಿಗೆ ತಿಳಿದಿತ್ತು. ಇಂದು ಪುಲಿಕೇಶಿಯು ಹಿಂದಿರುಗಿ ಬರುವ ಸುದ್ದಿ ಹೇಳಿ, ಭೂತದರ್ಶನವಾದಂತೆ ಹೆದರಿದ್ದನು. ಅವನು ರಾಜಧಾನಿಗೆ ಬಂದುದು ಸಹನೆಯಾಗಲಿಲ್ಲ. ಹಿತಶತ್ರುವಾದ ಅವನನ್ನು ಇದುವರೆಗೆ ಜೀವಂತವಾಗಿ ಬಿಟ್ಟುದೇ ತನ್ನ ತಪ್ಪಾಯಿತೆಂದು ಅನಿಸಿತ್ತು. ಎಳೆನಾಗರವೆಂದು ಕೊಲ್ಲದೆಬಿಟ್ಟ ಹಾವೇ ನಾಳೆ ತನ್ನನ್ನುಕೊಲ್ಲುವ ಘಟಸರ್ಪವಾದೀತೆಂದು ಅಂಜಿದ್ದನು. ಅವನನ್ನು ಈಗಲೇ ನಾಶಮಾಡುವುದು ಹೇಗೆ ಎಂದು ಯೋಚಿಸುತ್ತಿದ್ದ ಮಂಗಳೇಶ, ತನ್ನ ಹೃದಯಾಂತರಾಳದ ದುಷ್ಟ ಆಲೋಚನೆಗಳನ್ನು ಪುಲಿಕೇಶಿಯ ಸಮ್ಮುಖದಲ್ಲಿ ಬಯಲುಮಾಡಲಿಚ್ಛಿಸದೆ, ಅನಾರೋಗ್ಯದ ನೆಪದಲ್ಲಿ ಅವನ ಸಂದರ್ಶನವನ್ನು ತಪ್ಪಿಸಿಕೊಂಡಿದ್ದನು. ಆದರೆ ಪುಲಿಕೇಶಿಯೇ ತನ್ನನ್ನು ನೋಡಲು ಬಂದಾಗ,ಅವನಿಗೆ ತಬ್ಬಿಬ್ಬಾಗದೆ ಇರಲಿಲ್ಲ. ಆದರೂ ತನ್ನ ದುಷ್ಟ ಆಲೋಚನೆಗಳನ್ನು ಅವನಿಗೆ ಹತ್ತಗೊಡದೆ, ಕೃತಕ ವಿಶ್ವಾಸ ನಟಿಸುತ್ತಾ, ಪುಲಿಕೇಶಿಯ ಕ್ಷೇಮ ಸಮಾಚಾರ, ಪ್ರಯಾಣ ವಿಷಯ, ಗುರುಕುಲವಾಸ ಇವೇ ಮೊದಲಾದ ನೂರು ಸಂಗತಿಗಳನ್ನು ಕಳಕಳಿಯಿಂದ ವಿಚಾರಿಸಿಕೊಂಡನು.

ಹೀಗೆ ಲೋಕಾಭಿರಾಮವಾಗಿ ಮಾತು ಹರಿದಿರುವಾಗ, ಮಂಗಳೇಶನು ಚಣಕಾಲ ಪುಲಿಕೇಶಿಯನ್ನು ದಿಟ್ಟಿಸಿ ನೋಡಿ, ವಿನೋದ ಸರಣಿಯಲ್ಲಿ "ಕೇಶಣ್ಣ, ನೀನು ಎಷ್ಟು ದೊಡ್ಡವನಾಗಿ ಬೆಳೆದಿದ್ದಿ? ಹತ್ತು ವರ್ಷಗಳ ಹಿಂದೆ ಆಡುವ ಪೋರನಾಗಿದ್ದಿ! ಈಗ ಮದುವಣಿಗನಂತೆ ಆಗಿದ್ದಿ! ನಿನಗೆ ಶೀಘ್ರವಾಗಿ ವಿವಾಹ ಮಾಡಬೇಕು!" ಎಂದು ಹೇಳಿ ನಕ್ಕನು.

"ನಾನು ಗುರುಕುಲದಿಂದ ಹಿಂದಿರುಗಿ ಬರವಾಗಲೇ ಮದುವೆ ವಧುವನ್ನೂ

ಗೊತ್ತುಮಾಡಿಕೊಂಡು ಬಂದಿದ್ದೇನೆ, ಅಪ್ಪಾಜಿ!" ಎಂದು ಪುಲಿಕೇಶಿಯೂ ನಗುತ್ತಾ ಹೇಳಿದನು.

ಈ ಮಾತು ಕೇಳಿ ಮಂಗಳೇಶನು ಚಕಿತನಾದನು.

"ಕೇಶಣ್ಣ, ನಾನು ನಿನ್ನನ್ನು, ಏನೋ ಎಂದು ತಿಳಿದಿದ್ದೆ! ಪರವಾಗಿಲ್ಲ. ಯಾರು ಆ ಹುಡುಗಿ! ಎಲ್ಲಿ ನೋಡಿದ್ದಿ ?" ಆಶ್ಚರ್ಯದಿಂದ ಮಂಗಳೇಶನು ಕೇಳಿದನು.

"ನಿಮಗೆಲ್ಲಾ ಅವಳು ಯಾರೆಂದು ತಿಳಿದಿದೆ, ಅಪ್ಪಾಜಿ !"

"ಕಳ್ಳಾ, ನಮಗೆ ತಿಳಿಯದಂತೆ ಮದುವೆ ಗೊತ್ತುಮಾಡಿಕೊಂಡು ಬಂದಿರುವೆಯೆ ? ಹೋಗಲಿ, ಅವಳು ಯಾವ ದೊರೆಯ ಮಗಳು ? ಯಾವ ವಂಶದ ಹೆಣ್ಣು ! ಕೊಂಚ ವಿವರವಾಗಿ ಹೇಳಬಾರದೆ ?"

"ಇದೆಲ್ಲಾ ಗುರುಗಳ ಆಶೀರ್ವಾದ ಫಲ, ಅಪ್ಪಾಜಿ !"

"ಯಾವ ಗುರುಗಳು ? ಏನು ಆಶೀರ್ವಾದ ಮಾಡಿದ್ದಾರೆ ?"

"ನಾನು ಗುರುಕುಲವಾಸ ಮುಗಿಸಿಕೊಂಡು ಊರಿಗೆ ಹಿಂತಿರುಗುವಾಗ ಗುರುಗಳನ್ನು ಬೀಳ್ಕೊಳ್ಳಲು ಅವರನ್ನು ಕಂಡು ನಮಸ್ಕರಿಸಿದೆ. ಆಗ ಅವರು, 'ಮಗು, ಇದುವರೆಗೆ ನೀನು ಬ್ರಹ್ಮಚರ್ಯವನ್ನು ನಿಷ್ಠೆಯಿಂದ ಪಾಲಿಸಿ, ಎಲ್ಲ ವಿದ್ಯೆಗಳನ್ನೂ ಕರಗತಮಾಡಿಕೊಂಡಿರುವೆ. ಮುಂದೆ ನೀನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಇಹಪರಗಳಿಗೆ ಅನುಕೂಲಳಾದ ಸಹಧರ್ಮಿಣಿಯನ್ನು ಪಡೆದು, ಸುಪುತ್ರರನ್ನು ಪಡೆ. ವರ್ಣಾಶ್ರಮ ಧರ್ಮವನ್ನು ಬಿಡದೆ ಪಾಲಿಸು. ಅತಿಥಿ ಸತ್ಕಾರಮಾಡು' ಎಂದು ಆಶೀರ್ವದಿಸಿ, ನನ್ನನ್ನು ಕಳುಹಿಸಿಕೊಟ್ಟರು. ಗುರುಗಳ ಆಜ್ಞೆಯಂತೆ ನಾನು ಗೃಹಸ್ಥಾಶ್ರಮ ಸ್ವೀಕರಿಸಲು ನಿಶ್ಚಯಿಸಿ, ವಧುವನ್ನೂ ಆರಿಸಿಕೊಂಡು ಬಂದಿದ್ದೇನೆ. ಹಿರಿಯರಾದ ನೀವು ನಿಂತು, ಈ ಮಂಗಳಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಡಬೇಕಾಗಿ ಬಿನ್ನಹ !" ಎಂದು ಹೇಳಿ ತುಂಟ ನಗೆ ನಕ್ಕನು.

"ಕೇಶಣ್ಣ, ನೀನು ಗುರುಕುಲ ಸೇರಿ ತುಂಬಾ ಕೆಟ್ಟುಹೋಗಿದ್ದಿ!"

"ಏಕೆ ಅಪ್ಪಾಜಿ ?"

"ವಿವಾಹವಾಗುವವನು ನೀನು, ದಿಟ. ಆದರೆ ಹಿರಿಯರನ್ನು ಕೇಳದೆ, ಅವರ ಅನುಮತಿ ತೆಗೆದುಕೊಳ್ಳದೆ, ನೀನೇ ಹೆಣ್ಣು ನೋಡಿ ಬಂದಿರುವೆ. ಇನ್ನು

ಮದುವೆಗೆ ತಾನೇ ನಾನು ಯಾಕೆ ಬೇಕು ?"

"ನೀವು ಇಲ್ಲದೆ ಮದುವೆಯೇ ? ಹಿರಿಯರಾದ ನೀವೂ, ಅಬ್ಬೆಯೂ, ಸಮಂತಭದ್ರರಂತಹ ಸ್ವಾಮಿನಿಷ್ಠ ಸೇವಕರೂ ನಿಂತು ವಿವಾಹ ಮಾಡದಿದ್ದರೆ, ಈ ವಿವಾಹ ಹೇಗೆ ನಡೆಯಲು ಸಾಧ್ಯ ?"

"ಹಾಗಾದರೆ ನೀನು ಅನುರಕ್ತಳಾಗಿರುವ ಹೆಣ್ಣು ಯಾರು, ಅವಳ ಮಾತಾಪಿತೃಗಳಾರು ? ಅವರು ಎಲ್ಲಿದ್ದಾರೆ ?"

"ಅವರು ಇಲ್ಲೇ ಇದ್ದಾರೆ, ಅವರು ನಿಮಗೆ ಪರಿಚಿತರೇ ಆಗಿದ್ದಾರೆ !" ಎಂದು ಹೇಳಿ ನಕ್ಕನು. ಈ ಮಾತು ಕೇಳಿ ಮಂಗಳೇಶನಿಗೆ ಏನೋ ಹೊಳೆದಂತೆ ಆಯಿತು.

"ಹಾಗಾದರೆ ನೀನು ವಿವಾಹವಾಗಲು ನಿಶ್ಚಯಿಸಿರುವುದು ಸಾಮ್ರಾಜ್ಯ ಲಕ್ಷ್ಮಿಯನ್ನೇ ?"

"ಹೌದು, ಅವಳನ್ನೇ ಅಪ್ಪಾಜಿ ! ಶ್ರೇಷ್ಠವಾದ ಕ್ಷತ್ರಿಯ ವಂಶದಲ್ಲಿ ಹುಟ್ಟಿದ ನನ್ನ ಮನಸ್ಸು ಸಾಮಾನ್ಯ ಹೆಣ್ಣಿನಲ್ಲಿ ಎಂದಾದರೂ ಅನುರಕ್ತವಾಗುವುದುಂಟೆ ? ನಾವು ಮಾನವ್ಯಗೋತ್ರದವರು. ಹಾರತೀಪುತ್ರರು. ಕಾರ್ತಿಕೇಯನ ಉಪಾಸಕರು. ಮೇಲಾಗಿ ಸಪ್ತಮಾತೃಕೆಗಳಾದ ಬ್ರಹ್ಮಾಣಿ, ಮಾಹೇಶ್ವರಿ, ಕುಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಮತ್ತು ಚಾಮುಂಡಿಯರ ಕೃಪಾಪೋಷಿತಳಾದ ಚಾಲುಕ್ಯ ಸಾಮ್ರಾಜ್ಯಲಕ್ಷ್ಮಿಯನ್ನಲ್ಲದೆ ಅನ್ಯ ಸ್ತ್ರೀಯಲ್ಲಿ ನನ್ನ ಮನಸ್ಸುತೊಡಗುವುದುಂಟೆ ?" ಎಂದು ಹೇಳಿ ಘೊಳ್ಳನೆ ನಕ್ಕನು.

ಆದರೆ ಈ ಮಾತಿಗೆ ಮಂಗಳೇಶನು ಮಾತ್ರ ನಗಲಿಲ್ಲ. ಅವನ ಮುಖ ಗಂಭೀರವಾಯಿತು. ಏಕೋ ಮುಖದಲ್ಲಿ ಮಿನುಗುತ್ತಿದ್ದ ಉತ್ಸಾಹ ಬತ್ತಿ ಹೋಯಿತು. ಅವನಿಗೆ ಪುಲಿಕೇಶಿಯ ನುಡಿಗಳು ಸಿಡಿಲಿನಂತೆ ಬಡಿದಿದ್ದುವು. ಹದಿನೆಂಟು ವರ್ಷದ ಪೋರನಿಂದ ಇಂತಹ ಪೌರುಷದ ನುಡಿಗಳನ್ನು ಗುರುಕುಲ ವಾಸ ಮುಗಿಸಿಕೊಂಡು ಹಿಂದಿರುಗಿದ ತರುಣದಲ್ಲೇ ತಾನು ಕೇಳಬೇಕಾಗುವುದೆಂದು ಅವನು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ. ಅವನು ಪುಲಿಕೇಶಿಯ ಮಾತಿನಿಂದ ಚಣಕಾಲ ದಿಗ್ಭ್ರಾಂತನಾದರೂ, ಈಗ ಭಾವೋನ್ಮಾದಕ್ಕೆ ಎಡೆಗೊಟ್ಟರೆ ಕಾರ್ಯಗೆಡುವುದೆಂದು ಎಚ್ಚತ್ತು ತಾನೂ ವಿನೋದದ ದಾಟಿಯಲ್ಲಿ ಹೇಳಿದನು.

"ಕೇಶಣ್ಣ, ಸಾಮ್ರಾಜ್ಯ ಲಕ್ಷ್ಮಿಯನ್ನು ಮದುವೆಯಾಗಲು ನಿಶ್ಚಯಿಸಿರುವ ಸಂಗತಿ ಕೇಳಿ ತುಂಬಾ ಸಂತೋಷ. ಅವಳು ಎಂದಿದ್ದರೂ ನಿನ್ನವಳೇ. ಅವಳನ್ನು ವರಿಸಲು ನೀನೇಕೆ ಇಷ್ಟು ಆತುರದಿಂದಿರುವೆ? ಮೊದಲು ಅವಳನ್ನು ವರಿಸಲು ಬೇಕಾದ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಡವೇ?" ಎಂದು ಅರ್ಥಗರ್ಭಿತವಾಗಿ ನಕ್ಕನು.

ಈ ಮಾತು ಕೇಳಿ ಪುಲಿಕೇಶಿಯು ಚಕಿತನಾಗಿ, ಮಂಗಳೇಶನ ಮುಖವನ್ನು ದಿಟ್ಟಿಸಿ ನೋಡಿದನು.

"ನಾನು ಹೇಳಿದ ಮಾತನ್ನು ತಪ್ಪು ತಿಳಿಯಬೇಡ, ಕೇಶಣ್ಣ. ನೀನು ಅರಿಯದ ಹುಡುಗನಲ್ಲ, ಸಾಮ್ರಾಜ್ಯಲಕ್ಷ್ಮಿಯನ್ನು ವರಿಸುವುದೆಂದರೆ ಕ್ಲೇಶಗಳನ್ನೂ ಸೆರಿಗಿಗೆಕಟ್ಟಿಕೊಂಡಂತೆ. ರಾಜ್ಯಾಡಳಿತದಲ್ಲಿ ಅನುಭವ ಪಡೆಯದೆ ಸಾಮ್ರಾಜ್ಯದ ಹೊರೆಗೆ ಹೆಗಲುಕೊಡುವುದೆಂದರೆ, ಈಜು ಕಲಿಯದೆ ನೀರಿಗೆ ಬಿದ್ದಂತೆ ಆಗುವುದು! ಆದುದರಿಂದ ರಾಜ್ಯಾಡಳಿತದ ಅನುಭವ ಪಡೆಯದೆ ಸಾಮ್ರಾಜ್ಯಲಕ್ಷ್ಮಿಯ ಕೈಹಿಡಿಯಲು ಮುಂದೆ ಬರಬಾರದೆಂದೇ ನನ್ನ ಅಪೇಕ್ಷೆ!"

"ಹಾಗಾದರೆ ನೀವು ಹೇಳುವದಾದರೂ ಏನು ಅಪ್ಪಾಜಿ?...."

"ನೀನು ಇನ್ನೂ ಜಗತ್ತಿನಲ್ಲಿ ಕಣ್ಣು ಬಿಡುತ್ತಿರುವ ಮಗು. ಚೆನ್ನಾಗಿ ಅನುಭವಪಡೆಯದೆ ನೀನು ಯಾವ ಕಾರ್ಯಕ್ಕೂ ದುಡುಕಬಾರದೆಂದೇ ನನ್ನ ಆಶಯ. ಇದುವರೆಗೆ ನೀನು ಗುರುಕುಲವಾಸ ಮಾಡಿ ಜೀವನದ ಮೌಲ್ಯವನ್ನು ಹೆಚ್ಚಿಸುವ ವಿದ್ಯೆ ಕಲಿತಂತೆ, ನೀನು ಸಾಮ್ರಾಟನಾಗಿ ಮೆರೆಯಲು ಕೆಲಕಾಲವಾದರೂ ರಾಜಕೀಯ ಗರಡಿಯಲ್ಲಿ ಶಿಕ್ಷಣ ಪಡೆಯಬೇಕಾಗುತ್ತದೆ!"

"ಕಣಕ್ಕೆ ಇಳಿಯದೆ ಮಲ್ಲಯುದ್ಧ ಎಂತು ಸಾಧ್ಯ?"

"ಕಣಕ್ಕೆ ಇಳಿಯದೆ ಮಲ್ಲನಾಗಲು ಸಾಧ್ಯವಿಲ್ಲ, ದಿಟ. ಆದರೆ ಗುರುಕುಲದ ನಿಷ್ಠುರವಾದ ಜೀವನವನ್ನು ಇದೇ ತಾನೇ ಮುಗಿಸಿಕೊಂಡು ರಾಜಧಾನಿಗೆ ಹಿಂದಿರುಗಿರುವ ನೀನು, ಇನ್ನು ಕೆಲವು ಕಾಲ ರಾಜ್ಯಾಡಳಿತದ ಯಾವುದೇ ಜಂಜಡವಿಲ್ಲದೆ, ನೆಮ್ಮದಿಯಾಗಿರಬೇಕೆಂದೇ ನನ್ನ ಆಪೇಕ್ಷೆ. ಗುರುಕುಲದ ಕಟ್ಟುನಿಟ್ಟಾದ ನಿಯಮಪಾಲನೆಯಲ್ಲಿ ಜಡ್ಡುಕಟ್ಟಿರುವ ನಿನ್ನ ದೇಹ ಮನಸ್ಸುಗಳಿಗೆ ಕೆಲವು ಕಾಲವಾದರೂ ವಿಶ್ರಾಂತಿ ಅತ್ಯಗತ್ಯ!"

"ಗುರುಕುಲದ ಜೀವನ ತೀರ ಕಟ್ಟುನಿಟ್ಟಿನ ಜೀವನ ದಿಟ, ಅಪ್ಪಾಜಿ.

ಆದರೆ ಆ ಬಗೆಯ ಸಂಯಮ ಜೀವನಕ್ಕೆ ನನ್ನ ಜೀವ ಒಗ್ಗಿಹೋಗಿದೆ. ನನಗೆ ಈಗ ವಿಶ್ರಾಂತಿ ಜೀವನಕ್ಕಿಂತಲೂ ಶ್ರಮಜೀವನ ಹೆಚ್ಚು ಪ್ರಿಯವಾಗಿದೆ. ಎಂದ ಮಾತ್ರಕ್ಕೆನಾನು ವಿಶಾಲವಾದ ಸಾಮ್ರಾಜ್ಯದ ಹೊರೆಯನ್ನು ಹೊತ್ತುಕೊಳ್ಳಲು ಸಮರ್ಥನೆಂದು ಹೇಳುತ್ತಿಲ್ಲ. ರಾಜ್ಯಾಡಳಿತದ ನೂರು ವಿವರಗಳಲ್ಲಿ, ನೀವು ಹಿರಿಯರಾಗಿ ನಿಂತು, ನನಗೆ ಶಿಕ್ಷಣಕೊಡಬೇಕು. ಪ್ರಜೆಗಳು ನನ್ನಲ್ಲಿ ಇಟ್ಟಿರುವ ನಂಬಿಕೆ, ನಿರೀಕ್ಷೆಗಳು ವ್ಯರ್ಥವಾಗದಂತೆ ನೋಡಿಕೊಳ್ಳಬೇಕು !"

—ಎಂದು ಪುಲಿಕೇಶಿಯು ನಮ್ರನಾಗಿ ಹೇಳಿದ.

"ಮಗು, ಕೇಶಣ್ಣ. ಇಷ್ಟು ಅಲ್ಪ ವಿಷಯಕ್ಕಾಗಿ ನೀವು ಇಷ್ಟು ಪ್ರಾರ್ಥಿಸು ವುದೆ ? ನೀನು ಹೇಳದಿದ್ದರೂ ನನ್ನನ್ನು ಸಮರ್ಥನಾದ ಸಾಮ್ರಾಟನಾಗಿ ಮಾಡು ವುದು ನನ್ನ ಹೊಣೆಗಾರಿಕೆಯಲ್ಲವೆ? ನೀನು ಪ್ರಜೆಗಳ ನಿರೀಕ್ಷೆಯನ್ನು ವ್ಯರ್ಥ ಗೊಳಿಸದೆ, ಅವರ ಅಭಿಮಾನದ ದೊರೆಯಾಗಿ ಬಾಳಿದರೆ, ನನಗೆ ಹೆಮ್ಮೆಯಲ್ಲವೆ? ನಾನು ಈಗಲೇ ನಿನಗೆ ಸಿಂಹಾಸನದಲ್ಲಿ ಪಟ್ಟಕಟ್ಟಿ, ಸಾಮ್ರಾಜ್ಯವನ್ನು ಒಪ್ಪಿಸಿ ಕೊಟ್ಟು ವಿಶ್ರಾಂತಿಗೆ ತೆರಳಬೇಕೆಂದಿದ್ದೆ. ಆದರೆ ದೇಶದ ಸದ್ಯದ ಪರಿಸ್ಥಿತಿಯಲ್ಲಿ ಹೀಗೆ ಮಾಡಿದರೆ, ಕಳೆದ ಹತ್ತು ವರ್ಷಗಳಿಂದ ಯಾವ ಪವಿತ್ರ ಉದ್ದಿಶ್ಯಕ್ಕಾಗಿ ಅಹರ್ನಿಶಿ ದುಡಿದೆನೋ ಅದಕ್ಕೆ ದ್ರೋಹ ಬಗೆದಂತೆ ಆಗುತ್ತದೆ. ಸುತ್ತಲೂ ಶತ್ರುಗಳು ಸಾಮ್ರಾಜ್ಯವನ್ನು ಕಬಳಿಸಲು ಕಾದಿರುವಾಗ ನಿನ್ನನ್ನು ಸಿಂಹಾಸನದ ಮೇಲೆ ಕೂಡಿಸಿ, ನಾನು ವಿಶ್ರಾಂತಿಗೆ ತೆರಳಿದರೆ, ನಾನಾಗಿ ನಾನು ಚಾಲುಕ್ಯ ಸಿಂಹಾಸನವನ್ನು ಶತ್ರುಗಳ ಪಾಲುಮಾಡಿದಂತೆ ಆಗುತ್ತದೆ. ಅದರ ಸಲುವಾಗಿ ನಾನು ಇನ್ನೂ ಕೆಲವು ಕಾಲ ರಾಜಪ್ರತಿನಿಧಿಯಾಗಿ ಉಳಿಯಬೇಕಾಗಿದೆ. ನೀನು ಸಾಮ್ರಾಜ್ಯದ ಹೊರೆಯನ್ನು ಹೊತ್ತುಕೊಳ್ಳಲು ಸಮರ್ಥನಾದಕೂಡಲೇ ಸಿಂಹಾಸನವನ್ನು ನಿನಗೊಪ್ಪಿಸುತ್ತೇನೆ. ನೀನು ಈ ಬಗ್ಗೆ ಚಿಂತಿಸುವ ಕಾರಣ ವಿಲ್ಲ.... ನನ್ನ ಮಾತನ್ನು ನಂಬು ..."

"ನನಗೆ ನಿಮ್ಮಲ್ಲಿ ನಂಬಿಕೆ ಇಲ್ಲವೆ? ಎಂತಹ ಮಾತು ಹೇಳುತ್ತೀರಿ ಅಪ್ಪಾಜಿ ?"

"ಹಾಗಲ್ಲ ಮಗು, ನಿನಗೆ ಇನ್ನೂ ಲೋಕದ ವ್ಯವಹಾರ ತಿಳಿಯದು, ನೀನು ಇನ್ನೂ ಕಣ್ಣು ತೆರೆಯುತ್ತಿರುವ ಹಸುಗೂಸು. ನಿನ್ನ ನಿರ್ಮಲ ಮನ ಸ್ಸನ್ನು ನನಗಾಗದ ದ್ರೋಹಿಗಳು, ಸ್ವಾರ್ಥಿಗಳು ಕೆಡಿಸಬಹುದು. ಅವರ

ವಿರುದ್ಧ ನೀನು ಎಚ್ಚತ್ತಿರಲು ಈ ಮಾತನ್ನು ಹೇಳಬೇಕಾಯಿತು. ಯಾರು ಎಷ್ಟೇ ಹೇಳಲಿ. ಮಂಗಳೇಶನೆಂದಿಗೂ ಮಗನಿಗಿಂತಲೂ ಅತಿಶಯವಾಗಿರುವ ಪುಲಿಕೇಶಿಗೆ ದ್ರೋಹ ಬಗೆಯುವುದಿಲ್ಲ. ಈ ಮಾತನ್ನು ನೆನಪಿಡು. ನಾನು ನಿನ್ನ ಅಭ್ಯುದಯ ಕ್ಕಾಗಿ ರಾಜಪ್ರತಿನಿಧಿಯಾಗಿರುವೆನೇ ಹೊರತು ಇದರಲ್ಲಿ ನನಗೆ ಯಾವುದೇ ಲೋಭ, ಇಲ್ಲವೇ ಸ್ವಾರ್ಥ ರವೆಯಷ್ಟೂ ಇಲ್ಲ!" ಎಂದು ಹೇಳಿ ಮಂಗಳೇಶನು ಪುಲಿಕೇಶಿಯನ್ನು ಅರ್ಥಗರ್ಭಿತವಾಗಿ ನೋಡಿದನು.

ಪುಲಿಕೇಶಿಯು ಮಂಗಳೇಶನಿಂದ ಬೀಳ್ಕೊಂಡು ಹೊರಟು ಮಹಾರಾಣಿ ದುರ್ಲಭದೇವಿಯವರಿಗೆ ನಡೆದ ಸಂಗತಿಯನ್ನೆಲ್ಲಾ ವರದಿಮಾಡಿ,

"ಅಬ್ಬೆ, ಚಿಕ್ಕಪ್ಪನ ಅಂತರಂಗದಲ್ಲಿ ಏನಿದೆಯೋ ನನಗಂತೂ ತಿಳಿಯದು. ಅವರ ಮಾತುಗಳಿಂದ ಹೇಳುವುದಾದರೆ, ನೀವು ಹೇಳುವಷ್ಟು ದುಷ್ಟ ಆಲೋಚನೆ ಗಳು ಅವರಿಗೆ ಇದ್ದಂತೆ ಕಾಣುವುದಿಲ್ಲ" ಎಂದು ಹೇಳಿದನು.

"ಮಗು, ನಿನಗೆ ಇನ್ನೂ ನಿನ್ನ ಚಿಕ್ಕ ತಂದೆಯ ಸ್ವಭಾವ ತಿಳಿಯದು. ತಿಳಿದಿದ್ದರೆ ಈ ಮಾತು ಹೇಳುತ್ತಿರಲಿಲ್ಲ. ಅವರು ನೀನು ತಿಳಿದಿರುವುದಕ್ಕಿಂತ ಹೆಚ್ಚು ಬುದ್ಧಿವಂತರು. ನಿನ್ನನ್ನು ಮೋಸಗೊಳಿಸಲು ಸವಿಮಾತುಗಳನ್ನಾಡಿ ಕಳುಹಿಸಿದ್ದಾರೆ, ಅಷ್ಟೇ. ತಮ್ಮ ದ್ರೋಹ ಚಿಂತನೆಯನ್ನು ಕಾಯ್ದುಕೊಳ್ಳಲು ನಿನ್ನನ್ನು ದ್ರೋಹಿಗಳ ವಿರುದ್ಧ ಎಚ್ಚರಿಸಿ ತಾವು ನಿನ್ನ ಏಕಮಾತ್ರ ಹಿತೈಷಿ ಎಂದು ನಟಿಸಿದ್ದಾರೆ. ಆದರೆ ವಾಸ್ತವವಾಗಿ ಅವರಿಗಿಂತ ಅಪಾಯಕರ ದ್ರೋಹಿ ಗಳು ಬೇರೆ ಇಲ್ಲ. ಅವರು ತಮ್ಮ ನಂಜಿನ ನಾಲಿಗೆಯಲ್ಲಿ ಸವಿಮಾತುಗಳನ್ನು ಹೇಳಿದ ಮಾತ್ರಕ್ಕೆ ಹೃದಯದ ಹಾಲಾಹಲ ಕಡಿಮೆಯಾಗಲಾರದು ಮಗು!" ಎಂದು ಹೇಳಿ ಪುಲಿಕೇಶಿಯು ಗುರುಕುಲದಲ್ಲಿದ್ದ ಕಾಲದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಮಂಗಳೇಶನು ಮಾಡಿದ್ದ ಪಿತೂರಿಗಳನ್ನೆಲ್ಲಾ ಸವಿಸ್ತಾರ ವಾಗಿ ತಿಳಿಸಿದರು.

ಇದನ್ನೆಲ್ಲಾ ಕೇಳಿದಮೇಲೆ ಪುಲಿಕೇಶಿ ತಾನು ಸರಳಮನಸ್ಸಿನವನೆಂದು ತಿಳಿದಿದ್ದ ಮಂಗಳೇಶನು ದ್ರೋಹಿ, ಅವನೊಂದಿಗೆ ವ್ಯವಹರಿಸುವಾಗ ತಾನು ಇನ್ನು ಮುಂದೆ ಎಚ್ಚರದಿಂದ ಇರಬೇಕು, ಎಂದುಕೊಂಡನು.

ಅಷ್ಟರಲ್ಲಿ ಆಟವಾಡಲು ಹೋಗಿದ್ದ ವಿಷ್ಣುವರ್ಧನನು ಅಲ್ಲಿಗೆ ಬಂದನು. ಮಹಾರಾಣಿ ದುರ್ಲಭದೇವಿಯು ಅವನನ್ನು ಕರೆದು ಹತ್ತಿರ ಕೂಡಿಸಿಕೊಂಡು

ಅವನೊಡನೆ ಲಲ್ಲೆಯಾಡುತ್ತಾ,

"ಮಗು ವಿಷ್ಣು, ನಿಮ್ಮ ಕೇಶಣ್ಣನು ಮದುವೆಮಾಡಿಕೊಳ್ಳುತ್ತಾನಂತೆ. ನಿನಗೂ ಒಂದು ಪುಟ್ಟ ಹುಡುಗೀನ ನೋಡಿ ಮದುವೆ ಮಾಡಬೇಕು" ಎಂದು ನಗೆಯಾಡಿದರು.

"ಹೋಗು ಅಬ್ಬೆ. ನಿಮಗೆ ಬೇರೆ ಕೆಲಸವಿಲ್ಲ" ಎಂದು ವಿಷ್ಣು ಅಬ್ಬೆಯಿಂದ ಬಿಡಿಸಿಕೊಂಡು ಹೋಗಲೆತ್ನಿಸಿದನು.

"ಯಾಕೋ, ವಿಷ್ಣು, ನಿನಗೆ ಮದುವೆ ಇಷ್ಟವಿಲ್ಲವೆ?"

ಎಂದು ದುರ್ಲಭದೇವಿ ಕೇಳಿದರು.

ವಿಷ್ಣುವರ್ಧನ ಇಷ್ಟವಿಲ್ಲವೆಂದು ತಲೆಯಲ್ಲಾಡಿಸಿದ.

"ಹಾಗಾದರೆ ನೀನು ಬಾಲಬ್ರಹ್ಮಚಾರಿಯಾಗಿಯೇ ಇರಬೇಕೂಂತ ಇದ್ದೀಯಾ?"

ಈ ಮಾತಿಗೆ ವಿಷ್ಣುವರ್ಧನ ಉತ್ತರ ಕೊಡಲಿಲ್ಲ.

"ಈ ಕುಬ್ಜನಿಗೆ ಯಾರು ಹೆಣ್ಣು ಕೊಡುತ್ತಾರೆ ಅಬ್ಬೆ. ಬಾಲಬ್ರಹ್ಮಚಾರಿಯಾಗಿರುವುದೇ ಇವನ ಹಣೆಯಬರಹ!" ಎಂದು ಪುಲಿಕೇಶಿಯು ನಗುತ್ತಾ ಹೇಳಿದ.

ಈ ಮಾತು ಕೇಳಿ ವಿಷ್ಣುವರ್ಧನಿಗೆ ಚಾಟಿಯಲ್ಲಿ ಹೊಡೆದಂತೆ ಆಗಿ, ಮುಖ ಕೆಂಪಾಯಿತು. ಅವನು ಕೇಳಿದ:

"ಕೇಶಣ್ಣ, ಇನ್ನೊಂದು ಸಲ ಇಂತಹ ಮಾತು ಆಡು, ನಾನು ಸುಮ್ಮನಿರುವುದಿಲ್ಲ. ನಾನು ಕುಬ್ಜನಾದರೆ, ನೀನು ಸೈಂಧವ! ಇನ್ನೊಂದು ಸಲ ನನ್ನ ಕುಬ್ಜ ಅಂತ ಕರೆ. ನಿನಗೆ ಮಾಡುತ್ತೇನೆ ಮೋಕ್ಷ! ನನಗೂ ನಿನ್ನಷ್ಟೇ ಮಾನಾಪಮಾನಗಳು ಗೊತ್ತಿವೆ, ತಿಳಿಯಿತೆ?"

ಅನಿರೀಕ್ಷಿತವಾಗಿ ಬಂದ ಸಿಡಿಲಿನಂತಹ ಮಾತನ್ನು ಕೇಳಿ ಪುಲಿಕೇಶಿಯು ತಲ್ಲಣಗೊಂಡು, ಅವಾಕ್ಕಾಗಿ ಕುಳಿತನು. ಅವನಿಗೆ ತಮ್ಮನ ಮೇಲೆ ಸಿಟ್ಟು ಬಂತು. ಆದರೂ ತುಂಬಾ ಕಷ್ಟದಿಂದ ತಡೆದುಕೊಂಡು, ವಿಷ್ಣುವರ್ಧನನನ್ನು ತಿರಸ್ಕಾರದಿಂದ ನೋಡಿ,

"ಅಬ್ಬೆ, ನಾನು ಹೇಳಬಾರದ ಮಾತು ಏನು ಹೇಳಿದೆ? ಅವನು ತನ್ನ ಮೇಲೆ ಎಷ್ಟು ಹರಿಹಾಯುತ್ತಿದ್ದಾನೆ ನೋಡಿ" ಎಂದು ಅಬ್ಬೆಗೆ ಹೇಳಿದನು.

"ಹೋಗಲಿ ಬಿಡು ಮಗು, ಅವನಿಗೇನು ತಿಳಿಯುತ್ತೆ? ಯಾರೋ ಅವನನ್ನು ಕೆರಳಿಸಿರಬೇಕು. ನಿನ್ನ ಮೇಲೆ ಸಿಡಿಮಿಡಿಗೊಂಡ. ಇದಕ್ಕಾಗಿ ನೀನು ಮನಸ್ಸಿನಲ್ಲಿ ಬೇಸರಗೊಳ್ಳಬೇಡ!" ಎಂದು ಪುಲಿಕೇಶಿಯನ್ನು ಸಮಾಧಾನಗೊಳಿಸಿ, ವಿಷ್ಣುವರ್ಧನನ ಕಡೆ ತಿರುಗಿ,

"ಮಗು ವಿಷ್ಣು, ಅಣ್ಣನಮೇಲೆ ಹಾಗೆಲ್ಲಾ ರೇಗುತ್ತಾರೆಯೇ? ಅವನು ನಿನಗಿಂತ ದೊಡ್ಡವನು. ತಮಾಷೆಗೆ ಕುಬ್ಜನೆಂದು ಕರೆದಮಾತ್ರಕ್ಕೆ ಅವನಿಗೆ ನಿನ್ನಮೇಲೆ ಪ್ರೀತಿ ಇಲ್ಲವೆಂದು ತಿಳಿದೆಯಾ? ಹಿರಿಯರನ್ನು ಹಾಗೆಲ್ಲಾ ಬೈಯುತ್ತಾರೆಯೇ ಮಗು?" ಎಂದು ಕೇಳಿದರು.

"ಇನ್ನೇನು ಅಬ್ಬೆ. ಅವನು ನನ್ನ ಅಣ್ಣ–ನನಗಿಂತಲೂ ದೊಡ್ಡವನು. ಆದಮಾತ್ರಕ್ಕೆ ಸಮಯಾಸಮಯ ನೋಡದೆ ನನ್ನನ್ನು ಕುಬ್ಜನೆಂದು ಹೀಯಾಳಿಸಬಹುದೆ? ನನಗೂ ಅವನಷ್ಟೇ ಆತ್ಮಗೌರವವಿದೆ. ಸ್ವಂತ ಅಣ್ಣನಾದವನೇ ತಮ್ಮನ ತೇಜೋವಧೆ, ಅಪಹಾಸ್ಯ ಮಾಡಿದರೆ ಇದನ್ನು ಪ್ರೀತಿ ಎನ್ನಬೇಕೋ ದ್ವೇಷ, ತಿರಸ್ಕಾರಗಳೆನ್ನಬೇಕೋ ನೀನೇ ಹೇಳು? ನನಗಂತೂ ಕೇಶಣ್ಣನ ಮೂದಲಿಕೆ ಕೇಳಿಕೇಳಿ ಬೇಜಾರಾಗಿಹೋಗಿದೆ. ನನ್ನ ಸಹನೆಗೂ ಮಿತಿ ಇದೆ.... ನಾನೂ ಅವನ ಹಾಗೆಯೇ ಮನುಷ್ಯ. ನನಗೂ ಮಾನಾಪಮಾನಗಳು ಇವೆ..." ಎಂದು ವಿಷ್ಣುವರ್ಧನ ಬುಸುಗುಟ್ಟುತ್ತಾ ಹೇಳಿದ.

"ಹೋಗಲಿ ಬಿಡು ಮಗು, ಅವನು ತಿಳಿಯದೆ ಒಂದು ಮಾತು ತಮಾಷೆಗೆ ಹೇಳಿರಬಹುದು. ಇಷ್ಟರಿಂದಲೇ ಅವನು ನಿನ್ನ ಭಾಗದ ಶತ್ರುವೆಂದು ತಿಳಿಯಬೇಕೆ? ಅವನಿಗೆ ನಿನ್ನಲ್ಲಿ ಎಷ್ಟು ಪ್ರೀತಿವಿಶ್ವಾಸಗಳು ಇವೆ ಎಂಬುದು ನೀನು ತಿಳಿದಿದ್ದರೆ ನೀನು ಖಂಡಿತ ಅವನ ಮನಸ್ಸು ನೋಯುವಂತೆ ಧಿಕ್ಕರಿಸಿ ಮಾತನಾಡುತ್ತಿರಲಿಲ್ಲ...."

"ಅಬ್ಬೆ, ಅಣ್ಣನ ಬಗ್ಗೆ ನನಗೆ ಸಿಟ್ಟಿಲ್ಲ. ಅವನು ಕುಬ್ಜನೆಂದು ಕರೆಯಲಿ, ನನಗೆ ಬೇಸರವಿಲ್ಲ. ಆದರೆ ಕಂಡಕಂಡವರೆಲ್ಲರೂ ನನ್ನನ್ನು ಕುಬ್ಜವಿಷ್ಣುವರ್ಧನನೆಂದು ಏಕೆ ಕರೆಯಬೇಕು? ನಾನು ಕುಬ್ಜನಾಗಿ ಹುಟ್ಟಿದುದು ನನ್ನ ತಪ್ಪೆ? ದೇವರು ಕೊಟ್ಟ ಈ ಗೂನುಬೆನ್ನನ್ನು ನಾನು ಎಲ್ಲಿಡಲಿ? ಅದಕ್ಕಾಗಿ ಅವರು ಕುಬ್ಜನೆಂದು ಕರೆದು ಅಪಹಾಸ್ಯಮಾಡಬೇಕೆ?" ಎಂದು ದೈನ್ಯದಿಂದ ಹೇಳಿದ ವಿಷ್ಣುವರ್ಧನ. ಇದನ್ನು ಕೇಳಿ ಪುಲಿಕೇಶಿ ಹಾಗೂ ದುರ್ಲಭದೇವಿಯವರ

ಕಣ್ಣಲ್ಲಿ ನೀರೂರಿತು.

"ಮಗು, ನೀನು ಹೇಳುವುದು ನಿಜ. ಕುಬ್ಜನಾಗಿ ಹುಟ್ಟಿದುದು ನಿನ್ನ ತಪ್ಪಲ್ಲ—ನಿನ್ನ ತಾಯಿಯ ದುರ್ದೈವ. ಆ ದಿನ ನಿನ್ನ ತಾಯಿ ಮಹಾದೇವಿ ವಿಷ್ಣುಮಂದಿರದಲ್ಲಿ ಎಡವಿ ಬಿದ್ದು ಹೊಟ್ಟೆಗೆ ಪೆಟ್ಟಾಗದಿದ್ದರೆ ನೀನೂ ಎಲ್ಲರಂತೆ ಸ್ಫುರದ್ರೂಪಿಯಾಗಿ ಇರುತ್ತಿದ್ದೆ. ಆದರೆ ಯಾರೋ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ನೀನು ಅನುಭವಿಸಬೇಕಾಯಿತು. ಹಳ್ಳಕ್ಕೆ ಬಿದ್ದವರ ಮೇಲೆ ಆಳಿಗೊಂದು ಕಲ್ಲು ಒಗೆಯುವುದು ಲೋಕದ ನಿಯಮ ಮಗು ! ಈ ನಿಷ್ಠುರ ಜಗತ್ತಿನಲ್ಲಿ ಬಾಳಬೇಕಾದರೆ, ನೀನೂ ನಿಷ್ಠುರಮತಿಯಾಗಬೇಕು ಕಂದಾ !" ಎಂದು ದುರ್ಲಭದೇವಿ ಹೇಳಿದರು.

ತಾನು ತಿಳಿಯದೆ ಆಡಿದ ಒಂದೆ, ಒಂದು ಮಾತು ಇಷ್ಟೆಲ್ಲಾ ಅನರ್ಥಕ್ಕೆ ಕಾರಣವಾದುದನ್ನು ಕಂಡು ಪುಲಿಕೇಶಿಗೂ ಪಶ್ಚಾತ್ತಾಪವಾಗಿತ್ತು. ಅವನ ಪಶ್ಚಾತ್ತಾಪ ಕಣ್ಣೀರಿನ ರೂಪದಲ್ಲಿ ಹೊರಹೊಮ್ಮುತ್ತಿತ್ತು. ಅವನು ತನ್ನ ಭಾವೋನ್ಮಾದದಲ್ಲಿ ತಮ್ಮನನ್ನು ತಬ್ಬಿಕೊಂಡು,

"ವಿಷ್ಣು, ನನ್ನಿಂದ ತಪ್ಪಾಗಿದ್ದರೆ ಕ್ಷಮಿಸು !" ಎಂದು ಪ್ರಾರ್ಥಿಸಿದನು. ಈ ಮಾತು ಕೇಳಿ ವಿಷ್ಣುವರ್ಧನನಿಗೂ ಕಣ್ಣಿನಲ್ಲಿ ನೀರು ಉಕ್ಕಿತು.

"ಅಣ್ಣಾ ನನ್ನಿಂದಲೇ ತಪ್ಪಾಯಿತು ಕ್ಷಮಿಸು !" ಎಂದು ಹೇಳಿ ಅವನೂ ಬಿಕ್ಕಿಬಿಕ್ಕಿ ಅತ್ತನು. ಅವನಿಗೆ ಆ ಸಮಯದಲ್ಲಿ ಹಿಂದೆ ಗುರುಕುಲದಲ್ಲಿ ನಡೆದ ಇಂತಹದೇ ಸಂಗತಿ ನೆನಪಾಗಿತ್ತು.

ಬಾಲ್ಯದಿಂದಲೂ ಪುಲಿಕೇಶಿ, ವಿಷ್ಣುವರ್ಧನರು ಭಿನ್ನಸ್ವಭಾವದವರಾಗಿದ್ದರು. ಎಷ್ಟೋ ವಿಷಯಗಳಲ್ಲಿ ಸಹೋದರರಿಗೆ ಹೊಂದಾಣಿಕೆ ಇರಲಿಲ್ಲ. ಒಬ್ಬರ ಆದರ್ಶ ಇನ್ನೊಬ್ಬರಿಗೆ ಹಿಡಿಸುತ್ತಿರಲಿಲ್ಲ. ಒಬ್ಬರ ಆಸಕ್ತಿ ಇನ್ನೊಬ್ಬರಿಗೆ ಸೇರುತ್ತಿರಲಿಲ್ಲ. ಭಿನ್ನಸ್ವಭಾವ, ಭಿನ್ನ ಅಭಿರುಚಿಗಳಿಂದಾಗಿ ಎಷ್ಟೋ ಬಾರಿ ಸಣ್ಣ ವಿಷಯಗಳಲ್ಲಿ ಸಹೋದರರಿಗೆ ಜಗಳವಾಗಿ, ವೈಮನಸ್ಸು ಉಂಟಾದಾಗ ಬೆಣ್ಣಮ ಸೋಮಯಾಜಿಗಳು ಇಬ್ಬರನ್ನೂ ಹತ್ತಿರ ಕೂರಿಸಿಕೊಂಡು, ಬುದ್ಧಿ ಹೇಳಿದ್ದರು. ಅಂದಿನ ಜಗಳಕ್ಕೆ ಪುಲಿಕೇಶಿಯು ಮಾತಿನ ಓಘದಲ್ಲಿ ತಮ್ಮನನ್ನು ಕುಬ್ಜನೆಂದು ಕರೆದು ಹೀಯಾಳಿಸಿದ್ದುದೇ ಕಾರಣವಾಗಿತ್ತು. ಇದನ್ನು ಕೇಳಿಕೊಂಡ ಗುರು

ಗಳು ಹೇಳಿದರು : "ಮಗು ವಿಷ್ಣುವರ್ಧನ, ನೀನು ಕುಬ್ಜನಾಗಿ ಹುಟ್ಟಿದುದಕ್ಕೆ ಅಸಹ್ಯ ಪಟ್ಟರೆ ಹೇಗೆ ? ಯಾವುದೋ ಜನ್ಮದ ಕರ್ಮಶೇಷ ನಿನ್ನ ಬೆನ್ನಿನ ಮೇಲೆ ಮೂಟೆಯಾಗಿ ಕುಳಿತಿದೆ. ಕರ್ಮಶೇಷವನ್ನು ಕಳೆದುಕೊಳ್ಳಲು ಪ್ರಯತ್ನಿಸಬೇಕು. ಕುಬ್ಜನಾದ ಮಾತ್ರಕ್ಕೆ ಇತರರಿಗಿಂತ ಕೀಳು ಎನ್ನುವ ಪ್ರವೃತ್ತಿಯನ್ನು ನೀನು ತೊರೆಯಬೇಕು. ಮೇಲಾಗಿ ನೀನು ರಾಜಪುತ್ರ. ನಿನಗೆ ಇಂತಹ ಸಂಕುಚಿತ ಭಾವನೆಗಳು ಬರಲೇಬಾರದು. ನಿನಗೆ ತಿಳಿಯದೇ ? ಆತ್ಮ ಶಕ್ತಿಯ ಮುಂದೆ ದೇಹಶಕ್ತಿ ವ್ಯರ್ಥ. ನೀನು ಈ ಆತ್ಮಶಕ್ತಿಯನ್ನು ಬೆಳೆಸಿಕೋ. ದ್ವಾಪರಯುಗದಲ್ಲಿ ಕುಬ್ಜೆ ಶ್ರೀಕೃಷ್ಣ ಭಗವಾನನ ಅನುಗ್ರಹಕ್ಕೆ ಪಾತ್ರಳಾಗಿ ಅಮರತ್ವ ಪಡೆಯಲಿಲ್ಲವೆ ? ನೀನು ಆತ್ಮಶಕ್ತಿಯನ್ನೂ ಬೆಳೆಸಿಕೊಂಡರೆ, ನಿನ್ನ ಕುರೂಪವನ್ನು ಅದು ಮರೆಸುತ್ತದೆ. ಎಲ್ಲರೂ ನಿನಗೆ ಮಣಿಯುತ್ತಾರೆ, ಓಲೈಸು ತ್ತಾರೆ, ಗೌರವಿಸುತ್ತಾರೆ. ನೀನು ದೇಹವಿಕಾರವಾಗಿದೆ ಎಂದು ಆತ್ಮವಿಕಾರ ಮಾಡಿಕೊಳ್ಳಬೇಡ. ಲೋಕದಲ್ಲಿ ಆತ್ಮಶಕ್ತಿಯಿಂದ ಮನುಷ್ಯನ ಯೋಗ್ಯತೆಯು ನಿರ್ಧರಿಸಲ್ಪಡುವುದೇ ಹೊರತು ಅವನ ಬಾಹ್ಯರೂಪದಿಂದ ಅಲ್ಲ. ಆತ್ಮ ಸುಂದರ ವಾಗಿದ್ದರೆ ದೇಹವೂ ಸುಂದರವಾಗಿರುತ್ತದೆ. ನೀನು ಕುಬ್ಜನಾಗಿ ಹುಟ್ಟಿದುದಕ್ಕೆ ವ್ಯಥೆಪಡುವ ಕಾರಣವಿಲ್ಲ" ಎಂದು ವಿವೇಕ ಹೇಳಿದ್ದರು.

ಅಂದಿನಿಂದ ತನ್ನನ್ನು ಯಾರಾದರೂ ಕುಬ್ಜನೆಂದು ಕರೆದರೆ ಸಿಟ್ಟಿಗೇಳುವು ದನ್ನು ತೊರೆದಿದ್ದ. ಆದರೆ ಇಂದು ಅವನ ನಿರ್ಧಾರ ಬುಡಮೇಲಾಗಿತ್ತು. ಅದಕ್ಕಾಗಿ ಅವನಿಗೂ ಪಶ್ಚಾತ್ತಾಪವಾಗಿತ್ತು.

ಇದನ್ನೆಲ್ಲಾ ಕೇಳಿದ ಮೇಲೆ ಮಹಾರಾಣಿ ದುರ್ಲಭದೇವಿಯು ಇಬ್ಬರು ಮೊಮ್ಮಕ್ಕಳನ್ನೂ ಎದೆಗೆ ಅಪ್ಪಿಕೊಂಡು,

"ಮಕ್ಕಳಿರಾ, ನೀವು ರಾಮಲಕ್ಷ್ಮಣರಂತೆ ಅನ್ಯೋನ್ಯವಾಗಿರಬೇಕು. ನಿಮ್ಮ ಅನ್ಯೋನ್ಯತೆಯ ಮೇಲೆ ಚಾಲುಕ್ಯ ಸಾಮ್ರಾಜ್ಯದ ಅಳಿವು ಉಳಿವು ನಿಂತಿದೆ !" ಎಂದು ಉದ್ಗರಿಸಿ ಅವರ ಮುಖ ನೋಡಿದರು. ಆ ದೃಷ್ಟಿಯಲ್ಲಿ ಮೊಮ್ಮಕ್ಕಳ ಭವಿಷ್ಯದ ಬಗ್ಗೆ ಆತಂಕವಿತ್ತು.

## ೩

ಇತ್ತ ಮೊಮ್ಮಕ್ಕಳ ಭವಿಷ್ಯದ ಚಿಂತೆ, ಅತ್ತ ಸಾಮ್ರಾಜ್ಯದ ಭವಿಷ್ಯದ ಚಿಂತೆ ಇವುಗಳ ನಡುವೆ ತೊಳಲಾಡುತ್ತಿದ್ದ ಮಹಾರಾಣಿ ದುರ್ಲಭದೇವಿಯನ್ನು ಮುಮ್ಮಡಿ ಚಿಂತೆಯೊಂದು ಎದುರುಗೊಂಡಿತ್ತು. ರೇವತಿ ದ್ವೀಪದಿಂದ ಬಂದ ಚಾರರು ಭಯಂಕರ ವಾರ್ತೆಯೊಂದನ್ನು ತಂದು ಮಹಾರಾಣಿಯ ಕಿವಿಯ ಮೇಲೆ ಹಾಕಿದ್ದರು. ರೇವತಿ ದ್ವೀಪವನ್ನು ಆಳುತ್ತಿದ್ದ ಉದಯಾದಿತ್ಯನನ್ನು ಸ್ವಾಮಿರಾಜನೆಂಬ ದ್ರೋಹಿಯು ರಾಜ್ಯಚ್ಯುತನನ್ನಾಗಿ ಮಾಡಿ, ಅವನ ರಾಜ್ಯ ವನ್ನು ತಾನೇ ಆಕ್ರಮಿಸಿಕೊಂಡಿದ್ದನು. ಈ ವಾರ್ತೆ ದುರ್ಲಭದೇವಿಗೆ ಭರಸಿಡಿಲ ನಂತೆ ಬಂದೆರಗಿತ್ತು.

ರಣವಿಕ್ರಮ ಪುಲಿಕೇಶಿಯು ತನ್ನ ದಂಡಯಾತ್ರೆಯ ಕಾಲದಲ್ಲಿ ರೇವತಿ ದ್ವೀಪವನ್ನು ಆಳುತ್ತಿದ್ದ ಬಟ್ಟೂರ ಮನೆತನದ ದೊರೆಯನ್ನು ಸೋಲಿಸಿ ಅವನ ಮಗಳಾದ ದುರ್ಲಭದೇವಿಯನ್ನು ವಿಜಯವಧುವಾಗಿ ವರಿಸಿದ್ದನು. ಈ ಬಾಂಧವ್ಯ ದಿಂದ ಎರಡು ಮನೆತನಗಳಿಗೆ ಚಿರಸ್ನೇಹ ಏರ್ಪಟ್ಟಿತ್ತು. ರೇವತಿ ದ್ವೀಪವು ಚಾಲುಕ್ಯ ಸಾಮ್ರಾಜ್ಯಕ್ಕೆ ಸೇರಿದ್ದರೂ, ಬಟ್ಟು ಮನೆತನದ ಅರಸರು ಅದರ ಮಾಂಡಲೇಶ್ವರರಾಗಿ ವೈಭವದಿಂದ ಆಳುತ್ತಿದ್ದರು. ಕೀರ್ತಿವರ್ಮನ ಕಾಲದಲ್ಲಿ ಕೊಂಕಣವೂ ಚಾಲುಕ್ಯ ಸಾಮ್ರಾಜ್ಯಕ್ಕೆ ಸೇರಿಹೋಗಿ ಅಲ್ಲಿ ಧೃವರಾಜ ಇಂದು ವರ್ಮನೆಂಬುವನು ಮಾಂಡಲೇಶ್ವರನಾಗಿದ್ದನು. ಅವನು ಚಾಲುಕ್ಯ ಸಿಂಹಾಸನಕ್ಕೆ ನಿಷ್ಠೆಯಿಂದ ಸೇವೆ ಸಲ್ಲಿಸಿದ್ದನು.

ಧೃವರಾಜ ಇಂದುವರ್ಮನು ವೃದ್ಧಾಪ್ಯದಿಂದ ತೀರಿಕೊಳ್ಳಲು ಅವನ ಮಗ ಸ್ವಾಮಿರಾಜನು ಕೊಂಕಣದ ಮಾಂಡಲೇಶ್ವರನಾದನು. ಅವನು ಬಿಸಿರಕ್ತದ ತರುಣನಾಗಿದ್ದನು. ಅವನು ಚಾಲುಕ್ಯ ಸಿಂಹಾಸನದಲ್ಲಿ ಸಮರ್ಥರಾದ ದೊರೆ ಗಳು ಇಲ್ಲದುದನ್ನು ಕಂಡು ತಾನೇ ಸ್ವತಂತ್ರ ಸಾಮ್ರಾಟನಾಗಿ ಮೆರೆಯಲು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದನು. ಅವನು ಸಮಯ ಸಾಧಿಸಿ, ಕಲ ಚೂರ್ಯ ಮನೆತನದ ಶಂಕರಗಣನ ಮಗ ಬುದ್ಧರಾಜನೊಡನೆ ಸ್ನೇಹಬೆಳೆಸಿ, ಇಬ್ಬರೂ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ಚಾಲುಕ್ಯ ಸಾಮ್ರಾಜ್ಯದ ಮೇಲೆ ಬಿದ್ದು, ಒಂದೊಂದೇ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಾ ಬಂದರು.

ಅವರ ವಕ್ರದೃಷ್ಟಿ ರೇವತಿ ದ್ವೀಪದ ಮೇಲೆ ಬಿದ್ದಿತ್ತು. ಅದನ್ನು ದುರ್ಲಭ ದೇವಿಯ ಸೋದರಳಿಯ ಉದಯಾದಿತ್ಯನೆಂಬುವನು ಆಳುತ್ತಿದ್ದನು. ಅದರ ಮೇಲೆ ದಾಳಿ ಇಟ್ಟು, ಅದನ್ನು ಸುಲಭವಾಗಿ ವಶಪಡಿಸಿಕೊಂಡು ಅದನ್ನು ತಮ್ಮ ವಿದ್ರೋಹ ಚಟುವಟಿಕೆಗಳಿಗೆ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಶತ್ರುಗಳಿಗೆ ಸೋತ ಉದಯಾದಿತ್ಯನು ಪತ್ನಿ ಪುತ್ರರ ಸಮೇತ ತಲೆತಪ್ಪಿಸಿ ಕೊಂಡು, ಈ ಎಲ್ಲಾ ವಾರ್ತೆಯನ್ನು ತಿಳಿಸಿ ಪತ್ರ ಬರೆದು ದೂತರ ಮೂಲಕ ಕಳುಹಿಸಿಕೊಟ್ಟಿದ್ದನು. ತನ್ನ ಸೋದರಳಿಯನಿಗೆ ಉಂಟಾದ ಪರಾಭವದ ಕತೆ ಯನ್ನು ಕೇಳಿ ರಾಣಿ ದುರ್ಲಭದೇವಿಯು ಕಿಡಿಕಿಡಿಯಾದರು. ಅವರು ಆ ದ್ರೋಹಿ ಬುದ್ಧರಾಜ, ಸ್ವಾಮಿರಾಜರ ಮೇಲೆ ದಂಡೆತ್ತಿ ಹೋಗಿ ಉಗ್ರವಾಗಿ ಶಿಕ್ಷಿಸಲು ನಿಶ್ಚಯಿಸಿದರು.

ಈ ಬಗ್ಗೆ ಮಹಾರಾಣಿಯವರು ಸಾಮ್ರಾಟನಾದ ಮಂಗಳೇಶನೊಡನೆ ಮಾತು ತೆಗೆದಾಗ, ಅವನು ಏಕೋ ಅಷ್ಟು ಹುರುಪು ತೋರಿಸಲಿಲ್ಲ. ಇದರಿಂದ ಮಹಾರಾಣಿಯವರಿಗೆ ನಿರಾಸೆಯಾಯಿತು. ಆದರೂ ಹತಾಶರಾಗದೆ ಅವರು ಹೇಳಿದರು.

"ಈಗ ಚಾಲುಕ್ಯಸಾಮ್ರಾಜ್ಯಕ್ಕೆ ಗಂಡಾಂತರ ಬಂದಿದೆ. ಸಿಂಹಾಸನದಲ್ಲಿ ಸಮರ್ಥರಾದ ಸಾಮ್ರಾಟರು ಇಲ್ಲವೆಂದು ವಿದ್ರೋಹಿಗಳು ದಂಗೆ ಎದ್ದಿದ್ದಾರೆ. ಅವರ ದ್ರೋಹ ಚಿಂತನೆಯನ್ನು ಮೊಳಕೆಯಲ್ಲೇ ಹೊಸಕಿ ಹಾಕದೆ ಇದ್ದರೆ ಸಾಮ್ರಾಜ್ಯವು ಮರಳಿನ ಮನೆಯಂತೆ ಉರುಳುವುದು ಖಂಡಿತ. ನಾವು ದ್ರೋಹಿ ಗಳ ದಂಗೆಯನ್ನು ಅಡಗಿಸದಿದ್ದರೆ, ನಮ್ಮ ಕಣ್ಣೆದುರಿನಲ್ಲೇ ಚಾಲುಕ್ಯ ಸಾಮ್ರಾಜ್ಯವು ನಾಮಾವಶೇಷವಾಗುವುದು ಖಂಡಿತ. ಈಗ ಸಾಮ್ರಾಜ್ಯದ ದುರಂತವನ್ನು ತಪ್ಪಿಸಲು ನಮಗೆ ಯುದ್ಧವೊಂದೇ ದಾರಿ !" ಎಂದು ವೀರಾವೇಶ ದಲ್ಲಿ ಹೇಳಿದರು.

"ಕೀರ್ತಿಶೇಷರಾದ ಪುಲಿಕೇಶಿ, ಕೀರ್ತಿವರ್ಮ ಸಾರ್ವಭೌಮರು ರಕ್ತ ಹರಿಸಿ ಕಟ್ಟಿದ ಸಾಮ್ರಾಜ್ಯ, ನಮ್ಮ ಕಣ್ಣೆದುರಿನಲ್ಲೇ ಹರಿದು ಹಂಚಿಹೋಗುವು ದಕ್ಕಿಂತ ನಾವು-ಸಾಯುವುದು ಮೇಲು. ನಮ್ಮ ಸರ್ವಸ್ವವನ್ನು ಬಲಿಕೊಟ್ಟಾ ದರೂ ನಾವು ವಿದ್ರೋಹವನ್ನು ಮೊಳಕೆಯಲ್ಲೇ ತುಳಿಯಬೇಕು" ಎಂದು ಪ್ರಧಾನ ಅಮಾತ್ಯ ಸಮಂತಭದ್ರನು ಹೇಳಿದನು.

"ನಾನು ಬಾಲಕನಾದ ಮಾತ್ರಕ್ಕೆ ಚಾಲುಕ್ಯ ಸಾಮ್ರಾಜ್ಯವು ಅನಾಯಕ ನಾಯಿತೆಂದು ಆ ದ್ರೋಹಿಗಳು ತಿಳಿದಿದ್ದರೆ, ಅವರಿಗೆ ತಕ್ಕ ಬುದ್ಧಿ ಕಲಿಸದಿದ್ದರೆ ನಾನು ಪುಲಿಕೇಶಿಯಲ್ಲ ಅಪ್ಪಾ. ನೀವು ನನಗೆ ಆಜ್ಞೆಮಾಡಿ. ನಾಳೆಯೇ ದಂಡೆತ್ತಿ ಹೋಗಿ ಆ ದ್ರೋಹಿಗಳನ್ನು ಸೆರೆಹಿಡಿದು ತಂದು ತಮ್ಮ ಪಾದಚರಣಗಳ ಮೇಲೆ ಉರುಳಿಸುತ್ತೇನೆ. ಅವರಿಗಾದ ಶಿಕ್ಷೆಯಿಂದ ಇತರ ದ್ರೋಹಿಗಳು ಪಾಠ ಕಲಿಯು ವಂತೆ ಆಗಲಿ" ಪುಲಿಕೇಶಿಯು ವೀರಾವೇಶದಲ್ಲಿ ನುಡಿದನು.

ಆದರೆ ಮಂಗಳೇಶನು ಮಾತ್ರ ಯುದ್ಧದ ಬಗ್ಗೆ ಯಾವ ನಿರ್ಧಾರಕ್ಕೂ ಬರದೆ ಮೀನಮೇಷ ಎಣಿಸುತ್ತಿದ್ದನು. ಇದನ್ನು ಕಂಡು ಎಲ್ಲರಿಗೂ ಆಶ್ಚರ್ಯ ವಾಯಿತು. ಮಂಗಳೇಶನ ಮೌನ ಪುಲಿಕೇಶಿಗೆ ಸಹಿಸದಾಯಿತು. ಅವನು ಗಂಭೀರವಾಗಿ ಹೇಳಿದ :

"ಅಪ್ಪಾಜಿಯವರು ಏನನ್ನೋ ಕುರಿತು ಚಿಂತಿಸುತ್ತಿರುವಂತೆ ಇದೆ. ಬಹುಶಃ ಈ ಯುದ್ಧವು ನಿಮಗೆ ಅಪ್ರಿಯವಾಗಿರಬಹುದು. ಇಲ್ಲವೇ ಯುದ್ಧದಲ್ಲಿ ಏನಾಗುವುದೋ ಎಂಬ ಅಂಜಿಕೆ ಇರಬಹುದು. ಹೇಗೇ ಇರಲಿ, ನೀವು ನನಗೆ ಅಪ್ಪಣೆ ಕೊಟ್ಟರೆ, ನಾನೇ ಹೋಗಿ ದ್ರೋಹಿಗಳಾದ ಬುದ್ಧರಾಜ, ಸ್ವಾಮಿ ರಾಜರನ್ನು ಸೆರೆಹಿಡಿದುತಂದು ತಮ್ಮ ಮುಂದೆ ನಿಲ್ಲಿಸುತ್ತೇನೆ."

"ಕೇಶಣ್ಣ, ಈ ಪ್ರಶ್ನೆ ನೀನು ಹೇಳುವಷ್ಟು ಸುಲಭವಾಗಿಲ್ಲ. ಯುದ್ಧ ವೆಂದರೆ ಅದೊಂದು ಮಕ್ಕಳಾಟಿಕೆ ಎಂದು ನೀನು ತಿಳಿದಿರುವಂತೆ ಇದೆ" ಎಂದ ಮಂಗಳೇಶ ಏನನ್ನೋ ಯೋಚಿಸುತ್ತಾ.

"ನನ್ನ ವಿಷಯದಲ್ಲಿ ನಿಮಗೆ ತಪ್ಪು ಕಲ್ಪನೆ ಇದೆ ಅಪ್ಪಾಜಿ. ಆದರೂ ನನಗೆ ಈ ಪುಂಡರನ್ನು ಅಡಗಿಸುವುದು ಒಂದು ಮಕ್ಕಳಾಟಿಕೆಯಂತೆ ತೋರು ತ್ತಿದೆ. ನಿಜವಾದ ಯುದ್ಧ ಗಂಡುಗಲಿಗಳ ಜೊತೆಯಲ್ಲೇ ಹೊರತು ಪುಂಡರ ಜೊತೆಯಲ್ಲಲ್ಲ !" ಎಂದು ಉದ್ಧಟತನದ ಉತ್ತರಕೊಟ್ಟ ಪುಲಿಕೇಶಿ.

ಈ ಮಾತು ಕೇಳಿ ಮಂಗಳೇಶನು ಚಕಿತನಾಗಿ, ಪುಲಿಕೇಶಿಯನ್ನು ನೋಡುತ್ತಾ ಕುಳಿತ.

"ಅಂತಹ ಗಂಡುಗಲಿಗಳ ಮೇಲೆ ಯುದ್ಧ ಬಂದಾಗ ನೀನು ಯುದ್ಧಕ್ಕೆ ಹೋಗುವೆಯಂತೆ. ಈಗ ಪುಂಡರ ದಂಗೆಯನ್ನು ಎದುರಿಸಲು ಯುದ್ಧಬೇಕಿಲ್ಲ

ವೆಂದು ನನ್ನ ಅಭಿಪ್ರಾಯ."

"ಹಾಗಾದರೆ ನೀವು ಹೇಳುವುದಾದರೂ ಏನು ?"

"ಕೊಂಕಣದ ಮಂಡಲೇಶ್ವರನಿಗೂ ರೇವತಿ ದ್ವೀಪದ ಮಂಡಲೇಶ್ವರರಿಗೂ ಮೊದಲಿನಿಂದಲೂ ಬದ್ಧದ್ವೇಷವಿತ್ತು. ಇದೊಂದು ಗೃಹಕಲಹ. ಇದರಲ್ಲಿ ನಾವು ಕೈಹಾಕುವುದು ಒಳ್ಳೆಯದಲ್ಲ."

"ಇದು ಗೃಹಕಲಹವಲ್ಲ ಅಪ್ಪಾಜಿ, ರಾಜದ್ರೋಹ. ಸಾಮ್ರಾಜ್ಯವನ್ನು ಕಬಳಿಸಲು ಮದೋನ್ಮತ್ತರೂ, ಮಹತ್ವಾಕಾಂಕ್ಷಿಗಳೂ ಆದ ದ್ರೋಹಿಗಳು ಸೇರಿ ನಡೆಸಿರುವ ಪಿತೂರಿ. ಅವರ ವಿದ್ರೋಹವನ್ನು ಮೊಳಕೆಯಲ್ಲೇ ನಾಶಮಾಡ ದಿದ್ದರೆ ಚಾಲುಕ್ಯ ಸಾಮ್ರಾಜ್ಯದ ಇತರ ಭಾಗಗಳಿಗೂ ಹಬ್ಬಿ, ನಮ್ಮ ಕಣ್ಣೆದು ರಿಗೇ ಅಖಂಡವಾದ ಸಾಮ್ರಾಜ್ಯ ಛಿದ್ರಛಿದ್ರವಾಗಿ ಒಡೆದು ಶತ್ರುಗಳಿಗೆ ಹಂಚಿ ಹೋಗುವುದು ಖಂಡಿತ ! ಈಗ ನಾವು ಕಾರ್ಯೋನ್ಮುಖರಾಗದಿದ್ದರೆ, ವಿದ್ರೋಹದ ದಳ್ಳುರಿಯನ್ನು ಅಡಗಿಸುವುದು ಕಷ್ಟವಾದೀತು. ಈಗ ಒಂದೊಂದು ಗಳಿಗೆಯೂ ಅಮೂಲ್ಯವಾಗಿದೆ. ಈಗ ಕಾಲಹರಣ ಮಾಡಿದರೆ ನಮ್ಮ ಸರ್ವ ನಾಶ ಶತಸ್ಸಿದ್ಧ !" ಎಂದು ಪುಲಿಕೇಶಿ ಹೇಳಿದ ಮಾತನ್ನು ಪ್ರಧಾನ ಅಮಾತ್ಯ ಸಮಂತಭದ್ರನೂ, ಇನ್ನಿತರ ದಂಡನಾಯಕರೂ ಅನುಮೋದಿಸಿದರು. ಮಂಗಳೇಶ ನಿಗೆ ಬೇರೆ ಮಾರ್ಗ ಕಾಣಲಿಲ್ಲ. ಅವನು ಒಲ್ಲದ ಮನಸ್ಸಿನಿಂದ ಸ್ವಾಮಿರಾಜನ ಮೇಲೆ ಯುದ್ಧ ಘೋಷಿಸಿದನು.

ಮಂಗಳೇಶನಿಗೆ ಪುಲಿಕೇಶಿಯು ರಾಜಧಾನಿಯಲ್ಲಿ ಇರುವ ಸಮಯದಲ್ಲಿ ತಾನು ರಾಜಧಾನಿಯಿಂದ ದೂರವಿರುವುದು ಇಷ್ಟವಿರಲಿಲ್ಲ. ಈಗ ನಿರ್ವಾಹವಿಲ್ಲದೆ ಸ್ವಾಮಿರಾಜನಮೇಲೆ ದಂಡೆತ್ತಿ ಹೋಗಬೇಕಾಗಿಬಂದಿತ್ತು. ಯುದ್ಧವನ್ನು ಘೋಷಿಸಿ ಕೈಕೆಳಗಿನ ದಂಡನಾಯಕರಿಗೆ ಈ ಕಾರ್ಯವನ್ನು ಒಪ್ಪಿಸಿದರೆ, ಸುಸಂಘಟಿತರಾದ ಶತ್ರುಗಳ ಕೈಲಿ ತಮಗೆ ಸೋಲಾಗುವ ಸಂಭವವಿತ್ತು.ಅಲ್ಲದೆ ಜನರು ತನ್ನನ್ನು ಹೇಡಿ, ರಾಜ್ಯಲೋಭಿ ಎಂದು ತಿಳಿಯಲು ತಾನಾಗಿ ತಾನು ಅವಕಾಶ ಕೊಟ್ಟಂತಾಗುತ್ತಿತ್ತು. ಆದರೂ ಮಂಗಳೇಶನು ರಾಜಧಾನಿಯಲ್ಲಿ ತಾನಿಲ್ಲದ ಸಮಯದಲ್ಲಿ ಸಿಂಹಾಸನವನ್ನು ಪುಲಿಕೇಶಿಯು ಕಸಿಯದಂತೆ ನೋಡಿ ಕೊಳ್ಳಲು ತನ್ನ ನಂಬುಗೆಯ ದಳಪತಿಯಾದ ರಾಹಪ್ಪಯ್ಯನನ್ನು ಹಿಂದುಳಿಸಿ, ಸೈನ್ಯಸಮೇತ ರೇವತಿ ದ್ವೀಪದಮೇಲೆ ಒಲ್ಲದ ಮನಸ್ಸಿನಿಂದ ಯುದ್ಧಕ್ಕೆ

ಹೊರಟನು.

ಮಂಗಳೇಶನು ಶತ್ರುಗಳ ಕೈಲಿ ಸೋತು ಹಿಮ್ಮೆಟ್ಟಬಹುದೆಂದು ಹೆದರಿ, ಮಂಗಳೇಶನ ಜೊತೆಯಲ್ಲಿ ತಾನೇ ರಣರಂಗಕ್ಕೆ ಹೊರಡಲು ಪುಲಿಕೇಶಿಯು ಹಠ ಹಿಡಿದನು. ಆದರೆ ಬಾಲಕನಾದ ಪುಲಿಕೇಶಿಯನ್ನು ಯುದ್ಧ ಭೂಮಿಗೆ ಕಳು ಹಿಸಲು ಇಚ್ಛಿಸದೆ, ಅಮಾತ್ಯ ಸಮಂತಭದ್ರನು ಅವನನ್ನು ಹಿಂದುಳಿಸಿ, ತಾನೇ ಸೈನ್ಯಸಮೇತ ಹೊರಟನು. ಅಮಾತ್ಯ ಸಮಂತಭದ್ರನು ತನ್ನೊಡನೆ ಬಂದುದನ್ನು ನೋಡಿ ಮಂಗಳೇಶನಿಗೆ ಅಸಮಾಧಾನವಾಗದಿರಲಿಲ್ಲ. ತನ್ನ ಶಕ್ತಿ ಸಾಮರ್ಥ್ಯಗಳಲ್ಲಿ ನಂಬಿಕೆ ಇಲ್ಲದ ಮಹಾರಾಣಿ ದುರ್ಲಭದೇವಿಯು ಸಮಂತಭದ್ರನನ್ನು ತನ್ನೊಡನೆ ಕಳುಹಿಸಿರಬೇಕೆಂದು ತರ್ಕಿಸಿದನು. ತನ್ನ ಚಲನವಲನಗಳನ್ನು ಅರಿಯಲು ಬೇಹುಗಾರನಾಗಿ ಕಳುಹಿಸಿರಬೇಕೆಂಬ ಇನ್ನೊಂದು ಯೋಚನೆಯೂ ಬಾರದಿರಲಿಲ್ಲ. ಹೇಗೇ ಇರಲಿ, ಪುಲಿಕೇಶಿ ಹಾಗೂ ಅವನ ಪಕ್ಷದವರ ಜೊತೆಯಲ್ಲಿ ನಾನು ತುಂಬ ಎಚ್ಚರದಿಂದ ವರ್ತಿಸಬೇಕು ಎಂದು ನಿರ್ಧರಿಸಿದನು.

ಪುಲಿಕೇಶಿಯು ತನ್ನ ಗುರುಕುಲವಾಸ ಮುಗಿಸಿಕೊಂಡು, ರಾಜಧಾನಿಗೆ ಹಿಂದಿರುಗಿದ ಕೂಡಲೇ ಸ್ವತಂತ್ರ ಸಾಮ್ರಾಟನಾಗಿ ಮೆರೆಯುವ ಇಚ್ಛೆಯನ್ನು ಪ್ರಕಟಿಸಿ ಈಗ ತನ್ನನ್ನು ಒತ್ತಾಯದಲ್ಲಿ ಸ್ವಾಮಿರಾಜನ ಮೇಲೆ ಯುದ್ಧಕ್ಕೆ ಕಳುಹಿಸಿದುದು ಸಿಂಹಾಸನದ ವಿಷಯದಲ್ಲಿ ಅವನು ತನ್ನ ಪ್ರಬಲ ಪ್ರತಿಕಕ್ಷಿ ಎಂಬುದಕ್ಕೆ ಪ್ರತ್ಯಕ್ಷ ಪ್ರಮಾಣವಾಗಿತ್ತು. ತಾನು ಯಃಕಶ್ಚಿತ ಹುಲ್ಲುಗರಿಕೆ ಎಂದು ಕಿತ್ತು ಹಾಕದೆ ಬಿಟ್ಟಗರಿಕೆಯು ಬೆಳೆದು ಈಗ ತನ್ನ ಹೊಂಗನಸಿನ ಅಡಿ ಪಾಯವನ್ನೇ ಭೇದಿಸಿತ್ತು. ಅವನು ಯಃಕಶ್ಚಿತ ಬಾಲಕನೆಂದು ಕೊಲ್ಲದೆ ಬಿಟ್ಟ ಪುಲಿಕೇಶಿ ಇಂದು ಅವನ ಪ್ರಬಲ ಶತ್ರುವಾಗಿ ಮಾರ್ಪಟ್ಟಿದ್ದ. ಅವನನ್ನು ತಾನು ಮೊದಲೇ ನಿವಾರಿಸಿಕೊಂಡಿದ್ದರೆ ಒಳಿತಾಗುತ್ತಿತ್ತು ಎಂದು ಅವನಿಗೆ ಅನಿಸದಿರ ಲಿಲ್ಲ. ಆದರೆ ಈಗ ಕಾರ್ಯ ಮಿಂಚಿತ್ತು.

ಪುಲಿಕೇಶಿಯು ಸಿಂಹಾಸನಕ್ಕೆ ಬರುವ ಮೊದಲೇ ತಾನೆಂತಹ ಪ್ರಭುವಾಗ ಬಲ್ಲೆನೆಂಬುದನ್ನು ತೋರಿಸಿಕೊಟ್ಟಿದ್ದನು, ನ್ಯಾಯವಾದ ಹಕ್ಕುದಾರನಾದ ಅವನ ವಿಷಯದಲ್ಲಿ ಜನತೆ ಅನೇಕ ಆಶೋತ್ತರಗಳನ್ನು ಕಟ್ಟಿತ್ತು. ಸೈನಿಕರೂ ಸಾಮಂತರೂ ಪುಲಿಕೇಶಿಯು ಪಟ್ಟಾಭಿಷಿಕ್ತನಾಗುವುದನ್ನೇ ಚಾತಕಪಕ್ಷಿಗಳಂತೆ

ಎದುರು ನೋಡುತ್ತಿದ್ದರು. ಅವರ ವಿರುದ್ಧ ಮಂಗಳೇಶನ ಆಟ ನಡೆಯುತ್ತಿರಲಿಲ್ಲ. ಈಗ ಅವನು ತುಂಬ ಜಾಣ್ಮೆಯಿಂದ ಶತ್ರುವನ್ನು ನಿವಾರಿಸಿಕೊಳ್ಳಬೇಕಾಗಿತ್ತು. ಪುಲಿಕೇಶಿಯನ್ನು ಮೋಸದಿಂದ ಕೊಲ್ಲಿಸಿ ತಾನೇ ಸಿಂಹಾಸನವನ್ನು ಆಕ್ರಮಿಸಿಕೊಳ್ಳಬೇಕೆಂದು ಅವನು ಯೋಚಿಸುತ್ತಿದ್ದ ಸಮಯದಲ್ಲೇ ರಾಜಧಾನಿಯನ್ನು ಬಿಟ್ಟುಹೋಗಬೇಕಾದ ಅನಿವಾರ್ಯದ ಪ್ರಸಂಗ ಬಂದಿತ್ತು.

ತಾನು ಪುಲಿಕೇಶಿಯನ್ನು ನಿವಾರಿಸಿಕೊಂಡು ಸಿಂಹಾಸನವನ್ನು ತನ್ನದು ಮಾಡಿಕೊಳ್ಳಲು ಆಶಿಸಿದಂತೆ, ಪುಲಿಕೇಶಿಯು ತಾನಿಲ್ಲದ ಸಮಯದಲ್ಲಿ ಸಿಂಹಾಸನವನ್ನು ಆಕ್ರಮಿಸಿಕೊಂಡು ತನ್ನನ್ನೂ, ತನ್ನ ಪಕ್ಷದವರನ್ನೂ ರಾಜದ್ರೋಹಿಗಳೆಂದು ಘೋಷಿಸಿದರೆ ?

ಇಂತಹ ಸುದ್ದಿ ಮುಟ್ಟಿದ ಕೂಡಲೇ ತನಗೆ ಪತ್ರಬರೆಯಬೇಕೆಂದೂ ತಾನು ಕೂಡಲೇ ಸೈನ್ಯ ಸಮೇತ ಹೊರಟುಬಂದು ರಾಜಧಾನಿಯನ್ನು ಮುತ್ತಿ ವಶಪಡಿಸಿಕೊಂಡು, ತಾನೇ ಸಾಮ್ರಾಟನೆಂದು ಘೋಷಿಸಿಕೊಳ್ಳುವುದಾಗಿಯೂ ಮಂಗಳೇಶನು ರಾಹಪ್ಪಯ್ಯನಿಗೆ ತಿಳಿಸಿ ಬರೆದಿದ್ದನು. ರಾಹಪ್ಪಯ್ಯನಂತಹ ಚಾಣಾಕ್ಷ ವ್ಯಕ್ತಿರಾಜಧಾನಿಯಲ್ಲಿ ಇರುವವರೆಗೆ ತನ್ನ ಹಿತಾಸಕ್ತಿಗಳಿಗೆ ಯಾವ ಧಕ್ಕೆಯೂ ತಟ್ಟಲಾರದೆಂದು ಆಶಿಸಿದ್ದನು.

ಮಂಗಳೇಶನು ಸೈನ್ಯದೊಡನೆ ವೆಂಗುರ್ಲೆ ಮೂಲಕ ಹೊರಟು ರೇವತಿ ದ್ವೀಪದ ಮೇಲೆ ಐವತ್ತು ಹಡಗುಗಳಲ್ಲಿ ಹಠಾತ್ತನೆ ದಾಳಿ ಇಟ್ಟಾಗ, ಅಪಾಯವನ್ನು ಮರೆತು ತಮ್ಮ ವಿಲಾಸಭೋಗಗಳಲ್ಲಿ ಮೈಮರೆತಿದ್ದ ಸ್ವಾಮಿರಾಜನಿಗೆ ವರುಣದೇವನೆ ತಮ್ಮ ಮೇಲೆ ದಂಡೆತ್ತಿ ಬಂದಂತೆ ಭಾಸವಾಯಿತು. ಚಾಲುಕ್ಯರ ಹಡಗುಗಳ ಪಡೆಯನ್ನು ಕಂಡೇ ಅವನಿಗೆ ಗಾಬರಿಯಾಗಿ, ಜಂಘಾಬಲ ಉಡುಗಿತು. ಅವನು ರೇವತಿ ದ್ವೀಪವನ್ನು ಶತ್ರುಗಳ ಪಾಲುಮಾಡಿ ಓಡಿಹೋಗಿ ತಲೆ ತಪ್ಪಿಸಿಕೊಳ್ಳಬೇಕೆಂದಿರುವುದರೊಳಗೆ ಯುದ್ಧ ಸನ್ನಿಹಿತವಾಯಿತು. ಅವನು ನಿರ್ವಾಹವಿಲ್ಲದೆ ಯುದ್ಧಮಾಡಿ, ರಣರಂಗದಲ್ಲಿ ವೀರನಂತೆ ಮರಣಹೊಂದಿದನು. ಸೋತು ಓಡಿಹೋದ ಬುದ್ಧರಾಜನು ಸುಲಭವಾಗಿ ಮಂಗಳೇಶನ ವಶವಾದನು. ಅವನನ್ನು ಬಂಧಿಸಿ ಸೆರೆಯಲ್ಲಿಟ್ಟು, ಮಹಿನದಿಯವರೆಗೂ ಅವರ ರಾಜ್ಯವನ್ನು ಚಾಲುಕ್ಯ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು, ಯುದ್ಧದಲ್ಲಿ ಸೂರೆಯಾಗಿ ದೊರೆತ ಅಗಣಿತ ಸಂಪತ್ತಿನೊಡನೆ ರಾಜಧಾನಿಗೆ ಹಿಂತಿರುಗಿದನು. ರೇವತಿದ್ವೀಪ ಹಾಗೂ

ಕೊಂಕಣಗಳಿಗೆ ಉದಯಾದಿತ್ಯನನ್ನೇ ಮಂಡಳೇಶ್ವರನನ್ನಾಗಿ ನೇಮಿಸಿ, ವಿಜಯ ವಧುವನ್ನು ವರಿಸಿ, ರಾಜಧಾನಿಗೆ ಆಗಮಿಸಿದ ಮಂಗಳೇಶನಿಗೆ ವೈಭವದ ಸ್ವಾಗತ ದೊರೆಯಿತು. ಆದರೆ ಮಂಗಳೇಶನು ರೇವತಿ ದ್ವೀಪದ ಶತ್ರುಶಿಬಿರದಲ್ಲಿ ದೊರೆತ ವಿಪುಲವಾದ ಸೂರೆಯನ್ನು—ಧನಕನಕ ವಸ್ತುಗಳನ್ನು—ತನ್ನೊಡನೆ ರಾಜಧಾನಿಗೆ ತೆಗೆದುಕೊಂಡು ಹೋಗದೆ, ಅವುಗಳಲ್ಲಿ ಕೆಲಭಾಗವನ್ನು ಸೈನಿಕರಿಗೆ ಹಂಚಿ, ಉಳಿದ ಭಾಗವನ್ನೆಲ್ಲಾ ಪುಲಿಕೇಶಿಯ ಮೇಲೆ ಸಿಂಹಾಸನದ ಸಲುವಾಗಿ ಹೋರಾಟ ನಡೆದರೆ ಮುಂದೆ ಕೈಗಾವಲಿಗಾಗಿ ಇರಲೆಂದು, ರಹಸ್ಯ ಸ್ಥಳಕ್ಕೆ ಸಾಗಿಸಿದ್ದನು. ಈ ಸಂಗತಿಯನ್ನು ಅವನು ಎಷ್ಟೇ ಗೋಪ್ಯವಾಗಿರಿಸಿದ್ದರೂ, ಸಮಂತಭದ್ರನ ಕಣ್ಣಿನಿಂದ ಮುಚ್ಚಿಡಲಾಗಲಿಲ್ಲ. ಅವನು ಮಹಾರಾಣಿ ದುರ್ಲಭದೇವಿಯವರಿಗೆ ಪತ್ರ ಬರೆದು, ಎಲ್ಲ ಸಂಗತಿಯನ್ನು ವರದಿಮಾಡಿದನು. ಇದನ್ನು ಓದಿಕೊಂಡು ಮಹಾರಾಣಿಯವರಿಗೆ ಕಳವಳವಾದರೂ, ಮಂಗಳೇಶನನ್ನು ಎದುರು ಹಾಕಿಕೊಳ್ಳಲಿಚ್ಛಿಸದೆ, ಅವನಿಗೆ ನಗುಮುಖದ ಸ್ವಾಗತವನ್ನೇ ಇತ್ತರು.

ಮಂಗಳೇಶನು ತನಗೆ ದೊರೆತ ದಿಗ್ವಿಜಯದಿಂದ ಹಿಗ್ಗಿ "ಉರುರಣವಿಕ್ರಾಂತ"ನೆಂಬ ಬಿರುದನ್ನು ಧರಿಸಿದನು. ಅವನು ತನ್ನ ದಿಗ್ವಿಜಯದ ಸ್ಮರಣಾರ್ಥವಾಗಿ ಮಹಾಕೂಟದಲ್ಲಿ ಒಂದು ಗೆಲ್ಗಂಬವನ್ನು ನಿಲ್ಲಿಸಿದನು. ಈ ಸಮಯದಲ್ಲಿ ಬ್ರಾಹ್ಮಣರಿಗೂ, ದೇವಾಲಗಳಿಗೂ ಯಥೇಚ್ಛವಾಗಿ ದಾನಧರ್ಮಗಳನ್ನು ಮಾಡಿದನು. ಅವರ ಹರಕೆಯಿಂದ ಚಾಲುಕ್ಯ ಸಿಂಹಾಸನ ತನಗೆ ದೊರಕಲೆಂಬುದೇ ಅವನ ದೂರದ ಆಸೆಯಾಗಿತ್ತು.

ಆ ದಿನ ಮಹಾಕೂಟದಲ್ಲಿ ನಿರ್ಮಿತವಾದ ಗೆಲ್ಗಂಬದ ಉದ್ಘಾಟನೆ. ಈ ಸಂಬಂಧದಲ್ಲಿ ಬಡಬಗ್ಗರಿಗೆ ಅನ್ನದಾನ, ವಸ್ತ್ರದಾನಗಳೂ, ಹವನ ಹೋಮಗಳೂ, ಯಥೇಚ್ಛವಾಗಿ ನಡೆದವು. ಸ್ವಾಮಿ ಮಕುಟೇಶ್ವರನಿಗೆ ಅನೇಕ ಬಗೆಯ ವಿಶೇಷ ಪೂಜೆಗಳು ನೆರವೇರಿದವು. ಈ ಸಮಯದಲ್ಲಿ ದೇವಾಲಯದ ಧರ್ಮದರ್ಶಿಗಳು ಬಂದು ಮಂಗಳೇಶನಲ್ಲಿ, "ಪ್ರಭು, ಕೀರ್ತಿಶೇಷರಾದ ಪೂಜ್ಯ ಪುಲಿಕೇಶಿ ಸಾರ್ವಭೌಮರೂ, ಕೀರ್ತಿವರ್ಮ ಮಹಾರಾಜರೂ ದೇವಾಲಯ ಹಾಕಿಕೊಟ್ಟ ಉಂಬಳಿಯು, ದಿನದಿನಕ್ಕೆ ಸಾಮ್ರಾಜ್ಯದ ಮೂಲೆಮೂಲೆಗಳಿಂದ ಬರುತ್ತಿರುವ ಆಸ್ತಿಕ ಜನರ ವಸತಿ ಸೌಕರ್ಯಕ್ಕೂ, ಊಟೋಪಚಾರಗಳಿಗೂ, ದೇವಾಲಯದ ಖರ್ಚುವೆಚ್ಚಗಳಿಗೂ, ಸ್ವಾಮಿಯ ಅಂಗಭೋಗ, ನೈವೇದ್ಯಗಳಿಗೂ ಸಾಲ

ದಾಗಿದೆ. ಸ್ವಾಮಿಗೆ ದಿನನಿತ್ಯ ನಡೆಯಬೇಕಾದ ಕೈಂಕರ್ಯಕ್ಕೆ ಈಗ ಇರುವ ದೇವಮಾನ್ಯಗಳಿಂದ ಬರುತ್ತಿರುವ ವರಮಾನ ಸಾಲದಾಗಿದೆ. ತಾವು ಶ್ರೀ ಮಕು ಟೇಶ್ವರ ಸ್ವಾಮಿಯ ಅನುಗ್ರಹದಿಂದ ಅಖಂಡ ದಿಗ್ವಿಜಯವನ್ನು ಪಡೆದಿದ್ದೀರಿ. ತಾವು ಗೆಲ್ಗಂಬವನ್ನು ನಿರ್ಮಿಸಿದ ಈ ಶುಭ ಮುಹೂರ್ತದಲ್ಲಿ ಸ್ವಾಮಿಯ ಆರಾ ಧನೆಗೆ ಮತ್ತೆ ಕೆಲವು ಗ್ರಾಮಗಳನ್ನು ಉಂಬಳಿಯಾಗಿ ದಯಪಾಲಿಸುವ ಕೃಪೆ ಮಾಡಬೇಕು" ಎಂದು ಬಿನ್ನವಿಸಿಕೊಂಡರು. ಅವರಿಗೆ ಸೂಕ್ತ ಆಶ್ವಾಸನವಿತ್ತು ಮಹಾರಾಣಿ ದುರ್ಲಭದೇವಿಯವರೊಡನೆ ಈ ಬಗ್ಗೆ ಮಾತನಾಡಿ, ದೇವಾಲ ಯಕ್ಕೆ ಇನ್ನೂ ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಕೊಡಿಸಿ ಕೊಡಲು ಅರಮನೆಗೆ ಬಂದನು. ಮಹಾರಾಣಿಯವರೊಡನೆ ಈ ಬಗ್ಗೆ ಲೋಕಾಭಿರಾಮ ವಾಗಿ ಮಾತು ತೆಗೆಯುತ್ತಾ,

"ಮಹಾರಾಣಿಯವರೇ, ನಿಮ್ಮ ಆಜ್ಞೆಯಂತೆ ದ್ರೋಹಿಗಳಾದ ಬುದ್ಧ ರಾಜ ಹಾಗೂ ಸ್ವಾಮಿರಾಜರನ್ನು ಸೋಲಿಸಿ, ಬುದ್ಧರಾಜನನ್ನು ಸೆರೆಹಿಡಿದು ಕೊಂಡು ರಾಜಧಾನಿಗೆ ಬಂದಿದ್ದೇನೆ. ಸಾಮ್ರಾಜ್ಯದ ವಿರುದ್ಧ ದಂಗೆ ಎದ್ದವರಿಗೆ ಎಂತಹ ಶಿಕ್ಷೆ ಕಾದಿದೆ ಎಂಬುದನ್ನು ಬುದ್ಧರಾಜನ ಶಿಕ್ಷೆಯಿಂದ ಇತರರು ಪಾಠ ಕಲಿಯುವಂತೆ ಆಗಬೇಕು" ಎಂದನು.

"ನಮ್ಮ ಆಜ್ಞೆಯನ್ನು ಕಾರ್ಯಗತ ಮಾಡಿಕೊಂಡು ಬಂದುದಕ್ಕೆ ನಾವು ನಿಮಗೆ ಕೃತಜ್ಞರಾಗಿರುತ್ತೇವೆ. ಸಾಮ್ರಾಜ್ಯದ ವಿರುದ್ಧ ಕತ್ತಿ ಎತ್ತಿದವರಿಗೆ ಯಾವ ಶಿಕ್ಷೆ ವಿಧಿಸಬೇಕೆಂಬುದನ್ನು ಧರ್ಮಾವತಾರರೇ ಬಹಿರಂಗ ನ್ಯಾಯಾ ಲಯದಲ್ಲಿ ನಿರ್ಧರಿಸಲಿ. ಇದರಿಂದ ಇತರ ದ್ರೋಹಿಗಳು ಪಾಠ ಕಲಿಯುವಂತೆ ಆಗಲಿ" ಎಂದು ಹೇಳಿದರು ದುರ್ಲಭದೇವಿ.

ಇಬ್ಬರೂ ಚಣಕಾಲ ಮೌನವಾಗಿ ಕುಳಿತರು. ಮಂಗಳೇಶನು ಬಂದಿದ್ದ ಕಾರ್ಯ ಮುಗಿದರೂ ಇನ್ನೂ ಕುಳಿತಿರುವುದನ್ನು ನೋಡಿ ಇದರಲ್ಲಿ ಏನೋ ವಿಶೇಷವಿರಬೇಕೆಂದು ಮಹಾರಾಣಿಯವರು ತರ್ಕಿಸಿದರು. ಅವರು ಕುತೂಹಲ ಗೊಂಡು ಮಂಗಳೇಶನ ಮುಖ ನೋಡಿದಾಗ ಮಂಗಳೇಶನು ಹೇಳಿದ :

"ಮಹಾರಾಣಿಯವರು ನನ್ನ ಮಾತನ್ನು ಅನ್ಯಥಾ ಭಾವಿಸಬಾರದು. ತಮ್ಮಲ್ಲಿ ಒಂದು ವಿಜ್ಞಾಪನೆ ಇದೆ. ಅಪ್ಪಣೆ ಕೊಡಿಸಿದರೆ, ಬಿನ್ನವಿಸುತ್ತೇನೆ."

"ಏನು ಸಂಗತಿ, ನಿಸ್ಸಂಕೋಚದಲ್ಲಿ ತಿಳಿಸಿರಿ !"

"ಮಹಾರಾಣಿಯವರೇ, ಇಂದು ಮಹಾಕೂಟದ ಧರ್ಮದರ್ಶಿಗಳು ಬಂದು ನಮ್ಮನ್ನು ಕಂಡು ತಮ್ಮ ತೊಂದರೆಯನ್ನು ಹೇಳಿಕೊಂಡರು. ಈ ದೇವಾಲಯಕ್ಕೆ ಬಿಟ್ಟಿರುವ ಉಂಬಳಿಯಿಂದ ಅವರಿಗೆ ಸಾಕಷ್ಟು ವರಮಾನ ಬರುತ್ತಿಲ್ಲವಂತೆ. ತಮ್ಮಲ್ಲಿ ಬಿನ್ನವಿಸಿಕೊಂಡು, ಇನ್ನು ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಕೊಡಿಸಲು ನನ್ನನ್ನು ಪ್ರಾರ್ಥಿಸಿದರು. ನಿಮ್ಮ ಅವಗಾಹನೆಗೆ ಈ ವಿಷಯವನ್ನು ತಂದು, ಸ್ವಾಮಿಯ ನಿತ್ಯಕೈಂಕರ್ಯ ನಿರ್ವಿಘ್ನವಾಗಿ ನಡೆಯಲು ಇನ್ನು ಕೆಲವು ಗ್ರಾಮಗಳನ್ನೂ ಕೂಡಿಸಿಕೊಡಲು ಆಶ್ವಾಸನವಿತ್ತು ಬಂದೆ. ಪರಮ ದೈವ ಭಕ್ತರೂ ಆಸ್ತಿಕ ಶಿರೋಮಣಿಗಳೂ ಆದ ಮಹಾರಾಣಿಯವರು ದೇವಾಲಯಕ್ಕೆ ಇನ್ನು ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಅನುಗ್ರಹಿಸಬೇಕೆಂದು ಬೇಡುತ್ತೇನೆ."

"ಧರ್ಮದರ್ಶಿಗಳ ಕೋರಿಕೆಯನ್ನು ಈಡೇರಿಸಲು ನಮಗೂ ಸಂತೋಷವೆ. ಸ್ವಾಮಿಯ ಕೈಂಕರ್ಯ, ನಿತ್ಯಸೇವೆಗಳು ನಿರ್ವಿಘ್ನವಾಗಿ ನಡೆಯಬೇಕೆಂದೇ ನಮ್ಮ ಆಸೆ. ಆದರೆ...." ಎಂದು ಮುಂದೆ ಮಾತನಾಡದೆ ತಡೆದು ನಿಲ್ಲಿಸಿದರು.

"ಏಕೆ ತಾಯಿ? ಏನು ವಿಷಯ? ಸಂಕೋಚವಿಲ್ಲದೆ ಅಪ್ಪಣೆ ಕೊಡಿಸಿ...."

"ಮಂಗಳೇಶರೇ, ನಿಮ್ಮೊಡನೆ ಒಂದು ವಿಷಯವನ್ನು ಪ್ರಸ್ತಾಪಿಸಬೇಕೆಂದಿದ್ದೆ. ಅವಕಾಶ ದೊರೆತಿರಲಿಲ್ಲ. ನೀವು ಅನ್ಯಥಾ ತಿಳಿಯದೆ ನನ್ನ ಪ್ರಶ್ನೆಗೆ ಸರಳವಾದ ಉತ್ತರ ಕೊಡುತ್ತೀರಾ ?"

"ಏನು ತಾಯಿ ಕೇಳಿ !"

"ನಾವೆಲ್ಲರೂ ಎಷ್ಟೇ ಸ್ವತಂತ್ರರಾದರೂ ಸಾಮ್ರಾಜ್ಯದ ಪಾದ ಸೇವಕರು. ಈ ಸಂಗತಿ ನಿಮಗೂ ತಿಳಿದಿದೆ. ನಾವು ನಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಯಾವುದೇ ಬಗೆಯ ಲಾಭನಷ್ಟಗಳನ್ನು ಹೊಂದಿದರೂ ಅದು ಸಾಮ್ರಾಜ್ಯಕ್ಕೆ ಸೇರುತ್ತದೆ. ಜನತೆಯ ದೃಷ್ಟಿಯಲ್ಲಿ ನಮ್ಮ ನಿಷ್ಠೆ ನಿಷ್ಕಳಂಕವಾಗಿರಬೇಕಾದರೆ, ನಾವು ನಮ್ಮ ಕರ್ತವ್ಯದಲ್ಲಿ ಯಾವುದೇ ಪ್ರಲೋಭಕ್ಕೆ ಬೀಳದೆ, ನಿಷ್ಠುರವಾಗಿರಬೇಕಾಗುತ್ತದೆ...."

"ನೀವು ಯಾವ ವಿಷಯವನ್ನು ಕುರಿತು ಪ್ರಶ್ನಿಸುತ್ತಿದ್ದೀರಿ ತಿಳಿಯದಾಗಿದೆ ಮಹಾರಾಣಿಯವರೇ ! ನನ್ನಿಂದ ಯಾವ ಪ್ರಸಂಗದಲ್ಲಿ ಕರ್ತವ್ಯಲೋಪವಾಗಿದೆ, ನಿಷ್ಠೆ ತಪ್ಪಿದೆ ಎಂಬುದನ್ನು ನೇರ ಅಪ್ಪಣೆ ಕೊಡಿಸಬೇಕು !"

"ನಾನು ಬುದ್ಧರಾಜ, ಸ್ವಾಮಿರಾಜರ ಮೇಲೆ ನಡೆದ ದಂಡಯಾತ್ರೆಯಲ್ಲಿ ದೊರೆತ ಸೂರೆಯ ವಿಷಯ ಹೇಳುತ್ತಿದ್ದೇನೆ. ರೇವತಿ ದ್ವೀಪದಲ್ಲಿ ಅನೇಕ ಹೇರುಗಳಷ್ಟು ಚಿನ್ನದ ನಾಣ್ಯಗಳೂ, ಮುತ್ತುರತ್ನದ ಒಡವೆಗಳೂ, ಅಧಿಕ ಸಂಖ್ಯೆಯಲ್ಲಿ ಆನೆ ಕುದುರೆಗಳೂ, ಇನ್ನಿತರ ಯುದ್ಧ ಸಾಮಗ್ರಿಗಳೂ ದೊರಕಿತೆಂದು ಕೇಳಿದ್ದೇನೆ. ಈ ಸೂರೆಯನ್ನು ನಾವು ರಾಜಭಂಡಾರಕ್ಕೆ ಸೇರಿಸಬಹುದೆಂದು ನಿರೀಕ್ಷಿಸಿದ್ದೆ. ಆದರೆ....ಯುದ್ಧರಂಗದಲ್ಲಿ ಪಡೆದ ಯಾವ ವಸ್ತುವೂ ರಾಜಭಂಡಾರಕ್ಕೆ ಸೇರಿಸಿದಂತೆ ಕಾಣುವುದಿಲ್ಲ. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕೊಟ್ಟು ಉಪಕಾರ ಮಾಡುತ್ತೀರಾ ?"

"ನಮಗೆ ರೇವತಿ ದ್ವೀಪದ ಶತ್ರು ಶಿಬಿರದಲ್ಲಿ ಧನಕನಕ ವಸ್ತುಗಳು ಸೂರೆಯಾಗಿ ದೊರೆಯಿತೇನೋ ನಿಜ. ಆದರೆ ತಮ್ಮ ಗಮನಕ್ಕೆ ತರುವಷ್ಟು ಅನರ್ಘ್ಯವಾದುದೇನೂ ಇಲ್ಲ–ಅಂತಲೇ ಅವುಗಳನ್ನು ವಿಜಯಕ್ಕೆ ಕಾರಣರಾದ ಸೈನಿಕರಿಗೆ ಮುಕ್ತಹಸ್ತದಿಂದ ಹಂಚಿಬಿಟ್ಟೆ. ರಾಜಧಾನಿಗೆ ನಾನು ಬರಿಗೈಯಲ್ಲಿ ಬಂದುದರಿಂದ, ರಾಜಭಂಡಾರಕ್ಕೆ ಏನನ್ನೂ ಸೇರಿಸಲಾಗಲಿಲ್ಲ. ನನ್ನಿಂದ ಅಪಚಾರವಾಗಿದ್ದರೆ ಕ್ಷಮಿಸಬೇಕು."

"ಹಾಗಾದರೆ ರಾಜಬೊಕ್ಕಸದಲ್ಲಿ ಸೇರಿಸಲು ಸೂರೆಯಲ್ಲಿ ಏನೂ ಉಳಿಯಲಿಲ್ಲವೆ ?"

"ಒಂದು ಗದ್ಯಾಣವೂ ಉಳಿಯಲಿಲ್ಲ."

"ಆಶ್ಚರ್ಯ !"

"ಏಕೆ ತಾಯಿ ? ನಿಮಗೆ ನನ್ನ ಮಾತಿನಲ್ಲಿ ನಂಬಿಕೆ ಇಲ್ಲವೆ ?"

"ಇದು ನಂಬಿಕೆಯ ಪ್ರಶ್ನೆಯಲ್ಲ ಮಂಗಳೇಶರೆ, ಆದರೆ ನನಗೆ ಬಂದ ಸುದ್ದಿಯ ಆಧಾರದ ಮೇಲೆ ನಿಮ್ಮನ್ನು ಕೇಳಿದೆ ಅಷ್ಟೆ. ಅವರು ಹೇಳಿರುವ ಸುದ್ದಿಯು ಆಧಾರರಹಿತವಾಗಿರಬಹುದು ಇಲ್ಲವೇ ಉತ್ಪ್ರೇಕ್ಷೆಯಾಗಿರಬಹುದು. ಇವುಗಳಲ್ಲಿ ಯಾವುದು ಸತ್ಯಸಂಗತಿ ಎಂದು ತಿಳಿಯಲು ಕೇಳಿದೆ, ಅಷ್ಟೆ."

"ನಿಮಗೆ ಯಾರು ಏನು ಸುದ್ದಿ ತಿಳಿಸಿದ್ದಾರೋ ತಿಳಿಯಬಹುದೇ ?"

"ಅವರ ಹೆಸರನ್ನು ಬಹಿರಂಗಗೊಳಿಸಲಾರೆ. ಆದರೆ ಅವರೂ ಸಾಮ್ರಾಜ್ಯ ನಿಷ್ಠೆಗೆ ನಿಮ್ಮಷ್ಟೇ ಹೆಸರಾದವರು. ತುಂಬಾ ಜವಾಬ್ದಾರಿಯುಳ್ಳವರು. ಅವರ ಹೇಳಿಕೆಯಂತೆ ಶತ್ರುಶಿಬಿರದಲ್ಲಿ ನಮಗೆ ಹೇರಳವಾಗಿ ಧನಕನಕ ವಸ್ತುಗಳು

ಸೂರೆಯ ರೂಪದಲ್ಲಿ ದೊರಕಿತಂತೆ. ಇದರಲ್ಲಿ ಒಂದು ಭಾಗವನ್ನು ಸೈನಿಕರಿಗೆ ಹಂಚಿದರೂ ಇನ್ನೂ ಅಧಿಕಾಂಶದ ಸೂರೆ ಉಳಿಯಬೇಕಿತ್ತಂತೆ. ಅದೇನಾಯಿ ತೆಂದು ನಿಮ್ಮನ್ನು ಕೇಳಿದೆ, ಅಷ್ಟೆ!"

"ಮಹಾರಾಣಿಯವರೇ, ನಿಮಗೆ ಯಾರೋ ನನಗಾಗದ ವ್ಯಕ್ತಿಗಳು ಸುಳ್ಳು ಸುದ್ದಿ ಕೊಟ್ಟದ್ದಾರೆ. ಅವರ ಮಾತು ಸತ್ಯದೂರವಾಗಿದೆ. ನನ್ನ ಮಾತನ್ನು ನಂಬಿರಿ. ಮಂಗಳೇಶನು ಇದುವರೆಗೆ ಯಾವ ವಿಷಯದಲ್ಲಾದರೂ ಸಟೆಯಾಡಿದ್ದನೆ ?"

"ನನಗೆ ನಿಮ್ಮ ಮಾತಿನಲ್ಲಿ ಅಪನಂಬಿಕೆ ಇಲ್ಲ. ಈ ಸುದ್ದಿ ಕೇವಲ ಹಾರಿಕೆಯ ಸುದ್ದಿಯಾಗಿರಲಾರದೆಂದು ನಿಮ್ಮನ್ನು ಕೇಳಿದೆ. ನೀವು ಹೇಳಿದ ಮೇಲೆ ಇದು ಯಥಾರ್ಥವಲ್ಲವೆಂದು ಮನದಟ್ಟಾಯಿತು. ಇನ್ನು ಆ ವಿಷಯ ಬಿಡಿ. ಅದನ್ನು ಏಕೆ ಪ್ರಸ್ತಾಪಿಸಿದೆನೆಂದರೆ, ಸೂರೆಯಲ್ಲಿ ಧನಕನಕ ವಸ್ತು ಗಳೇನಾದರೂ ಉಳಿದಿದ್ದರೆ, ಆ ಅಪೂರ್ವ ವಸ್ತುಗಳನ್ನು ಸ್ವಾಮಿಗೆ ಅರ್ಪಿ ಸೋಣವೆಂದು. ಈಗ ಸೂರೆಯಲ್ಲಿ ಕುರುಡು ಕವಡೆಯೂ ಉಳಿಯಲಿಲ್ಲವೆಂದ ಮೇಲೆ, ರಾಜಬೊಕ್ಕಸದಿಂದಲೇ, ಸ್ವಾಮಿ ಮಕುಟೇಶ್ವರನ ದಿವ್ಯಾಭರಣಕ್ಕೆ ಬೇಕಾಗುವ ಬೆಳ್ಳಿ ಬಂಗಾರವನ್ನೂ ಮುತ್ತು ರತ್ನಗಳನ್ನೂ ತೆಗೆಸಿಕೊಡಿ. ಇದರ ಜೊತೆಗೆ ಸ್ವಾಮಿಯ ನಿತ್ಯಸೇವೆಗಾಗಿ ಶ್ರೀಯಂಬಾಟಕ ವ್ರಿಹಿಮುಖ ಗ್ರಾಮ, ಕಿಸುವೊಳಲು, ಕೆಂದೂರು ನಂದಿಗ್ರಾಮಗಳನ್ನು ದೇವಮಾನ್ಯವಾಗಿ ಹಾಕಿಕೊಟ್ಟು, ಈ ಬಗ್ಗೆ ಶಾಸನ ಬರೆಸಿರಿ"

ಎಂದು ಮಹಾರಾಣಿಯವರು ಹೇಳಿ ಮಂಗಳೇಶನ ಮುಖವನ್ನು ತೀಕ್ಷ್ಣ ವಾಗಿ ನೋಡಿದರು. ಮಂಗಳೇಶನ ಮುಖ ಏಕೋ ಬಿಳಚಿಕೊಂಡಿತ್ತು. ಅವನು ಮರ್ದಾನ ತೆಗೆದುಕೊಂಡವನಂತೆ ಅಲ್ಲಿಂದ ಹೊರಟುಹೋದನು.

೪

ಇಂದು ವಿಶೇಷ ನ್ಯಾಯಾಲಯದಲ್ಲಿ ರಾಜದ್ರೋಹಿಯಾದ ಬುದ್ಧರಾಜನ ಬಹಿರಂಗ ವಿಚಾರಣೆ. ರಾಜಪ್ರತಿನಿಧಿಯಾದ ಮಂಗಳೇಶನೇ ನ್ಯಾಯಪೀಠದಲ್ಲಿ

ಮಂಡಿಸಿದ್ದನು. ರಾಜಧಾನಿಯ ಪ್ರತಿಷ್ಠಿತ ವ್ಯಕ್ತಿಗಳೂ, ಆಸ್ಥಾನದ ಪ್ರಮುಖರೂ, ಅರಮನೆಯ ಹಿರಿಯರೂ ವಿಚಾರಣೆಯನ್ನು ನೋಡಲು ಕೌತುಕದಿಂದ ನೆರೆದಿದ್ದರು. ನ್ಯಾಯ ತೀರ್ಮಾನದ ವೈಖರಿಯನ್ನು ನೋಡಲು ಪುಲಿಕೇಶಿಯು ತನಗೆಂದೇ ರಚಿಸಿದ ಉನ್ನತಾಸನದಲ್ಲಿ ಮಂಡಿಸಿದ್ದನು. ನ್ಯಾಯಪೀಠದ ಹಿಂದಿನ ಉಪ್ಪರಿಗೆಯಲ್ಲಿ ಮಹಾರಾಣಿ ದುರ್ಲಭದೇವಿಯವರು ನ್ಯಾಯ ತೀರ್ಮಾನದಲ್ಲಿ ಯಾವುದೇ ಅನ್ಯಾಯ ನಡೆಯದಂತೆ ನೋಡಿಕೊಳ್ಳಲು ಕುಳಿತಿದ್ದರು. ನಿಶ್ಚಿತ ವೇಳೆಗೆ ಸರಿಯಾಗಿ ಸೆರೆಯಾಳನ್ನು ಕರೆತಂದು ನ್ಯಾಯಾಲಯದಲ್ಲಿ ನಿಲ್ಲಿಸಿದರು. ಅವನ ರಕ್ಷಣೆಗೆ ಬಿಚ್ಚುಕತ್ತಿಯ ಸೈನಿಕರು ಪಹರೆ ಕಾಯುತ್ತಾ ನಿಂತರು. ಮಹಾಪ್ರಧಾನ ಸಮಂತಭದ್ರನು ಎದ್ದುನಿಂತು, ಗಂಭೀರವಾದ ಧ್ವನಿಯಲ್ಲಿ ಬುದ್ಧರಾಜನ ವಿದ್ರೋಹವನ್ನೆಲ್ಲಾ ಸಭೆಗೆ ಕೂಲಂಕಷವಾಗಿ ನಿರೂಪಿಸಿದನು. ಕಡೆಯಲ್ಲಿ,

"ಈ ಬಗ್ಗೆ ನೀವು ಹೇಳುವುದೇನಾದರೂ ಇದ್ದರೆ, ನಿಸ್ಸಂಕೋಚವಾಗಿ ನ್ಯಾಯಪೀಠದ ಮುಂದೆ ಬಿನ್ನವಿಸಿಕೊಳ್ಳಬಹುದು" ಎಂದು ಹೇಳಿ ತನ್ನ ಆಸನದಲ್ಲಿ ಕುಳಿತುಕೊಂಡನು.

ಬುದ್ಧರಾಜನು ಎದ್ದು ನಿಂತು, ಸಭಿಕರನ್ನೊಮ್ಮೆ, ನ್ಯಾಯಪೀಠದಲ್ಲಿ ಮಂಡಿಸಿದ್ದ ಮಂಗಳೇಶನನ್ನೊಮ್ಮೆ ದಿಟ್ಟಿಸಿನೋಡಿ, ಕಂಚುಕಂಠದಲ್ಲಿ ಹೇಳಿದ :

"ಪ್ರಧಾನ ಅಮಾತ್ಯರು, ನಾನು ಹೇಳುವುದು ಏನಾದರೂ ಇದ್ದರೆ ಬಿನ್ನವಿಸಿಕೊಳ್ಳಬಹುದೆಂದು ಅಪ್ಪಣೆ ಕೊಡಿಸಿದ್ದಾರೆ. ಸರ್ವಜ್ಞರಾದ ಪ್ರಭುಗಳಿಗೆ ನಾನು ಹೇಳುವುದು ಏನೂ ಇಲ್ಲ. ನಾನು ಭಯಂಕರ ರಾಜದ್ರೋಹವೆಸಗಿದ್ದೇನೆ. ವಂಚಕರ ಸವಿಮಾತುಗಳಿಗೆ ಮರುಳಾಗಿ, ಸಾಮ್ರಾಟರ ವಿರುದ್ಧ ಕತ್ತಿ ಕಟ್ಟಿದ್ದೇನೆ. ಸಾಮ್ರಾಜ್ಯದ ಉಪ್ಪುತಿಂದು, ಸಾಮ್ರಾಜ್ಯಕ್ಕೆ ದ್ರೋಹ ಬಗೆದಿದ್ದೇನೆ. ನನ್ನಂತಹ ದ್ರೋಹಿ ಇನ್ನು ಬದುಕಿರಬಾರದು ! ಪ್ರಭುಗಳು ಯಾವುದೇ ವಿಚಾರಣೆ ಇಲ್ಲದೆ ನನ್ನ ದ್ರೋಹಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು. ಅದನ್ನು ನಾನು ಸಂತೋಷದಿಂದ ಅನುಭವಿಸುತ್ತೇನೆ."

"ನಿಮ್ಮ ದ್ರೋಹಕ್ಕೆ ಶಿಕ್ಷೆ ಮರಣದಂಡನೆ—ಎಂಬುದು ತಿಳಿದಿದೆಯೇ ?"

"ತಿಳಿದಿದೆ ಪ್ರಭು !"

"ಆದರೂ ತಪ್ಪು ಒಪ್ಪಿಕೊಳ್ಳುತ್ತೀರಾ ?"

"ಹೌದು !"

ಈ ಮಾತು ಕೇಳಿ ಸಭೆಯಲ್ಲಿ ವಿದ್ಯುತ್ ಸಂಚಾರವಾಯಿತು. ಎಲ್ಲರೂ ಬುದ್ಧರಾಜನು ತಾನು ನಿರಪರಾಧಿ ಎಂದು ಹೇಳಿಕೊಂಡು, ಪ್ರಾಣಭಿಕ್ಷೆ ಬೇಡುವ ನೆಂದು ಬಗೆದಿದ್ದರು. ಆದರೆ ಅವನು ಧೀರನಂತೆ ಮರಣದಂಡನೆಯನ್ನು ಸ್ವಾಗತಿ ಸಿದ್ದನು. ಹಾಗಾದರೆ ಇಂತಹ ಧೀರ, ಸ್ವಾಮಿಭಕ್ತನು ಸಾಮ್ರಾಜ್ಯಕ್ಕೆ ಏಕೆ ದ್ರೋಹ ಬಗೆದನು ? ಎಂದು ಎಲ್ಲರಿಗೂ ಅಚ್ಚರಿಯಾಯಿತು.

"ಹಾಗಾದರೆ, ನಿಮ್ಮ ದ್ರೋಹ ಎಂತಹದೆಂದು ತಿಳಿದೂ ತಿಳಿದೂ, ನೀವೇಕೆ ಸ್ವಾಮಿರಾಜನೊಡನೆ ಸೇರಿಕೊಂಡು, ಸಾಮ್ರಾಜ್ಯದ ವಿರುದ್ಧ ದಂಗೆ ಎದ್ದಿರಿ ? ಆಗ ಈ ವಿವೇಕವೆಲ್ಲಿ ಹೋಗಿತ್ತು?" ಮಂಗಳೇಶನು ಕೇಳಿದನು.

ಈ ಮಾತಿಗೆ ಬುದ್ಧರಾಜನು.

"ಪ್ರಭು, ನಾನು ಆ ದ್ರೋಹಿ ಸ್ವಾಮಿರಾಜನ ಮಾತು ಕೇಳಿ ಕೆಟ್ಟೆ. ಅವನು ಒಡ್ಡಿದ ಪ್ರಲೋಭಕ್ಕೆ ಬಿದ್ದು, ಸಾಮ್ರಾಜ್ಯದ ವಿರುದ್ಧ ಕತ್ತಿ ಕಟ್ಟಿ, ದ್ರೋಹ ಬಗೆದೆ ! ಈಗ ಅದಕ್ಕಾಗಿ ಪಶ್ಚಾತ್ತಾಪವಾಗಿದೆ !" ಎಂದು ಹೇಳಿದನು.

"ನಿಮ್ಮ ಹಿರಿಯರು ಸ್ವಾಮಿನಿಷ್ಠೆಗೆ ಹೆಸರಾದವರು. ನಿಮ್ಮ ತಂದೆ ಶಂಕರಗಣರು ಸಾಮ್ರಾಜ್ಯದ ಹಿರಿಯ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟಿದ್ದರು. ಅಂತಹವರ ಮಕ್ಕಳಾಗಿ ನೀವೇಕೆ ಸಾಮ್ರಾಜ್ಯದ ವಿರುದ್ಧ ದಂಗೆ ಎದ್ದಿರಿ ? ಸಾಮ್ರಾಟರು ನಿಮಗೆ ಮಾಡಿದ ಅಪಚಾರವಾದರೂ ಏನು ?"

"ಪ್ರಭು, ಅಧಿಕಾರಲೋಭದಿಂದ ಮಿಡುಕಿ ನಾನು ಅನ್ನವಿಟ್ಟ ಸಾಮ್ರಾಟ ರಿಗೆ ದ್ರೋಹವೆನಿಸಿದೆ. ಆ ನೀಚ ಸ್ವಾಮಿರಾಜನ ಸವಿಮಾತುಗಳಿಗೆ ಮರುಳಾಗಿ, ದುಡುಕಿದೆ. ಈಗ ಚಾಲುಕ್ಯ ಸಿಂಹಾಸನದಲ್ಲಿ ಸಮರ್ಥರಾದ ದೊರೆಗಳು ಇಲ್ಲ ವೆಂದೂ, ಸಿಂಹಾಸನದ ಸಲುವಾಗಿ ನಿಮಗೂ ಪುಲಿಕೇಶಿಯವರಿಗೂ ಹೋರಾಟ ನಡೆಯುತ್ತದೆ ಎಂದೂ, ಈ ಸಮಯದಲ್ಲಿ ನಾವು ದಂಗೆ ಎದ್ದು ರಾಜ್ಯಕ್ಷೋಭೆ ಯುಂಟುಮಾಡಿದರೆ, ಸ್ವತಂತ್ರ ಸಾಮ್ರಾಟರಾಗಿ ಮೆರೆಯಬಹುದೆಂದೂ ಆ ದ್ರೋಹಿಯು ಒಡ್ಡಿದ ಪ್ರಲೋಭಕ್ಕೆ ನಾನು ಬಿದ್ದೆ. ನನ್ನ ದುರ್ಬಲ ಮನಸ್ಸು ಸ್ವತಂತ್ರ ಕಾಲಚೂರ್ಯ ಸಾಮ್ರಾಜ್ಯ ಕಟ್ಟುವ ಕನಸನ್ನು ಕಟ್ಟಿತು. ನಾನು ಅವನಿಗೆ ಮನಸೋತೆ. ಅವನೊಡನೆ ಸೇರಿ, ಸಾಮ್ರಾಜ್ಯದ ಮೇಲೆ ದಂಗೆ ಎದ್ದು, ಸಾಮ್ರಾಜ್ಯಕ್ಕೆ ಸೇರಿದ ರೇವತಿ ದ್ವೀಪವನ್ನು ವಶಪಡಿಸಿಕೊಂಡೆ. ಆದರೆ

ಆ ದ್ರೋಹಿಯು ಚಾಲುಕ್ಯ ಸೈನ್ಯ ನಮ್ಮ ಮೇಲೆ ದಂಡೆತ್ತಿ ಬಂದಕೂಡಲೇ ನನ್ನನ್ನು ಕೈಬಿಟ್ಟು ತಲೆತಪ್ಪಿಸಿಕೊಳ್ಳಲೆತ್ನಿಸಿದ. ಆದರೆ ಅವನು ಯುದ್ಧದಲ್ಲಿ ಮಡಿದು ವೀರಸ್ವರ್ಗಕ್ಕೇರಿದ. ನನ್ನ ನೀಚತನ ಅದಕ್ಕೂ ಘೋರವಾಗಿದ್ದುದರಿಂದ, ನಾನು ಶತ್ರುಗಳಿಗೆ ಸೆರೆಸಿಕ್ಕಿ, ಇಂದು ನಿಮ್ಮ ಮುಂದೆ ನಿಲ್ಲಬೇಕಾಯಿತು. ಪ್ರಭುಗಳು ನನ್ನ ದೇಹವನ್ನು ತುಂಡರಿಸಿ ಕೆಡಹಿ, ನಾಯಿನರಿಗಳ ಪಾಲು ಮಾಡಿದರೂ, ನನಗೆ ಸಮ್ಮತವೇ. ನನ್ನ ದ್ರೋಹಕ್ಕೆ ಯಾವ ಶಿಕ್ಷೆಯನ್ನು ವಿಧಿಸಿದರೂ ಸಾಲದು !" ಎಂದು ಹೇಳಿ ಪಶ್ಚಾತ್ತಾಪದ ಕಂಬನಿ ಸುರಿಸಿದನು.

ಇದನ್ನು ಕಂಡು, ಆಸ್ಥಾನಿಕರ ಹೃದಯದಲ್ಲಿ ಪ್ರಚಂಡ ಕ್ಷೋಭೆಯುಂಟಾಯಿತು. ಬುದ್ಧರಾಜನ ವಿಷಯದಲ್ಲಿ ಅವರ ಮನಸ್ಸು ಬೆಣ್ಣೆಯಂತೆ ಕರಗಿತು. ಎಲ್ಲರೂ ಅವನ ವಿಷಯದಲ್ಲಿ ಅನುಕಂಪ ವ್ಯಕ್ತಪಡಿಸಿದರು. ಅವರಿಗೆ ಅವನು ಕ್ಷಮಾರ್ಹನೆಂದೇ ತೋರಿದನು. ಆದರೂ ಅವರು ತೀರ್ಪಿಗಾಗಿ ನ್ಯಾಯಪೀಠವನ್ನು ನೋಡುತ್ತಾ ಕುಳಿತರು.

ಮಂಗಳೇಶನು ಧರ್ಮಾವತಾರರಾಗಿ ಕುಳಿತ ಗಣ್ಯವ್ಯಕ್ತಿಗಳ ಕಡೆ ನೋಡಿದನು. ಅವರು ಬುದ್ಧರಾಜನ ದ್ರೋಹ ಶಿಕ್ಷಾರ್ಹವಾದ ಅಪರಾಧವಾಗಿದ್ದರೂ, ಅವನು ತನ್ನ ಅಪರಾಧಕ್ಕಾಗಿ ಪಶ್ಚಾತ್ತಾಪಪಟ್ಟಿರುವುದರಿಂದ ಅವನು ಕ್ಷಮಾರ್ಹನಾದ ವ್ಯಕ್ತಿ ಎಂದು ಒಮ್ಮತದಲ್ಲಿ ತೀರ್ಪಿತ್ತರು. ಇದನ್ನು ಕೇಳಿ ಸಭಿಕರು ಸರಿಯಾದ ನ್ಯಾಯತೀರ್ಮಾನವೆಂದು ಹರ್ಷಿಸಿದರು. ಆದರೆ ನ್ಯಾಯಪೀಠದಲ್ಲಿ ಕುಳಿತ ಮಂಗಳೇಶನಿಗೆ ಮಾತ್ರ ಧರ್ಮಾವತಾರರ ತೀರ್ಪು ಹಿಡಿಸಲಿಲ್ಲ.

ದ್ರೋಹಿಯಾದ ಬುದ್ಧರಾಜನು ಅಪರಾಧ ಮಾಡಿಯೂ ಶಿಕ್ಷೆಯಿಂದ ತಪ್ಪಿಸಿಕೊಂಡು ಹೋಗುವುದು ಅವನಿಗೆ ಪ್ರಿಯವಾಗಲಿಲ್ಲ. ದಂಗೆ ಎದ್ದ ರಾಜದ್ರೋಹಿಯನ್ನು ಕ್ಷಮಿಸಿಬಿಟ್ಟರೆ ಇದರಿಂದ ಇತರ ಸಾಮಂತರು ಪಾಠ ಕಲಿಯುವ ಬದಲು ಸಾಮ್ರಾಟರ ಬಗ್ಗೆ ಉಪೇಕ್ಷೆತಾಳುವರೆಂದು ಹೆದರಿದನು. ಅವನು ಬುದ್ಧರಾಜನಿಗಾದ ಶಿಕ್ಷೆಯಿಂದ ಇತರರು ಪಾಠ ಕಲಿಯಬೇಕೆಂದು ಆಶಿಸಿದ್ದನು. ಅಂತಲೇ ಅಪರಾಧಿಯಾದ ಬುದ್ಧರಾಜನಿಗೆ ಮರಣದಂಡನೆಯ ಶಿಕ್ಷೆಯನ್ನು ವಿಧಿಸಿ, ನ್ಯಾಯಮಂದಿರದಿಂದ ಹೊರಬಿದ್ದನು.

ಸಭೆಯಲ್ಲಿ ಈ ತೀರ್ಮಾನ ಕೇಳಿ ಹಾಹಾಕಾರ ಉಂಟಾಯಿತು. ಎಲ್ಲರೂ 'ಅನ್ಯಾಯ ! ಅನ್ಯಾಯ !!' ಎಂದು ಕೂಗಿಕೊಂಡರು. ಪಶ್ಚಾತ್ತಾಪದಿಂದ

ದಗ್ಧನಾದ ಅಪರಾಧಿಗೆ ಮರಣದಂಡನೆಯ ಶಿಕ್ಷೆ ಅನ್ಯಾಯವೆಂದು ಅವರು ಉದ್ಗಾರ ತೆಗೆದರು. ಸಭೆಯಲ್ಲಿ ಗದ್ದಲವೆದ್ದಿತು. ಆದರೆ ಇದನ್ನೆಲ್ಲಾ ನೋಡಲು ಮಂಗಳೇಶನು ಸಭೆಯಲ್ಲಿ ಇರಲಿಲ್ಲ. ಅವನು ತನ್ನ ತೀರ್ಮಾನವನ್ನು ಕಾರ್ಯಗತಗೊಳಿಸಲು, ತನ್ನ ನಂಬುಗೆಯ ಸೇವಕನಾದ ರಾಹಪ್ಪಯ್ಯನಿಗೆ ಆಜ್ಞೆ ಮಾಡಿ ಸಭಾತ್ಯಾಗ ಮಾಡಿದ್ದನು.

ರಾಹಪ್ಪಯ್ಯನ ಸೈನಿಕರು ಅಪರಾಧಿಯನ್ನು ವಧಾಸ್ಥಾನಕ್ಕೆ ಕರೆದೊಯ್ಯಲು ಹೊರಟರು.

ಜನ ಅವರನ್ನು ತಡೆದರು. ಅನ್ಯಾಯದ ತೀರ್ಪಿಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ಧರ್ಮಾವತಾರರಾಗಿ ಕುಳಿತ ಗಣ್ಯವ್ಯಕ್ತಿಗಳೇ ಈ ಮರಣದಂಡನೆಯನ್ನು ಅನ್ಯಾಯವೆಂದು ಒಕ್ಕೊರಲಿನಿಂದ ಕೂಗಿ ಹೇಳುತ್ತಿದ್ದರು. ಇದನ್ನೆಲ್ಲಾ ನೋಡಿ, ಪ್ರಧಾನಮಂತ್ರಿ ಸಮಂತಭದ್ರನಿಗೆ ಗಾಬರಿಯಾಯಿತು. ನ್ಯಾಯಾಲಯದಲ್ಲಿನ ಪರಿಸ್ಥಿತಿ ಹದಗೆಡುವ ಮುನ್ನ ಅದನ್ನು ಹತೋಟಿಗೆ ತರಬೇಕೆಂದು ಅವನು ಪುಲಿಕೇಶಿಯ ಕಡೆ ನೋಡಿದ. ಅದರ ಇಂಗಿತವರಿತುಕೊಂಡು ಪುಲಿಕೇಶಿಯು ಎದ್ದು ನಿಂತು ದೊಡ್ಡ ಧ್ವನಿಯಲ್ಲಿ,

"ಸನ್ಮಾನ್ಯ ಸಭಾಸದರೇ, ಇಂದಿನ ನ್ಯಾಯತೀರ್ಮಾನ ನಿಮ್ಮ ಮನಸ್ಸಿಗೆ ಬರಲಿಲ್ಲವೆಂಬುದು ನಿಮ್ಮ ಪ್ರತಿಭಟನೆಯಿಂದ ನನಗೆ ತಿಳಿದಿದೆ. ಇಂದು ಬುದ್ಧರಾಜರಿಗೆ ವಿಧಿಸಿದ ಮರಣದಂಡನೆ ಉಗ್ರವಾದ ಶಿಕ್ಷೆ ಎಂದು ನನಗೂ ಮನವರಿಕೆಯಾಗಿದೆ. ನಾನು ಕೂಡಲೇ ಹೋಗಿ ಪ್ರಭುಗಳಾದ ಮಂಗಳೇಶರನ್ನು ಕಂಡು, ಈ ಬಗ್ಗೆ ಮಾತನಾಡಿ, ಅಪರಾಧಿಯಾದ ಬುದ್ಧರಾಜರಿಗೆ ಕ್ಷಮಾದಾನ ಪಡೆದು ಬರುತ್ತೇನೆ. ನೀವು ಗದ್ದಲಮಾಡಬಾರದು. ನ್ಯಾಯಪೀಠದಿಂದ, ತಿಳಿದೋ ತಿಳಿಯದೆಯೋ ಯಾವುದೇ ಬಗೆಯ ಅನ್ಯಾಯ ನಡೆಯದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ರಾಜನಿಷ್ಠಸೇವಕನ ಕರ್ತವ್ಯ. ನೀವು ಈ ಬಗ್ಗೆ ನಿಶ್ಚಿಂತೆಯಿಂದಿರಿ !" ಎಂದು ಆಶ್ವಾಸನೆಯನ್ನಿತ್ತು,

"ರಾಹಪ್ಪಯ್ಯನವರೇ, ಬುದ್ಧರಾಜರು ಕ್ಷಮಾರ್ಹರು. ಅವರನ್ನು ವಧಾಸ್ಥಾನಕ್ಕೆ ಕೊಂಡೊಯ್ಯಬಾರದು !" ಎಂದು ಆಜ್ಞೆ ಮಾಡಿದನು.

"ಪ್ರಭು ! ನಾನು ಸಾಮ್ರಾಟರ ಪಾದಸೇವಕ. ಪ್ರಭುಗಳು ನ್ಯಾಯಪೀಠದಿಂದ ಅಪರಾಧಿಗೆ ಮರಣದಂಡನೆಯನ್ನು ವಿಧಿಸಿದ್ದಾರೆ. ಅದನ್ನು ಕಾರ್ಯ

ಗತಗೊಳಿಸುವುದು ನನ್ನ ಕರ್ತವ್ಯವಾಗಿದೆ!"

"ಅನ್ಯಾಯದ ತೀರ್ಮಾನವನ್ನು ತಡೆಯುವುದು ನ್ಯಾಯಪಕ್ಷಪಾತಿಗಳಾದ ನಮ್ಮ ಕರ್ತವ್ಯವೂ ಆಗಿದೆ! ಧರ್ಮಾವತಾರರು ಒಮ್ಮತದಲ್ಲಿ ಅಪರಾಧಿಯು ಕ್ಷಮಾರ್ಹನೆಂದು ತೀರ್ಪಿತ್ತಿದ್ದಾರೆ. ಅವರ ತೀರ್ಪನ್ನು ಉಲ್ಲಂಘಿಸುವ ಹಕ್ಕು ಸಾಮ್ರಾಟರಿಗೆ ಇಲ್ಲ. ನೀವು ಸಾಮ್ರಾಟರ ಅನ್ಯಾಯದ ತೀರ್ಪನ್ನು ಕಾರ್ಯ ಗತಮಾಡಕೂಡದು, ಕಾರ್ಯಗತ ಮಾಡಲಾಗದು!" ನಿರ್ಧಾರದ ಧ್ವನಿಯಲ್ಲಿ ಪುಲಿಕೇಶಿ ಹೇಳಿದ.

"ಈ ಧರ್ಮಸೂಕ್ಷ್ಮಗಳು ನನಗೆ ತಿಳಿಯದು ಪ್ರಭು! ನಾವು ಹೇಳಿ ಕೇಳಿ ರಾಜಸೇವಕರು. ಸಾಮ್ರಾಟರು ಹೇಗೆ ಆಜ್ಞೆ ಮಾಡುತ್ತಾರೋ ಅದರಂತೆ ನಡೆಯತಕ್ಕವರು. ನ್ಯಾಯಾನ್ಯಾಯವನ್ನು ವಿಮರ್ಶಿಸುವ ಅಧಿಕಾರ ನಮಗೆ ಇಲ್ಲ. ತಾವು ಸಾಮ್ರಾಟರನ್ನು ಕಂಡು, ಅವರಿಂದ ಅಪರಾಧಿಗೆ ಕ್ಷಮಾದಾನ ದೊರಕಿಸಿಕೊಂಡು ಬರುವವರಿಗೆ, ಶಿಕ್ಷೆಯನ್ನು ತಡೆಹಿಡಿಯುತ್ತೇನೆ. ಇದಕ್ಕೂ ಹೆಚ್ಚಿಗೆ ಸದ್ಯದ ಪ್ರಸಂಗದಲ್ಲಿ ನಾನು ಏನೂ ಮಾಡಲಾರೆ!" ಎಂದ ರಾಹಪ್ಪಯ್ಯ.

"ನೀವು ಇಷ್ಟು ಉಪಕಾರ ಮಾಡಿದರೆ ನಿಮಗೆ ನಾವು ಕೃತಜ್ಞರಾಗಿರುತ್ತೇವೆ. ಆದರೆ ನಿಮ್ಮ ಮಾತನ್ನು ನಂಬುವುದು ಹೇಗೆ?"

"ಶ್ರೀಮಕುಟೇಶ್ವರನ ಆಣೆಗೂ ನಿಮಗೆ ಕೊಟ್ಟಿರುವ ವಚನವನ್ನು ಮುರಿಯಲಾರೆ!"

"ಹಾಗಿದ್ದರೆ, ತುಂಬಾ ಸಂತೋಷ!" ಎಂದು ಹೇಳಿ ಪುಲಿಕೇಶಿಯು ಸಮಂತಭದ್ರನೊಡನೆ ಮಂಗಳೇಶನು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಚಂದ್ರಶಾಲೆಗೆ ಹೊರಟನು. ದಾರಿಯಲ್ಲಿ ಸಮಂತಭದ್ರನಿಗೆ ಮಂಗಳೇಶನ ಒಂದುವೇಳೆ ಪುಲಿಕೇಶಿಯ ಮಾತು ಕೇಳದಿದ್ದರೆ? ತಾನು ಮಾಡಿದ್ದ ತೀರ್ಪು ಕಾರ್ಯಗತವಾಗಲೇಬೇಕೆಂದು ಹಠಹಿಡಿದರೆ? ಪರಿಸ್ಥಿತಿ ವಿಪರೀತಕ್ಕಿಟ್ಟುಕೊಳ್ಳುವುದಲ್ಲಾ ಎಂಬ ಸಂದೇಹ ಉಂಟಾಯಿತು. ಬುದ್ಧರಾಜನ ಪ್ರಕರಣದಿಂದ ಮಂಗಳೇಶ, ಪುಲಿಕೇಶಿಯರ ನಡುವೆ ಯಾವುದೇ ವಿರಸ ಉಂಟಾಗುವುದು ಅವನಿಗೆ ಇಷ್ಟವಿರಲಿಲ್ಲ. ಸಾಧ್ಯವಾದಷ್ಟು ಈ ಘರ್ಷಣೆಯನ್ನು ತಪ್ಪಿಸಬೇಕೆಂದು "ಕುಮಾರ, ಈಗ ನಾವು ನೇರ ಮಂಗಳೇಶರನ್ನು ಕಂಡರೆ, ನಮ್ಮ ಕಾರ್ಯವಿಫಲವಾಗುವ ಸಂಭವವಿದೆ. ತುಂಬಿದ ಸಭೆಯಲ್ಲಿ ಧರ್ಮಾವತಾರರ ತೀರ್ಪನ್ನೇ ಕಡೆಗಣಿಸಿ,

ಬುದ್ಧರಾಜರಿಗೆ ಮರಣದಂಡನೆಯನ್ನು ವಿಧಿಸಿದ ಮಂಗಳೇಶರು, ನಮ್ಮ ಮಾತಿಗೆ ಬೆಲೆಕೊಟ್ಟು ತಮ್ಮ ತೀರ್ಮಾನವನ್ನು ಹಿಂದಕ್ಕೆ ತೆಗೆದುಕೊಳ್ಳುವರೆಂಬ ನಂಬಿಕೆ ನನಗೆ ಇಲ್ಲ...." ಎಂದು ಪುಲಿಕೇಶಿಗೆ ಹೇಳಿದನು.

"ಹಾಗಾದರೆ ನಾವು ಈಗ ಏನು ಮಾಡಬೇಕು ? ಒಬ್ಬ ವ್ಯಕ್ತಿಯ ಹಠ ಮಾರಿತನಕ್ಕೆ, ಅನ್ಯಾಯವಾಗಿ ಕ್ಷಮಾರ್ಹನಾದ ವ್ಯಕ್ತಿಯೊಬ್ಬನನ್ನು ಬಲಿಕೊಡ ಬೇಕೆ ? ಈ ಬಗೆಯ ಅನ್ಯಾಯವನ್ನು ನೋಡಿಕೊಂಡೂ ನಾವು ಸುಮ್ಮನೆ ಹೇಡಿಗಳಂತೆ ಕುಳಿತುಕೊಳ್ಳಬೇಕೆ ?" ಅಸಹನೆಯಿಂದ ಪುಲಿಕೇಶಿ ಹೇಳಿದ.

"ಇಲ್ಲ. ನಾವು ಉಪಾಯವಾಗಿ ಈ ಕಾರ್ಯವನ್ನು ಸಾಧಿಸಿಕೊಳ್ಳ ಬಹುದು...."

"ಹೇಗೆ ?"

"ಮಂಗಳೇಶರು ಒಂದು ವೇಳೆ ನಮ್ಮ ನಿಮ್ಮ ಅಭಿಪ್ರಾಯವನ್ನು ತಿರಸ್ಕರಿಸಿ ದರೂ, ಮಹಾರಾಣಿ ದುರ್ಲಭದೇವಿಯವರ ಅಭಿಪ್ರಾಯವನ್ನು ತಿರಸ್ಕರಿಸಲಾರ ರೆಂದು ನನ್ನ ಎಣಿಕೆ. ಈಗ ನಾವು ಅವರ ಮೂಲಕ ಬುದ್ಧರಾಜರ ಬಿಡುಗಡೆಯ ಪ್ರಯತ್ನ ಮಾಡೋಣ. ನಮ್ಮ ಪ್ರಯತ್ನಕ್ಕೆ ಜಯ ದೊರೆಯುತ್ತದೆ !"

"ಯಾರ ಮಾತಿಗೆ ಬೆಲೆಕೊಟ್ಟಾದರೂ,ಮಂಗಳೇಶರು ತಮ್ಮ ಅನ್ಯಾಯದ ತೀರ್ಪನ್ನು ಹಿಂದಕ್ಕೆ ತೆಗೆದುಕೊಂಡರೆ ಸಾಕು ! ಬನ್ನಿ, ಮಹಾರಾಣಿಯವರನ್ನು ಕರೆದುಕೊಂಡೇ ಹೋಗೋಣ !" ಎಂದು ಹೇಳಿ ಪುಲಿಕೇಶಿ ನೇರ ಮಹಾರಾಣಿ ದುರ್ಲಭದೇವಿಯವರ ಅಂತಃಪುರಕ್ಕೆ ಬಂದನು.

ಮಹಾರಾಣಿ ದುರ್ಲಭದೇವಿಯು, ಅಸಮಾಧಾನದಿಂದ ಬುಸುಗುಟ್ಟುತ್ತಾ, ವೀರಭದ್ರನಂತೆ, ಉರಿಮೊಗವನ್ನು ಹೊತ್ತುಬಂದ ಪುಲಿಕೇಶಿಯನ್ನು ನೋಡಿಯೇ ಹೆದರಿದರು.

ಅವರು ಮೌನದ ಸ್ವಾಗತವಿತ್ತು ಪುಲಿಕೇಶಿಯ ಮುಖವನ್ನು ದಿಟ್ಟಿಸುತ್ತಾ ಕುಳಿತರು. ಆಗಷ್ಟೇ ನ್ಯಾಯತೀರ್ಮಾನವನ್ನು ಕೇಳಿ ಅಂತಃಪುರಕ್ಕೆ ಹಿಂದಿರುಗಿದ್ದ ಅವರಿಗೂ ಮನಸ್ಸಿಗೆ ಸಮಾಧಾನವಿರಲಿಲ್ಲ. ಮಂಗಳೇಶನು ನ್ಯಾಯಪೀಠದಿಂದ ಹೇಳಿದ್ದ ತೀರ್ಪು ಅವರ ಮನಸ್ಸಿಗೂ ಬಂದಿರಲಿಲ್ಲ. ಆದರೆ ಅವರು ಈ ಬಗ್ಗೆ ಏನೊಂದೂ ಮಾಡಲಾಗದ ಸ್ಥಿತಿಯಲ್ಲಿ ಇದ್ದರು.

"ಅಬ್ಬೆ, ಇಂದಿನ ತೀರ್ಪನ್ನು ಕೇಳಿದಿರಾ ? ನ್ಯಾಯ ವಿಚಾರಣೆಯ

ವೈಖರಿಯನ್ನು ನೋಡಿದಿರಾ ?" ಎಂದು ಪುಲಿಕೇಶಿ ಅಸಹನೆಯ ಮೂರ್ತಿಯಾಗ ಕೇಳಿದ.

"ಇಂದಿನ ಬಹಿರಂಗ ವಿಚಾರಣೆಯ ರುದ್ರನಾಟಕವನ್ನು ನಾನೂ ನೋಡಿದೆ, ಮಗು !" ನೊಂದು ನುಡಿದರು ದುರ್ಲಭದೇವಿ.

"ನಿಮಗೇನು ಅನಿಸುತ್ತದೆ ?"

"ಅನಿಸುವುದೇನು ? ಧರ್ಮಾವತಾರರ ತೀರ್ಪಿನ ವಿರುದ್ಧ ಮಂಗಳೇಶನ ತೀರ್ಪು ಕೊಡಬಾರದಿತ್ತು. ಇದರಿಂದ ನ್ಯಾಯಕ್ಕೆ ವಂಚನೆ ಮಾಡಿದಂತೆ ಆಗಿದೆ !"

"ಹಾಗಾದರೆ, ಧರ್ಮಾವತಾರರು ಮಾಡಿದ ನಿರ್ಣಯವೇ ಸರಿ ಎಂದು ನಿಮ್ಮ ಅಭಿಪ್ರಾಯವೆ ?"

"ಹೌದು. ಬುದ್ಧರಾಜರು ಅಪರಾಧಿಗಳಿರಬಹುದು, ಆದರೆ ಅವರು ಪಶ್ಚಾತ್ತಾಪದಗ್ಧರಾಗಿದ್ದಾರೆ. ಇಂತಹವರಿಗೆ ಮರಣದಂಡನೆಯಂತಹ ಉಗ್ರ ಶಿಕ್ಷೆಯನ್ನು ವಿಧಿಸುವುದಕ್ಕಿಂತಲೂ, ಕ್ಷಮೆ ನೀಡುವುದು ನ್ಯಾಯತೀರ್ಮಾನದ ದೃಷ್ಟಿಯಲ್ಲಿ ಮಾತ್ರವಲ್ಲ, ಮಾನವೀಯ ದೃಷ್ಟಿಯಲ್ಲೂ ಸ್ವಾಗತಾರ್ಹವಾದ ತೀರ್ಪು. ಆದರೆ ಮಂಗಳೇಶರು ಅದನ್ನು ತಿರಸ್ಕರಿಸಿ ನ್ಯಾಯದ ಮುಖಕ್ಕೆ ಮಸಿ ಬಳಿದಿದ್ದಾರೆ !"

"ಹಾಗಾದರೆ ನ್ಯಾಯದ ಹೆಸರಿನಲ್ಲಿ ನಡೆಯುತ್ತಿರುವ ಅನ್ಯಾಯವನ್ನು ನೀವು ನಿಲ್ಲಿಸಲಾರಿರಾ ?"

"ನಾನೇನು ತಾನೆ ಮಾಡಬಲ್ಲೆ, ಕೇಶಣ್ಣ !"

"ನೀವು ಸಾಮ್ರಾಜ್ಯದ ಹಿರಿಯ ವ್ಯಕ್ತಿಗಳು ! ಚಾಲುಕ್ಯ ಸಾಮ್ರಾಜ್ಯದ ವಧಿಷ್ಠಾತ್ರಿ ಎಂಬ ಕೀರ್ತಿಗೆ ಪಾತ್ರರಾಗಿದ್ದೀರಿ. ಈಗ ನೀವು ಮಂಗಳೇಶ ಚಿಕ್ಕಪ್ಪ ನಿಗೆ ಬುದ್ಧಿ ಹೇಳಿದರೆ, ಅವರು ತಮ್ಮ ದುಡುಕ ತೀರ್ಪನ್ನು ಖಂಡಿತ ಹಿಂದಕ್ಕೆ ತೆಗೆದುಕೊಂಡು, ನಿರಪರಾಧಿಗೆ ಪ್ರಾಣದಾನ ನೀಡುತ್ತಾರೆ !"

"ನ್ಯಾಯಾಲಯದ ತೀರ್ಪನ್ನು ವಿಮುಖಗೊಳಿಸಲು ನನ್ನಿಂದ ಸಾಧ್ಯವೆ? ಮಂಗಳೇಶರು ನನ್ನ ಮಾತನ್ನು ಕೇಳುವರೇ? ಅವರು ಧರ್ಮಾವತಾರರ ಅಭಿಪ್ರಾಯವನ್ನೇ ಉಲ್ಲಂಘಿಸಿ ನಡೆದವರು, ನನ್ನ ಮಾತನ್ನು ಪುರಸ್ಕರಿಸು ತ್ತಾರೆಯೇ ?"

"ಯಾರ ಮಾತನ್ನು ಉಲ್ಲಂಘಿಸಿದರೂ, ನಿಮ್ಮ ಮಾತನ್ನು ಅವರು ತೆಗೆದು ಹಾಕಲಾರರೆಂದು ನಮಗೆ ಅನಿಸುತ್ತಿದೆ ತಾಯಿ. ಈಗ ನೀವು ಈ ವಿಷಯದಲ್ಲಿ ಪ್ರವೇಶ ಮಾಡದೆ ಇದ್ದರೆ, ಅನ್ಯಾಯವಾಗಿ ಕ್ಷಮಾರ್ಹನಾದ ವ್ಯಕ್ತಿಯೊಬ್ಬನ ಕೊಲೆಯಾಗುತ್ತದೆ!" ಎಂದು ಸಮಂತಭದ್ರನೂ ಹೇಳಿದನು.

"ನನ್ನ ಮಾತನ್ನು ಪುರಸ್ಕರಿಸುವರೆಂಬ ಧೈರ್ಯ ನನಗೆ ಇಲ್ಲ,ಅಮಾತ್ಯರೇ. ಆದರೆ ಅನ್ಯಾಯವನ್ನು ತಡೆಗಟ್ಟಲು ನನ್ನಿಂದಾಗುವ ಪ್ರಯತ್ನ ಮಾಡಲು ನಾನು ಸಿದ್ಧಳಿದ್ದೇನೆ!" ಎಂದು ಹೇಳಿ, ಮಂಗಳೇಶನಿಗೆ ಬುದ್ಧಿ ಹೇಳಲು ಪುಲಿಕೇಶಿ, ಸಮಂತಭದ್ರರೊಡನೆ, ದುರ್ಲಭದೇವಿಯೂ ಹೊರಟರು.

ಮೂವರೂ ಹಠಾತ್ತನೆ ತನ್ನನ್ನು ಕಾಣಲು ಬಂದುದನ್ನು ನೋಡಿ ಮಂಗಳೇಶನಿಗೆ ಆಶ್ಚರ್ಯವಾದರೂ,ಅವನಿಗೆ ಅವರು ಬಂದಿರುವ ರಾಜಕಾರಣವೇನೆಂದು ತಿಳಿಯದೆ ಹೋಗಲಿಲ್ಲ. ಅವನು ಬಿಗುಮಾನದಲ್ಲೇ ಅವರನ್ನು ಸ್ವಾಗತಿಸಿ, ಕುಳಿತುಕೊಳ್ಳಲು ಆಸನ ತೋರಿಸಿ, ಪ್ರಶ್ನಾರ್ಥಕ ದೃಷ್ಟಿಯಿಂದ ಅವರ ಕಡೆ ನೋಡಿದನು.

"ನಾವು ಬಂದಿರುವುದೇಕೆಂದು ನಿಮಗೂ ತಿಳಿದಿದೆ ಈಗ ಕ್ಷಮಾರ್ಹನಾದ ಒಬ್ಬ ವ್ಯಕ್ತಿಯ ಪ್ರಾಣಕ್ಕೆ ಗಂಡಾಂತರ ಬಂದಿದೆ. ನೀವು ಉದಾರವಾಗಿ ಅವನ ತಪ್ಪನ್ನು ಮನ್ನಿಸಿ, ಅವನಿಗೆ ಪ್ರಾಣದಾನ ನೀಡಬೇಕು!"

ಎಂದು ಪುಲಿಕೇಶಿಯೇ ಹೇಳಿದನು.

ಈ ಮಾತಿಗೆ ಮಂಗಳೇಶನು ಉತ್ತರಕೊಡದೆ ಅವರನ್ನು ತಿರಸ್ಕಾರದಲ್ಲಿ ನೋಡಿದ.

"ಮಂಗಳೇಶರೇ, ನೀವು ಬೇರೆಯಲ್ಲ, ನಮ್ಮ ಕೀರ್ತಿವರ್ಮ ಬೇರೆಯಲ್ಲ. ನಿಮ್ಮಿಬ್ಬರನ್ನು ನಾನು ನನ್ನೆರಡು ಕಣ್ಣುಗಳೆಂದು ತಿಳಿದಿದ್ದೆ. ಈಗಲೂ ಹಾಗೆಯೇ ತಿಳಿದಿದ್ದೇನೆ. ನಿಮ್ಮನ್ನು ನನ್ನ ಮಗನೆಂದು ತಿಳಿದಿದ್ದುದರಿಂದಲೇ,ಪುಲಿಕೇಶಿಯು ಪ್ರಾಪ್ತವಯಸ್ಕನಾಗುವತನಕ ಸಾಮ್ರಾಜ್ಯದ ಆಡಳಿತ ಸೂತ್ರವನ್ನು ನಿಮಗೆ ಒಪ್ಪಿಸಿದುದು ನಿಮ್ಮಿಂದ ಇದುವರೆಗೆ ಯಾವ ಅನ್ಯಾಯವೂ ನಡೆಯಲಿಲ್ಲ. ಆದರೆ ಇಂದು ಮಾತ್ರ ನೀವು ಧರ್ಮವನ್ನು ಅತಿಕ್ರಮಿಸಿ ತೀರ್ಪಿತ್ತಿರುವಿರಿ. ಧರ್ಮಾವತಾರರು ಕ್ಷಮಾರ್ಹನೆಂದು ತೀರ್ಪಿತ್ತ ಅಪರಾಧಿಗೆ ನೀವು ಉಗ್ರವಾದ ಮರಣದಂಡನೆಯನ್ನು ವಿಧಿಸಿದ್ದೀರಿ. ಈ ತೀರ್ಪಿನಿಂದ ಜನ ಕ್ಷುಬ್ಧರಾಗಿದ್ದಾರೆ.

ಅವರ ವಿರುದ್ಧ ಹೋಗುವುದು ನಮಗೆ ವಿಹಿತವೂ ಅಲ್ಲ, ನ್ಯಾಯವೂ ಅಲ್ಲ. ಈಗಲೂ ಅಪರಾಧಿಗೆ ಕ್ಷಮಾದಾನ ನೀಡಿ, ಅನ್ಯಾಯವಾಗಿ ನಡೆಯಲಿರುವ ಕೊಲೆಯನ್ನು ತಪ್ಪಿಸಬೇಕೆಂದು ನಿಮ್ಮಲ್ಲಿ ಪ್ರಾರ್ಥಿಸಲು ಬಂದಿದ್ದೇನೆ!" ಎಂದು ಮಹಾರಾಣಿ ದುರ್ಲಭದೇವಿಯು ಹೇಳಿದರು.

"ಬುದ್ಧರಾಜನು ರಾಜದ್ರೋಹಿ! ಅವನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಕಾನೂನು ಬದ್ಧವಾಗಿ ವಿಧಿಸಿದ್ದೇನೆ! ಇದರಲ್ಲಿ ಯಾವ ಅನ್ಯಾಯವೂ ನಡೆದಿಲ್ಲ!" ಎಂದು ಮಂಗಳೇಶನು ಹೇಳಿದನು.

ಬುದ್ಧರಾಜನಿಗೆ ಮರಣದಂಡನೆ ಶಿಕ್ಷೆವಿಧಿಸುವುದರಲ್ಲಿ ಮಂಗಳೇಶನಿಗೆ ಅವನದೇ ಆದ ಸ್ವಾರ್ಥವಿತ್ತು. ತಾನು ರೇವತೀ ದ್ವೀಪದಲ್ಲಿ ಶತ್ರು ಶಿಬಿರದಿಂದ ಪಡೆದ ಅಪಾರ ಸೂರೆಯ ಸಂಗತಿಯನ್ನು ಅವನೇ ಮಹಾರಾಣಿ ದುರ್ಲಭದೇವಿಗೆ ತಿಳಿಸಿರಬಹುದೆಂದು ಅವನ ಸಂದೇಹ! ಅವನ ಮೇಲೆ ಸೇಡುತೀರಿಸಿಕೊಳ್ಳಲು, ತನಗೆ ದೊರೆತ ಈ ಸದವಕಾಶವನ್ನು ದುರುಪಯೋಗಪಡಿಸಿಕೊಂಡು, ಅವನಿಗೆ ಮರಣದಂಡನೆಯನ್ನು ವಿಧಿಸಿದ್ದನು. ಈ ವೇಳೆಗೆ ಆ ದ್ರೋಹಿಯ ಕತೆ ಮುಗಿದಿರಬೇಕೆಂದು ತಿಳಿದಿದ್ದ ಮಂಗಳೇಶನಿಗೆ ದುರ್ಲಭದೇವಿಯ ಮಾತು ಕೇಳಿ ಆಶ್ಚರ್ಯವಾಯಿತು. ಅಂತಲೇ ಅಸಹನೆಯಿಂದ ಕೇಳಿದ:

"ಹಾಗಾದರೆ, ಆ ನೀಚನನ್ನು ಇನ್ನೂ ಶೂಲಕ್ಕೇರಿಸಲಿಲ್ಲವೆ?"

"ಇಲ್ಲ, ಮರಣದಂಡನೆಯ ಶಿಕ್ಷೆಯು ಕಾರ್ಯಗತವಾಗದಂತೆ, ತಡೆದು ಬಂದಿದ್ದೇನೆ!" ಪುಲಿಕೇಶಿ ಎಂದ.

"ಏಕೆ ತಡೆ ಹಿಡಿದಿದ್ದೀರಿ?"

"ನಿಮ್ಮ ಮನವೊಲಿಸಿ, ಅಪರಾಧಿಗೆ ಕ್ಷಮೆ ದೊರಕಿಸಿಕೊಳ್ಳುವ ಉದ್ದೇಶ್ಯದಿಂದ!"

"ಆ ದ್ರೋಹಿಗೆ ಪ್ರಾಣದಾನ ಮಾಡಲಾರೆ!"

"ನೀವು ಪ್ರಾಣದಾನ ಮಾಡಲೇಬೇಕು."

"ಇದೊಂದು ಮಾತು ಮಾತ್ರ ಸಾಧ್ಯವಿಲ್ಲ. ನ್ಯಾಯಾಲಯದಲ್ಲಿ ಒಮ್ಮೆ ತೀರ್ಪು ಕೊಟ್ಟಮೇಲೆ, ಅದನ್ನು ಹಿಂದಕ್ಕೆ ತೆಗೆದುಕೊಳ್ಳಲಾರೆ!"

"ಅಪರಾಧಿಯು ದಂಡಾರ್ಹ ವ್ಯಕ್ತಿಯಾಗಿದ್ದರೆ, ವಿಧಿಸಿದ ಶಿಕ್ಷೆಯನ್ನು ನಾವು ವಿರೋಧಿಸುತ್ತಿರಲಿಲ್ಲ. ಆದರೆ, ಪಶ್ಚಾತ್ತಾಪದಿಂದ ದಗ್ಧನಾದ, ಕ್ಷಮಾರ್ಹ

ನಾದ ವ್ಯಕ್ತಿಗೆ ಉಗ್ರವಾದ ಮರಣದಂಡನೆ ವಿಧಿಸಲ್ಪಟ್ಟಿದೆ !"

"ಆ ದ್ರೋಹಿ ಬುದ್ಧರಾಜ, ಪಶ್ಚಾತ್ತಾಪದ ಸೋಗು ಹಾಕಿ ನಿಮ್ಮನ್ನು ವಂಚಿಸಿದ್ದಾನೆ. ಅವನ ಮಾತನ್ನು ನೀವು ನಂಬಬಾರದು !"

"ಅವನು ನಿಜವಾಗಿ ಪಶ್ಚಾತ್ತಾಪಪಟ್ಟಿದ್ದಾನೆಯೋ ಇಲ್ಲವೋ ಎಂಬುದನ್ನು ಧರ್ಮಾವತಾರರೇ ವಿಮರ್ಶಿಸಿ ತೀರ್ಪು ಕೊಟ್ಟಿದ್ದಾರೆ."

"ಅವರನ್ನು ಮೋಸಗೊಳಿಸಿದಂತೆ, ಆ ದ್ರೋಹಿ ಬುದ್ಧರಾಜ ನನ್ನನ್ನು ತನ್ನ ಮೊಸಳೆ ಕಣ್ಣೀರಿನಿಂದ ಮೋಸಗೊಳಿಸಲಾರ !"

"ಅವನ ಕಣ್ಣೀರಿನಲ್ಲಿ ನಾವು ಯಾವ ಕಪಟತನವನ್ನೂ ಕಾಣಲಿಲ್ಲ. ಅದು ಪಶ್ಚಾತ್ತಾಪದ ಹೃದಯದಿಂದ ಬಂದ ಕಣ್ಣೀರು. ಆದರೆ ನೀವು ಅವನ ಬಗ್ಗೆ ಪೂರ್ವಾಭಿಪ್ರಾಯದಿಂದ ವರ್ತಿಸುತ್ತಿದ್ದೀರಿ ?"

"ನನಗೆ ಯಾರ ವಿಷಯದಲ್ಲೂ ಪೂರ್ವಾಭಿಪ್ರಾಯವಿಲ್ಲ. ನ್ಯಾಯಮೂರ್ತಿಯಾಗಿ ಕುಳಿತ ಮೇಲೆ ನನಗೆ ಎಲ್ಲರೂ ಒಂದೇ !"

"ಇಂದು ನಿಮ್ಮಿಂದ ನ್ಯಾಯಪೀಠಕ್ಕೆ ಅಪಚಾರವೆಸಗುವ ನ್ಯಾಯ ತೀರ್ಮಾನ ಹೊರಬಿದ್ದಿದೆ."

"ಹಾಗಾದರೆ ನೀವು ನನ್ನನ್ನು ಹಂಗಿಸಲು ಬಂದಿದ್ದೀರಾ ?"

"ಇಲ್ಲ. ಧರ್ಮದೇವತೆಯ ನಿವಾಸವಾದ ನ್ಯಾಯಪೀಠದಿಂದ ಅನ್ಯಾಯ ನಡೆಯುವುದನ್ನು ತಡೆಗಟ್ಟಲು ಬಂದಿದ್ದೇವೆ !"

"ನನ್ನ ಕರ್ತವ್ಯವೇನೆಂಬುದರ ಬಗ್ಗೆ ನಿಮ್ಮಿಂದ ನಾನು ಪಾಠ ಕಲಿಯಬೇಕಿಲ್ಲ. ನನಗೆ ನ್ಯಾಯಸಮ್ಮತವಾಗಿ ಕಂಡ ದಾರಿಯಲ್ಲಿ ನಾನು ನಡೆದಿದ್ದೇನೆ! ಯಾರೆಷ್ಟು ಹೇಳಿದರೂ, ನನ್ನ ತೀರ್ಮಾನದಿಂದ ಹಿಮ್ಮೆಟ್ಟಲಾರೆ !"

"ಪ್ರಾಣ ಹೋದರೂ ಸರಿ, ಇಂದಿನ ತೀರ್ಪು ಕಾರ್ಯಗತವಾಗದಂತೆ ತಡೆಯುತ್ತೇನೆ !" ಪುಲಿಕೇಶಿ ಕೋಪಾವಿಷ್ಟನಾಗಿ ಹೇಳಿದ.

ಈ ಮಾತು ಕೇಳಿ ಮಂಗಳೇಶನು ಅವಾಕ್ಕಾದನು. ಪುಲಿಕೇಶಿಯನ್ನು ಒರಟು ಮಾತಿನಿಂದ ದಾರಿಗೆ ತರಲಾಗದೆಂದು ತಿಳಿದಮೇಲೆ, ಅವನನ್ನು ವೃಥಾ ಕಾರಣಕ್ಕಾಗಿ ಎದುರುಹಾಕಿಕೊಳ್ಳಲಿಚ್ಛಿಸದೆ, ಮಂಗಳೇಶನು ತನ್ನ ದನಿಯನ್ನು ಬದಲಾಯಿಸುತ್ತಾ ಹೇಳಿದ :

"ಕೇಶಣ್ಣ, ಒಬ್ಬ ರಾಜದ್ರೋಹಿಯ ಸಲುವಾಗಿ ನೀನು ಇಷ್ಟು ಹಠಮಾರಿ

ಯಾಗಿರುವೆ ಎಂದು ನಾನು ತಿಳಿದಿರಲಿಲ್ಲ. ನಾನು ಸಾಮ್ರಾಜ್ಯದ ಹಿತದೃಷ್ಟಿ ಯಿಂದ ದಂಗೆ ಎದ್ದ ಬುದ್ಧರಾಜನಿಗೆ ಮರಣದಂಡನೆ ಶಿಕ್ಷೆ ವಿಧಿಸಿದ್ದೇನೆಯೇ ಹೊರತು ಇದರಲ್ಲಿ ಯಾವ ಸ್ವಾರ್ಥವೂ ನನಗೆ ಇಲ್ಲ. ದ್ರೋಹಿ ಬುದ್ಧರಾಜನಿ ಗಾದ ಶಿಕ್ಷೆಯಿಂದ ಇತರರು ಪಾಠ ಕಲಿಯಬೇಕೆಂಬುದೇ ನನ್ನ ಆಶಯ. ಇದನ್ನು ನೀನು ತಿಳಿಯದೆ, ನನ್ನ ತೀರ್ಪನ್ನು ವಿರೋಧಿಸುತ್ತೀಯಾ ?"

"ಸಾಮ್ರಾಜ್ಯದ ಹಿತಾಸಕ್ತಿ ನಿಮಗಿರುವಷ್ಟೇ ನನಗೂ ಇದೆ, ಅದಕ್ಕೂ ಹೆಚ್ಚಾಗಿ ಸಮಂತಭದ್ರರಿಗೆ ಇದೆ. ಅದಕ್ಕೂ ನೂರ್ಮಡಿಯಾಗಿ ಮಹಾರಾಣಿ ಯವರಿಗೆ ಇದೆ. ಅವರೆಲ್ಲರೂ ಅಪರಾಧಿಗೆ ವಿಧಿಸಿದ ಶಿಕ್ಷೆ ಅತಿಯಾಯಿತೆಂದು ಅಭಿಪ್ರಾಯಪಡುತ್ತಿರುವಾಗ, ನಿಮ್ಮ ತೀರ್ಪೇ ಸರಿ ಎಂಬ ಹಠ ನಿಮಗೆ ಏಕೆ ? ನಮ್ಮ ವೈಯಕ್ತಿಕ ಹಠಪ್ರದರ್ಶನಕ್ಕೆ ಇದು ಸಮಯವೆ ? ಬುದ್ಧರಾಜರಿಗೆ ಶಿಕ್ಷೆ ಯಾದರೆ ಇದರಿಂದ ನ್ಯಾಯತೀರ್ಮಾನದ ವಿಷಯದಲ್ಲಿ ಜನತೆಗೆ ಇರುವ ನಂಬಿಕೆ ಕಲಕುವುದಿಲ್ಲವೆ ?"

ಈ ಮಾತಿಗೆ ಮಂಗಳೇಶನು ಏನೂ ಹೇಳಲಿಲ್ಲ.

"ಹೌದು ಪ್ರಭು, ಕುಮಾರರು ಹೇಳುವ ಮಾತಿನಲ್ಲಿ ಸತ್ಯವಿದೆ ! ಸತ್ಯ ವನ್ನು ಯಾರು ಹೇಳಿದರೂ, ಪ್ರಾಜ್ಞರಾದವರು ತಲೆಬಾಗುತ್ತಾರೆ !" ಎಂದು ಸಮಂತಭದ್ರನು ಹೇಳಿದನು.

"ಅಮಾತ್ಯರೇ, ನೀವೂ ಹೀಗೇ ಹೇಳುತ್ತೀರಾ ?"

"ಹೌದು ಪ್ರಭು, ಈಗ ನಾವು ಧರ್ಮಾವತಾರರ ತೀರ್ಪಿನಂತೆ ನಡೆವರೆ ನಮಗೂ ಕ್ಷೇಮ, ರಾಷ್ಟ್ರಕ್ಕೂ ಕ್ಷೇಮ !"

"ಮಂಗಳೇಶರೇ, ಇದು ವೈಯಕ್ತಿಕ ಹಠಪ್ರದರ್ಶನಕ್ಕೆ ಸ್ಥಳವಲ್ಲ. ಧರ್ಮಾವತಾರರ ಕಣ್ಣಿನಲ್ಲಿ ಕ್ಷಮಾರ್ಹನಾದ ವ್ಯಕ್ತಿಯ ಜೀವ ಇಂದು ನಿಮ್ಮ ನಿರ್ಣಯದ ಮೇಲೆ ನಿಂತಿದೆ ! ಕ್ಷಮೆ ಮಹಾಪುರುಷಲಕ್ಷಣ. ಸೇಡು ಪಶುಸಹಜ ಗುಣ ! ಈಗ ಪ್ರಜೆಗಳ ಕಣ್ಣಿನಲ್ಲಿ ಕ್ಷಮಾರ್ಹನಾದ ವ್ಯಕ್ತಿಗೆ ಶಿಕ್ಷೆ ವಿಧಿಸಿದರೆ, ನಾವು ಸಣ್ಣವರಾಗುತ್ತೇವೆ. ನಮ್ಮ ನ್ಯಾಯತೀರ್ಮಾನದಲ್ಲಿ ಅವರಿಗಿರುವ ನಂಬಿಕೆ ಯನ್ನು ಕಳೆದುಕೊಳ್ಳುತ್ತೇವೆ. ಪ್ರಜೆಗಳ ನಂಬಿಕೆಯನ್ನು ಕಳೆದುಕೊಂಡಮೇಲೆ ನಾವು ಬದುಕಿ ಸಾರ್ಥಕವೇನು ? ಪುಲಿಕೇಶಿ ಬಾಲಕನಿರಬಹುದು. ಅವನು ದೇಶದ ಜನತೆಯ ಆಶೋತ್ತರಗಳಿಗೆ ಕನ್ನಡಿ ಹಿಡಿದಿದ್ದಾನೆ. ಪುಲಿಕೇಶಿಯು

ಬಾಲಕನೆಂಬ ಕಾರಣದಿಂದ ಅವನ ಮಾತನ್ನು ಉಪೇಕ್ಷಿಸಬಾರದು. ಅವನ ಮಾತಿನಲ್ಲಿ ನಮ್ಮ ಹಾಗೂ ರಾಷ್ಟ್ರದ ಕಲ್ಯಾಣ ಅಡಗಿದೆ !"

ಎಂದು ಮಹಾರಾಣಿ ದುರ್ಲಭದೇವಿ ಹೇಳಿದರು.

"ಹಾಗಾದರೆ ನೀವೆಲ್ಲರೂ ಸೇರಿ ಅಪಮಾನ ಮಾಡಲು ಬಂದಿದ್ದೀರಾ !"

"ನಿಮಗೆ ಅಪಮಾನ ಮಾಡಲು ಬರಲಿಲ್ಲ ಮಂಗಳೇಶರೇ ? ನಿಮ್ಮಿಂದ ಉಚಿತ ನ್ಯಾಯತೀರ್ಮಾನ ಬೇಡಲು ಬಂದಿದ್ದೇವೆ !"

"ನೀವು ಹೇಳುವುದಾದರೂ ಏನು ?"

"ತಿಳಿಯದೆ ತಪ್ಪು ಮಾಡಿದ ಬುದ್ಧರಾಜನ ಮಹಾಪರಾಧವನ್ನು ಮನ್ನಿಸಿ, ಅವನಿಗೆ ಪ್ರಾಣದಾನ ನೀಡಬೇಕು !"

"ಇಷ್ಟು ಅಲ್ಪ ವಿಷಯಕ್ಕಾಗಿ ನಿಮ್ಮ ಮನನೋಯಿಸಲು ನನಗೆ ಇಷ್ಟವಿಲ್ಲ. ನಿಮ್ಮ ಅಭೀಷ್ಟದಂತೆ ಆ ದ್ರೋಹಿಗೆ ಪ್ರಾಣದಾನ ನೀಡಿದ್ದೇನೆ !"

ಈ ಮಾತು ಕೇಳಿ ಪುಲಿಕೇಶಿಗೆ ಹೆಗಲಿನ ಮೇಲೆ ಇದ್ದ ದೊಡ್ಡ ಭಾರ ಕೆಳಗಿಳಿಸಿದಂತೆ ಆಯಿತು. ಅವನು ಸಮಾಧಾನದ ನಿಟ್ಟುಸಿರುಬಿಟ್ಟನು.

## ೫

ಬುದ್ಧರಾಜನ ಪ್ರಕರಣದಲ್ಲಿ ಮಂಗಳೇಶ ಪುಲಿಕೇಶಿಯರ ನಡುವೆ ಉಂಟಾಗಿದ್ದ ವೈಮನಸ್ಸು ಸದ್ಯಕ್ಕೆ ಬಗೆಹರಿದಂತೆ ಕಂಡರೂ, ಸಿಂಹಾಸನಕ್ಕಾಗಿ ಮುಂದೆ ನಡೆಯಲಿದ್ದ ಹೋರಾಟಕ್ಕೆ ಇದು ನಾಂದಿಯಾಯಿತು. ಈ ಪ್ರಕರಣದಲ್ಲಿ ಒಂದು ವಿಷಯ ಬೆಳಕಿಗೆ ಬಂದಿತು. ತಾನು ಇದುವರೆಗೆ ನಿರಂಕುಶಾಡಳಿತ ನಡೆಸಿದಂತೆ, ಇನ್ನು ಮುಂದೆ ನಡೆಸಲು ಸಾಧ್ಯವಿಲ್ಲವೆಂಬ ಮಾತು ಮಂಗಳೇಶನು ಮನಗಾಣುವಂತೆ ಆಗಿತ್ತು. ತಾನು ಎಳೆನಾಗರವೆಂದು ತುಳಿಯದೆ ಬಿಟ್ಟ ಪುಲಿಕೇಶಿ ಈಗ ತನ್ನನ್ನೇ ನುಂಗುವ ಕಾಳಿಂಗಸರ್ಪವಾಗಿರುವ ಸಂಗತಿ ಸ್ಪಷ್ಟವಾಗಿತ್ತು. ಹಾವನ್ನು ಮೊಟ್ಟೆಯಲ್ಲಿಯೇ ನಾಶಗೊಳಿಸದೆ ಇಷ್ಟು ಕಾಲ ಬಿಟ್ಟುದೇ ತನ್ನ ಮಹಾಪರಾಧವೆಂದು ಅನಿಸಿತು. ತಾನು ಮಾಡಿದ ನಿರ್ಲಕ್ಷ್ಯ ತನ್ನನ್ನೇ ಆಹುತಿ ತೆಗೆದುಕೊಳ್ಳುವ ಪ್ರಸಂಗ ಬಂದಿತ್ತು. ತನ್ನ ಕಣ್ಣೆದುರಿಗೆ ಹುಟ್ಟಿದ ಪೋರ ತನಗೆ ಬುದ್ಧಿ ಹೇಳುವಷ್ಟು ಪ್ರಬಲನಾಗುವನೆಂದು ಅವನು

ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲ. ಈಗ ಪುಲಿಕೇಶಿ ಅವನ ಭಾಗಕ್ಕೆ ನುಂಗ ಲಾರದ ತುತ್ತಾಗಿದ್ದನು. ತಾನು ಈಗಲೇ ಎಚ್ಚತ್ತುಕೊಂಡು ಪುಲಿಕೇಶಿಯನ್ನು ನಿವಾರಿಸಿಕೊಳ್ಳದಿದ್ದರೆ, ಚಾಲುಕ್ಯ ಸಿಂಹಾಸನ ಕಳೆದುಕೊಳ್ಳಬೇಕಾಗುವುದೆಂದು ಅಂಜಿದನು. ಅವನು ಕೂಡಲೇ ಕಾರ್ಯೋನ್ಮುಖನಾದನು.

ಇಂದಲ್ಲ ನಾಳೆ ಸಿಂಹಾಸನವನ್ನು ಪುಲಿಕೇಶಿಗೆ ಬಿಟ್ಟುಕೊಡಬೇಕಾಗುವು ದೆಂಬುದು ಮಂಗಳೇಶನಿಗೆ ತಿಳಿದಿತ್ತು. ಜನರ ಕಣ್ಣಿನಲ್ಲಿ ಅವನು ರಾಜಪ್ರತಿನಿಧಿ ಯಾಗಿದ್ದನೇ ಹೊರತು ಸಾಮ್ರಾಟನಾಗಿರಲಿಲ್ಲ. ಚಾಲುಕ್ಯ ಸಿಂಹಾಸನ ಎಂದಿ ದ್ದರೂ ಪುಲಿಕೇಶಿಯದೇ ಆಗಿತ್ತು. ಅದನ್ನು ಅವನಿಗೆ ಬಿಟ್ಟುಕೊಡುವ ಸಲು ವಾಗಿ ಮಂಗಳೇಶನು ಇಷ್ಟು ಕಾಲ ರಾಜಪ್ರತಿನಿಧಿಯಾಗಿರಲಿಲ್ಲ. ಚಾಲುಕ್ಯ ಸಾಮ್ರಾಜ್ಯಕ್ಕೆ ತಾನೇ ಏಕೈಕ ಸಾಮ್ರಾಟನಾಗಿ ಮೆರೆಯುವುದು ಅವನ ಜೀವಿ ತದ ಉದ್ದಿಶ್ಯವಾಗಿತ್ತು. ಅದಕ್ಕಾಗಿ ಅವನು ಯಾವ ಸಾಹಸಕ್ಕಾದರೂ ಸಿದ್ಧ ನಿದ್ದನು. ಅವನು ತನ್ನ ಇಷ್ಟು ವರ್ಷಗಳ ಆಳ್ವಿಕೆಯಲ್ಲಿ ಅರಮನೆಯಲ್ಲೂ, ಆಸ್ಥಾನದಲ್ಲೂ, ಸೈನ್ಯದಲ್ಲೂ ತನ್ನ ಪಕ್ಷದವರನ್ನು ತುಂಬಿದ್ದರೂ, ದೇಶದ ಜನತೆಯ ಪೂರ್ಣ ಬೆಂಬಲ ಪುಲಿಕೇಶಿಗೆ ಇದೆ ಎಂಬುದು ಮಂಗಳೇಶನಿಗೆ ತಿಳಿ ಯದೆ ಇರಲಿಲ್ಲ. ಜನತೆಯನ್ನು ಇದಿರುಹಾಕಿಕೊಳ್ಳದೆ, ತನ್ನ ಅಧಿಕಾರ ಬಿಟ್ಟು ಕೊಡದೆ, ಚಾಲುಕ್ಯ ಸಿಂಹಾಸನವನ್ನು ದಕ್ಕಿಸಿಕೊಳ್ಳಬೇಕೆಂಬುದೇ ಅವನ ವಿಚಾರವಾಗಿತ್ತು. ಸಾಮ ದಾನ ಭೇದಗಳಿಂದ ಈ ಕಾರ್ಯ ಸಿದ್ಧಿಸದಿದ್ದರೆ, ದಂಡಪ್ರಯೋಗಕ್ಕೆ ಶರಣುಬರಬೇಕೆಂದು ಅವನು ನಿರ್ಧರಿಸಿದ್ದನು.

ಮಂಗಳೇಶನು ಪುಲಿಕೇಶಿಯನ್ನು ಹೇಗೆ ನಿವಾರಿಸಿಕೊಳ್ಳಬೇಕೆಂದು ಯೋಚಿಸುತ್ತಿದ್ದ ಸಮಯದಲ್ಲೇ, ಅರಮನೆಯಲ್ಲಿ ವಿಷ್ಣುವರ್ಧನನನ್ನು ಮತ್ತೆ ಗುರುಕುಲಕ್ಕೆ ಕಳುಹಿಸಿಕೊಡುವ ವಾರ್ತೆ ಹುಟ್ಟಿತ್ತು. ಈ ಸುದ್ದಿಯನ್ನು ಕೇಳಿ ಕುಟಿಲನಾದ ಮಂಗಳೇಶನಿಗೆ ತನ್ನ ಹಂಚಿಕೆಯನ್ನು ಈಡೇರಿಸಿಕೊಳ್ಳಲು ದಾರಿ ಯೊಂದು ಗೋಚರಿಸಿತು.

ಅವನಿಗೆ ಮೊದಲಿನಿಂದಲೂ ಪುಲಿಕೇಶಿ ವಿಷ್ಣುವರ್ಧನರಲ್ಲಿ ಅಂತಹ ಅನ್ಯೋನ್ಯತೆ ಇರಲಿಲ್ಲವೆಂಬುದು ತಿಳಿದಿತ್ತು. ದೇಹದಾರ್ಢ್ಯವಿಲ್ಲದ, ದುರ್ಬಲ ಮನಸ್ಸಿನ ವಿಷ್ಣುವರ್ಧನನನ್ನು ಪುಲಿಕೇಶಿಯ ವಿರುದ್ಧ ಎತ್ತಿ ಕಟ್ಟಿದರೆ, ತನ್ನ ಅಭೀಷ್ಟ ಸಾಧನೆ ಮಾಡಿಕೊಳ್ಳಬಹುದೆಂಬ ದೂರದ ಆಸೆ ಮಂಗಳೇಶನಿಗೆ

ಮೂಡದೆ ಇರಲಿಲ್ಲ. ಒಂದುವೇಳೆ ಚಾಲುಕ್ಯ ಸಿಂಹಾಸನ ತನ್ನದಾಗದಿದ್ದರೂ ಅದನ್ನು ಪುಲಿಕೇಶಿಗೆ ಬಿಟ್ಟುಕೊಡದೆ ಅನಿರ್ದಿಷ್ಟ ಕಾಲದವರೆಗೆ ತಾನೇ ರಾಜ ಪ್ರತಿನಿಧಿಯಾಗಿ ಅನಭಿಷಕ್ತ ಸಾಮ್ರಾಟನಾಗಿ ಮೆರೆಯಲು ಸಾಧ್ಯವಿತ್ತು.

ಮೊದಲಿನಿಂದಲೂ ವಿಷ್ಣುವರ್ಧನನಿಗೆ ಮಂಗಳೇಶನನ್ನು ಕಂಡರೆ ಒಂದು ಬಗೆಯ ಆತ್ಮೀಯ ಭಾವನೆ ಇತ್ತು. ಅವನು ಇತರರಂತೆ ತನ್ನನ್ನು ಕುಬ್ಜ, ಗೂನುಬೆನ್ನಿನವನೆಂದು ಕರೆದು ಹಾಸ್ಯಮಾಡದೆ, ಹೆಚ್ಚು ಸಹಾನುಭೂತಿಯಿಂದ ಮಾತನಾಡುತ್ತಿದ್ದುದೇ ಇದಕ್ಕೆ ಕಾರಣವಾಗಿತ್ತು. ಅಲ್ಲದೆ ಮಂಗಳೇಶನಿಗೆ ವಿಷ್ಣುವಿನ ವಯಸ್ಸಿನ ಒಬ್ಬ ಮಗನಿದ್ದನು. ಅವನ ಜೊತೆಯಲ್ಲಿ ಆಡಲು ಅನೇಕ ಬಾರಿ ಅವನ ಅಂತಃಪುರಕ್ಕೆ ಹೋಗುತ್ತಿದ್ದನು. ಆ ಸಮಯದಲ್ಲಿ ಮಂಗಳೇಶನ ಪತ್ನಿ ಅವನನ್ನು ಪ್ರೀತಿಯಿಂದ ಮಾತನಾಡಿಸಿ, ತಿನ್ನಲು ತಿಂಡಿತೀರ್ಥಗಳನ್ನು ಕೊಟ್ಟು ಆದರಿಸುತ್ತಿದ್ದಳು. ಇದರಿಂದಾಗಿ ಅವರು ಒಳ್ಳೆಯವರೆಂಬ ಭಾವನೆ ಅವನ ಮನಸ್ಸಿನಲ್ಲಿ ಬೇರೂರಿತ್ತು.

ಆದರೆ ಮಹಾರಾಣಿ ದುರ್ಲಭದೇವಿ ಇಂತಹ ಭಾವನೆ ಬೆಳೆಯಗೊಡದಂತೆ ಎಷ್ಟು ಎಚ್ಚರ ತೆಗೆದುಕೊಂಡಿದ್ದರೂ, ವಿಷ್ಣುವರ್ಧನನ ಪಾಲಿಗೆ ಮಂಗಳೇಶನು ಇನ್ನೂ ಸಜ್ಜನನೇ ಆಗಿದ್ದನು. ವೃಥಾಕಾರಣಕ್ಕಾಗಿ ಮಂಗಳೇಶನನ್ನು ತನ್ನ ಅಬ್ಬೆ ದೂರುತ್ತಿರುವಳೆಂದೇ ಅವನ ಭಾವನೆ. ಬೆಳ್ಳಗಿರುವುದನ್ನೆಲ್ಲಾ ಹಾಲೆಂದು ತಿಳಿಯುವ, ಒಳ್ಳೆಯ ಮಾತನಾಡುವವರೆಲ್ಲರೂ ಸಜ್ಜನರೆಂದು ತಿಳಿಯುವ ವಿಷ್ಣು ವರ್ಧನನಂತಹ ವ್ಯಕ್ತಿಗೆ ಮಂಗಳೇಶನ ಗೋಮುಖವ್ಯಾಘ್ರತನ ಹೇಗೆ ತಿಳಿಯ ಬೇಕು ? ಮೊಮ್ಮಕ್ಕಳು ಮಂಗಳೇಶನೊಡನೆ ಯಾವುದೇ ಸಂಪರ್ಕ ಇಟ್ಟು ಕೊಳ್ಳದಂತೆ ನೋಡಿಕೊಳ್ಳುತ್ತಿದ್ದರೂ, ವಿಷ್ಣುವರ್ಧನನು ಮಾತ್ರ ಆಗೊಮ್ಮೆ ಈಗೊಮ್ಮೆ ಆಟದ ನೆಪದಲ್ಲಿ ಮಂಗಳೇಶನ ಅರಮನೆಗೆ ಹೋಗಿಬರುವುದನ್ನು ತಪ್ಪಿಸಲು ಅವರಿಂದ ಸಾಧ್ಯವಾಗಿರಲಿಲ್ಲ.

ಒಮ್ಮೆ ಮಂಗಳೇಶನು ರಾಹಪ್ಪಯ್ಯನೊಡನೆ ಯಾವುದೋ ರಹಸ್ಯಸಂಗತಿ ಮಾತನಾಡುತ್ತ ಅರಮನೆಯ ಮುಂದಿನ ಉಪವನಕ್ಕೆ ಬಂದನು. ಅಲ್ಲಿ ವಿಷ್ಣು ವರ್ಧನನು ತನ್ನ ಗೆಳೆಯರೊಡನೆ ಯಾವುದೋ ಆಟದಲ್ಲಿ ತೊಡಗಿರುವುದು ಕಾಣಿಸಿತು. ಮಂಗಳೇಶನು ಆಟವೆಲ್ಲ ಮುಗಿದ ಮೇಲೆ ವಿಷ್ಣುವರ್ಧನನನ್ನು ತನ್ನ ಬಳಿಗೆ ಕರೆತರಲು ಸೇವಕರಿಗೆ ಆಜ್ಞೆ ಮಾಡಿ, ಅವರಿಗಾಗಿ ಕಾಯುತ್ತಾ ಚಂದ್ರ

ಶಾಲೆಯಲ್ಲಿ ಕುಳಿತನು.

ಕೊಂಚ ಹೊತ್ತಿನ ಮೇಲೆ ಸೇವಕರೊಡನೆ ಅಲ್ಲಿಗೆ ಬಂದ ವಿಷ್ಣುವರ್ಧನನು ಮಂಗಳೇಶನನ್ನು ನೋಡಿ,

"ಅಪ್ಪಾಜಿ, ನೀವು ನನಗೆ ಹೇಳಿ ಕಳುಹಿಸಿದರಂತೆ ಹೌದೆ?" ಎಂದನು.

"ಹೌದು, ಮಗು. ನಿನ್ನೊಡನೆ ಒಂದು ವಿಷಯ ಮಾತನಾಡುವುದಿತ್ತು?" ಎಂದು ಹೇಳಿ ಸುತ್ತಲೂ ನೋಡಿ ಸೇವಕರನ್ನು ಹೊರಗೆ ಕಳುಹಿಸಿದ ಮೇಲೆ ಮಂಗಳೇಶನು ವಿಷ್ಣುವನ್ನು ಹತ್ತಿರ ಕೂಡಿಸಿಕೊಂಡು, ಆತ್ಮೀಯವಾಗಿ ಹೇಳಿದ :

"ಮಗು ವಿಷ್ಣು, ಮಹಾರಾಣಿ ದುರ್ಲಭದೇವಿಯವರೂ, ಕೇಶಣ್ಣನೂ ನಿನ್ನನ್ನು ಮತ್ತೆ ಗುರುಕುಲಕ್ಕೆ ಕಳುಹಿಸಬೇಕೆಂದು ಇದ್ದಾರಂತೆ ಹೌದೆ ?" ಈ ಮಾತು ಕೇಳಿ ವಿಷ್ಣುವರ್ಧನ ಚಕಿತನಾಗಿ,

"ನನಗೆ ಗೊತ್ತಿಲ್ಲ ಅಪ್ಪಾಜಿ !" ಎಂದು ಹೇಳಿದನು.

"ಮೊನ್ನೆ ದಿನ ಅಬ್ಬೆ ಹಾಗೂ ಅಣ್ಣಂದಿರು ಈ ವಿಷಯ ಮಾತಾಡುತ್ತಿದ್ದರಂತೆ. ನೀನು ಅರಮನೆಯಲ್ಲಿ ವೃಥಾ ಕಾಲ ಕಳೆಯುತ್ತಿರುವುದು ಅವರಿಗೆ ಇಷ್ಟವಿಲ್ಲ. ನಿನ್ನ ಗುರುಕುಲದ ಶಿಕ್ಷಣ ಇನ್ನೂ ಮುಗಿದಿಲ್ಲವಂತೆ. ಇನ್ನೂ ಮೂರು ನಾಲ್ಕು ವರ್ಷ ನಿನ್ನನ್ನು ಗುರುಕುಲಕ್ಕೆ ಕಳುಹಿಸಿಕೊಡುವ ಯೋಚನೆ ಅವರದು. ನಿನ್ನ ಅಭಿಪ್ರಾಯವೇನು ಮಗು ?" ಎಂದು ಪ್ರೀತಿಯಿಂದ ಕೇಳಿದನು.

"ಕೇಶಣ್ಣನು ಮತ್ತೆ ಅಲ್ಲಿಗೆ ಹೋಗುತ್ತಾನೆಯೆ ?"

"ಇಲ್ಲ,ಅವನ ಗುರುಕುಲವಾಸ ಮುಕ್ತಾಯವಾಗಿದೆಯಂತೆ. ಅವನು ರಾಜಧಾನಿಯಲ್ಲಿಯೇ ಉಳಿದು ರಾಜ್ಯಾಡಳಿತದಲ್ಲಿ ಅನುಭವಪಡೆಯುತ್ತಾನಂತೆ!"

"ಹಾಗಾದರೆ ನಾನೂ ಇಲ್ಲೇ ಇದ್ದು, ಕೇಶಣ್ಣನಂತೆ ರಾಜ್ಯಾಡಳಿತದಲ್ಲಿ ಅನುಭವಪಡೆಯುತ್ತೇನೆ !"

"ಅಯ್ಯೋ ಪೆದ್ದಾ, ನಿನಗೆ ಅಷ್ಟೂ ತಿಳಿಯುವುದಿಲ್ಲವೇ ? ನಿಮ್ಮ ಕೇಶಣ್ಣ ಇಂದಲ್ಲ ನಾಳೆ ಸಾಮ್ರಾಟನಾಗುವವನು. ಅವನಿಗೆ ರಾಜ್ಯಾಡಳಿತದಲ್ಲಿ ಅನುಭವ ಬೇಕು. ಆದರೆ ನೀನು ಯಾವ ರಾಜ್ಯಕ್ಕೆ ಸಾಮ್ರಾಟನಾಗುತ್ತಿ ಹೇಳು ? ಅಂತಲೇ ನಿನ್ನನ್ನು ಗುರುಕುಲಕ್ಕೆ ಕಳುಹಿಸುತ್ತಿರುವುದು ?"

"ಕೇಶಣ್ಣ ಸಾಮ್ರಾಟನಾದರೆ, ನಾನೂ ಸಾಮ್ರಾಟನಾಗುತ್ತೇನೆ."

"ಅಯ್ಯೋ ಹುಚ್ಚಪ್ಪಾ, ನೀನು ಅಣ್ಣನಂತೆ ಕುಣಿಯಬೇಕೆಂದರೆ ಸಾಧ್ಯವೇ ?"

"ಅಣ್ಣನು ಸಾಮ್ರಾಟನಾಗಬಹುದಾದರೆ, ನಾನೇಕೆ ಸಾಮ್ರಾಟನಾಗ ಬಾರದು ?"

"ನೀನು ಹೀಗೆ ಹೇಳಬಹುದೆಂದೇ, ನಿನ್ನನ್ನು ಶಿಕ್ಷಣದ ನೆಪದಲ್ಲಿ ಅವರು ಆರ್ಯಪುರದ ವಿದ್ಯಾಪೀಠಕ್ಕೆ ಕಳುಹಿಸುತ್ತಿರುವುದು. ನಿನ್ನ ಅಬ್ಬೆ ಹಾಗೂ ನಿನ್ನ ಅಣ್ಣ–ಇವರಿಬ್ಬರು ಸೇರಿಕೊಂಡು ನಿನಗೆ ದ್ರೋಹ ಬಗೆಯಲು ಈ ಆಟ ಕಟ್ಟಿದ್ದಾರೆ. ಪುಲಿಕೇಶಿಯಂತೆ, ನೀನೂ ಕೀರ್ತಿಶೇಷರಾದ ಕೀರ್ತಿವರ್ಮರ ಮಗನಲ್ಲವೆ ? ಅವನಂತೆಯೇ ನೀನೂ ಸಿಂಹಾಸನಕ್ಕೆ ಹಕ್ಕುದಾರನೆಂಬುದು ಮಕ್ಕಳಿಗೂ ತಿಳಿದಿದೆ. ಆದರೆ ನಿನ್ನನ್ನು ವಂಚಿಸಿ, ಸಿಂಹಾಸನವನ್ನು ತಾನೇ ಆಕ್ರಮಿಸಿಕೊಳ್ಳಲು ಕೇಶಣ್ಣನು, ಅಬ್ಬೆಯೊಡನೆ ಸೇರಿಕೊಂಡು ಪಿತೂರಿ ಮಾಡು ತ್ತಿದ್ದಾನೆ. ನೀನು ಇಲ್ಲಿದ್ದರೆ ತಮಗೆ ತೊಂದರೆಯಾಗಬಹುದೆಂದು ಅವರಿಬ್ಬರೂ ಶಿಕ್ಷಣದ ನೆಪದಲ್ಲಿ ನಿನ್ನನ್ನು ದೂರನಿಡುತ್ತಿದ್ದಾರೆ. ನೀನು ಬುದ್ಧಿವಂತನಾದರೆ, ಇಲ್ಲೇ ಇದ್ದು ಅರ್ಧರಾಜ್ಯಕ್ಕೆ ಅಧಿಪತಿಯಾಗುತ್ತಿ ! ಬುದ್ಧಿಹೀನನಾದರೆ ಗುರು ಕುಲಕ್ಕೆ ಹೋಗಿ ರಾಜ್ಯಕೋಶಗಳನ್ನು ಕಳೆದುಕೊಳ್ಳುತ್ತಿ !"

"ಅಪ್ಪಾಜಿ, ನಿಮ್ಮ ಮಾತು ನಿಜವೆ ? ನನ್ನನ್ನು ವಂಚಿಸಿ, ತಾನೇ ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಕೇಶಣ್ಣ ನನ್ನ ವಿರುದ್ಧ ಪಿತೂರಿಮಾಡು ತ್ತಿರುವ ಸಂಗತಿ ನಿಜವೆ ?"

"ನನ್ನಾಣೆಗೂ ನನ್ನ ಮಾತು ನಿಜ, ವಿಷ್ಣು ! ನಿನಗೆ ಸುಳ್ಳು ಹೇಳಿ ನಾನು ಸಾಧಿಸಬೇಕಾಗಿರುವುದೇನು ? ನಿನ್ನನ್ನು ನೋಡಿ ಅಯ್ಯೋ ಎನಿಸಿತು. ನೀನು ಕುಬ್ಜನಾದ ಮಾತ್ರಕ್ಕೆ ನ್ಯಾಯವಾಗಿ ದೊರೆಯಬೇಕಾದ ಅರ್ಧರಾಜ್ಯ ವನ್ನು ನಿನ್ನಿಂದ ಕಸಿದುಕೊಳ್ಳಬೇಕೇ ? ಎಂತಹ ಅನ್ಯಾಯ ? ಇಂದು ನಿನಗೆ ಈ ಎಲ್ಲ ವಿದ್ರೋಹದ ಸಂಗತಿ ಹೇಳಿವೆ. ನೀನು ಈ ವಿಷಯಗಳನ್ನು ಯಾರೊಂದಿಗೂ ಹೇಳಬೇಡ ಮಗು ! ಹೇಳಿದರೆ ನಾನೇ ಕೆಟ್ಟವನಾಗುತ್ತೇನೆ. ನನಗೆ ಬೇಕಾಗಿರು ವುದು ನೀವು ಅಣ್ಣ ತಮ್ಮಂದಿರು ಸುಖವಾಗಿರುವುದು. ಆದರೆ ಒಬ್ಬ ತಾಯಿಯ ಮಕ್ಕಳಾಗಿ ಹೀಗೆ ದ್ರೋಹ ಬಗೆದರೆ, ಯಾರಿಂದ ನೋಡಿಕೊಂಡಿರಲು ಸಾಧ್ಯ? ನನಗೆ ಮನಸ್ಸು ತಡೆಯಲಿಲ್ಲ. ಹೇಳಿಬಿಟ್ಟೆ! ಈ ವಿಷಯ ಕೇಶಣ್ಣನಿಗಾಗಲೀ,

ಅಬ್ಬೆಗಾಗಲೀ ತಿಳಿಸಿದರೆ, ನನ್ನಾಣೆ ಇದೆ ! ಇದನ್ನು ನಿನ್ನಲ್ಲೇ ಇಟ್ಟುಕೋ !" ಎಂದು ಹೇಳಿ ವಿಷ್ಣುವರ್ಧನನ ತಲೆಯಲ್ಲಿ ಪುಲಿಕೇಶಿಯ ವಿರುದ್ಧ ಸಂಶಯದ ಬೀಜವನ್ನು ಬಿತ್ತಿದನು ಮಂಗಳೇಶ.

ವಿಷ್ಣುವರ್ಧನನಿಗೆ ಇದೀಗ ಹದಿನಾರನೆಯ ವರ್ಷ ನಡೆಯುತ್ತಿತ್ತು. ಆದರೆ ವಯಸ್ಸಿಗೆ ತಕ್ಕ ಬೆಳವಣಿಗೆ ಇರಲಿಲ್ಲ. ಅವನು ಇನ್ನೂ ಆರೇಳು ವರ್ಷದ ಬಾಲಕನಂತೆ ಇದ್ದನು. ಗುರುಕುಲವಾಸದ ನಿಷ್ಠುರ ಜೀವನ ಅವನನ್ನು ಇನ್ನೂ ಸಣ್ಣಗೆ ಮಾಡಿತ್ತು. ಅವನಿಗೆ ಗುರುಕುಲವಾಸದ ಜೀವನ ಸ್ವಲ್ಪವೂ ಸೇರುತ್ತಿರಲಿಲ್ಲ. ಆದರೆ ನಿರ್ವಾಹವಿರಲಿಲ್ಲ. ತಾನು ಇಷ್ಟೆಲ್ಲ ವಿದ್ಯೆ ಕಲಿತು ಮಾಡಬೇಕಾದ್ದೇನು ?

ತಾನು ರಾಜಪುತ್ರ ! ಹೇಗಿದ್ದರೂ ತನ್ನ ಜೀವನ ನೆಮ್ಮದಿಯಿಂದ ನಡೆಯುತ್ತದೆ. ತಾನು ಇತರ ಬಾಲಕರಂತೆ ಕೈಕೆಸರು ಮಾಡಿಕೊಳ್ಳಬೇಕೇಕೆ ? ಎಂಬ ಧೋರಣೆಯಲ್ಲಿ, ವಿದ್ಯೆಯ ವಿಷಯದಲ್ಲಿ ಅಸಡ್ಡೆಯಿಂದ ಇದ್ದನು. ಅವನು ಪುಲಿಕೇಶಿಯಂತೆ ವೈದಿಕ ವಿದ್ಯೆಯಲ್ಲಾಗಲೀ, ಕ್ಷತ್ರಿಯವಿದ್ಯೆಯಲ್ಲಾಗಲೀ, ಯಾವುದೇ ಪರಿಣತಿಯನ್ನು ಪಡೆಯಲಿಲ್ಲ. ಸ್ವಭಾವತಃ ವಿಲಾಸಿಯಾದ ಅವನಿಗೆ ಇವುಗಳಲ್ಲಿ ಒಲವಿರಲಿಲ್ಲ. ಎಂದಿಗೆ ಗುರುಕುಲವಾಸ ಮುಗಿದೀತು, ಎಂದಿಗೆ ರಾಜಧಾನಿಗೆ ಹಿಂದಿರುಗುವೆನು ಎಂದು ಅವನು ಚಾತಕ ಪಕ್ಷಿಯಂತೆ, ಬಿಡುಗಡೆಯ ದಿನಕ್ಕಾಗಿ ಕಾಯುತ್ತಿದ್ದನು. ಇಂಥವನಿಗೆ ಮತ್ತೆ ಗುರುಕುಲವಾಸ ಮಾಡಬೇಕಾಗಿದೆ ಎಂದು ತಿಳಿಸಿದಾಗ ಮೈಮನಸ್ಸೆಲ್ಲವೂ ಮುಳ್ಳುಮುಳ್ಳಾಯಿತು. ಜೊತೆಗೆ ತನ್ನ ಅಬ್ಬೆ ಹಾಗೂ ಅಣ್ಣಂದಿರು ಸವಿಮಾತುಗಳಲ್ಲಿ ತನ್ನನ್ನು ವಂಚಿಸಿ, ನ್ಯಾಯವಾಗಿ ತನಗೆ ದೊರಕಬೇಕಾಗಿದ್ದ ಅರ್ಧರಾಜ್ಯವನ್ನು ತನ್ನಿಂದ ಅಪಹರಿಸಲು ಪಿತೂರಿ ಮಾಡುತ್ತಿದ್ದಾರೆ ಎಂಬುದನ್ನು ಕೇಳಿದಲಾಗಾಯಿತು. ಮೈಯೆಲ್ಲ ಉರಿಯಿತು. ಅವನು ಪೆಟ್ಟುತಿಂದ ಸರ್ಪದಂತೆ ಬುಸುಗುಟ್ಟುತ್ತಾ ಅಬ್ಬೆಯ ಬಳಿಗೆ ಬಂದು, ಮೌನದ ಮೂರ್ತಿಯಾಗಿ ಕುಳಿತನು.

ಅವನ ಅಸಮಾಧಾನಗೊಂಡ ಮುಖವನ್ನು ನೋಡಿ ಮಹಾರಾಣಿ ದುರ್ಲಭದೇವಿ, "ಯಾಕೆ, ಮಗು ಹೀಗೆ ಕುಳಿತುಕೊಂಡೆ ? ನಿನ್ನನ್ನು ಯಾರಾದರೂ ಹಾಸ್ಯ ಮಾಡಿದರೆ ? ಯಾಕೆ ಹೀಗೆ ಬುಸುಗುಟ್ಟುತ್ತಿ ?" ಎಂದು ಕೇಳಿದರು.

ವಿಷ್ಣುವರ್ಧನನು ಮುಖವನ್ನು ಇನ್ನಿಷ್ಟು ಕೆಂಪಗೆಮಾಡಿಕೊಂಡು ಅಜ್ಜಿಯನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದನು.

"ಏಕೆ, ಏನಾಯಿತು ಅಂತಹದು ? ಯಾರು ನಿನ್ನನ್ನು ಅಪಹಾಸ್ಯ ಮಾಡಿದರು ? ನನ್ನೊಡನೆ ಹೇಳಲೂ ಬೇಸರವೇ ?" ಎಂದು ಮಹಾರಾಣಿ ಮತ್ತೆ ಕೇಳಿದರು.

"ಅಜ್ಜಿ, ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇನೆ, ಉತ್ತರ ಕೊಡುತ್ತೀರಾ ?" ಸಿಟ್ಟು ಸೆಡವುಗಳಲ್ಲೇ ಪ್ರಶ್ನಿಸಿದ ವಿಷ್ಣುವರ್ಧನ.

"ಏನದು ಮಗು ?"

"ನೀವು ನನ್ನನ್ನು ಮತ್ತೆ ಗುರುಕುಲಕ್ಕೆ ಕಳುಹಿಸಬೇಕೆಂದಿರುವಿರಂತೆ ಹೌದೆ ?"

"ಹೌದು"

"ನನ್ನನ್ನು ಮಾತ್ರ ಯಾಕೆ ಗುರುಕುಲಕ್ಕೆ ಕಳುಹಿಸುತ್ತಿದ್ದೀರಿ ? ಕೇಶಣ್ಣ ನನ್ನೇಕೆ ಕಳುಹಿಸುತ್ತಿಲ್ಲ ?"

"ಕೇಶಣ್ಣನ ಶಿಕ್ಷಣ ಮುಗಿದಿದೆ ಮಗು, ನಿನ್ನದು ಇನ್ನೂ ಸಂಪೂರ್ಣವಾಗಿಲ್ಲ. ಇನ್ನು ಒಂದೆರಡು ವರ್ಷಗಳಲ್ಲಿ ನಿನ್ನ ಗುರುಕುಲವಾಸವೂ ಮುಗಿಯುತ್ತದೆ. ಏಕೆ ? ನಿನಗೆ ಗುರುಕುಲಕ್ಕೆ ಹೋಗಲು ಇಷ್ಟವಿಲ್ಲವೆ ?"

"ನಾನು ಗುರುಕುಲಕ್ಕೆ ಹೋಗುವುದಿಲ್ಲ ಅಜ್ಜಿ !"

"ಯಾಕೆ ಮಗು ?"

"ನನಗೆ ಓದುವುದು ಇಷ್ಟವಿಲ್ಲ."

"ನೀನು ರಾಜಪುತ್ರನಾಗಿ ಈ ಮಾತು ಹೇಳಿದರೆ ಹೇಗೆ ಮಗು ? ನಿನಗೆ ಇನ್ನೂ ಹದಿನಾರುವರ್ಷ ಕೂಡ ತುಂಬಿಲ್ಲ. ಈ ವಯಸ್ಸಿನಲ್ಲಿ ಕ್ಷತ್ರಿಯೋಚಿತವಾದ ವಿದ್ಯೆ ಕಲಿಯಬೇಕು. ಮುಂದೆ ರಾಜ್ಯಾಡಳಿತದ ಜಂಜಡ ಇದ್ದೇ ಇದೆ. ಈಗ ಕಲಿಯದೆ ಇರುವುದನ್ನು ನಾಳೆ ಕಲಿಯಬೇಕೆನಿಸಿದರೆ ಆಗುತ್ತದೆಯೇ ?"

"ನನಗೆ ಓದೂ ಬೇಡ—ಬರಹವೂ ಬೇಡ. ಈಗ ಕಲಿತಿರುವುದೇ ಸಾಕಾಗಿದೆ !"

"ಚೆನ್ನಾಯಿತು ಮಗು ! ನೀನು ಕೇಶಣ್ಣನಂತೆ, ಓದಿ ವಿದ್ಯಾವಂತನಾಗಿ, ಬುದ್ಧಿವಂತನಾಗುವುದು ಇಷ್ಟವಿಲ್ಲವೆ? ಅರಮನೆಯಲ್ಲಿ ಕುಳಿತು ಏನುಮಾಡುವೆ?"

"ಕೇಶಣ್ಣನು ಏನು ಮಾಡುತ್ತಾನೆಯೋ ನಾನೂ ಅದನ್ನೇ ಮಾಡುತ್ತೇನೆ."

"ಕೇಶಣ್ಣ ನಾಳೆ ಸಾಮ್ರಾಟನಾಗುವವನು. ಅವನು ರಾಜ್ಯಾಡಳಿತದಲ್ಲಿ ಅನುಭವ ಪಡೆಯುತ್ತಾನೆ. ನೀನು ಇಲ್ಲಿ ಕುಳಿತು ಏನು ಮಾಡುತ್ತಿ ?"

"ನಾನೂ ರಾಜ್ಯಾಡಳಿತದಲ್ಲಿ ಅನುಭವ ಪಡೆಯುತ್ತೇನೆ."

"ತುಂಬಾ ಸಂತೋಷ. ಆದರೆ ಅದಕ್ಕೂ ವಯಸ್ಸು-ಕಾಲ ಬೇಡವೇ ? ನೀನು ಗುರುಕುಲವಾಸ ಮುಗಿಸಿಕೊಂಡು ಮೊದಲು ಬಾ. ಆಮೇಲೆ ಕೇಶಣ್ಣ ನಿಗೆ ರಾಜ್ಯಭಾರದಲ್ಲಿ ನೆರವಾಗುವೆಯಂತೆ !"

"ನಾನು ಗುರುಕುಲಕ್ಕೆ ಹೋಗಬೇಕೆಂದು ನೀವೇಕೆ ಒತ್ತಾಯ ಮಾಡು ತ್ತಿದ್ದೀರಿ ?"

"ನಾವು ನಿನ್ನ ಒಳ್ಳೆಯದಕ್ಕೇ ಹೇಳುತ್ತಿದ್ದೇವೆ—ಈಗ ಕಲಿಯುವ ವಯಸ್ಸು—ಕಲಿಯಬೇಕು ಮಗು !"

"ಈ ಮಾತು ಸುಳ್ಳು, ನನ್ನನ್ನು ಗುರುಕುಲಕ್ಕೆ ಕಳುಹಿಸಿ, ಕೇಶಣ್ಣನಿಗೆ ಪಟ್ಟಗಟ್ಟಬೇಕೆಂದು ಯೋಚಿಸುತ್ತಿದ್ದೀರಿ. ನನಗೆ ನಿಮ್ಮ ತಂತ್ರವೆಲ್ಲ ತಿಳಿದಿದೆ !"

ಈ ಮಾತು ಕೇಳಿ ದುರ್ಲಭದೇವಿ ಹೌಹಾರಿದರು.

"ಮಗು, ಈ ಮಾತು ನಿನಗೆ ಯಾರು ಹೇಳಿದರು ?"

"ಯಾರೂ ಹೇಳಲಿಲ್ಲ. ನನಗೇ ತಿಳಿಯಿತು."

"ಏನು ತಿಳಿಯಿತು ?"

"ಕೇಶಣ್ಣನನ್ನು ನೀವು ಸಾಮ್ರಾಟನನ್ನಾಗಿ ಮಾಡಬೇಕೆಂದಿದ್ದೀರಿ !"

"ಹೌದು ಮಗು."

"ಕೇಶಣ್ಣ ಸಾಮ್ರಾಟನಾಗಬಹುದಾದರೆ, ನಾನೇಕೆ ಸಾಮ್ರಾಟನಾಗ ಬಾರದು ?"

"ಈ ಮಾತನ್ನು ಯಾರ ಮುಂದೆಯೂ ಹೇಳಬೇಡ. ಕೇಳಿದವರು ನಕ್ಕಾರು ?" ಎಂದು ದುರ್ಲಭದೇವಿ ನಕ್ಕರು.

"ಏಕೆ ? ನಾನು ಹೇಳುವುದರಲ್ಲಿ ನಗುವಂತಹುದು ಏನಿದೆ ?"

"ಮಗು, ಕೇಶಣ್ಣ ನಿನಗಿಂತ ದೊಡ್ಡವನು. ಅಲ್ಲದೆ ಹಿರಿಯ ಮಗ. ಸಿಂಹಾಸನದ ಹಕ್ಕು ಜ್ಯೇಷ್ಠಪುತ್ರರಿಗೇ ಹೊರತು, ಕನಿಷ್ಠರಿಗೆ ಅಲ್ಲ. ಇಷ್ಟಕ್ಕೂ ಸಾಮ್ರಾಟಪದವಿ ಎಂದರೆ ಏನು ತಿಳಿದಿರುವೆ ? ಅದೊಂದು ಮುಳ್ಳಿನ ಹಾಸಿಗೆ. ಅದನ್ನೇರಲು ಇಷ್ಟು ಆತುರವೆ ?"

"ಕೇಶಣ್ಣನಿಗೆ ಈ ಮುಳ್ಳಿನ ಹಾಸಿಗೆ ಏರಲು ಇಷ್ಟು ಆತುರವಿದ್ದರೆ ನನಗೇಕೆ ಇರಬಾರದು ? ಕೇಶಣ್ಣ ನನಗಿಂತ ಹಿರಿಯನಿರಬಹುದು, ನಾನು ಕಿರಿಯನಾದ ಮಾತ್ರಕ್ಕೆ ನನಗೆ ಸಿಂಹಾಸನದ ಹಕ್ಕು ಏಕೆ ಇಲ್ಲ ?"

"ಮಗು, ಈ ಮಾತುಗಳನ್ನು ನಿನಗೆ ಯಾರು ಹೇಳಿಕೊಟ್ಟರು? "

"ನನಗೆ ಯಾರೂ ಹೇಳಿಕೊಡಲಿಲ್ಲ. ನೀವು ನನ್ನನ್ನು ಗುರುಕುಲದ ಶಿಕ್ಷಣದ ನೆಪದಲ್ಲಿ ಹೊರಗಟ್ಟಿ ಯಾವುದೋ ಸ್ವಾರ್ಥ ಸಾಧಿಸುತ್ತಿರುವಿರೆಂದು ಊಹಿಸಿದೆ. ನನ್ನ ಮಾತು ಸುಳ್ಳೆ ?"

"ಸುಳ್ಳು ! ಸುಳ್ಳು !! ಸುಳ್ಳು !!! ನಿನ್ನನ್ನು ಗುರುಕುಲಕ್ಕೆ ಕಳುಹಿಸಿ ನಾವು ಯಾವ ಸ್ವಾರ್ಥವನ್ನೂ ಸಾಧಿಸುತ್ತಿಲ್ಲ. ನಿನಗೆ ಗುರುಕುಲಕ್ಕೆ ಹೋಗುವುದು ಇಷ್ಟವಿಲ್ಲದಿದ್ದರೆ ನೀನು ಇಲ್ಲೇ ಇರು, ಬೇಡವೆನ್ನುವುದಿಲ್ಲ. ಆದರೆ ಇದರಲ್ಲಿ ಯಾವುದೋ ಸ್ವಾರ್ಥವಿದೆ ಎಂಬ ಆರೋಪವನ್ನು ಮಾತ್ರ ನಮಗೆ ಹೊರಿಸಬೇಡ. ನೀವಿಬ್ಬರು ಸುಖವಾಗಿ, ಅನ್ಯೋನ್ಯವಾಗಿರಬೇಕೆಂಬ ಸ್ವಾರ್ಥದ ಹೊರತು ಬೇರಾವ ಸ್ವಾರ್ಥವೂ ನನಗೆ ಇಲ್ಲ. ಈ ಮಾತನ್ನು ನೀನು ಹೆಚ್ಚಾಗಿ ನೆನಪಿನಲ್ಲಿಡು ಮಗು !" ಎಂದು ಖಿನ್ನರಾಗಿ ಹೇಳಿದರು. ಏಕೋ ವಿಷ್ಣುವಿನ ಆರೋಪ ಕೇಳಿ ಅವರಿಗೆ ತುಂಬಾ ದುಃಖವಾಯಿತು. ಅವರು ಗಳಗಳನೆ ಅತ್ತರು.

"ಮಗು ನಿನ್ನಿಂದ ಇಂತಹ ಮಾತು ಕೇಳಲು ನಾನು ಬದುಕಬೇಕಾಯಿತೆ? ನನ್ನಲ್ಲೂ ನಿನಗೆ ಸಂದೇಹವೆ ?" ಎಂದು ಹೇಳಿ ವಿಷ್ಣುವರ್ಧನನನ್ನು ದೈನ್ಯದಿಂದ ನೋಡಿದರು. ಆ ಮಾತು ಕೇಳಿ ವಿಷ್ಣುವರ್ಧನನಿಗೆ ಸಹಸ್ರ ಹಾವು ಚೇಳುಗಳು ಕಚ್ಚಿದಷ್ಟು ನೋವಾಯಿತು.

"ಅಬ್ಬೆ, ನನ್ನಿಂದ ತಪ್ಪಾಯಿತು. ಇನ್ನುಮೇಲೆ ನಿಮ್ಮ ಮನಸ್ಸು ನೋಯಿಸುವ ಮಾತನಾಡುವುದಿಲ್ಲ. ಈ ಬಾರಿ ಕ್ಷಮಿಸಿರಿ !" ಎಂದು ಗದ್ಗದ ಕಂಠದಲ್ಲಿ ಹೇಳಿ ಅವನು ಸಣ್ಣ ಮಗುವಿನಂತೆ ಅತ್ತನು.

ಈ ಪ್ರಸಂಗವನ್ನು ವಿಷ್ಣುವರ್ಧನನು ಮರೆತರೂ, ಮಹಾರಾಣಿ ದುರ್ಲಭದೇವಿ ಮರೆಯಲಿಲ್ಲ. ತಮಗೆ ಆಗದವರು—ಬಹುಶಃ ಮಂಗಳೇಶನ ಪಕ್ಷದವರು —ಯಾರೋ ವಿಷ್ಣುವನ್ನು ತಮ್ಮ ವಿರುದ್ಧ ಎತ್ತಿಕಟ್ಟುತ್ತಿದ್ದಾರೆ. ಅವನ ಎಳೆಯ ತಲೆಯಲ್ಲಿ ತಮ್ಮ ವಿಷಯದಲ್ಲಿ ಸಲ್ಲದ ಸಂದೇಹ ತುಂಬುತ್ತಿದ್ದಾರೆ

ಎಂಬುದು ಅವರಿಗೆ ಸ್ಪಷ್ಟವಾಯಿತು. ದಿನದಿನಕ್ಕೂ ವಿಷ್ಣುವರ್ಧನನು ತಮ್ಮಿಂದ ದೂರ ಸಿಡಿಯುತ್ತಿರುವುದು ಅವರ ಗಮನಕ್ಕೆ ಬಾರದೆ ಹೋಗಿರಲಿಲ್ಲ. ರಾಮ ಲಕ್ಷ್ಮಣರಂತೆ ಇರಲೆಂದು ಆಶಿಸಿದ್ದ ಮೊಮ್ಮಕ್ಕಳು ವಾಲಿಸುಗ್ರೀವರಂತೆ ಆಗುತ್ತಿದ್ದಾರಲ್ಲಾ ಎಂದು ಅವರ ಮಾತೃಹೃದಯ ಮಮ್ಮಲ ಮರುಗಿತು.

ಹಾಗಾದರೆ ವಿಷ್ಣುವರ್ಧನನನ್ನು ತಮ್ಮಿಂದ ದೂರಸರಿಸುತ್ತಿರುವ ವ್ಯಕ್ತಿ ಯಾರು ?

ಕೊಂಚ ಎಚ್ಚತ್ತು ನೋಡಿದಾಗ ವಿಷ್ಣುವರ್ಧನನನ್ನು ಅಡ್ಡದಾರಿಗೆ ಎಳೆಯುತ್ತಿರುವ ವ್ಯಕ್ತಿ ಬೇರಾರೂ ಅಲ್ಲ, ಮಂಗಳೇಶನೇ ಎಂಬುದು ಸ್ಪಷ್ಟವಾಯಿತು. ಈ ಬಗ್ಗೆ ಎಚ್ಚರಿಸದೆ ಇದ್ದರೆ ವಿಷ್ಣು ತಮ್ಮಿಂದ ಸಿಡಿದುಹೋಗುವನೆಂದು ಭಾವಿಸಿ, ಒಂದು ದಿನ ಅವನೊಡನೆ ಈ ಬಗ್ಗೆ ಮಾತು ತೆಗೆದರು :

"ಮಗು ವಿಷ್ಣು, ನಿನ್ನೊಡನೆ ಒಂದು ಮಾತು ಹೇಳಬೇಕೆಂದು ಅನೇಕ ದಿನಗಳಿಂದ ಯೋಚಿಸುತ್ತಿದ್ದೇನೆ. ನೀನು ಇತ್ತೀಚಿನ ದಿನಗಳಲ್ಲಿ ಚಿಕ್ಕಪ್ಪ ಮಂಗಳೇಶನೊಂದಿಗೆ ಹೆಚ್ಚು ಸ್ನೇಹದಿಂದ ಇದ್ದೀಯೆ. ಇದನ್ನು ನೋಡಿ ನಮಗೆ ಕಳವಳಕ್ಕೆ ಕಾರಣವಾಗಿದೆ. ಅವನು ಎಂತಹ ಕುಟಿಲವ್ಯಕ್ತಿ ಎಂಬುದು ನಿನಗೆ ತಿಳಿದಿದೆ. ಅವನು ಹೊರಗೆ ವಿಶ್ವಾಸ ನಟಿಸುತ್ತಾ ನಮಗೆ ದ್ರೋಹ ಬಗೆಯುತ್ತಿದ್ದಾನೆ. ನೀನು ಇಂತಹ ಹಿತಶತ್ರುಗಳ ಸ್ನೇಹಬೆಳೆಸುತ್ತಿದ್ದಿ ! ಇದು ಯಾಕೋ ಒಳ್ಳೆಯ ಸೂಚನೆ ಅಲ್ಲ !" ಎಂದು ಹೇಳಿದರು.

"ಅಬ್ಬೆ, ನಾನು ಚಿಕ್ಕಪ್ಪಾಜಿಯವರೊಂದಿಗೆ ಸಲಿಗೆಯಿಂದ ಇದ್ದಮಾತ್ರಕ್ಕೆ ನೀವೇಕೆ ಕಳವಳಗೊಳ್ಳಬೇಕು ? ಅವರು ಕೆಟ್ಟವರಿರಬಹುದು. ಆದರೆ ನಮಗೆ ದ್ರೋಹ ಬಗೆಯುತ್ತಿರುವರೆಂಬ ಮಾತು ಸುಳ್ಳು."

"ಮಗು, ನಿನಗೆ ಇನ್ನೂ ನಿನ್ನ ಚಿಕ್ಕಪ್ಪನ ವಿಷಯ ತಿಳಿಯದು. ಅವನು ತನ್ನ ಹೃದಯದಲ್ಲಿ ದ್ರೋಹವನ್ನು ತುಂಬಿಟ್ಟುಕೊಂಡು, ಮೇಲೆ ಜೇನುತುಪ್ಪದ ಮಾತನ್ನು ಹೇಳುತ್ತಿದ್ದಾನೆ. ಅವನನ್ನು ನಂಬಬೇಡ. ಅವನ ಮಾತನ್ನು ಕೇಳಬೇಡ. ಅವನು ನಡೆದ ದಾರಿಯಲ್ಲಿ ನಡೆಯಬೇಡ. ಅವನೊಂದು ವಿಷಜಂತು ! ಅವನ ಬಗ್ಗೆ ಎಷ್ಟು ಎಚ್ಚರದಿಂದ ಇದ್ದರೆ ಅಷ್ಟು ಒಳ್ಳೆಯದು."

"ಅಬ್ಬೆ, ನೀವು ಅವರ ವಿಷಯವನ್ನು ತಪ್ಪು ತಿಳಿದಿದ್ದೀರಿ. ಅವರ ಬಗ್ಗೆ ವೃಥಾ ಸಂಶಯಗ್ರಸ್ತರಾಗಿದ್ದೀರಿ. ಅವರು ನಮಗೆ ದ್ರೋಹಬಗೆಯುತ್ತಿಲ್ಲ.

ನಮ್ಮ ಅಭ್ಯುದಯವನ್ನೇ ಹಾರೈಸುತ್ತಿದ್ದಾರೆ. ನಮ್ಮ ಹಿತೈಷಿಗಳಲ್ಲಿ ಒಬ್ಬರಾದ ಅವರನ್ನೇಕೆ ನೀವು ವಿಷಜಂತುವೆಂದು ಕರೆಯುತ್ತೀರೋ ನನಗೆ ತಿಳಿಯದಾಗಿದೆ. ಅವರು ನಮಗೆ ಮಾಡಿರುವ ಅನ್ಯಾಯವಾದರೂ ಏನು ?"

"ಅನ್ಯಾಯವೇ ? ಅವನು ನಿಮ್ಮದಾದ ಸಿಂಹಾಸನವನ್ನೂ, ಸಾಮ್ರಾಜ್ಯ ವನ್ನೂ ನಿಮ್ಮಿಂದ ಕಸಿದುಕೊಂಡು ತಾನೇ ಸಾಮ್ರಾಟನಾಗಿ ಮೆರೆಯಲು ಯೋಚಿಸುತ್ತಿದ್ದಾನೆ, ಇದಕ್ಕಿಂತ ಬೇರೆ ದ್ರೋಹಚಿಂತನೆ ಬೇಕೆ ?"

"ಅವರಿಗೆ ಸಿಂಹಾಸನವನ್ನು ನಮ್ಮಿಂದ ಕಸಿಯುವ ಆಸೆ ಇದ್ದಿದ್ದರೆ ಅವರು ಇದುವರೆಗೆ ಏಕೆ ರಾಜಪ್ರತಿನಿಧಿಯಾಗಿ ಇರುತ್ತಿದ್ದರು ? ಅವರು ಸಿಂಹಾಸನ ವನ್ನು ಆಕ್ರಮಣ ಮಾಡಲು ಇದುವರೆಗೆ ಯಾರ ಅಡ್ಡಿ ಆತಂಕಗಳು ಇದ್ದುವು? ಆದರೆ ಅವರೇಕೆ ತಾವೇ ಸಿಂಹಾಸನವನ್ನು ಆಕ್ರಮಿಸಿಕೊಳ್ಳಲಿಲ್ಲ ? ಸ್ವತಂತ್ರ ಸಾಮ್ರಾಟರೆಂದು ಘೋಷಿಸಿಕೊಳ್ಳಲಿಲ್ಲ ? ಇದೆಲ್ಲವೂ ನಿಮ್ಮ ಅಂತರಂಗದ ಭೀತಿಯೇ ಹೊರತು, ಇದರಲ್ಲಿ ವಾಸ್ತವಾಂಶ ಎಳ್ಳಷ್ಟೂ ಇಲ್ಲ. ನೀವು ಚಿಕ್ಕಪ್ಪಾಜಿಯವರನ್ನು ವೃಥಾ ದೂಷಿಸುತ್ತಿದ್ದೀರಿ."

"ಮಗು, ನಿನಗಿನ್ನೂ ಇಲ್ಲಿನ ರಾಜಕಾರಣ ತಿಳಿಯದು. ಬೆಳ್ಳಗಿರುವುದೆಲ್ಲ ಹಾಲೆಂದು ತಿಳಿಯುವ ನೀನು ಇನ್ನೂ ಹಸುಗೂಸೇ ಸರಿ ! ನಿನ್ನ ಚಿಕ್ಕಪ್ಪ ಮಂಗಳೇಶ ನೀನು ತಿಳಿದಿರುವಷ್ಟು ನಿಸ್ಪೃಹನಲ್ಲ. ಅವನು ಈ ವೇಳೆಗೆ ಎಂದೋ ನಿಮ್ಮನ್ನು ಕೊಂದು ರಾಜ್ಯವನ್ನು ಆಕ್ರಮಿಸಿಕೊಳ್ಳುತ್ತಿದ್ದ. ಆದರೆ ಅವನ ದುಷ್ಟ ಯೋಚನೆಗೆ ಅಡ್ಡವಾಗಿ ನಾನು ಘಟಸರ್ಪದಂತೆ ಬಿದ್ದಿದ್ದೇನೆ. ಇಲ್ಲದಿದ್ದರೆ, ಚಾಲುಕ್ಯ ಸಿಂಹಾಸನ ಅವನದಾಗಿ ಎಷ್ಟೋ ಕಾಲವಾಗುತ್ತಿತ್ತು ! ಈ ಹತ್ತು ವರ್ಷಗಳು ನಿಮ್ಮ ಸಲುವಾಗಿ ನಾನು ಪಟ್ಟ ಭವಣೆ ಎಷ್ಟೆಂದು ನಿನಗೆ ತಿಳಿದಿದ್ದರೆ ನೀನು ನನಗೆ ಬುದ್ಧಿ ಹೇಳಲು ಬರುತ್ತಿರಲಿಲ್ಲ ! ನಿನ್ನ ಚಿಕ್ಕತಂದೆ ನೀನು ತಿಳಿ ದಿರುವಷ್ಟು ಪ್ರಾಮಾಣಿಕನಾಗಿದ್ದಿದ್ದರೆ, ಪುಲಿಕೇಶಿಯು ಹಿಂದಿರುಗಿ ಬಂದು ಆರು ತಿಂಗಳಾಗುತ್ತಾ ಬಂದರೂ ಇನ್ನೂ ಸಿಂಹಾಸನವನ್ನು ಬಿಟ್ಟುಕೊಡುವ ಯೋಚನೆ ಮಾಡಿಲ್ಲವೇಕೆ ? ಅವನಿಗೆ ಅನಾಯಾಸವಾಗಿ ದೊರೆತಿರುವ ಚಾಲುಕ್ಯ ಸಿಂಹಾಸನ ವನ್ನು ಇಷ್ಟು ಸುಲಭವಾಗಿ ಬಿಟ್ಟುಕೊಡುವುದು ಇಷ್ಟವಿಲ್ಲ. ಇದರ ಸಲುವಾಗಿ ಇನ್ನು ಎಷ್ಟು ರಕ್ತಪಾತ ಹರಿಯಬೇಕೋ ಆ ಮಕುಟೇಶ್ವರನಿಗೇ ಗೊತ್ತು !" ಎಂದು ನಿಟ್ಟುಸಿರು ಬಿಟ್ಟರು.

"ಅಬ್ಬೆ, ಚಿಕ್ಕಪ್ಪಾಜಿಯು ರಾಜ್ಯಲೋಭದಿಂದ ಸಿಂಹಾಸನವನ್ನು ಬಿಟ್ಟು ಕೊಡಲು ಹಿಂದೆ ಮುಂದೆ ತುಳಿಯುತ್ತಿಲ್ಲವಂತೆ. ನಾವು ರಾಜ್ಯಾಡಳಿತದಲ್ಲಿ ಸಾಕಷ್ಟು ನುರಿತಮೇಲೆ, ಸಿಂಹಾಸನವನ್ನು ನಮ್ಮದು ಮಾಡುತ್ತಾರಂತೆ !"

"ಈ ಮಾತು ಯಾರು ಹೇಳಿದರು ?"

"ಸ್ವಯಂ ಚಿಕ್ಕಪ್ಪಾಜಿಯವರೇ ಎಷ್ಟೋ ಬಾರಿ ಹೇಳಿದ್ದಾರೆ !"

"ಸಿಂಹಾಸನವನ್ನು ಆಕ್ರಮಿಸಿಕೊಳ್ಳುವ ದುಷ್ಟಯೋಚನೆ ಅವರಿಗೆ ಇಲ್ಲ ದಿದ್ದರೆ, ಸ್ವಾಮಿರಾಜನ ಮೇಲೆ ನಡೆದ ಯುದ್ಧದಲ್ಲಿ ದೊರೆತ ಅಪಾರ ಸೂರೆ ಯಿಂದ ತಮ್ಮದೇ ಆದ ಸೈನ್ಯವನ್ನೇಕೆ ಕಟ್ಟುತ್ತಿದ್ದಾರೆ ? ನಾಳೆ ಸಿಂಹಾಸನ ಕ್ಕಾಗಿ ಹೋರಾಟ ನಡೆದರೆ ತಮ್ಮ ಬೆಂಬಲಕ್ಕೆ ಇರಲಿ ಎಂದಲ್ಲವೆ ?"

ಈ ಮಾತಿಗೆ ವಿಷ್ಣುವರ್ಧನನಿಗೆ ಏನು ಉತ್ತರಕೊಡಬೇಕೆಂದು ತೋಚ ಲಿಲ್ಲ. ಮಂಗಳೇಶನು ರೇವತೀ ದ್ವೀಪದಲ್ಲಿ ದೊರೆತ ಸೂರೆಯನ್ನು ಅಡಗಿಸಿಟ್ಟದ್ದು, ಈಗ ರಾಹಪ್ಪಯ್ಯನ ಕೈಕೆಳಗೆ ತನ್ನದೇ ಆದ ಸೈನ್ಯ ಕಟ್ಟುತ್ತಿರುವ ಸಂಗತಿ ಅವನಿಗೆ ಹೊಸ ವಿಷಯವಾಗಿತ್ತು ! ಅವನು ಆಶ್ಚರ್ಯದಿಂದ ಅಬ್ಬೆಯ ಕಡೆಗೆ ನೋಡಿ,

"ನಿಮ್ಮ ಮಾತು ನಿಜವೇ ಅಬ್ಬೆ ?" ಎಂದು ಕೇಳಿದ.

"ಹಾಗೆಂದು ನಮಗೆ ನಂಬಲರ್ಹವಾದ ಕಡೆಯಿಂದ ವಾರ್ತೆ ಬಂದಿದೆ. ನಗರದಲ್ಲೆಲ್ಲಾ ಸಿಂಹಾಸನಕ್ಕಾಗಿ ಹೋರಾಟ ನಡೆಯಲಿದೆ ಎಂದು ವದಂತಿ ಹುಟ್ಟಿದೆ. ಇಂತಹ ಸಮಯದಲ್ಲಿ ನೀನು ಚಿಕ್ಕಪ್ಪಾಜಿಯವರೊಡನೆ ಹೆಚ್ಚಿನ ಸ್ನೇಹ ಇಟ್ಟುಕೊಳ್ಳುವುದು ಒಳ್ಳೆಯದೆ ? ನೀನೇನೂ ಅರಿಯದ ಮಗುವಲ್ಲ. ನಮ್ಮ ಎಚ್ಚರದಲ್ಲಿ ನಾವು ಇರುವುದು ಒಳ್ಳೆಯದು ಮಗು !" ಎಂದು ಮಹಾ ರಾಣಿ ದುರ್ಲಭದೇವಿ ಹೇಳಿದರು.

## ೬

ಮಂಗಳೇಶನು ತನಗೆ ದೊರೆತ ಸೂರೆಯ ಹಣದಿಂದ ತನ್ನದೇ ಆದ ಸೈನ್ಯ ಕಟ್ಟುತ್ತಿರುವ ಸಂಗತಿ ಅವನೆಷ್ಟು ರಹಸ್ಯವಾಗಿರಿಸಿದ್ದರೂ ಪುಲಿಕೇಶಿ, ದುರ್ಲಭ

ದೇವಿಯರ ಕಿವಿಗೆ ಬೀಳದೆ ಹೋಗಲಿಲ್ಲ. ಇದುವರೆಗೆ ತಾವು ಸುಮ್ಮನೆ ಇದ್ದಂತೆ, ಸುಮ್ಮನಿದ್ದರೆ ಸಿಂಹಾಸನ ತಮ್ಮ ಕೈಬಿಟ್ಟು ಹೋಗುವುದು ನಿಶ್ಚಯ. ಆದಷ್ಟು ಬೇಗ ಮಂಗಳೇಶನೊಡನೆ ಮಾತನಾಡಿ, ಪುಲಿಕೇಶಿಯ ಪಟ್ಟಾಭಿಷೇಕಕ್ಕೆ ವ್ಯವಸ್ಥೆ ಮಾಡಬೇಕು ಎಂದು ಮಹಾರಾಣಿ ದುರ್ಲಭದೇವಿ, ಸಮಂತಭದ್ರ ಮುಂತಾದ ಸ್ವಾಮಿನಿಷ್ಠ ಸೇವಕರೊಡನೆ ಯೋಚಿಸಿದರು. ಈ ವಿಷಯವನ್ನು ಹಿರಿಯರು ಪ್ರಸ್ತಾಪಿಸುವ ಮೊದಲು ಮಂಗಳೇಶನ ಅಂತರ್ಯವೇನೆಂದು ತಿಳಿಯಲು ಪುಲಿಕೇಶಿಯೇ ಒಂದು ದಿನ ಮಂಗಳೇಶನೊಡನೆ ಈ ಬಗ್ಗೆ ಮಾತು ತೆಗೆದ :

"ಅಪ್ಪಾಜಿ, ನೀವು ಇತ್ತೀಚಿಗೆ ಹೆಚ್ಚು ಹೆಚ್ಚಾಗಿ ಸೈನ್ಯಸಂಗ್ರಹ ಮಾಡುತ್ತಿರುವುದಾಗಿ ಕೇಳಿದೆ. ಶಾಂತಿಕಾಲದಲ್ಲಿ ಯುದ್ಧದ ಸಿದ್ಧತೆಮಾಡಿಕೊಳ್ಳುವ ಅಂತಹ ಪ್ರಸಂಗವೇನಿದೆ ತಿಳಿಯಬಹುದೆ ?"

"ನಾನು ಸೈನ್ಯಕಟ್ಟುತ್ತಿರುವ ವಿಷಯ ನಿನಗೆ ಹೇಗೆ ತಿಳಿಯಿತು ?"

"ಹೀಗೆಯೇ ವರ್ತಮಾನ ಬಂತು, ಈ ಸುದ್ದಿ ಸುಳ್ಳಲ್ಲ ತಾನೆ ?"

"ಮಗು, ನಿನಗೆ ಇನ್ನೂ ಸಾಮ್ರಾಜ್ಯದ ಸ್ಥಿತಿಗತಿಗಳು ಚೆನ್ನಾಗಿ ತಿಳಿದಿಲ್ಲ. ನಾವು ಬುದ್ಧರಾಜನನ್ನು ಶಿಕ್ಷಿಸದೆ ಬಿಟ್ಟುದು ತಪ್ಪಾಯಿತು. ಈಗ ಅವರ ವಿದ್ರೋಹದಿಂದ ಸ್ಫೂರ್ತಿಗೊಂಡು ಗಂಗರೂ, ಕದಂಬರೂ, ಪಲ್ಲವರೂ ನಮ್ಮ ರಾಜ್ಯದ ಮೇಲೆ ದಂಡೆತ್ತಿ ಬರಲು ಯುದ್ಧಸಿದ್ಧತೆಮಾಡಿಕೊಳ್ಳುತ್ತಿರುವುದಾಗಿ ವರದಿ ಬಂದಿದೆ. ಈ ಸುದ್ದಿ ನಿಜವಾದರೆ, ಚಾಲುಕ್ಯ ಸಾಮ್ರಾಜ್ಯಕ್ಕೆ ಯಾವುದೋ ಗಂಡಾಂತರ ಕಾದಿದೆ. ಅದನ್ನು ತಪ್ಪಿಸಲು ನಾನು ಈಗಲಿಂದಲೇ ಸಮರಸಿದ್ಧತೆ ಮಾಡಿಕೊಳ್ಳುತ್ತಿದ್ದೇನೆ."

"ನೀವು ಶತ್ರುಗಳ ವಿರುದ್ಧ ಸೈನ್ಯವನ್ನು ಸಜ್ಜುಗೊಳಿಸುತ್ತಿದ್ದರೆ ಆ ಮಾತು ಬೇರೆ. ಆದರೆ ನೀವು ನಿಮ್ಮದೇ ಆದ ಸೈನ್ಯವನ್ನು ರಾಹಪ್ಪಯ್ಯನ ಮುಂದಾಳುತನದಲ್ಲಿ ರಚಿಸುತ್ತಿರುವುದಾಗಿ ವದಂತಿಹುಟ್ಟಿದೆ. ಈ ಸೈನಿಕರು ಮದೋನ್ಮತ್ತರಾಗಿ, ಪ್ರಜೆಗಳಿಗೆ ಕಿರುಕುಳ ಕೊಡುತ್ತಿದ್ದಾರಂತೆ. ಈ ಸುದ್ದಿ ನಿಜವಾದರೆ, ಸಾಮ್ರಾಜ್ಯಕ್ಕೆ ಶತ್ರುಗಳಿಗಿಂತಲೂ ಇವರಿಂದ ಹೆಚ್ಚಿನ ಗಂಡಾಂತರ ಕಾದಿದೆ !"

"ಕೇಶಣ್ಣ, ಇದೆಲ್ಲ ಸುಳ್ಳು ಸುದ್ದಿ. ನಿನಗೆ ಯಾರು ಹೇಳಿದರು ? ನಾನೇಕೆ ಸ್ವಂತ ಸೈನ್ಯಕಟ್ಟುತ್ತಿದ್ದೇನೆ ? ಇದರಲ್ಲಿ ನನಗೆ ಯಾವ ಸ್ವಾರ್ಥವಿದೆ ?"

"ಅಪ್ಪಾಜಿ, ನಾನು ಸ್ಪಷ್ಟವಾಗಿ ಮಾತನಾಡುತ್ತಿದ್ದೇನೆಂದು ನೀವು ಅನ್ಯಥಾ ಭಾವಿಸಬಾರದು. ಜನತೆ ನಿಮ್ಮ ವಿಷಯದಲ್ಲಿ ಅನೇಕ ಬಗೆಯಲ್ಲಿ ಮಾತನಾಡುತ್ತಿದೆ. ನೀವು ರೇವತೀ ದ್ವೀಪದಲ್ಲಿ ದೊರೆತ ಸೂರೆಯನ್ನು ರಹಸ್ಯವಾಗಿ ಇರಿಸಿದ್ದು, ಈಗ ಅದರಿಂದ ಈ ರಹಸ್ಯ ಸೈನ್ಯ ನಿರ್ಮಿಸುತ್ತಿದ್ದೀರಂತೆ! ಈ ಸೈನ್ಯಸಹಾಯದೊಡನೆ, ನೀವೇ ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಯೋಚಿಸಿರುವಿರಂತೆ. ಈ ಎಲ್ಲ ಸುದ್ದಿ ಕೇಳಿ ಜನ ಕಂಗೆಟ್ಟಿದ್ದಾರೆ. ಇದರಲ್ಲಿ ವಾಸ್ತವಾಂಶ ತಿಳಿಯಲು ನಾನು ಬಂದೆ, ಅಪ್ಪಾಜಿ!" ಎಂದು ಪುಲಿಕೇಶಿ ಹೇಳಿ, ಮಂಗಳೇಶನನ್ನು ದಿಟ್ಟಿಸಿ ನೋಡಿದ. ಅವನ ನೋಟವನ್ನು ಎದುರಿಸಲಾರದೆ ಮಂಗಳೇಶನು ತಲೆಯನ್ನು ನೆಲಕ್ಕೆ ತಗ್ಗಿಸಿ, ಏನನ್ನೋ ಯೋಚಿಸುತ್ತಾ ಕುಳಿತ. ಅವನ ಮುಖದಲ್ಲಿ ಇದ್ದ ಕಳೆ ಬತ್ತಿಹೋಗಿ, ಆತಂಕ ಎದ್ದು ಕಾಣುತ್ತಿತ್ತು. ಅವನು ಪುಲಿಕೇಶಿಗೆ ಇದೆಲ್ಲ ಸುದ್ದಿ ಹೇಗೆ ತಿಳಿಯಿತು ಎಂದು ಅಚ್ಚರಿಗೊಂಡನು. ಇಂತಹ ಭಯಂಕರವಾದ ಸುದ್ದಿಯನ್ನು ನಿರ್ಭೀತಿಯಿಂದ ತನ್ನೊಡನೆ ಪ್ರಸ್ತಾಪಿಸಿದ ಅವನ ಧೈರ್ಯಕ್ಕೆ ಮಂಗಳೇಶ ಬೆರಗಾಗಿದ್ದನು. ಅವನು ಕಳವಳಗೊಂಡ ಧ್ವನಿಯಲ್ಲಿ ಹೇಳಿದನು :

"ಮಗು ಪುಲಿಕೇಶಿ, ನಾನು ನಿನ್ನೊಡನೆ ಸ್ಪಷ್ಟವಾಗಿ ಮಾತನಾಡುತ್ತಿದ್ದೇನೆ. ಈ ಎಲ್ಲ ಸುದ್ದಿಯನ್ನು ನಿನಗೆ ಯಾರು ತಿಳಿಸಿದರೋ ತಿಳಿಯದು! ಅವರು ನನಗೂ ನಿನಗೂ ಭಯಂಕರ ದ್ರೋಹಬಗೆಯುತ್ತಿದ್ದಾರೆ; ನಿನಗೆ ನನ್ನಲ್ಲಿ ಇಲ್ಲದ ಸಂಶಯ ಬಿತ್ತಲೆಂದೇ ಈ ಎಲ್ಲ ವದಂತಿಗಳನ್ನು ಹರಡಿದ್ದಾರೆ. ಇದರಲ್ಲಿ ಎಳ್ಳಷ್ಟೂ ಸತ್ಯವಿಲ್ಲ. ಇಂತಹ ವದಂತಿಗಳನ್ನು ನೀನು ನಂಬಬೇಡ."

"ಇವುಗಳು ಬುಡವಿಲ್ಲದ ವದಂತಿಗಳಾದರೂ, ಬೆಂಕಿ ಇಲ್ಲದೆ ಹೊಗೆ ಏಳುವುದೇ ಅಪ್ಪಾಜಿ? ಇಷ್ಟೆಲ್ಲ ವದಂತಿ ಹರಡಲು ಏನೋ ಕಾರಣವಿರಬೇಕು!"

"ಕೇಶಣ್ಣ, ನೀನಿನ್ನೂ ಮಗು. ನಮ್ಮ ರಾಜಧಾನಿಯಲ್ಲಿ ನಮಗೆ ಆಗದ ವಿದ್ರೋಹಿಗಳು ಅನೇಕರಿದ್ದಾರೆ. ನಾನು ರಾಜಪ್ರತಿನಿಧಿಯಾಗಿರುವುದು ಅನೇಕರಿಗೆ ಅಸೂಯೆ. ನನ್ನನ್ನು ಅಧಿಕಾರಚ್ಯುತನನ್ನಾಗಿ ಮಾಡಲು ನನ್ನ ವಿಷಯದಲ್ಲಿ ನಿನ್ನ ಮನಸ್ಸನ್ನು ಕೆಡಿಸಲು ಈ ಸುಳ್ಳುಕತೆ ಹರಡಿದ್ದಾರೆ. ನೀನು ಆ ದ್ರೋಹಿಗಳ ಮಾತಿಗೆ ಕಿವಿಗೊಡಬೇಡ."

"ಇದರಲ್ಲಿ ವಿದ್ರೋಹಿಗಳು ಸಾಧಿಸುವ ಸ್ವಾರ್ಥವಾದರೂ ಏನು?"

"ಅವರಿಗೆ ಬೇಕಿರುವುದು ನಮ್ಮಿಬ್ಬರ ಪ್ರೀತಿವಿಶ್ವಾಸಗಳಲ್ಲಿ ವಿಷಹಿಂಡುವುದು. ಪರಸ್ಪರ ದ್ವೇಷಾಸೂಯೆಗಳನ್ನು ಬಿತ್ತುವುದು !"

"ಆ ವಿಶ್ವಾಸಘಾತುಕರ ಮಾತಿಗೆ ನಾನು ಕಿವಿಗೊಡುವವನಲ್ಲ. ನೀವು ಇದುವರೆಗೆ ರಾಜಪ್ರತಿನಿಧಿಯಾಗಿ ಸಾಮ್ರಾಜ್ಯಕ್ಕೆ ಸಲ್ಲಿಸಿರುವ ಸೇವೆ ಅಲ್ಪವೆ ? ನಿಮಗೆ ನಾವು ಎಷ್ಟು ಋಣಿಯಾಗಿದ್ದರೂ ಸಾಲದು."

"ನಾನು ನಿಮಗೆ ನಿಷ್ಠೆಯಿಂದ ಸೇವೆ ಸಲ್ಲಿಸಿರುವೆನೋ ಇಲ್ಲವೋ ಆ ಜಗದೀಶ್ವರನಿಗೇ ಗೊತ್ತು ! ಈ ಹತ್ತು ವರ್ಷಗಳಲ್ಲಿ ಸಿಂಹಾಸನವನ್ನು ನಾನೇ ಆಕ್ರಮಿಸಿಕೊಂಡು, ಸಾಮ್ರಾಟನಾಗಿ ಮೆರೆಯಬಹುದಿತ್ತು. ಆದರೆ ಆ ಬಗೆಯ ದ್ರೋಹ ಚಿಂತನೆ ನನಗೆ ಇಲ್ಲ. ಅಂತಹ ಕೀಳು ಪ್ರಲೋಭಕ್ಕೆ ನಾನು ಒಳಗಾಗಲಿಲ್ಲ. ನಾನು ರಾಜಪ್ರತಿನಿಧಿಯಾಗಿದ್ದು ಪ್ರತಿಯೊಂದು ವಿಷಯದಲ್ಲೂ ಮಹಾರಾಣಿ ದುರ್ಲಭದೇವಿಯವರ ಸಲಹೆ, ಸಂದೇಶಗಳಂತೆ ಆಡಳಿತ ನಡೆಸಿದ್ದೇನೆ. ಹೀಗಿದ್ದೂ ನನ್ನ ನಿಷ್ಠೆಯನ್ನು ಶಂಕಿಸುವ ದ್ರೋಹಿಗಳು ಇನ್ನೂ ಇದ್ದಾರಲ್ಲಾ ಎಂದು ವಿಷಾದವಾಗುತ್ತದೆ. ಈ ಲೋಕದಲ್ಲಿ ನಿರ್ಮಲ ನಡತೆಗೆ, ಸಚ್ಚಾರಿತ್ರ್ಯಕ್ಕೆ ಬೆಲೆಯೇ ಇಲ್ಲವೇನೋ !" ಎಂದು ಉದ್ಗಾರ ತೆಗೆದು ನಿಟ್ಟುಸಿರುಬಿಟ್ಟ ಮಂಗಳೇಶ.

"ಅಪ್ಪಾಜಿ, ದ್ರೋಹಿಗಳ ಮಾತಿಗಾಗಿ ನೀವು ನೊಂದುಕೊಳ್ಳುವ ಕಾರಣವಿಲ್ಲ. ನೀವು ಸಾಮ್ರಾಜ್ಯಕ್ಕೆ ಎಷ್ಟು ನಿಷ್ಠೆಯಿಂದ ಸೇವೆ ಸಲ್ಲಿಸಿದ್ದೀರೆಂದು ನನಗೆ ತಿಳಿದಿದೆ. ನಿಮ್ಮಂಥ ಸಜ್ಜನರೂ ಅಪವಾದಕ್ಕೆ ಒಳಗಾಗಬೇಕಾದುದು ಲೋಕನಿಯಮವೆಂದು ಕಾಣುತ್ತದೆ. ಅಂತಹ ಶ್ರೀರಾಮಚಂದ್ರನನ್ನೂ ಆರೋಪ ಬಿಡಲಿಲ್ಲ. ನೀವು ಆ ಬಗ್ಗೆ ಚಿಂತಿಸುವ ಕಾರಣವಿಲ್ಲ. ಲೋಕವನ್ನು ಮೆಚ್ಚಿಸಲು ಯಾರಿಂದಲೂ ಸಾಧ್ಯವಿಲ್ಲ. ನೀವು ನಿಮ್ಮ ಆತ್ಮಸಾಕ್ಷಿಯಂತೆ ನಡೆದಿದ್ದೀರಿ. ನೀವು ಸಿಂಹಾಸನವನ್ನೂ, ಸಾಮ್ರಾಜ್ಯವನ್ನೂ ನ್ಯಾಯವಾದ ಹಕ್ಕುದಾರರಿಗೆ ಒಪ್ಪಿಸಿಕೊಟ್ಟಾಗ ನಿಮ್ಮನ್ನು ನಿಂದಿಸಿದ ಲೋಕವೇ ನಿಮಗೆ ಮನ್ನಣೆ ಮಾಡುತ್ತದೆ. ನಿಮ್ಮ ನಿಷ್ಠೆಯನ್ನು ಶಂಕಿಸಿದ ದ್ರೋಹಿಗಳೇ ಪಶ್ಚಾತ್ತಾಪಪಡುತ್ತಾರೆ. ಈ ಬಗ್ಗೆ ನೀವು ಚಿಂತಿಸುವ ಕಾರಣವಿಲ್ಲ, ಅಪ್ಪಾಜಿ !" ಎಂದು ಪುಲಿಕೇಶಿ ಕಳಕಳಿಯಿಂದ ಹೇಳಿದ.

"ಮಗು, ಸಿಂಹಾಸನಕ್ಕೆ ನ್ಯಾಯವಾದ ಹಕ್ಕುದಾರನಾದ ನಿನಗೆ ಅದ

ನ್ನೆಂದೋ ಒಪ್ಪಿಸಿಕೊಡುತ್ತಿದ್ದೆ. ಆದರೆ ಇದರಲ್ಲಿ ಒಂದು ಧರ್ಮಸಂಕಟ ಬಂದಿರುವುದರಿಂದ ನಾನು ಇದುವರೆಗೆ ಸುಮ್ಮನಿದ್ದೇನೆ. ಇಲ್ಲದಿದ್ದರೆ, ಗುರುಕುಲ ಮುಗಿಸಿಕೊಂಡು ನೀನು ರಾಜಧಾನಿಗೆ ಹಿಂತಿರುಗಿದ ತರುಣದಲ್ಲೇ ನಿನ್ನನ್ನು ಸಿಂಹಾಸನದಲ್ಲಿ ಕೂಡಿಸಿ, ಪಟ್ಟಕಟ್ಟಿ, ರಾಜ್ಯಕೋಶಗಳನ್ನು ಒಪ್ಪಿಸಿಕೊಟ್ಟು ನಾನು ವಿಶ್ರಾಂತಿಗೆ ತೆರಳುತ್ತಿದ್ದೆ! ಆದರೆ ನಾನು ಇನ್ನೂ ರಾಜಪ್ರತಿನಿಧಿಯಾಗಿ ಉಳಿದು, ಇಷ್ಟೆಲ್ಲ ಅಪವಾದಗಳಿಗೆ ತಲೆಗೊಡಬೇಕಾಗಿ ಬಂದುದು ನನ್ನ ದುರ್ದೈವ !"

"ಅಪ್ಪಾಜಿ, ಸಿಂಹಾಸನವನ್ನು ನನಗೆ ಒಪ್ಪಿಸಲು, ನಿಮಗಿರುವ ತೊಂದರೆ ಏನು ? ಇದರಲ್ಲಿ ನಿಮಗೆ ಯಾವ ಧರ್ಮಸಂಕಟವಿದೆ ?"

"ನೀನು ಸಾಮ್ರಾಟನಾಗುವುದು ಎಲ್ಲರಿಗೂ ಸಂತೋಷದ ವಿಷಯವೆಂದು ತಿಳಿದಿದ್ದೆ. ಆದರೆ ನಿಮ್ಮವರೇ ಇದಕ್ಕೆ ವಿರೋಧವಿರುವರೆಂದು ತಿಳಿಯಿತು. ಸಿಂಹಾಸನವನ್ನು ನಿನಗೆ ಒಪ್ಪಿಸಿಕೊಟ್ಟು, ವೃಥಾ ಯಾದವೀಕಲಹಕ್ಕೆ ಕಾರಣವಾಗಬೇಕಲ್ಲಾ ಎಂದು ನಾನು ಹಿಂಜರಿದೆ ! ಇಲ್ಲದಿದ್ದರೆ, ಸಿಂಹಾಸನವನ್ನು ನಿನಗೆ ಒಪ್ಪಿಸಿಕೊಟ್ಟು, ಎಷ್ಟೋ ಕಾಲವಾಗುತ್ತಿತ್ತು !"

ಈ ಮಾತು ಕೇಳಿ ಪುಲಿಕೇಶಿ ಸಿಡಿಲು ಬಡಿದವನಂತೆ, ಸ್ತಬ್ಧನಾಗಿ ಕುಳಿತ.

"ಅಪ್ಪಾಜಿ, ಏನು ನಿಮ್ಮ ಮಾತು ? ನಾನು ಸಾಮ್ರಾಟನಾಗುವುದನ್ನು ಯಾರು ವಿರೋಧಿಸುತ್ತಾರೆ ? ನೀವು ವಿನೋದಕ್ಕೆ ಹೀಗೆ ಹೇಳುತ್ತಿಲ್ಲ ತಾನೆ ?"

"ಮಗು, ಇಂತಹ ವಿಷಯಗಳಲ್ಲಿ ವಿನೋದವೆ ? ಇದ್ದ ಸಂಗತಿಯನ್ನು ಇದ್ದಂತೆ ಹೇಳುತ್ತಿದ್ದೇನೆ. ಇನ್ನಾದರೂ ನೀನು ನನ್ನ ವಿಷಯದಲ್ಲಿ ಸಂದೇಹ ಪಡಬಾರದೆಂದು. ನೀನು ಸಾಮ್ರಾಟನಾಗುವುದು ನಿನ್ನವರಿಗೇ ಇಷ್ಟವಿಲ್ಲ !"

"ನಾನು ಸಾಮ್ರಾಟನಾಗುವುದು ಯಾರಿಗೆ ಇಷ್ಟವಿಲ್ಲ ? ಈ ಮಂಗಳ ಕಾರ್ಯವನ್ನು ಯಾರು ವಿರೋಧಿಸುತ್ತಿದ್ದಾರೆ ?"

"ಯಾರನ್ನು ನೀನು ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸುತ್ತಾ ಬಂದಿರುವೆಯೋ ಆ ನಿನ್ನ ತಮ್ಮ."

"ಏನು ? ವಿಷ್ಣುವರ್ಧನನು ನಾನು ಸಾಮ್ರಾಟನಾಗುವುದನ್ನು ವಿರೋಧಿಸುತ್ತಿದ್ದಾನೆಯೆ ?"

"ಹೌದು."

ಪುಲಿಕೇಶಿ ಒಂದು ಚಣಕಾಲ ದಂಗಾಗಿ ಕುಳಿತ. ಅವನಿಗೆ ತನ್ನ ಕಿವಿಗಳನ್ನು ನಂಬಲಾಗಲಿಲ್ಲ. ತನ್ನೊಡನೆ ರಕ್ತಹಂಚಿಕೊಂಡು ಹುಟ್ಟಿದ ತಮ್ಮ.... ತನ್ನ ಬೆನ್ನಿನಲ್ಲಿಬಿದ್ದ ತಮ್ಮ....ತಾನು ಪ್ರಾಣಕ್ಕಿಂತ ಪ್ರಿಯವಾಗಿ ಪ್ರೀತಿಸುತ್ತಿರುವ ತಮ್ಮ....ತಾನು ಸಿಂಹಾಸನವನ್ನೇರುವುದನ್ನು ವಿರೋಧಿಸುತ್ತಿರುವನೇ? ಸುಳ್ಳು! ಸುಳ್ಳು!! ಸುಳ್ಳು!!! ಇದೆಲ್ಲ ಮಂಗಳೇಶನ ತಂತ್ರ! ಈ ಮಾತನ್ನು ನಂಬಬೇಡ! ಎಂದು ಒಂದು ಮನಸ್ಸು ಹೇಳಿತು.

ಇತ್ತೀಚಿನ ದಿನಗಳಲ್ಲಿ ವಿಷ್ಣುವರ್ಧನನ ಸ್ವಭಾವ, ಮಾತುಕತೆಗಳಲ್ಲಾಗಿದ್ದ ಮಾರ್ಪಾಟನ್ನು ಕಂಡ ಇನ್ನೊಂದು ಮನಸ್ಸು,

"ಇದು ಏಕೆ ನಿಜವಾಗಿರಬಾರದು? ವಿಷ್ಣು ಬೆನ್ನಿನಲ್ಲಿಬಿದ್ದ ತಮ್ಮನೆಂದ ಮಾತ್ರಕ್ಕೆ ಪುಲಿಕೇಶಿಯು ಸಿಂಹಾಸನಾರೂಢನಾಗುವುದನ್ನು ಏಕೆ ಪ್ರತಿಭಟಿಸಬಾರದು?" ಎಂದು ಕೇಳಿತು.

ಆ ದಿನ ದುರ್ಲಭದೇವಿಯೊಡನೆ ಮಾತನಾಡುತ್ತಿದ್ದಾಗ ವಿಷ್ಣುವರ್ಧನ ಹೇಳಿದ್ದ ಮಾತು ನೆನಪಾಯಿತು:

"ಕೇಶಣ್ಣನಿಗೆ ಈ ಮುಳ್ಳಿನ ಹಾಸಿಗೆ ಏರಲು ಇಷ್ಟು ಆತುರವಿದ್ದರೆ ನನಗೇಕೆ ಇರಬಾರದು? ಕೇಶಣ್ಣ ನನಗಿಂತ ಹಿರಿಯನಿರಬಹುದು. ನಾನು ಕಿರಿಯನಾದ ಮಾತ್ರಕ್ಕೆ ನನಗೆ ಸಿಂಹಾಸನದ ಹಕ್ಕು ಏಕೆ ಇಲ್ಲ?"

"ಕೇಶಣ್ಣ ಸಾಮ್ರಾಟನಾಗಬಹುದಾದರೆ ನಾನೇಕೆ ಸಾಮ್ರಾಟನಾಗಬಾರದು?"

ಅಂದು ವಿಷ್ಣುವರ್ಧನನು ಅಬ್ಬೆಯೊಡನೆ ಹೇಳಿದ್ದ ಎಲ್ಲ ಮಾತಿಗೆ ಇಂದು 'ವಿಶಿಷ್ಟ' ಅರ್ಥವಿರುವಂತೆ ಪುಲಿಕೇಶಿಗೆ ಭಾಸವಾಯಿತು.

"ಹಾಗಾದರೆ ನನ್ನ ಸಹೋದರ ವಿಷ್ಣುವರ್ಧನ ನಾನು ಸಾಮ್ರಾಟನಾಗುವುದನ್ನು ವಿರೋಧಿಸುತ್ತಿದ್ದಾನೆಯೆ?...." ಸಂಶಯದ ಧ್ವನಿಯಲ್ಲಿ ಹೇಳಿದ.

"ಹೌದು! ನನ್ನ ಮಾತು ನಂಬುವುದು ಕಷ್ಟ—ಆದರೆ ಇದು ಅಕ್ಷರಶಃ ಸತ್ಯ!"

"ಅಪ್ಪಾಜಿ, ನಿಮಗೆ ಈ ಎಲ್ಲ ಸಂಗತಿ ಯಾರು ಹೇಳಿದರು?"

"ಸ್ವಯಂ ವಿಷ್ಣುವೇ ಹೇಳಿದ್ದಾನೆ. ಒಂದು ಬಾರಿಯಲ್ಲ—ನೂರು ಬಾರಿ ಈ ಮಾತು ಹೇಳಿದ್ದಾನೆ."

"ಅವನು ಏನು ಹೇಳಿದ್ದಾನೆ ?"

"ಅಪ್ಪಾಜಿ, ನಾನು ಕೇಶಣ್ಣನಿಗೆ ಸಿಂಹಾಸನವನ್ನು ಕೊಟ್ಟರೆ ನನಗೂ ಸಿಂಹಾಸನವನ್ನು ಕೊಡಬೇಕು. ಕೇಶಣ್ಣ ಸಾಮ್ರಾಟನಾದರೆ, ನಾನೂ ಸಾಮ್ರಾಟನಾಗಬೇಕು ಎಂದು ದೊಂಬಾಲು ಬಿದ್ದಿದ್ದಾನೆ. ಈ ಬಗ್ಗೆ ಒಂದೇ ಹಠ ಮಾಡುತ್ತಿದ್ದಾನೆ."

"ವಿಷ್ಣುವಿನ ತಲೆಯಲ್ಲಿ ಇಂಥಹ ದುಷ್ಟ ವಿಚಾರವನ್ನು ತುಂಬಿದವರು ಯಾರು ಅಪ್ಪಾಜಿ ?"

"ಅದು ನನಗೂ ಆಶ್ಚರ್ಯವಾಗಿದೆ, ಮಗು."

"ಅವರು ಯಾರೇ ಇರಲಿ. ಅಣ್ಣತಮ್ಮಂದಿರ ನಡುವೆ ಬೆಂಕಿ ಇಟ್ಟದ್ದಾರೆ. ಸಾಮ್ರಾಜ್ಯಕ್ಕೆ ದ್ರೋಹ ಬಗೆಯುತ್ತಿದ್ದಾರೆ! ಅವರನ್ನೆಂದೂ ಸಾಮ್ರಾಜ್ಯದ ಮಹಾಜನತೆ ಕ್ಷಮಿಸುವುದಿಲ್ಲ!" ಎಂದು ನಿಷ್ಠುರವಾಗಿ ಹೇಳಿದ.

"ಇಂತಹ ದ್ರೋಹಿಗಳಿಗೆ ರಾಜಧಾನಿಯಲ್ಲೂ, ಅರಮನೆಯಲ್ಲೂ ಕಡಿಮೆ ಇಲ್ಲ ಕೇಶಣ್ಣ! ಅಂತಲೇ ನಾನು ನಿನಗೆ ದ್ರೋಹಿಗಳ ವಿರುದ್ಧ ಮೊದಲೇ ಎಚ್ಚರಿಸಿದುದು! ಇಂದು ನಾನು ನಿನಗೆ ಸಿಂಹಾಸನವನ್ನು ಒಪ್ಪಿಸಿದರೆ, ನಾಳೆ ಆ ದ್ರೋಹಿಗಳು ವಿಷ್ಣುವರ್ಧನನ ಪಕ್ಷಕಟ್ಟಿ ಸಿಂಹಾಸನದ:ಸಲುವಾಗಿ ರಕ್ತ ಹರಿಸಬಹುದು. ಸಿಂಹಾಸನದ ಸಲುವಾಗಿಯೇ ನಡೆಯುವ ಯಾದವೀಕಲಹವನ್ನು ತಡೆಗಟ್ಟುವ ಸಲುವಾಗಿಯೇ ನಾನು ಇದುವರೆಗೂ ಸಿಂಹಾಸನವನ್ನು ನಿನಗೆ ಕೊಡದೆ, ಇನ್ನೂ ರಾಜಪ್ರತಿನಿಧಿಯಾಗಿ ಉಳಿದಿರುವುದು! ಇಂದಲ್ಲ ನಾಳೆ, ವಿಷ್ಣುವು ತನ್ನ ಮೊಂಡುಹಠವನ್ನು ಬಿಟ್ಟುಕೊಡುವನೆಂಬ ಭರವಸೆ ಇದೆ. ಆದರೆ ನಾವು ಅಲ್ಲಿಯವರೆಗೆ ಕಾಯಬೇಕು ಅಷ್ಟೇ...."

"ಅಪ್ಪಾಜಿ, ಕನಸು ಮನಸಿನಲ್ಲಿ ನಾನು ಎಣಿಸದೆ ಇದ್ದ ಭಯಂಕರ ಸುದ್ದಿಯೊಂದನ್ನು ತಿಳಿಸಿದ್ದೀರಿ. ನಿಮ್ಮ ಮಾತು ನಿಜವಾಗಿದ್ದರೆ, ಸಾಮ್ರಾಜ್ಯಕ್ಕೆ ಯಾವುದೋ ಭಯಂಕರ ವಿಪತ್ತು ಕಾದಿದೆ!"

ಎಂದು ಆತಂಕಗೊಂಡ ಧ್ವನಿಯಲ್ಲಿ ಪುಲಿಕೇಶಿ ಹೇಳಿದ.

"ಪರಿಸ್ಥಿತಿ ಹೇಗೆ ಬರುವುದೋ ಎಂದು ನಾನು ಸೈನ್ಯವನ್ನು ಕಟ್ಟುತ್ತಿದ್ದೇನೆ ಮಗು. ನಾಳೆ, ಸಿಂಹಾಸನಕ್ಕಾಗಿ ಯಾದವೀಕಲಹ ನಡೆದಾಗ ಹೊರಗಿನ ಶತ್ರುಗಳು ಸಾಮ್ರಾಜ್ಯವನ್ನು ಕಬಳಿಸಬಾರದೆಂದು ಎಚ್ಚರಿಕೆ, ಈಗಿನಿಂದಲೇ

ಸೈನ್ಯ ಸಿದ್ಧತೆ ನಡೆಸಿದ್ದೇನೆ. ನಾಳೆ ದ್ರೋಹಿಗಳ ಪಕ್ಷ ಬಲವಾದರೆ, ನಿನ್ನ ಸಹಾಯಕ್ಕೆ ಇರಲೆಂದು ಈ ಸೈನ್ಯ ಸಜ್ಜುಗೊಳಿಸುತ್ತಿದ್ದೇನೆ. ಇದಕ್ಕಿಂತ ಬೇರೆ ಸ್ವಾರ್ಥ ನನಗೆ ಇಲ್ಲವೆಂಬುದು ನಿನಗೆ ಈಗಲಾದರೂ ತಿಳಿಯಿತೇ ಮಗು ?"

"ಅಪ್ಪಾಜಿ, ವಿಷ್ಣುವನ್ನು ನನ್ನ ವಿರುದ್ಧ ಎತ್ತಿಕಟ್ಟಿದ ಆ ದ್ರೋಹಿಗಳು ಯಾರು ? ವಿಷ್ಣುವು ನನ್ನನ್ನೇಕೆ ದ್ವೇಷಿಸುತ್ತಿದ್ದಾನೆ. ಅಂತಹ ಅಪಚಾರ ನನ್ನಿಂದೇನಾಗಿದೆ—ಎಷ್ಟು ಯೋಚಿಸಿದರೂ ಹೊಳೆಯುತ್ತಿಲ್ಲ ?" ಪುಲಿಕೇಶಿಯು ಇನ್ನೂ ತನ್ನ ಗುಂಗಿನಲ್ಲೇ ಇದ್ದನು.

"ಮಗು, ನಾನು ಈ ಬಗ್ಗೆ ನಿನ್ನೊಡನೆ ಮಾತನಾಡಬೇಕೆಂದು ಬಹು ದಿನಗಳಿಂದ ಯೋಚಿಸುತ್ತಿದ್ದೆ. ವಿಷ್ಣುವರ್ಧನನು ನಿನ್ನನ್ನೇಕೆ ಇಷ್ಟು ದ್ವೇಷಿಸುತ್ತಿದ್ದಾನೆ. ನಿನ್ನಲ್ಲಿ ಅವನಿಗೆ ನಂಬಿಕೆ ಏಕೆ ಇಲ್ಲ—ಏಕೆ ಸಂಶಯ ದೃಷ್ಟಿಯಿಂದ ನೋಡುತ್ತಿದ್ದಾನೆ. ಅವನನ್ನು ನಿನ್ನ ವಿರುದ್ಧ ಎತ್ತಿ ಕಟ್ಟಿದವರು ಯಾರು ? ಅವರ ಸ್ವಾರ್ಥವಾದರೂ ಏನು ಎಂಬಿವೇ ಸಂಗತಿಗಳನ್ನು ಚರ್ಚಿಸಬೇಕೆಂದಿದ್ದೆ. ಇಂದು ಈ ವಿಷಯಗಳನ್ನು ನಿನಗೆ ತಿಳಿಸಲು ಸಾಧ್ಯವಾಯಿತು. ಈಗ ನಾವು ಎಚ್ಚತ್ತುಕೊಳ್ಳದಿದ್ದರೆ, ದ್ರೋಹಿಗಳ ಕೈ ಮೇಲಾಗುವುದು. ವಿಷ್ಣುವರ್ಧನನು ದುಡುಕಿ ಯಾವುದೋ ಕಾರ್ಯ ಕೈಗೊಳ್ಳುವ ಮೊದಲೇ ಅವನನ್ನು ದುಷ್ಟರ ಸಹವಾಸದಿಂದ ದೂರವಿಡಬೇಕಾಗಿದೆ. ಈ ವೈಮನಸ್ಸನ್ನು ಬೆಳೆಯಲು ಬಿಡಬಾರದು ಮಗು. ಬಿಟ್ಟರೆ ಇದು ಸಾಮ್ರಾಜ್ಯವನ್ನೇ ನುಂಗುವ ಕಾಳ್ಗಿಚ್ಚಾಗಬಹುದು !" ಎಂದು ಎಚ್ಚರ ಹೇಳಿದನು.

"ಅಪ್ಪಾಜಿ, ವಿಷ್ಣುವು ಗುರುಕುಲದಿಂದ ಬಂದ ಮೇಲೆ ಅವನ ನಡತೆಯಲ್ಲಿ ಮಹತ್ತರ ಬದಲಾವಣೆಯಾಗಿದೆ ! ಯಾರೋ ದ್ರೋಹಿಗಳು ಅವನ ತಲೆಯಲ್ಲಿ ನನ್ನ ಬಗ್ಗೆ ಸಂಶಯದ ಬೀಜ ಬಿತ್ತಿದ್ದಾರೆ !"

"ನನಗೂ ಈ ಬದಲಾವಣೆ ಗಮನಕ್ಕೆ ಬಂದಿದೆ ಮಗು. ಆದರೆ ಮೊದಲು ನಾನು ಇದಕ್ಕೆ ಅಷ್ಟು ಮಹತ್ವಕೊಡಲಿಲ್ಲ. ನಾನು ತಪ್ಪುಮಾಡಿದೆನೆಂದು ನನಗೆ ಈಗ ಅನಿಸುತ್ತಿದೆ. ವಿಷ್ಣುವನ್ನು ದ್ರೋಹಿಗಳು ಕೈಗೆತ್ತಿಕೊಳ್ಳುವ ಮೊದಲೇ ಅವನನ್ನು ನಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಬೇಕಾಗಿತ್ತು."

"ವಿಷ್ಣು ಹೀಗಾಗುವನೆಂದು ತಿಳಿದಿದ್ದರೆ, ಅವನನ್ನು ಇನ್ನೊಂದೆರಡು ವರ್ಷಕಾಲ ಗುರುಕುಲದಲ್ಲಿ ಬಿಟ್ಟುಬರುತ್ತಿದ್ದೆ."

"ಈಗಲೂ ಗುರುಕುಲಕ್ಕೆ ಕಳುಹಿಸಬಹುದಲ್ಲ! ಅವನ ಶಿಕ್ಷಣ ಹೇಗೂ ಮುಗಿಯಲು ಇನ್ನೂ ಒಂದೆರಡು ವರ್ಷಗಳು ಬೇಕೆಂದು ಮಹಾರಾಣಿಯವರು ಹೇಳುತ್ತಿದ್ದರು."

"ಆದರೆ, ವಿಷ್ಣು ಗುರುಕುಲಕ್ಕೆ ಹೋಗುವುದಿಲ್ಲವೆಂದು ಹಠ ಹಿಡಿದು ಕುಳಿತಿದ್ದಾನೆ."

"ಏಕೆ ?"

"ಗುರುಕುಲಕ್ಕೆ ಹೋದರೆ, ನಾನೆಲ್ಲಿ ಸಾಮ್ರಾಟನಾಗುವೆನೋ ಎಂದು!"

"ಹಾಗಾದರೆ, ವಿಷ್ಣು ಈ ಮೊದಲೇ ನಿಮ್ಮ ವಿಷಯದಲ್ಲಿ ತನ್ನ ಸಂದೇಹ ವ್ಯಕ್ತಪಡಿಸಿದ್ದಾನೆ. ನೀವೇಕೆ ಈ ಮೊದಲೇ ಎಚ್ಚರತ್ತುಕೊಳ್ಳಲಿಲ್ಲ !"

"ವಿಷ್ಣು ಇಷ್ಟು ಆಳಕ್ಕೆ ಇಳಿಯುವವನೆಂದು ನಾನು ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲ. ಅವನು ಈ ಬಗ್ಗೆ ಮೊಂಡುಹಠಮಾಡುತ್ತಿರುವ ಸಂಗತಿ ಹೇಳಿದ ಮೇಲೆ ನನಗೆ ತಿಳಿದುದು."

"ವಿಷ್ಣುವನ್ನು ನಿನ್ನಮೇಲೆ ಎತ್ತಿಕಟ್ಟಿದ ದ್ರೋಹಿಗಳು ಯಾರೇ ಇರಲಿ ಅವರನ್ನು ಹುಡುಕಿ, ಕ್ರೂರವಾಗಿ ಶಿಕ್ಷಿಸಬೇಕು, ಕೇಶಣ್ಣ !"

ಈ ಮಾತು ಕೇಳಿ ಪುಲಿಕೇಶಿ ಮತ್ತೆ ದಂಗುಬಡಿದು ಕುಳಿತನು. ಇದು ವರೆಗೆ ಅವನಿಗೆ ವಿಷ್ಣುವನ್ನು ತನ್ನ ವಿರುದ್ಧ ಎತ್ತಿಕಟ್ಟಿದ ದ್ರೋಹಿ ಮಂಗಳೇಶನೇ ಇರಬೇಕೆಂಬ ಸಂದೇಹವಿತ್ತು! ಮಂಗಳೇಶನ ಮಾತು ಅವನನ್ನು ನಿರಸ್ತ್ರಗೊಳಿಸಿತು. ಹಾಗಾದರೆ ವಿಷ್ಣುವನ್ನು ತನ್ನಿಂದ ದೂರವಿರಿಸುತ್ತಿರುವ ವ್ಯಕ್ತಿ ಮಂಗಳೇಶನಲ್ಲವೆ ? ಹಾಗಾದರೆ ಆ ದ್ರೋಹಿ ಯಾರು ?....

ಇದನ್ನು ಯೋಚಿಸಿದಂತೆ, ಪುಲಿಕೇಶಿಯ ತಲೆಯು ಸುತ್ತಿಕೊಂಡು ಬಂದಿತು. ತಲೆ ಭಾರವಾಯಿತು. ಅವನು ಅಸ್ವಸ್ಥನಾದನು.

"ಮಗು, ವಿಷ್ಣುವಿನ ಬಗ್ಗೆ ನೀನು ಅಧೀರನಾಗುವ ಕಾರಣವಿಲ್ಲ. ಅವನಿನ್ನೂ ಹಾಲುಗಲ್ಲದ ಮಗು. ಅವನಿಗೇನು ತಿಳಿಯುತ್ತದೆ. ಯಾರೊ ದ್ರೋಹಿಗಳು ಹೇಳಿಕೊಡುತ್ತಿರುವ ಮಾತು ಆಡುತ್ತಿದ್ದಾನೆ, ಅಷ್ಟೆ. ನಾವು ಆ ದ್ರೋಹಿಗಳು ಯಾರೆಂದು ಪತ್ತೆ ಹಚ್ಚಿ ಅವರಿಂದ ವಿಷ್ಣುವನ್ನು ದೂರವಿರಿಸಿದರೆ, ಎಲ್ಲವೂ ಸರಿಹೋಗುತ್ತದೆ. ಮುಖ್ಯ ನಾವು ಈಗಲೇ ಎಚ್ಚರತ್ತುಕೊಂಡು, ವಿಷ್ಣುವಿನ ಮೇಲೆ ಸರ್ಪಗಾವಲು ಹಾಕಬೇಕು. ಅವನನ್ನು ಒತ್ತಾಯಮಾಡಿ

ಪ್ರಯೋಜನವಿಲ್ಲ. ಉಪಾಯಾಂತರದಲ್ಲಿ ಅವನ ಮನಸ್ಸು ಕೆಡಿಸಿರುವ ದ್ರೋಹಿಯನ್ನು ಪತ್ತೆಮಾಡಿ ಶಿಕ್ಷಿಸಬೇಕು !" ಎಂದು ಮಂಗಳೇಶನು ಹೆದರಿ ಕುಳಿತವನ ಮೇಲೆ ಹಾವೆಸೆದನು.

"ಆಗಲಿ, ಅಪ್ಪಾಜಿ. ವಿಷ್ಣುವಿನ ಬಗ್ಗೆ ಇಂದಿನಿಂದಲೇ ಎಚ್ಚರವಹಿಸುತ್ತೇನೆ. ಅವನಿಗೆ ನನ್ನಲ್ಲಿ ನಂಬಿಕೆ ಇಲ್ಲದಿದ್ದರೂ, ಅಬ್ಬೆಯ ಮಾತಿನಲ್ಲಿ ವಿಶ್ವಾಸವಿದೆ. ಅವರು ಕೇಳಿದರೆ ವಿಷ್ಣು ಬಾಯಿಬಿಡಬಹುದು ! ನೀವು ಈಗಲೇ ಈ ಬಗ್ಗೆ ಎಚ್ಚರ ಕೊಟ್ಟದು ಒಳ್ಳೆಯದಾಯಿತು. ನಾನು ನಿಮ್ಮ ಉಪಕಾರಕ್ಕೆ ಋಣಿಯಾಗಿದ್ದೇನೆ !" ಎಂದು ಹೇಳಿ ಪುಲಿಕೇಶಿ ಮಂಗಳೇಶನಿಂದ ಬೀಳ್ಕೊಂಡು ಹೊರಟನು.

ಅವನು ಕಣ್ಮರೆಯಾದಮೇಲೆ ಮಂಗಳೇಶನು ತಾನು ಈಗಲೇ ಸಾಮ್ರಾಟನಾದಂತೆ ಕನಸು ಕಾಣುತ್ತ ಕುಳಿತನು.

ಅರಮನೆಗೆ ಹಿಂದಿರುಗಿದ ಪುಲಿಕೇಶಿಯು ಅಬ್ಬೆ ದುರ್ಲಭದೇವಿಗೆ ನಡೆದ ವೃತ್ತಾಂತವನ್ನೆಲ್ಲಾ ವರದಿಮಾಡಿದನು. ಎಲ್ಲವನ್ನೂ ಕೇಳಿಕೊಂಡಮೇಲೆ ಮಹಾರಾಣಿ ದುರ್ಲಭದೇವಿ ಹೇಳಿದರು : "ಮಗು, ನೀನು ಇಷ್ಟು ಅಧೈರ್ಯಪಡುವ ಕಾರಣವಿಲ್ಲ. ನೋಡಿದರೆ ಇದೆಲ್ಲವೂ ಆ ದ್ರೋಹಿ ಮಂಗಳೇಶನ ಕುತಂತ್ರವೆಂದು ತೋರುತ್ತದೆ. ಅವನು ತನ್ನ ಸ್ವಾರ್ಥಸಾಧನೆಗಾಗಿ, ವಿಷ್ಣುವರ್ಧನನನ್ನು ನಿನ್ನ ವಿರುದ್ಧ ಎತ್ತಿಕಟ್ಟಿ ಈಗ ನಿನ್ನ ಹಿತೈಷಿಯೆಂಬ ಸೋಗು ಹಾಕಿದ್ದಾನೆ. ಅವನ ಮಾತನ್ನು ನಂಬಬೇಡ. ವಿಷ್ಣುವನ್ನು ನಮ್ಮಿಂದ ದೂರ ಸರಿಸುತ್ತಿರುವ ನೀಚನು ಯಾರೂ ಅಲ್ಲ, ಅವನೇ. ಅವನೇ ವಿಷ್ಣುವಿನ ತಲೆಯಲ್ಲಿ ಇಲ್ಲದ ಸಂಶಯದ ಬೀಜ ಬಿತ್ತಿರುವುದು. ನೀವು ಅಣ್ಣತಮ್ಮಂದಿರು ಅನ್ಯೋನ್ಯವಾಗಿದ್ದರೆ, ತಾನು ರಾಜ್ಯವನ್ನು ಬಿಟ್ಟುಕೊಡಬೇಕೆಂದು ಹೆದರಿ, ಈ ನಾಟಕ ಕಟ್ಟಿದ್ದಾನೆ. ಅವನ ದ್ರೋಹಚಿಂತನೆ ಇಂದು ನಿನ್ನೆಯದಲ್ಲ. ಆದರೆ ಸಹೋದರರ ನಡುವೆ ಭೇದಕಲ್ಪನೆ ಮಾತ್ರ ಹೊಸದು, ಅಷ್ಟೆ! ನೀನು ಇದಕ್ಕೆಲ್ಲಾ ಮೋಸ ಹೋಗಬಾರದು. ನಾವು ವಿಷ್ಣುವನ್ನು ಕೇಳುವ ರೀತಿಯಲ್ಲಿ ಕೇಳಿದರೆ, ಮಂಗಳೇಶನ ಕುತಂತ್ರವೆಲ್ಲ ಬಯಲಾಗುತ್ತದೆ. ಆಮೇಲೆ ಮಂಗಳೇಶನ ಸಂಪರ್ಕ ತಪ್ಪಿಸಿದರೆ, ವಿಷ್ಣು ತನಗೆ ತಾನೇ ಸರಿಹೋಗುತ್ತಾನೆ. ಅವನು ನನ್ನ ಮಾತನ್ನು ತಿರಸ್ಕರಿಸುವಷ್ಟು ಕೆಟ್ಟಿರಲಾರನೆಂದು ನನ್ನ ನಂಬಿಕೆ. ಇಷ್ಟರಮೇಲೆ

ದೈವೇಚ್ಛೆಯಿದ್ದಂತೆ ಆಗಲಿ !” ಎಂದು ಹೇಳಿ ಪುಲಿಕೇಶಿಯನ್ನು ಸಮಾಧಾನ ಪಡಿಸಿದರು.

ಅದರಂತೆ ವಿಷ್ಣುವರ್ಧನನು ತನ್ನ ಬಳಿಗೆ ಬಂದಾಗ ಈ ವಿಷಯವನ್ನು ಪ್ರಸ್ತಾಪಿಸಿದರು :

“ಮಗು, ವಿಷ್ಣು! ನಾನಾಗಲಿ, ಕೇಶಣ್ಣನಾಗಲಿ, ಎಂದಾದರೂ ಯಾವುದಲ್ಲಾದರೂ ವಂಚನೆಮಾಡಿದ್ದೇವೆಯೇ?” ಎಂದು ಮಹಾರಾಣಿ ದುರ್ಲಭದೇವಿ ಕೇಳಿದರು. ಅವರ ಧ್ವನಿಯಲ್ಲಿ ದೈನ್ಯತೆ ಇತ್ತು.

ಈ ಮಾತು ಕೇಳಿ ವಿಷ್ಣುವರ್ಧನನು ಹಾವು ಕಂಡವನಂತೆ ಬೆಚ್ಚಿದನು. ಮಹಾರಾಣಿ ದುರ್ಲಭದೇವಿ ಎಂದೂ ಅವನನ್ನು ಹೀಗೆ ಪ್ರಾರ್ಥಿಸುವ ರೀತಿಯಲ್ಲಿ ಮಾತನಾಡಿಸಿರಲಿಲ್ಲ. ಅಬ್ಬೆಯ ಕಳೆಗುಂದಿದ ಮುಖವನ್ನು ನೋಡಿ ಅವನಿಗೆ ಕಳವಳವಾಯಿತು. ಅವನು ನೆಲಕ್ಕೆ ದೃಷ್ಟಿಯಿಟ್ಟು ವಿಗ್ರಹದಂತೆ ನಿಶ್ಚಲನಾಗಿ ಕುಳಿತ. ಆದರೂ ಅವನ ಮುಖದಲ್ಲಿ ದುರ್ಲಭದೇವಿ ಕೇಳಿದ ಅನಿರೀಕ್ಷಿತ ಪ್ರಶ್ನೆಯಿಂದುಂಟಾದ ಕಳವಳ ಎದ್ದುಕಾಣುತ್ತಿತ್ತು.

ಅವನು ಸುಮ್ಮನೆ ಮೌನಧರಿಸಿ ಕುಳಿತುದನ್ನು ನೋಡಿ, ದುರ್ಲಭದೇವಿ ಮತ್ತೆ ಪ್ರಶ್ನಿಸಿದರು :

“ಹೇಳು ಮಗು ? ಯಾಕೆ ಮೌನವಾಗಿ ಕುಳಿತೆ ? ನಾವು ಎಂದಾದರೂ ದ್ರೋಹಬಗೆದಿದ್ದೇವೆಯೇ ? ನಿನಗೆ ಅಹಿತವಾಗಿ ನಡೆದುಕೊಂಡಿದ್ದೇವೆಯೇ ?”

ಈ ಮಾತು ಕೇಳುತ್ತಿದ್ದಂತೆ ಅವನ ಮಾತು ಗದ್ಗದಿತವಾಗಿ ಭಾವೋದ್ರೇಕದಿಂದ ಅವರ ಕಣ್ಣು ತೇವವಾಯಿತು. ಅದನ್ನು ಅವರು ಸೆರಗಿನ ಕೊನೆಯಿಂದ ಒರಸಿಕೊಂಡುದನ್ನು ನೋಡಿ, ವಿಷ್ಣುವರ್ಧನನಿಗೆ ಕರುಳಿಗೆ ಬರೆ ಇಟ್ಟಂತೆ ಆಯಿತು. ತನ್ನ ಕಾರಣದಿಂದ ಅಬ್ಬೆ ಕಣ್ಣೀರು ಸುರಿಸುತ್ತಿರುವರೆಂದು, ಅವನಿಗೆ ದುಃಖವಾಯಿತು. ಅಬ್ಬೆಯು ಕೇಳಿದ ಪ್ರಶ್ನೆಗೆ ‘ಇಲ್ಲ’ವೆಂದು ಉತ್ತರ ಹೇಳಬೇಕೆಂದು ಅವನು ಇಚ್ಛಿಸಿದ. ಆದರೆ ನಾಲಗೆ ಹೇಳಲಿಲ್ಲ. ಅವನು ಅವರ ವಿಷಯದಲ್ಲಿ ಬಗೆಯುತ್ತಿದ್ದ ದ್ರೋಹ ಅಡ್ಡವಾಗಿ ಬಂದಿತ್ತು. ಅವನಿಗೆ ಆತ್ಮಸಾಕ್ಷಿಯ ವಿರುದ್ಧ ನುಡಿಯಲು ಧೈರ್ಯಬರಲಿಲ್ಲ. ಅವನು ಅಪರಾಧಿಯ ಮುಖ ಹೊತ್ತು ಮೌನವಾಗಿ ಕುಳಿತಿದ್ದ.

“ಪುಲಿಕೇಶಿಯೇ ಬೇರೆ, ನೀನೇ ಬೇರೆ, ಎಂದು ನಾನೆಂದಾದರೂ ಭೇದ

ವೇಣಿಸಿದ್ದೇನೆಯೆ ? ನಿನಗೊಂದು ಅವನಿಗೊಂದು ನುಡಿದಿದ್ದೇನೆಯೆ ? ಏಕೆ ಮಾತ ನಾಡಲೊಲ್ಲೆ ? ಉತ್ತರ ಕೊಡಲು ನಾನು ನಿನ್ನ ಭಾಗಕ್ಕೆ ಅಯೋಗ್ಯಳಾದೆನೆ ? ಮೌನವಾಗಿ ಕುಳಿತು ನನ್ನ ಮರ್ಮಾಘಾತಮಾಡಬೇಡ !" ಎಂದು ಹೇಳುತ್ತಿದ್ದಂತೆ ಅವರ ಕಣ್ಣಿನಲ್ಲಿ ಅಶ್ರುಧಾರೆ ಕಾಣಿಸಿಕೊಂಡಿತು. ಅದನ್ನು ನೋಡಿ ವಿಷ್ಣುವರ್ಧನನಿಂದ ಸುಮ್ಮನೆ ಕುಳಿತುಕೊಳ್ಳಲು ಸಾಧ್ಯವಾಗಲಿಲ್ಲ. ಅವನು ತುಂಬಾ ನೊಂದವನಂತೆ ಚೀರಿದ :

"ಅಬ್ಬೆ, ನೀವು ನನ್ನನ್ನು ಮಾತಿನಿಂದ ಕೊಲ್ಲಬೇಡಿ ! ನೀವಾಗಲೀ, ಕೇಶಣ್ಣನಾಗಲೀ, ನನಗೆ ಯಾವುದೇ ಬಗೆಯ ದ್ರೋಹಬಗೆದಿಲ್ಲ. ಯಾವುದರಲ್ಲೂ ನನಗೆ ವಂಚನೆಮಾಡಿಲ್ಲ ?"

"ಹಾಗಾದರೆ, ನೀನೇಕೆ ನಮ್ಮಿಂದ ದೂರದೂರಹೋಗುತ್ತಿದ್ದಿ ? ಮಂಗಳೇಶ ನನ್ನು ಅಂತರ್ಯಕ್ಕೆ ತೆಗೆದುಕೊಳ್ಳುವಂತೆ, ನಮ್ಮನ್ನೇಕೆ ನೀನು ಅಂತರ್ಯಕ್ಕೆ ತೆಗೆದುಕೊಳ್ಳುತ್ತಿಲ್ಲ ? ಅವನೊಡನೆ ಹೃದಯಬಿಚ್ಚಿ ಮಾತನಾಡುವಂತೆ,-ನಮ್ಮೊಡನೆ ಏಕೆ ಮಾತನಾಡುವುದಿಲ್ಲ ! ನಮ್ಮಲ್ಲಿ ನಿನಗೆ ನಂಬಿಕೆ ಇಲ್ಲವೆ ? ನಾವು ನಿನಗೆ ಕೇಡು ಬಗೆಯುತ್ತಿರುವ ಹಿತಶತ್ರುಗಳಾದೆವೆ ?"

"ಅಬ್ಬೆ, ನನ್ನನ್ನೇಕೆ ಮಾತುಮಾತಿಗೂ ಮರ್ಮಾಘಾತಮಾಡುತ್ತಿದ್ದೀರಿ ! ನಿಮ್ಮಲ್ಲಿ ನಾನು ಯಾವುದನ್ನು ಮುಚ್ಚಿಟ್ಟುಕೊಂಡಿದ್ದೇನೆ. ಯಾವುದನ್ನು ಮರೆಮಾಚಿದ್ದೇನೆ. ಅದನ್ನಾದರೂ ಹೇಳಬಾರದೆ ?"

ಬೇಸರದ ಧ್ವನಿಯಲ್ಲಿ ವಿಷ್ಣುವರ್ಧನ ಹೇಳಿದ.

"ಹಾಗಾದರೆ, ನೀನು ಪುಲಿಕೇಶಿಯು ಸಿಂಹಾಸನವನ್ನು ಏರುವುದನ್ನು ಮಂಗಳೇಶನ ಮುಂದೆ ವಿರೋಧಿಸಿದಂತೆ, ನಮ್ಮ ಮುಂದೆ ಏಕೆ ವಿರೋಧಿಸಲಿಲ್ಲ? ಅವನ ಮುಂದೆ ಪ್ರತಿಭಟಿಸಿದಂತೆ ನಮ್ಮ ಮುಂದೆ ಏಕೆ ಪ್ರತಿಭಟಿಸಲಿಲ್ಲ ? ಅವನ ಮುಂದೆ ಇಲ್ಲದ ಅಂಜಿಕೆ, ಸಂಕೋಚ ನಿನಗೆ ನಮ್ಮ ಮುಂದೆ ಇದೆಯೇ ?"

"ಅಬ್ಬೆ, ನೀವು ನೊಂದುಕೊಳ್ಳದಿದ್ದರೆ ಹೇಳುತ್ತೇನೆ."

"ಹೇಳು ಮಗು, ನಿನಗೆ ಏನನಿಸುವುದೋ ಅದನ್ನು ಮುಚ್ಚುಮರೆಯಿಲ್ಲದೆ ಹೇಳು ! ನಾನು ನೊಂದುಕೊಳ್ಳುವುದಿಲ್ಲ."

"ನಾನು ನಿಮ್ಮೊಡನೆ ಮನಬಿಚ್ಚಿ ಮಾತನಾಡಲು ಅಂಜಿದೆ."

"ಏಕೆ ?"

"ನೀವು ಕೇಶಣ್ಣನ ಪಕ್ಷಪಾತಿಗಳೆಂದು ನನಗೆ ತಿಳಿದಿತ್ತು. ಇಂಥ ವಿಷಯ ಗಳನ್ನು ಬಾಯಿಬಿಟ್ಟು ಹೇಳಿದರೆ ನೀವು ನೊಂದುಕೊಳ್ಳುವಿರೆಂದು ಅಂಜಿದೆ."

"ಈಗ ಇದೆಲ್ಲ ಸಂಗತಿ ಕೇಳಿದ ಮೇಲೆ ನನಗೆ ಸಂತೋಷವಾಗುತ್ತಿದೆ ಎಂದು ತಿಳಿದಿರುವೆಯಾ? ನಿನ್ನ ಮನದ ಆಶಯಗಳನ್ನೂ, ಶಂಕೆ ಆತಂಕಗಳನ್ನೂ —ವಿರೋಧಗಳನ್ನೂ ಬೇರೊಬ್ಬರ ಮೂಲಕ ನನಗೆ ತಿಳಿದಾಗ ಇನ್ನೂ ಹೆಚ್ಚು ಸಂತೋಷವಾಗಬಹುದೆಂದು ಭಾವಿಸಿದೆಯಾ ?"

ಈ ಮಾತಿಗೆ ವಿಷ್ಣುವರ್ಧನ ಏನೂ ನುಡಿಯಲಿಲ್ಲ.

"ನನ್ನ ವಿಷಯದಲ್ಲಿ ನಿನಗೆ ನಂಬಿಕೆ ಇರಲಿಲ್ಲ, ಕೇಶವನಲ್ಲೂ ನಂಬಿಕೆ ಇಲ್ಲವೆ? ಬೇಡ, ಪ್ರಧಾನ ಅಮಾತ್ಯ ಸಮಂತಭದ್ರರಲ್ಲೂ ಎರಪ್ಪ ದಂಡನಾಯಕ ರಲ್ಲೂ ನಂಬಿಕೆ ಇರಲಿಲ್ಲವೆ ? ಅವರೆಲ್ಲರಲ್ಲಿ ಇಲ್ಲದಿದ್ದ ನಂಬಿಕೆ, ನಿನಗೆ ಆ ದ್ರೋಹಿ ಮಂಗಳೇಶನಲ್ಲಿ ಉಂಟಾಯಿತೆ ?"

"ನನಗೆ ನಿಮ್ಮಲ್ಲಿ ನಂಬಿಕೆ ಇಲ್ಲವೆಂದು ನಾನು ಯಾವ ಬಾಯಲ್ಲಿ ಹೇಳಲಿ ಅಬ್ಬೆ."

"ಹಾಗಾದರೆ, ಈ ಎಲ್ಲ ವಿಷಯ ಮಂಗಳೇಶನೊಡನೆ ಹೇಳುವ ಮುನ್ನ ನನ್ನೊಡನೆ ಏಕೆ ಹೇಳಲಿಲ್ಲ ?"

"ಆ ದಿನ ಹೇಳಿದಾಗ ನೀವು ಅವಕಾಶಕೊಟ್ಟು ಮಾತನಾಡಲಿಲ್ಲ."

"ಯಾವ ದಿನ ?"

"ನನ್ನನ್ನು ಗುರುಕುಲಕ್ಕೆ ಕಳುಹಿಸಬೇಕೆಂದು ಹೇಳಿದ ದಿನ."

ಮಹಾರಾಣಿ ದುರ್ಲಭದೇವಿಗೆ ಆ ದಿನ ನಡೆದ ಮಾತುಗಳು ಮಿಂಚಿನಂತೆ ಸ್ಮೃತಿಪಟದಲ್ಲಿ ಸುಳಿದುಹೋದವು. ಹೌದು, ಆ ದಿನ ವಿಷ್ಣುವರ್ಧನನು ತನ್ನ ಹೃದ್ಗತವನ್ನು ತೋಡಿಕೊಂಡಿದ್ದ! ಅದನ್ನು ಬಾಲಕನ ಮಾತೆಂದು ಮಹಾರಾಣಿ ಯವರು ಉಪೇಕ್ಷಿಸಿದ್ದರು.

"ಆ ದಿನ ನೀವು ನನ್ನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ನನ್ನ ಮಾತುಗಳನ್ನು ನೀವು ಕೇಳಿ ನಕ್ಕು ಉಪೇಕ್ಷೆ ಮಾಡಿದಿರಿ. ನಿಮ್ಮಲ್ಲಿ ನನಗೆ ಅದುವರೆಗೆ ಇದ್ದ ಆತ್ಮೀಯತೆ ಆ ಗಳಿಗೆಯಿಂದ ತಪ್ಪಿಹೋಯಿತು. ನಿಮಗೆ ನನ್ನ ವಿಷಯದಲ್ಲಿ ಸಹಾನುಭೂತಿಯಿಲ್ಲವೆಂದು ಮನಗಂಡೆ. ನಿಮಗಿಂತ ಹೆಚ್ಚು ಸಹಾನುಭೂತಿ ವ್ಯಕ್ತಪಡಿಸುವವರ ಬಳಿಗೆ ಹೋದೆ ಅವರನ್ನೇ ಆತ್ಮೀಯರೆಂದು

ತಿಳಿದೆ! ಅವರಲ್ಲಿ ನನ್ನ ಹೃದ್ಗತ ನಿವೇದಿಸಿಕೊಂಡೆ. ಇದು ನನ್ನ ತಪ್ಪೆ ?"

"ನಿನ್ನದು ಯಾವ ತಪ್ಪೂ ಇಲ್ಲ ಮಗು, ತಪ್ಪೆಲ್ಲ ನನ್ನದೇ. ಆ ದಿನ ಮಂಗಳೇಶನ ಪರ ನೀನು ಮಾತನಾಡಿದಾಗಲೇ, ನೀನು ಮಂಗಳೇಶನ ದುಷ್ಟ ಪ್ರಭಾವಕ್ಕೆ ಬಿದ್ದಿರುವುದಾಗಿ ತಿಳಿಯಬೇಕಿತ್ತು. ಆದರೆ ನಾನು ನಿರ್ಲಕ್ಷಿಸಿದೆ. ಅದರ ಪರಿಣಾಮ ಈಗ ಅನುಭವಿಸಬೇಕಾಯಿತು ! ಆ ದಿನ ನಿನ್ನನ್ನು ಅರಮನೆ ಯಲ್ಲಿ ನಿರ್ಬಂಧದಲ್ಲಿರಿಸಿದ್ದರೆ, ನಿನ್ನ ಮನಸ್ಸಿನಲ್ಲಿ ಇಂತಹ ದುಷ್ಟ ಯೋಚನೆ ಗಳು ಸುಳಿಯಲವಕಾಶವಾಗುತ್ತಿರಲಿಲ್ಲ."

"ಅಬ್ಬೆ ನೀವು ಚಿಕ್ಕಪ್ಪಾಜಿಯವರನ್ನು ವೃಥಾ ದೂಷಿಸುತ್ತಿದ್ದೀರಿ· ಇದರಲ್ಲಿ ಅವರದು ಯಾವ ತಪ್ಪೂ ಇಲ್ಲ. ದೂಷಿಸುವುದಾದರೆ ನನ್ನನ್ನು ದೂಷಿ ಸಿರಿ ! ನಿಮ್ಮ ಮನಸ್ಸಿಗೆ ನೋವುಂಟುಮಾಡಿರುವವನು ನಾನೇ ಹೊರತು ಅವ ರಲ್ಲ ! ಅವರನ್ನೇಕೆ ಅನ್ಯಾಯವಾಗಿ ಆಡುತ್ತೀರಿ ?"

ಈ ಮಾತು ಕೇಳಿ ಮಹಾರಾಣಿ ದುರ್ಲಭದೇವಿ ಚಕಿತರಾದರು.

"ಹಾಗಾದರೆ, ನೀನು ನಾವು ತಿಳಿದಿರುವದಕ್ಕಿಂತ ಹೆಚ್ಚು ಆಳಕ್ಕೆ ಇಳಿದಿದ್ದಿ ಎಂದಾಯಿತು ! ನಿನಗೆ ನಮಗಿಂತಲೂ ಮಂಗಳೇಶನೇ ಆಪ್ತನಾದನೆ ? ಹೆಚ್ಚು ಆತ್ಮೀಯ ವ್ಯಕ್ತಿಯಾದನೆ ?"

"ನನಗೆ ನೀವು ಆಪ್ತರೋ, ಅವರು ಆಪ್ತರೊ? ನನ್ನ ವಿಷಯದಲ್ಲಿ ಸಹಾನುಭೂತಿ ಅನುಕಂಪ ತೋರುವವರೆಲ್ಲರೂ ಆತ್ಮೀಯರೇ ! ಅವರನ್ನೇಕೆ ವೃಥಾ ಕಾರಣ ದೂಷಿಸುತ್ತೀರಿ ಅಬ್ಬೆ ! ನಿಮಗಿಂತ ಹೆಚ್ಚು ಪ್ರೀತಿ ವಿಶ್ವಾಸ ಗಳಿಂದ ನನ್ನನ್ನು ನೋಡಿದುದು ಅವರ ತಪ್ಪೆ?"

"ಮಗು, ಇದೀಗ ಚೆನ್ನಾಯಿತು ! ನಿನ್ನನ್ನು ಆ ದ್ರೋಹಿಯು ಚೆನ್ನಾಗಿ ಮೋಸಗೊಳಿಸಿದ್ದಾನೆ. ಅವನ ನಿಜವಾದ ಗೋಮುಖವ್ಯಾಘ್ರತನ ತಿಳಿದೂ ತಿಳಿದೂ–ಹುಲಿಯ ಹೆಬ್ಬಾಗಿಲಿಗೆ ನೀನು ಹೋಗುವೆಯಾ ? ಇದರಿಂದ ನಿನಗೆ ಮಾತ್ರವಲ್ಲ ಇಡೀ ರಾಷ್ಟ್ರಕ್ಕೆ ಎಂತಹ ವಿಪತ್ತು ಕಾದಿದೆ ಎಂಬುದನ್ನು ನೀನು ಅರಿಯದೆ ಹೋದೆಯಾ ?"

"ಮಂಗಳೇಶ ಚಿಕ್ಕಪ್ಪನವರ ಬಗ್ಗೆ ನೀವು ಅಲ್ಲಸಲ್ಲದ ಆರೋಪ ಹೊರಿಸು ತ್ತಿದ್ದೀರಿ. ಅವರು ನಿಮ್ಮಷ್ಟೇ ಒಳ್ಳೆಯವರು. ಲೋಕದಲ್ಲಿ ಅಂತಹ ನಿಷ್ಠಾವಂತ ಸ್ವಾಮಿಭಕ್ತರು–ಸಜ್ಜನರು, ವಿರಾಗಿಗಳು ದೊರೆಯುವುದು ಕಷ್ಟ. ಅವರು

ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಆಶಿಸಿರುವರೆಂದು ನೀವು ಅವರ ಮೇಲೆ ಆರೋಪಿಸುತ್ತಿದ್ದೀರಿ! ಆದರೆ, ಅಂತಹ ಯಾವ ಆಸೆಯೂ ಅವರಿಗೆ ಇಲ್ಲ. ಸಿಂಹಾಸನವನ್ನು ನಮಗೆ ಒಪ್ಪಿಸಿದ ಮೇಲೆ ಅವರು ಒಂದುಗಳಿಗೆಯೂ ರಾಜಧಾನಿಯಲ್ಲಿರುವುದಿಲ್ಲ. ಆರ್ಯಪುರಕ್ಕೆ ಹೋಗಿ ಅಲ್ಲಿನ ವಿದ್ವಾಂಸರ ಸಹವಾಸದಲ್ಲಿ ತಮ್ಮ ಜೀವಿತವನ್ನು ಕಳೆಯಲು ಯೋಚಿಸಿದ್ದಾರೆ. ಇಂತಹ ನಿಸ್ಪೃಹರನ್ನು ನೀವು ವೃಥಾ ಶಂಕಿಸುತ್ತಿದ್ದೀರಿ!"

"ಮಗು ನನಗೆ ಬುದ್ಧಿ ಹೇಳುವಷ್ಟು ಬುದ್ಧಿವಂತನಾದೆಯಾ? ನಿನ್ನ ಹದಿನಾರು ವರ್ಷಗಳ ಆಯುಸ್ಸಿನಲ್ಲಿ ಇಷ್ಟೆಲ್ಲ ಅನುಭವದ ಪಾಠ ಕಲಿತಿದ್ದರೆ,ನನ್ನ ತುಂಬಿದಾಯುಷ್ಯದಲ್ಲಿ–ಈ ಎಪ್ಪತ್ತು ವರ್ಷಗಳ ಜೀವಿತದಲ್ಲಿ—ನಾನು ಎಷ್ಟು ಜನರನ್ನು ಕಂಡಿರಬೇಕು! ಎಷ್ಟು ಬಗೆಯ ಅನುಭವದ ಪಾಠ ಕಲಿತಿರಬೇಕು! ಅಯ್ಯೋ ಹುಚ್ಚಪ್ಪಾ, ಕೇಳು, ನೀನು ಹುಟ್ಟುವ ಮೊದಲು ಹುಟ್ಟಿದ ಮಂಗಳೇಶನನ್ನು ಬಾಲ್ಯದಿಂದ ಕಂಡಿದ್ದೇನೆ. ಅವನು ಹುಲಿಯ ಮರಿಯೇ, ಹಸುವಿನ ಕರುವೆ ನನಗೆ ಚೆನ್ನಾಗಿ ಗೊತ್ತು. ಆ ನಿನ್ನ ಚಿಕ್ಕಪ್ಪಾಜಿಯ ಗುಣಗಾನ ಸಾಕು ಮಾಡು! ನನ್ನ ಪ್ರಶ್ನೆಗೆ ಉತ್ತರಕೊಡು. ನೀನೇಕೆ ಪುಲಿಕೇಶಿ ಸಾಮ್ರಾಟನಾಗುವುದನ್ನು ವಿರೋಧಿಸುತ್ತಿದ್ದಿ? ಅವನು ಅಂತಹ ಅಪರಾಧ ನಿನಗೆ ಏನು ಮಾಡಿದ್ದಾನೆ?"

"ಕೇಶಣ್ಣನು ಸಾಮ್ರಾಟನಾಗಲು ನನ್ನ ವಿರೋಧವಿಲ್ಲ. ಆದರೆ ಅವನು ಸಾಮ್ರಾಟನಾದರೆ, ನಾನೂ ಸಾಮ್ರಾಟನಾಗಬೇಕು!"

"ಒಂದು ರಾಜ್ಯಕ್ಕೆ ಇಬ್ಬರು ಸಾಮ್ರಾಟರು ಇರುವುದನ್ನು ನೀನು ಎಲ್ಲಾದರೂ ನೋಡಿದ್ದೀಯಾ? ಕೇಳಿದ್ದೀಯಾ? ಓದಿದ್ದೀಯಾ?"

"ಇಲ್ಲ."

"ಹಾಗಾದರೆ ನೀನೇಕೆ ಪುಲಿಕೇಶಿಯ ಜೊತೆಯಲ್ಲಿ ಸಾಮ್ರಾಟನಾಗಲು ಸ್ಪರ್ಧಿಸುತ್ತಿದ್ದೀ? ಸಿಂಹಾಸನ–ಸಾಮ್ರಾಜ್ಯಗಳು ಏನಿದ್ದರೂ ಹಿರಿಯ ಮಗನಿಗೆ, ದೊರೆಗಳ ಜ್ಯೇಷ್ಠಸಂತತಿಗೆ ಮಾತ್ರ ಮೀಸಲು ಎಂಬುದು ನಿನಗೆ ತಿಳಿದಿಲ್ಲವೆ?"

"ತಿಳಿದಿದೆ."

"ಆದರೂ ಸಾಮ್ರಾಟನಾಗಬಯಸುತ್ತಿರುವೆಯಾ?"

"ಹೌದು."

"ನಿನ್ನ ಮಾತು ವಿಚಿತ್ರವಾಗಿದೆ. ನಿನ್ನ ಮನಸ್ಸಿನಲ್ಲಿ ಏನಿದೆ ಎಂಬುದನ್ನು ಸ್ಪಷ್ಟವಾಗಿ ಹೇಳಬಾರದೆ ?"

"ಸ್ಪಷ್ಟವಾಗಿ ಹೇಳಿದ್ದೇನೆ. ಕೇಶಣ್ಣ ಸಾಮ್ರಾಟನಾದರೆ, ನಾನೂ ಸಾಮ್ರಾಟನಾಗಬೇಕು, ಕೇಶಣ್ಣನಿಗೆ ಸಾಮ್ರಾಜ್ಯ ದೊರೆತರೆ,ನನಗೂ ದೊರೆಯ ಬೇಕು."

"ಆದರೆ, ಸಿಂಹಾಸನವನ್ನೂ, ಸಾಮ್ರಾಜ್ಯವನ್ನೂ ನೀವಿಬ್ಬರೂ ಸಮ ನಾಗಿ ಹಂಚಿಕೊಳ್ಳಬೇಕೆಂದು ನಿನ್ನ ಅಪೇಕ್ಷೆಯೆ ?"

"ಹೌದು."

"ಇದು ಎಲ್ಲಾದರೂ ಉಂಟೆ ಮಗು ? ನಿನ್ನ ಮಾತನ್ನು ಕೇಳಿದವರು ನಕ್ಕಾರು."

"ಯಾಕೆ ನಗುತ್ತಾರೆ ಅಬ್ಬೆ ? ಒಬ್ಬ ತಂದೆಗೆ ಇಬ್ಬರು ಮಕ್ಕಳಿದ್ದರೆ, ಆವನು ಮಡಿದ ಮೇಲೆ ಅವನ ಆಸ್ತಿಯನ್ನೆಲ್ಲ ಮಕ್ಕಳು ಸಮನಾಗಿ ಹಂಚಿ ಕೊಳ್ಳುವುದಿಲ್ಲವೆ? ಹೊಲ, ಮನೆ, ಹಸುಕರುಗಳನ್ನೂ ಸಹ ಸಮನಾಗಿ ಹಂಚಿ ಕೊಳ್ಳುವುದಿಲ್ಲವೆ ?"

"ಇದನ್ನೆಲ್ಲಾ ನೀನು ಎಲ್ಲಿ ಕಲಿತೆ ?"

"ನಮ್ಮ ಗುರುಕುಲದಲ್ಲಿ ಹೇಳಿಕೊಟ್ಟಿದ್ದಾರೆ."

"ಹಾಗಾದರೆ ನಿಮ್ಮ ಗುರುಕುಲದಲ್ಲಿ ಇಂತಹ ಗೃಹಚ್ಛೇದದ ಪಾಠಗಳನ್ನು ಮಾತ್ರವೆ ಕಲಿಸಿಕೊಡುತ್ತಾರೆಯೆ ?"

ಈ ಮಾತಿಗೆ ವಿಷ್ಣುವರ್ಧನ ಮಾತನಾಡಲಿಲ್ಲ. "ಕೇಶಣ್ಣ ವೇದಾಗಮ ಗಳನ್ನೂ, ರಣವಿದ್ಯೆಗಳನ್ನೂ ಕಲಿತು ಪಂಡಿತನಾಗಿ ಬಂದರೆ, ನೀನು ಗೃಹಚ್ಛೇದ ಪಾಠ ಕಲಿತು ಬಂದೆಯಾ ? ನಿನ್ನನ್ನು ಗುರುಕುಲಕ್ಕೆ ಕಳುಹಿಸಿ ಸಾರ್ಥಕ ವಾಯಿತು !" ಎಂದು ಮಹಾರಾಣಿ ದುರ್ಲಭದೇವಿ ಮೊಮ್ಮಗನ ಅವಿವೇಕಕ್ಕಾಗಿ ವಿಷಾದಪಟ್ಟರು.

"ಅಬ್ಬೆ, ನೀವು ನನ್ನನ್ನು ಮಾತುಮಾತಿಗೂ ಭಂಗಿಸುತ್ತಿದ್ದೀರಿ. ನಿಮಗೆ ನನ್ನ ವಿಷಯದಲ್ಲಿ ಎಷ್ಟು ಪ್ರೀತಿ ವಿಶ್ವಾಸ ಆತ್ಮೀಯತೆಗಳು ಇವೆ ಎಂಬುದಕ್ಕೆ ಇದೇ ಸಾಕ್ಷಿ. ನಿಮಗೆ ನಾನು ಹೇಳುವುದೆಲ್ಲವೂ ತಪ್ಪು, ಮಾಡುವುದೆಲ್ಲವೂ ತಪ್ಪು. ಅಂತಲೇ ನಾನು ನಿಮ್ಮೊಡನೆ ಯಾವುದನ್ನೂ ಹೇಳದೆ ಇದ್ದುದು. ನನ್ನ

ವಿಷಯದಲ್ಲಿ ನಿಮಗೆ ಗೌರವ ಸಹಾನುಭೂತಿ ಇಲ್ಲವೆಂಬುದು ನನಗೆ ಗೊತ್ತಿತ್ತು."

"ನಿನ್ನಂತಹ ಕೃತಘ್ನನ ವಿಷಯದಲ್ಲಿ ಸಹಾನುಭೂತಿಯೆ ? ನಿನ್ನಂತಹ ದ್ರೋಹಿಯನ್ನು ಅರಮನೆಯಲ್ಲಿ ಇಟ್ಟುಕೊಂಡಿರುವುದೇ ನಮ್ಮ ತಪ್ಪು. ನಿನ್ನಂತಹ ದೇಶದ್ರೋಹಿಗೆ ಸರಿಯಾದ ಸ್ಥಳ ಅರಮನೆಯಲ್ಲ ಸೆರೆಮನೆ" ಎಂದು ಪುಲಿಕೇಶಿ ಇದುವರೆಗೆ ವಿಷ್ಣುವರ್ಧನ ದುರ್ಲಭದೇವಿಯರ ಸಂಭಾಷಣೆ ಕೇಳುತ್ತಿದ್ದವನು ಅಸಹನೆಯಿಂದ ಗರ್ಜಿಸಿದ.

"ಹೋಗಲಿ ಬಿಡು. ಕೇಶಣ್ಣ ! ಅವನ ಮೇಲೆ ಏಕೆ ರೇಗುವೆ ? ಅವ ನಂತೂ ಬುದ್ಧಿ ಇಲ್ಲದ ಹುಡುಗನಾದರೆ, ನೀನೂ ಅವನ ಹಾಗೇ ಆಗಬೇಕೆ ?"

"ಅಬ್ಬೆ, ನಾನು ಆಗಿನಿಂದಲೂ ಅವನು ಹೇಳುವುದನ್ನೆಲ್ಲಾ ಕೇಳುತ್ತಾ ಬಂದಿದ್ದೇನೆ. ನಿಮ್ಮ ವಯಸ್ಸೇನು ? ಅವನ ವಯಸ್ಸೇನು ? ನಿಮ್ಮ ಯೋಗ್ಯತೆ ಏನು ಅವನ ಯೋಗ್ಯತೆ ಏನು ? ನೀವು ಕುಡಿದಷ್ಟು ನೀರು ಆ ಪೋರ ಕುಡಿದಿಲ್ಲ. ನಿಮಗೆ ಬುದ್ಧಿ ಹೇಳಲು ಬರುತ್ತಿದ್ದಾನೆ."

"ನೀವು ಕಳೆದ ಹತ್ತು ವರ್ಷಗಳಿಂದ ಅಹರ್ನಿಶಿ ನಿದ್ರಾಹಾರಗಳನ್ನು ತೊರೆದು ಸಿಂಹಾಸನ ಅನ್ಯರ ಪಾಲಾಗದಂತೆ ಸರ್ಪಗಾವಲು ಕುಳಿತು, ನಮ್ಮ ಅಭ್ಯುದಯಕ್ಕಾಗಿ ತಪಸ್ಸು ಮಾಡುತ್ತಾ ಇದ್ದು, ಇಂದು ನಿಮ್ಮ ತಪಸ್ಸಿನ ಫಲ ದಿಂದ ಸಿಂಹಾಸನ ನಮ್ಮದಾಗುವ ಮುಹೂರ್ತ ಕಾಣುತ್ತಿರುವಾಗ, ಈ ದ್ರೋಹಿಯು, ಮಾಡಿದ ಪಾಯಸದಲ್ಲಿ ವಿಷ ಹಾಕುತ್ತಿದ್ದಾನಲ್ಲ ! ನೆನೆದರೆ, ಮೈ ಕುದಿಯುತ್ತದೆ. ಈ ಪಾಪಿಯನ್ನು ಏನು ಮಾಡಬೇಕು ಗೊತ್ತೆ?" ಎಂದು ಆರ್ಭಟಿಸಿ ಮುಷ್ಟಿಯನ್ನು ಬಿಗಿದನು.

"ಮಗು ಕೇಶಣ್ಣ, ಶಾಂತನಾಗು, ಸಮಾಧಾನ ತಾಳಿಕೋ ! ಒಂದು ಮಾತು ಅಹಿತವಾದುದನ್ನು ಆಡಿದನೆಂದು ತಮ್ಮನ ಮೇಲೆ ಇಷ್ಟು ಸಿಟ್ಟಾಗ ಬೇಕೆ ? ಅವನೇನೋ ಬುದ್ಧಿ ಇಲ್ಲದ ಅವಿವೇಕಿಯಾದರೆ, ನೀನೂ ಬುದ್ಧಿಗೇಡಿ ಯಾಗಬೇಕೆ ?...." ಎಂದು ಪುಲಿಕೇಶಿಯನ್ನು ಸಮಾಧಾನಗೊಳಿಸಿದರು ದುರ್ಲಭದೇವಿ.

"ಅಬ್ಬೆ, ನೀವೇ ನೋಡಿದಿರಲ್ಲ ಕೇಶಣ್ಣನ ಜೋರು ! ದೊರೆಯಾಗುವ ಮೊದಲೇ, ನನ್ನ ಮೇಲೆ ಹೀಗೆ ಹರಿಹಾಯುವವನು, ಇನ್ನು ಸಾಮ್ರಾಟನಾದ ಮೇಲೆ ನನ್ನನ್ನು ಸುಮ್ಮನೆಬಿಟ್ಟಾನೆ ? ಅದಕ್ಕೇ ನಾನು ಸಿಂಹಾಸನ-ಸಾಮ್ರಾಜ್ಯ

ಗಳಲ್ಲಿ ಪಾಲು ಕೇಳುತ್ತಿರುವುದು ? ನಾನು ಸಾಮ್ರಾಟನಾದರೆ, ಯಾರಿಗೂ ಅಂಜಬೇಕಾಗಿಲ್ಲ, ಯಾರಿಗೂ ಅಡಿಯಾಳಾಗಿರಬೇಕಾಗಿಲ್ಲ."

ಈ ಮಾತು ಕೇಳಿ ಪುಲಿಕೇಶಿಯ ರೋಷ ಸರ್ರನೆ ಇಳಿದು ಹೋಯಿತು. ಅವನು ಬಿಗಿದ ಮುಷ್ಠಿಯನ್ನು ಸಡಿಲಿಸಿ, ತಿರಸ್ಕಾರದಿಂದ ನೋಡಿ, ಸುಮ್ಮನೆ ಕುಳಿತನು.

"ನೋಡಿದೆಯಾ ಕೇಶಣ್ಣ, ಇಷ್ಟಕ್ಕೆಲ್ಲಾ ಕಾರಣ ನೀನೇ. ಅವನು ನಿನಗೆ ಅಂಜುತ್ತಿರುವುದರಿಂದಲೇ, ನಾಳೆ ನೀನು ಸಾಮ್ರಾಟನಾದರೆ ಹೇಗೋ ಏನೋ ಎಂದು, ಅವನು ಸಿಂಹಾಸನದಲ್ಲಿ ಪಾಲುಕೇಳುತ್ತಿದ್ದಾನೆ. ಹೆದರಿದವ ನನ್ನು ಸಮಾಧಾನಪಡಿಸಿ, ಧೈರ್ಯ ಹೇಳುವ ಬದಲು ಹೀಗೆ ಹಾವು ಎಸೆದರೆ ಹೇಗೆ ಮಗು ?" ಎಂದು ಪುಲಿಕೇಶಿಗೆ ಹೇಳಿ, ಅನಂತರ ವಿಷ್ಣುವರ್ಧನನ ಕಡೆಗೆ ತಿರುಗಿ,

"ಮಗು ವಿಷ್ಣು, ಪುಲಿಕೇಶಿಯ ಸ್ವಭಾವ ನಿನಗೆ ಗೊತ್ತಿದೆ, ಮೊದಲಿ ನಿಂದಲೂ ಅವನಿಗೆ ಸಹನೆ ಕೊಂಚ ಕಡಿಮೆ, ಅದಕ್ಕೆ ತಕ್ಕಂತೆ ಸಿಟ್ಟು ಹೆಚ್ಚು. ಅವನ ಮಾತನ್ನು ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಅವನ ಮಾತು ಎಷ್ಟು ಒರಟೋ, ಅವನ ಹೃದಯ ಅಷ್ಟೋ ಒಳ್ಳೆಯದು. ಅವನಿಗೆ ನಿನ್ನನ್ನು ಕಂಡರೆ ದ್ವೇಷವಿಲ್ಲ. ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಾನೆ. ನಿನ್ನ ಮೇಲೆ ಇರುವ ಪ್ರೀತಿಯೇ, ನೀನು ಅಡ್ಡದಾರಿ ತುಳಿದಾಗ, ಸಿಟ್ಟಾಗಿ ಹೊರಹೊಮ್ಮುತ್ತದೆ, ಅಷ್ಟೆ. ಅವನಿಗೆ ನಿನ್ನ ಹೊರತು ಬೇರೆ ಆಪ್ತರು, ಬಂಧುಬಳಗ ಯಾರಿದ್ದಾರೆ ? ನೀನು ನೆಮ್ಮದಿಯಾಗಿರಬೇಕೆಂದೇ ಅವನ ಹಾರೈಕೆ ! ಅವನಿಗೆ ನಿನ್ನ ವಿಷಯದಲ್ಲಿ ಎಷ್ಟು ಪ್ರೀತಿ ವಿಶ್ವಾಸಗಳಿವೆ ಎಂದರೆ, ನಿನ್ನ ಸಲುವಾಗಿ ಏನೂ ಮಾಡಲೂ ಸಿದ್ಧ ನಾಗಿದ್ದಾನೆ. ಆದರೆ ಅದನ್ನು ಕಾರ್ಯರೂಪದಲ್ಲಿ ತೋರಿಸಬಲ್ಲನೇ ಹೊರತು, ಮಾತಿನ ರೂಪದಲ್ಲಿ ವ್ಯಕ್ತಪಡಿಸಲಾರ ! ಅವನನ್ನು ನೀನು ತಪ್ಪು ತಿಳಿಯಬೇಡ. ಅವನು ನಿನ್ನ ಭಾಗಕ್ಕೆ ಅಣ್ಣ-ತಂದೆ ಎಲ್ಲವೂ ಆಗಿದ್ದಾನೆ. ಅವನನ್ನು ನಂಬು, ವಿಧೇಯನಾಗಿ ನಡೆ. ಇದರಿಂದ ನಿನಗೂ ಶ್ರೇಯಸ್ಸಿದೆ, ಅವನಿಗೂ ಶ್ರೇಯಸ್ಸಿದೆ. ಅವನನ್ನು ನಂಬಿದರೆ, ಅವನು ನಿನ್ನನ್ನು ಎಂದಿಗೂ ಕೈಬಿಡುವುದಿಲ್ಲ. ಅವನ ಬಗ್ಗೆ ಇರುವ ಸಂದೇಹ, ಹೆದರಿಕೆಗಳನ್ನು ಈ ಗಳಿಗೆಯಿಂದ ತೊರೆದು ರಾಮಲಕ್ಷ್ಮಣ ರಂತೆ ಅನ್ಯೋನ್ಯವಾಗಿದ್ದರೆ ಅದಕ್ಕಿಂತ ಹೆಚ್ಚಿನದನ್ನು ನಾನು ಏನೂ ಬಯ

ಸುವುದಿಲ್ಲ. ನೀವಿಬ್ಬರೂ ಒಡಹುಟ್ಟಿದವರು. ಜೀವನದಲ್ಲೂ ಒಡನಿದ್ದು, ಪ್ರಜಾ ವತ್ಸಲಪ್ರಭುಗಳಾಗಿ ಚಾಲುಕ್ಯ ಸಿಂಹಾಸನದ ಧವಳ ಕೀರ್ತಿಯನ್ನು ಜಗದಲ್ಲಿ ಮೆರೆಸಬೇಕೆಂಬುದೇ, ನನ್ನ ಹಾರೈಕೆ! ನೀವು ನನ್ನ ನಿರೀಕ್ಷೆಯನ್ನು ವ್ಯರ್ಥ ಗೊಳಿಸುವುದಿಲ್ಲವೆಂಬ ನಂಬಿಕೆ ನನಗೆ ಇದೆ. ಅಲ್ಲವೆ ಮಕ್ಕಳಿರಾ?" ಎಂದು ಹೇಳಿ ಪುಲಿಕೇಶಿ ಹಾಗೂ ವಿಷ್ಣುವರ್ಧನರನ್ನು ಆಶಾದೃಷ್ಟಿಯಿಂದ ನೋಡಿದರು.

ಆ ಮಾತಿಗೆ ಅವರಿಬ್ಬರೂ ಏನೂ ನುಡಿಯದೆ ಪರಸ್ಪರ ಮುಖ ನೋಡಿ ಕೊಂಡರು.

## ೭

ಆದರೆ ವಿಷ್ಣುವರ್ಧನನು ಹಿಂದಿರುಗಲಾಗದಷ್ಟು ಮಂಗಳೇಶನ ಪ್ರಭಾವದ ಸುಳಿಯಲ್ಲಿ ಸಿಲುಕಿದ್ದನು. ಅವನ ಭಾಗಕ್ಕೆ ಮಂಗಳೇಶನು ನಿಸ್ಪೃಹನಾದ ರಾಜನಿಷ್ಠ ಸೇವಕನಾಗಿದ್ದನು. ಯಾರೆಷ್ಟು ಹೇಳಿದರೂ ಅವನು ದ್ರೋಹಿಯಾಗಿ ಕಾಣಿಸುತ್ತಿರಲಿಲ್ಲ. ಅವನಂತಹ ನಿಸ್ವಾರ್ಥಿ, ನಿರ್ಮೋಹಿ, ವೈರಾಗ್ಯನಿಧಿಯನ್ನು ದ್ರೋಹಿ ಎಂದು ಕರೆದವರೇ ಅವನ ಕಣ್ಣಿನಲ್ಲಿ ದ್ರೋಹಿಗಳಾಗಿ ಭಾಸವಾಗಿ ದ್ದರು. ಅವನಿಗೆ ತನ್ನ ಅಬ್ಬೆ ದುರ್ಲಭದೇವಿ, ಅಣ್ಣ ಪುಲಿಕೇಶಿ, ಹಿತೈಷಿ ಸಮಂತ ಭದ್ರ ಇವರಲ್ಲಿ ಇದ್ದ ನಂಬಿಕೆಗೂ ಅತಿಶಯವಾದ ನಂಬಿಕೆ, ಪ್ರೀತಿ ವಿಶ್ವಾಸಗಳು ಮಂಗಳೇಶನಲ್ಲಿ ಇದ್ದವು. ಮಂಗಳೇಶನು ತನ್ನ ಬಣ್ಣದ ಮಾತುಗಳಿಂದ ವಿಷ್ಣುವಿನ ಹೃದಯವನ್ನು ಗೆದ್ದು ತನ್ನದು ಮಾಡಿಕೊಂಡಿದ್ದನು. ಅವನ ಮೇಲೆ ಮಂಗ ಳೇಶನ ವರ್ಚಸ್ಸು ಗಾಢವಾಗಿ ಬಿದ್ದಿತ್ತು. ಆದರೂ ಅವನಿಗೆ ತನ್ನ ಅಬ್ಬೆ ದುರ್ಲಭ ದೇವಿಯೊಡನೆ ಮಾತುಕತೆ ನಡೆಸಿದ ಮೇಲೆ ಮಂಗಳೇಶನ ಬಗ್ಗೆ ಇದ್ದ ಅಚಲ ನಂಬಿಕೆಯನ್ನು ಹಿಡಿದಲುಗಿಸಿದಂತೆ ಆಗಿತ್ತು. ಇತ್ತ ತನ್ನನ್ನು ಬಾಲ್ಯದಿಂದಲೂ ಸಾಕಿಸಲಹಿದ್ದ ಅಬ್ಬೆ ಹಾಗೂ ಅಣ್ಣಂದಿರು ಅವನನ್ನು ತಮ್ಮ ಕಡೆಗೆ ಸೆಳೆದು ಕೊಳ್ಳಲು ಸಾಹಸಪಟ್ಟಿದ್ದರು. ಅತ್ತ ಸ್ನೇಹಾಂತಃಕರಣಗಳಿಂದಲೂ, ಮೃದು ಮಧುರ ವಚನಗಳಿಂದಲೂ, ಮುಗ್ಧನಾದ ವಿಷ್ಣುವಿನ ಹೃದಯವನ್ನು ಗೆದ್ದು,

ತನ್ನ ವಿನಹ ಉಳಿದವರೆಲ್ಲರೂ ಸ್ವಾರ್ಥಸಾಧಕರು, ದ್ರೋಹಿಗಳು ಎಂಬ ಭಾವನೆ ನೆಲೆಗೊಳ್ಳುವಂತೆ ಮಾಡಿದ್ದ ಮಂಗಳೇಶನು ಅವನನ್ನು ತನ್ನ ಕೈಗೊಂಬೆಯಾಗಿ ಮಾಡಿಕೊಳ್ಳಲು ಪ್ರಯತ್ನಿಸಿದ್ದನು.ಇವರಿಬ್ಬರಲ್ಲಿ ತನ್ನ ಹಿತಚಿಂತಕರು ಯಾರು, ತನ್ನ ಶತ್ರುಗಳು ಯಾರು ಎಂಬುದನ್ನು ಅವನು ನಿರ್ಧರಿಸಲಾರದೆ ಹೋಗಿದ್ದ. ಒಮ್ಮೆ ಸಂದೇಹ, ಇನ್ನೊಮ್ಮೆ ನಿರ್ಧಾರ ಇವುಗಳಲ್ಲಿ ಮನಸ್ಸು ತುಯ್ಯುತ್ತಿದ್ದಾಗಲೇ ಅವನು ತನಗೆ ತಿಳಿಯದಂತೆ ಮಂಗಳೇಶನ ಅರಮನೆಗೆ ಬಂದಿದ್ದ. ಮಂಗಳೇಶನನ್ನು ಕಾಣುತ್ತಲೇ, ಅವನಿಗೆ ತನ್ನ ದುಮ್ಮಾನವನ್ನೆಲ್ಲಾ ತೋಡಿಕೊಂಡು ಹೃದಯದ ಭಾರವನ್ನು ಕಡಿಮೆ ಮಾಡಿಕೊಳ್ಳಬೇಕೆನಿಸಿತು. ಅವನು ಮಂಗಳೇಶನಿಗೆ ನಡೆದ ಸಂಗತಿಯನ್ನೆಲ್ಲಾ ಹಿಂದೆಮುಂದೆ ನೋಡದೆ ತಿಳಿಸಿ, ಕಡೆಗೆ ಹೀಗೆ ಹೇಳಿದ:

"ಅಪ್ಪಾಜಿ, ಈಗ ನಾನು ಯಾರನ್ನು ನಂಬುವುದು, ಯಾರನ್ನು ಬಿಡುವುದು ? ಯಾರು ನನ್ನ ಹಿತೈಷಿಗಳು, ಯಾರು ನನ್ನ ಹಿತಶತ್ರುಗಳು ಎಂಬುದನ್ನು ನಿರ್ಧರಿಸಲಾರದವನಾಗಿದ್ದೇನೆ. ನಿಮ್ಮ ಬಳಿಗೆ ಬಂದರೆ, ನೀವೇ ನನ್ನ ಏಕೈಕ ಶ್ರೇಯಾಕಾಂಕ್ಷಿಗಳೆಂದು ಭಾಸವಾಗುತ್ತದೆ. ಅತ್ತ ಅವರ ಬಳಿಗೆ ಹೋದರೆ, ಅವರೇ ನನ್ನ ಹಿತೇಚ್ಛುಗಳೆಂದು ಅನಿಸುತ್ತದೆ, ನೀವು ಅವರನ್ನು ಸ್ವಾರ್ಥಸಾಧಕರೆನ್ನುತ್ತೀರಿ. ಅವರು ನಿಮ್ಮನ್ನು ದ್ರೋಹಿಗಳೆಂದು ದೂರುತ್ತಾರೆ. ನಿಮ್ಮಿಬ್ಬರಲ್ಲಿ ನಿಜವಾದ ಸ್ವಾರ್ಥಿಗಳು ಯಾರೆಂದು ಎಷ್ಟು ಯೋಚಿಸಿದರೂ ಬಗೆಹರಿಯದಾಗಿದೆ."

"ಇದನ್ನು ನೀನೇ ಸ್ವಾನುಭವ ಸೂಕ್ಷ್ಮವಿಚಾರಮಥನದಿಂದ ನಿರ್ಧರಿಸಬೇಕಾಗಿದೆ ಮಗು. ನಿನ್ನ ಮನಸ್ಸಾಕ್ಷಿ ಯಾರನ್ನು ನಂಬಬೇಕೆಂದು ನಿನಗೆ ಆದೇಶ ನೀಡುವುದೋ ಅವರನ್ನು ನಂಬು. ಇದಕ್ಕೂ ಹೆಚ್ಚಿಗೆ ನಾನು ಏನೂ ಹೇಳಲಾರೆ !" ಮಂಗಳೇಶ ಶಾಂತಧ್ವನಿಯಲ್ಲಿ ಹೇಳಿದ.

"ಕೇಶಣ್ಣನಿಗೆ ನನ್ನ ವಿಷಯದಲ್ಲಿ ಪ್ರೀತಿ ಇಲ್ಲ. ಇಂದು ಅವನು ನನ್ನ ಮೇಲೆ ಹುಲಿಯಂತೆ ಬಿದ್ದುದನ್ನು ನೆನೆದರೆ ಇನ್ನೂ ಮೈನಡುಗುತ್ತದೆ. ನನ್ನ ವಿಷಯದಲ್ಲಿ ಪ್ರೀತಿ ವಿಶ್ವಾಸವಿದ್ದಿದ್ದರೆ ನನ್ನನ್ನು ಸೆರೆಮನೆಯಲ್ಲಿ ಇಡಬೇಕೆಂದು ಹೇಳುತ್ತಿದ್ದನೆ? ಆದರೆ ಅಬ್ಬೆಯವರಾದರೋ ಕೇಶಣ್ಣ ಹೊರನೋಟಕ್ಕೆ ನಿಷ್ಠುರವಾದಿಯಂತೆ ಕಂಡರೂ ಹೃದಯ ಹೂವಿನಷ್ಟು ಕೋಮಲ, ನನ್ನ ವಿಷಯದಲ್ಲಿ

ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿವಿಶ್ವಾಸಗಳಿವೆ ಎಂದು ಹೇಳುತ್ತಾರೆ. ಆದರೆ ನಿಮ್ಮನ್ನು ಅಧಿಕಾರವ್ಯಾಮೋಹವಿಲ್ಲದ ನಿಸ್ಪೃಹರೆಂದು ಹೇಳಿದುದಕ್ಕೆ ನಿಮ್ಮನ್ನು ಜನ್ಮದಾರಭ್ಯ ಕಂಡ ತಮಗೆ ಬುದ್ಧಿ ಹೇಳಲು ಬರುತ್ತೀಯಾ ಎಂದು ಅಬ್ಬೆಯವರು ಹೀಯಾಳಿಸಿದರು. ಆದರೆ ಒಂದು ವಿಷಯ ಮಾತ್ರ ಸುಸ್ಪಷ್ಟವಾಯಿತು. ಪುಲಿಕೇಶಿ ಸಾಮ್ರಾಟನಾದರೆ ನನಗೆ ಉಳಿಗಾಲವಿಲ್ಲ. ಅವನು ತಾನು ಹೇಳಿದಂತೆ ನನ್ನನ್ನು ಸೆರೆಮನೆಯಲ್ಲಿ ಇಡಲೂ ಹೇಸುವವನಲ್ಲ. ಈಗ ನೀವು ಹೇಳಿದ ದಾರಿಯಲ್ಲಿ ಹೋದರೆ ಮಾತ್ರ ನನ್ನ ಉಳಿಗಾಲ ಎಂದು ನನ್ನ ಮನಸ್ಸಾಕ್ಷಿ ಹೇಳುತ್ತಿದೆ. ನಾನು ನಿಮ್ಮನ್ನು ನಂಬಿದ್ದೇನೆ. ನೀವು ನನ್ನನ್ನು ಸಮುದ್ರಕ್ಕಾದರೂ ಎಸೆಯಿರಿ, ದಡಕ್ಕಾದರೂ ಒಯ್ದು ಮುಟ್ಟಿಸಿರಿ. ಈ ಗಳಿಗೆಯಿಂದ ನೀವೇ ನನ್ನ ತಂದೆ, ತಾಯಿ, ಬಂಧು ಬಳಗ ಎಲ್ಲವೂ ಆಗಿದ್ದೀರಿ. "ನಿಮ್ಮಿಚ್ಛೆ ಬಂದಂತೆ ನನ್ನನ್ನು ಉಪಯೋಗಿಸಿಕೊಳ್ಳಬಹುದು !" ಎಂದು ಹೇಳಿ ವಿಷ್ಣುವರ್ಧನ ಮಂಗಳೇಶನಿಗೆ ಸರ್ವಾರ್ಪಣ ಮಾಡಿದ.

"ಮಗು, ಈಗಲಾದರೂ ನಿನಗೆ ನಿನ್ನ ನಿಜವಾದ ಮಿತ್ರರು ಯಾರು, ಹಿತಶತ್ರುಗಳು ಯಾರು ಎಂಬುದು ತಿಳಿಯಿತಲ್ಲ, ಅಷ್ಟೇ ಸಂತೋಷ. ಇನ್ನಾದರೂ ನಿನ್ನ ಅಬ್ಬೆ ಹಾಗೂ ಕೇಶಣ್ಣರ ಬಗ್ಗೆ ಎಚ್ಚರದಿಂದ ಇರು. ನೀನು ಸಿಂಹಾಸನಕ್ಕೆ ಅವರ ಪ್ರತಿಸ್ಪರ್ಧಿ ಎಂದು ತಿಳಿದಿದೆ. ಇನ್ನು ಮೇಲೆ ನಿನ್ನ ಜೀವಕ್ಕೆ ಅವರು ಅಪಾಯತರಬಹುದು. ಆದುದರಿಂದ ನೀನು ಇನ್ನು ಮೇಲೆ ಇಲ್ಲಿಯೇ ಇರುವುದು ಒಳ್ಳೆಯದು."

"ಆದರೆ ಅಬ್ಬೆಯವರು ಈ ಮಾತಿಗೆ ಒಪ್ಪಿಗೆ ಕೊಡಬೇಕಲ್ಲ?"

"ನೀನು ನನ್ನ ಜೊತೆಯಲ್ಲಿ ಇರಲು ಹಠಮಾಡಿದರೆ ಅವರು ಒಪ್ಪಲೇಬೇಕು, ನೀನೇನು ಸಣ್ಣ ಮಗುವಲ್ಲ, ನಿನ್ನ ಹಿತಸಾಧನೆ ನಿನಗೆ ಸೇರಿದುದು. ಒಂದು ವೇಳೆ ಅಲ್ಲೇ ಇರಲು ನಿನ್ನನ್ನು ಒತ್ತಾಯ ಮಾಡಿ ನಿನ್ನನ್ನು ನಿರ್ಬಂಧದಲ್ಲಿ ಇರಿಸಿದರೆ, ನಿನ್ನನ್ನು ಉಪಾಯವಾಗಿ ಕರೆಸಿಕೊಳ್ಳುವ ದಾರಿ ನನಗೆ ತಿಳಿದಿದೆ" ಎಂದು ಹೇಳಿ ಕೆಲಕಾಲ ಮೌನವಾಗಿ ಕುಳಿತನು.

"ಇನ್ನೊಂದು ವಿಷಯ. ನೀನು ಯಾರನ್ನು ನಂಬಿದರೂ ಮಹಾವಂಚಕಳಾದ ನಿನ್ನ ಅಬ್ಬೆಯನ್ನು ನಂಬಬೇಡ. ಅವಳು ನಿನ್ನ ಮೇಲೆ ಅಧಿಕ ಪ್ರೀತಿ ಇರುವಂತೆ ನಟಿಸುತ್ತಲೇ ನಿನಗೆ ದ್ರೋಹ ಬಗೆಯುತ್ತಿದ್ದಾಳೆ. ಅವಳು

ಪುಲಿಕೇಶಿಯ ಪಕ್ಷಪಾತಿ. ನಾಳೆ ಅವನು ಸಾಮ್ರಾಟನಾದರೆ, ಅವನ ಹೆಸರಿನಲ್ಲಿ ತಾನೇ ರಾಜ್ಯಭಾರ ನಡೆಸಬಹುದೆಂದು ಅವಳ ಅಪೇಕ್ಷೆ ! ತಾನು ಸಾಮ್ರಾಜ್ಞಿ ಯಾಗಿ ಮೆರೆಯಲು ಅವಳು ಯಾವ ಹೇಯಕೃತ್ಯಕ್ಕೂ ಹೇಸುವವಳಲ್ಲ. ಅವ ಳನ್ನು ಅಧಿಕಾರ ಪಿಶಾಚಿಹಿಡಿದಿದೆ. ಇಲ್ಲದಿದ್ದರೆ ಪರಲೋಕ ಚಿಂತನೆಯಲ್ಲಿ ತೊಡಗಬೇಕಾಗಿರುವ ವಯಸ್ಸಿನಲ್ಲಿ ಅಧಿಕಾರಕ್ಕಾಗಿ ಮೊಮ್ಮಕ್ಕಳಲ್ಲೇ ಭೇದ ಕಲ್ಪಿಸುತ್ತಿದ್ದಳೆ ?"

"ಅಜ್ಜಿಗೆ ಅಧಿಕಾರವ್ಯಾಮೋಹವಿದೆಯೆ ?"

ವಿಷ್ಣುವರ್ಧನ ಅಚ್ಚರಿಯಿಂದ ಕೇಳಿದ.

"ಮಗು, ನಿನ್ನ ಅಜ್ಜಿಯ ವಿಷಯ ನಿನಗೆ ತಿಳಿಯದು. ನಾನು ಹುಟ್ಟುವ ಮೊದಲೇ ಅವರು ಹುಟ್ಟಿದ್ದರು, ದಿಟ. ಆದರೆ ಅವರಿಗೂ ಮೊದಲು ತೀರ್ಥರೂಪ? ತಂದೆಯವರಾದ ಪುಲಿಕೇಶಿ ಸಾರ್ವಭೌಮರು—ನಿನ್ನ ಅಜ್ಜಂದಿರು ಹುಟ್ಟಿದ್ದರು. ಅವರ ಮುಂದೆ ನಿನ್ನ ಅಜ್ಜಿಯ ಘಾತುಕತನ ನಡೆಯಲಿಲ್ಲ. ಅವರು ತಮ್ಮ ಎಲ್ಲ ರಾಣಿಯರನ್ನೂ ಒಂದೇ ರೀತಿಯಲ್ಲಿ ನೋಡುತ್ತಿದ್ದರು. ಅವಳು ಪಟ್ಟದ ರಾಣಿ ಎಂಬ ಅಹಂಕಾರದಿಂದ ಅಧಿಕಾರ ಚಲಾಯಿಸಲು ನೋಡಿದಳು. ಆದರೆ, ತಂದೆ ಯವರು ಬದುಕಿದ್ದಷ್ಟು ಕಾಲ ಅವಳ ಆಟ ನಡೆಯಲಿಲ್ಲ. ನಿನ್ನ ಅಜ್ಜಿ ಅಧಿಕಾರ ಮೋಹದಿಂದ ತೀರ್ಥರೂಪರಿಗೆ ಕಿರುಕುಳಕೊಟ್ಟಳು. ಅವಳು ಕೊಟ್ಟ ಕಿರುಕುಳ ದಿಂದ ತೀರ್ಥರೂಪರು ಬೇಗ ಮರಣಹೊಂದಿದರು. ಅನಂತರ ನಿನ್ನ ತಂದೆಯವರ ಕಾಲದಲ್ಲಿ ತಮ್ಮ ಕೈಗೆ ಅಧಿಕಾರ ಬರಬಹುದೆಂದು ಆಶಿಸಿದಳು. ಆದರೆ ಅವಳ ಎಣಿಕೆ ಸುಳ್ಳಾಯಿತು. ಕೀರ್ತಿವರ್ಮರಿಗೆ ನನ್ನಲ್ಲಿ ಇದ್ದಷ್ಟು ನಂಬಿಕೆ ತಮ್ಮ ತಾಯಿಯಲ್ಲಿ ಇರಲಿಲ್ಲ. ನಾನು ಯುವರಾಜ ಕುಮಾರನಾಗಬಾರದೆಂದು ಅವ ರೆಷ್ಟೋ ಹಠ ಹಿಡಿದರು. ಆದರೆ ಆಸ್ಥಾನದ ಇನ್ನಿತರ ಸಾಮ್ರಾಜ್ಯ ಹಿತೈಷಿಗಳ ಇಷ್ಟದ ಮುಂದೆ ಅವಳ ಇಷ್ಟ ನೆರವೇರಲಿಲ್ಲ. ನಾನು ಯುವರಾಜನಾಗಿರುವವರೆಗೆ ಅವಳನ್ನು ಯಾರೂ ಲೆಕ್ಕಿಸುತ್ತಿರಲಿಲ್ಲ. ಆದರೆ ನಮ್ಮ ನಿಮ್ಮ ದುರ್ದೈವದಿಂದ ಕೀರ್ತಿವರ್ಮರೂ ತೀರಿಕೊಂಡು ನೀವು ತಬ್ಬಲಿಗಳಾದಿರಿ. ಆ ಸಮಯದಲ್ಲಿ ತಾನೇ ಸಿಂಹಾಸನದಲ್ಲಿ ಮಂಡಿಸಿ ಸಾಮ್ರಾಜ್ಞಿಯಾಗಿ ಮೆರೆಯಲು ಆಶಿಸಿದಳು. ಆದರೆ ಸಾಮ್ರಾಜ್ಯದ ಹಿತಚಿಂತಕರು ಸ್ತ್ರೀಯು ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರ ಮಾಡುವುದನ್ನು ಒಪ್ಪಲಿಲ್ಲ. ನನಗೆ ಇಷ್ಟವಿಲ್ಲದಿದ್ದರೂ ನನ್ನನ್ನು

ಕರೆತಂದು ರಾಜಪ್ರತಿನಿಧಿಯಾಗಿಮಾಡಿದರು. ನಾನು ಇದುವರೆಗೆ ಅವಳ ಗೋ-ಮುಖ ವ್ಯಾಘ್ರತನವನ್ನೂ, ಅಧಿಕಾರ ಪಿಪಾಸೆಯನ್ನು ಕಂಡುಕೊಂಡು, ಅವಳ ಪ್ರತಿಯೊಂದು ಪ್ರಯತ್ನವನ್ನೂ ಮಣ್ಣುಗೂಡಿಸುತ್ತಾ ಬಂದಿರುವುದರಿಂದ ಅವಳು ನನ್ನನ್ನು ದ್ರೋಹಿಯೆಂದು ಕರೆದು ಸೇಡುತೀರಿಸಿಕೊಳ್ಳಬೇಕೆಂದಿದ್ದಾಳೆ. ನೀನು ಇನ್ನು ಮುಂದೆ ಅವಳೊಡನೆ ವ್ಯವಹರಿಸುವಾಗ ತುಂಬ ಎಚ್ಚರದಿಂದ ಇರು. ಅವಳಿಗೆ ಆಪ್ತನಂತೆ ನಟಿಸಿ ಅವಳ ಗುಟ್ಟು ಗೋಪ್ಯವನ್ನೆಲ್ಲಾ ನನಗೆ ತಿಳಿಸುತ್ತಿರು" ಎಂದು ಹೇಳಿ ವಿಷ್ಣುವರ್ಧನನನ್ನು ಕಳುಹಿಸಿಕೊಟ್ಟನು.

ಈಗ ವಿಷ್ಣುವರ್ಧನನಿಗೆ ದುರ್ಲಭದೇವಿಗೆ ಪುಲಿಕೇಶಿಯನ್ನು ಕಂಡರೆ ಏಕೆ ಅಷ್ಟು ಪ್ರೇಮ ಎಂಬುದು ಸ್ಪಷ್ಟವಾಗಿತ್ತು. ಅವನನ್ನು ಸಿಂಹಾಸನದ ಮೇಲೆ ಕೂಡಿಸಿ, ತಾನು ಅವನ ಹೆಸರಿನಲ್ಲಿ ರಾಜ್ಯಭಾರ ನಡೆಸಲು ಆಶಿಸುತ್ತಿದ್ದಾರೆ ಎಂದುಕೊಂಡನು. ತನ್ನ ಅಭೀಷ್ಮ ಈಡೇರಿಸಿಕೊಳ್ಳಲು ಸಿಂಹಾಸನ ಜ್ಯೇಷ್ಮಸಂತಾನದ ಹಕ್ಕು ಎಂಬ ಮಾತನ್ನು ಹೇಳುತ್ತಿದ್ದಾಳೆ. ಈ ಮಾತಿಗೆ ತಾನು ಸೊಪ್ಪು ಹಾಕಬಾರದು ಎಂದುಕೊಂಡ ವಿಷ್ಣು ತನ್ನಲ್ಲೇ.

ಈಗ ಪುಲಿಕೇಶಿ ದುರ್ಲಭದೇವಿಯರ ನಿಜವಾದ ಸ್ವರೂಪ ತಿಳಿದಂತೆ ಆಯಿತು. ಅವರ ವಿಷಯದಲ್ಲಿ ತಾನು ಜಾಗ್ರತನಾಗಿರಬೇಕು. ಆದಷ್ಟು ಬೇಗ ಮಂಗಳೇಶನ ಆಶ್ರಯಕ್ಕೆ ಹೋಗಿ, ಆಕೆಯ ಕೈಯಿಂದ ಪಾರಾಗಬೇಕು ಎಂದು ವಿಷ್ಣುವರ್ಧನ ಆಲೋಚಿಸಿ, ಒಂದು ದೃಢನಿರ್ಧಾರಕ್ಕೆ ಬಂದನು.

ದಿನಕಳೆದಂತೆ ಮಹಾರಾಣಿ ದುರ್ಲಭದೇವಿಗೆ ವಿಷ್ಣುವರ್ಧನನು ಬಿಡಿಸಲಾರದ ಕಗ್ಗಂಟಾದನು. ಅವನು ಈಗ ತಮ್ಮೊಡನೆಯಾಗಲೀ, ಪುಲಿಕೇಶಿ, ಸಮಂತಭದ್ರರೊಡನಾಗಲೀ ಸರಿಯಾಗಿ ಮಾತನಾಡುತ್ತಿರಲಿಲ್ಲ. ಮಾತನಾಡಿದರೆ ಒರಟು ಜವಾಬು ಕೊಡುತ್ತಿದ್ದನು. ಮಾತುಮಾತಿಗೆ ತನಗೆ ಯಾರೂ ಬುದ್ಧಿ ಹೇಳಬೇಕಾಗಿಲ್ಲ ಎಂದು ಹೇಳುತ್ತಿದ್ದನು. ಅವನು ಸಹಾ ಮಂಗಳೇಶನ ಸಹವಾಸದಲ್ಲಿ ಇರುತ್ತಿದ್ದನು. ಇಲ್ಲಿ ಆಡಿಕೊಂಡ ಪ್ರತಿಯೊಂದು ಮಾತುಕತೆಯನ್ನೂ ಮಂಗಳೇಶನಿಗೆ ವರದಿಮಾಡುತ್ತಿದ್ದನು. ಈ ಬಗ್ಗೆ ಮಹಾರಾಣಿಯವರಾಗಲೀ, ಪುಲಿಕೇಶಿಯಾಗಲೀ ಮಾತು ತೆಗೆದರೆ, "ನನ್ನ ಹಿತೈಷಿಗಳಾರು, ಹಿತಶತ್ರುಗಳಾರು ಎಂದು ನನಗೆ ತಿಳಿದಿದೆ" ಎಂದು ಉದ್ಧಟತನದ ಉತ್ತರಕೊಡುತ್ತಿದ್ದನು. ಅವನನ್ನು ಒಳ್ಳೆಯ ಮಾತಿನಿಂದ ದಾರಿಗೆ ಹಚ್ಚಲು ಪ್ರಯತ್ನಿಸಿ ಬೇಸತ್ತು, ಅವನನ್ನು

ಉಪಾಯವಾಗಿ ಗುರುಕುಲಕ್ಕೆ ಸಾಗಿಸಲು ಪ್ರಯತ್ನಿಸಿದರು. ಈ ಮಾತು ತೆಗೆದಾಗ ವಿಷ್ಣುವರ್ಧನನು ಖಡಾಖಂಡಿತವಾಗಿ ಹೇಳಿಬಿಟ್ಟನು :

"ಯಾರೆಷ್ಟು ಹೇಳಿದರೂ, ಆರ್ಯಪುರ ಹಾಗಿರಲಿ ಅರಮನೆ ಬಿಟ್ಟು ಎಲ್ಲಿಗೂ ಕದಲುವುದಿಲ್ಲ."

ಈಗ ಸಮಂತಭದ್ರ ಮುಂತಾದವರಿಗೆ ತಮ್ಮ ಗುಟ್ಟನ್ನು ಮಂಗಳೇಶನಿಂದ ಕಾಯ್ದುಕೊಳ್ಳುವುದು ಹೇಗೆಂದು ತಿಳಿಯದಾಯಿತು. ತಮ್ಮ ಮಧ್ಯದಲ್ಲೇ ಮಂಗಳೇಶನ ಗೂಢಚಾರನನ್ನು ಇಟ್ಟುಕೊಂಡಂತೆ ಆಗಿತ್ತು. ಅವನಾಗಲೀ, ಪುಲಿಕೇಶಿಯಾಗಲೀ, ಯಾವ ಮಾತನ್ನೂ ಮೊದಲಿನಂತೆ ಧೈರ್ಯವಾಗಿ ಆಡಲು ಹಿಂದುಮುಂದು ನೋಡುವಂತೆ ಆಯಿತು. ಅವರಿಗೆ ವಿಷ್ಣುವರ್ಧನನನ್ನು ಏನು ಮಾಡುವುದೆಂದು ತಿಳಿಯದಾಯಿತು. ತಮ್ಮ ಮಾತನ್ನೂ, ಚಲನವಲನಗಳನ್ನೂ ಹೊಂಚಿ ಕೇಳಿ ಮಂಗಳೇಶನಿಗೆ ವರದಿಮಾಡುತ್ತಿದ್ದ ಅವನನ್ನು ಅರಮನೆಯಲ್ಲಿ ನಿರ್ಬಂಧದಲ್ಲಿ ಇರಿಸುವುದೊಂದೇ ಅವರಿಗೆ ಉಳಿದಿದ್ದ ದಾರಿ. ಮೊದಲು ಇದಕ್ಕೆ ಒಪ್ಪದಿದ್ದ ದುರ್ಲಭದೇವಿ ಮಂಗಳೇಶನ ಸಂಪರ್ಕ ತಪ್ಪಿಸಲು ಬೇರೆ ಮಾರ್ಗ ಕಾಣದಮೇಲೆ ವಿಷ್ಣುವನ್ನು ನಿರ್ವಾಹವಿಲ್ಲದೆ ನಿರ್ಬಂಧದಲ್ಲಿರಿಸಲು ಒಪ್ಪಿದರು.

ಅದರಂತೆ ವಿಷ್ಣುವರ್ಧನನನ್ನು ಅಂತಃಪುರದಲ್ಲಿ ಶಿಕ್ಷಣದ ನೆಪದಲ್ಲಿನಿರ್ಬಂಧದಲ್ಲಿ ಇರಿಸಲಾಯಿತು. ಮಹಾರಾಣಿಯವರ ಅಪ್ಪಣೆಯಿಲ್ಲದೆ ವಿಷ್ಣುವರ್ಧನನು ಎಲ್ಲಿಗೂ ಹೋಗದಂತೆ ತಡೆಹಾಕಲ್ಪಟ್ಟಿತು. ಸದಾ ಅವನ ಬೆಂಗಾವಲಿಗೆ ಶಸ್ತ್ರ ಸಜ್ಜಿತ ಸೈನಿಕರು ನಿಂತಿರುತ್ತಿದ್ದರು. ಮಹಾರಾಣಿಯವರ ಅಪ್ಪಣೆಯಿಲ್ಲದೆ ವಿಷ್ಣು ವರ್ಧನನು ಯಾರನ್ನೂ ನೋಡುವಂತೆ ಇರಲಿಲ್ಲ. ಊಟ; ತಿಂಡಿ; ನಿದ್ರೆ; ಪಾಠ ಪ್ರವಚನಗಳಿಗೆ ಮಾತ್ರಅವನಿಗೆಸ್ವಾತಂತ್ರ್ಯಕೊಡಲಾಯಿತು. ಒಂದುಮಾತನ್ನು ಹೇಳುವುದಾದರೆ, ವಿಷ್ಣುವರ್ಧನನು ಅರಮನೆಯಲ್ಲೇ ಸ್ಥಾನಬದ್ಧತೆಯಲ್ಲಿದ್ದನು.

ನಾಲ್ಕಾರು ದಿನಗಳಾದರೂ ವಿಷ್ಣುವರ್ಧನನು ತನ್ನ ಭೆಟ್ಟಿಗೆ ಬರದೆ ಇರುವುದನ್ನು ಕಂಡು ಮಂಗಳೇಶನಿಗೆ ಆಶ್ಚರ್ಯವಾಯಿತು. ತನ್ನ ಭೆಟ್ಟಿಯನ್ನು ಮಹಾರಾಣಿ ದುರ್ಲಭದೇವಿಯು ಬಹಿಷ್ಕರಿಸಿರಬೇಕು ಎಂದು ಯೋಚಿಸಿದನು. ವಿಷ್ಣು ಅವಳ ಮಾತಿಗೆ ಸೊಪ್ಪುಹಾಕುವ ಹುಡುಗನಲ್ಲ, ಯಾರೆಷ್ಟು ತಡೆದರೂ ತನ್ನ ಸ್ನೇಹವನ್ನು ತೊರೆಯುವವನಲ್ಲ ಎಂದು ಇನ್ನೊಮ್ಮೆ ಯೋಚಿಸಿದನು. ವಿಷ್ಣು ತನ್ನನ್ನು ಬಂದು ಕಾಣದಿರಲು, ಅವನಿಗೆ ಅಸಾರೋಗ್ಯವಾಗಿರಬೇಕು.

ಇಲ್ಲವೇ ಅರಮನೆ ಬಿಟ್ಟು ಹೋಗದಂತೆ ಮಹಾರಾಣಿಯವರು ನಿರ್ಬಂಧದಲ್ಲಿ ಇರಿಸಿರಬೇಕು ಎಂದು ಭಾವಿಸಿ, ವಿಷ್ಣುವಿನ ಇತಿಗತಿ ತಿಳಿದು ಬರಲು ಚಾರರನ್ನು ಕಳುಹಿಸಿದನು. ಅವರಿಂದ ಸತ್ಯಸಂಗತಿ ತಿಳಿದು ವಿಷ್ಣುವರ್ಧನನನ್ನು ಬಿಡುಗಡೆ ಮಾಡಿ, ಸಾಧ್ಯವಾದರೆ ಅವನನ್ನು ತನ್ನ ಆಶ್ರಯಕ್ಕೆ ತೆಗೆದುಕೊಳ್ಳಲು ತಾನೇ ದುರ್ಲಭದೇವಿಯ ಅಂತಃಪುರಕ್ಕೆ ಬಂದನು.

ಅಪರೂಪಕ್ಕೆ ಬಂದ ಮಂಗಳೇಶನನ್ನು ಮಹಾರಾಣಿ ದುರ್ಲಭದೇವಿಯವರು ವಿಶ್ವಾಸದಿಂದಲೇ ಸ್ವಾಗತಿಸಿ, ಕುಶಲ ಪ್ರಶ್ನೆಮಾಡಿ ಸತ್ಕರಿಸಿದರು. ಆ ಸಮಯದಲ್ಲಿ ಪುಲಿಕೇಶಿಯೂ ಅಲ್ಲಿ ಇದ್ದು, ಮಹಾರಾಣಿಯವರಿಗೆ ಏನನ್ನೋ ಓದಿಹೇಳುತ್ತಿದ್ದನು. ಅವನು ಓದುತ್ತಿದ್ದ ಓಲೆಯ ಗರಿ ಪುಸ್ತಕವನ್ನು ಮುಚ್ಚಿಟ್ಟು,

"ಅಪ್ಪಾಜಿಯವರು, ಅಪರೂಪಕ್ಕೆ ಇತ್ತ ದಯಮಾಡಿಸಿದ್ದೀರಿ" ಎಂದು ಕೃತಕ ವಿಶ್ವಾಸ ನಟಿಸುತ್ತಾ ಹೇಳಿದ.

"ನೀನು ಏನೋ ಓದಿಕೊಳ್ಳುತ್ತಿದ್ದೆ. ನಾನು ಬಂದುದರಿಂದ ತೊಂದರೆಯಾಯಿತೋ ಏನೋ ?" ಮಂಗಳೇಶನೂ ಕೃತಕ ನಗೆ ನಗುತ್ತಾ ಹೇಳಿದ.

"ನೀವು ಬಂದುದರಿಂದ ಯಾವ ತೊಂದರೆಯೂ ಆಗಲಿಲ್ಲ. ಅಬ್ಬೆಯವರಿಗೆ ಬೇಸರ ಕಳೆಯಲು ಭಾಗವತ ಪುರಾಣವನ್ನು ಓದುತ್ತಿದ್ದೆ. ಹೊತ್ತು ಹೋಗಲು ಏನಾದರೂ ಮಾಡಬೇಕಲ್ಲ!" ಎಂದು ಹೇಳಿ ಪುಲಿಕೇಶಿ ನಕ್ಕ.

"ಎಲ್ಲಿ ವಿಷ್ಣುವರ್ಧನ ಕಾಣಿಸುತ್ತಿಲ್ಲ ! ಅವನು ಆರೋಗ್ಯವಾಗಿದ್ದಾನೆ ತಾನೆ ?"

"ನಿಮ್ಮ ಆಶೀರ್ವಾದದಿಂದ ಆರೋಗ್ಯವಾಗಿದ್ದಾನೆ ?" ಎಂದು ಹೇಳಿ ವಿಷ್ಣುವನ್ನು ಕರೆತರಲು ಮಹಾರಾಣಿಯವರು ದಾಸಿಯನ್ನು ಕಳುಹಿಸಿಕೊಟ್ಟರು.

"ಈ ಕೆಲವು ದಿನಗಳಿಂದ ವಿಷ್ಣು ಮನೆಯ ಕಡೆ ಸುಳಿಯಲೇ ಇಲ್ಲ. ಅವನ ಚಿಕ್ಕಮ್ಮ ಅವನನ್ನು ತುಂಬಾ ಹಚ್ಚಿಕೊಂಡಿದ್ದಾಳೆ. ನಮ್ಮ ವಿನಯಾದಿತ್ಯನಂತೂ ದಿನಕ್ಕೆ ನೂರು ಬಾರಿ ವಿಷ್ಣುವನ್ನು ನೆನೆಯುತ್ತಿದ್ದಾನೆ. 'ಅವನಿಗೆ ಏನಾಗಿದೆಯೋ ಏನೋ ಹೋಗಿ ನೋಡಿ ಬನ್ನಿ' ಎಂದು ಅವನ ಚಿಕ್ಕಮ್ಮ ಒತ್ತಾಯಮಾಡಿದಳು. ಹಾಗೇ ನಿಮ್ಮನ್ನು ಮಾತನಾಡಿಸಿಕೊಂಡು ಹೋಗಲು ಬಂದೆ."

"ನಮ್ಮ ಮೇಲೆ ಅಷ್ಟಾದರೂ ವಿಶ್ವಾಸವಿದೆಯಲ್ಲ! ತುಂಬಾ ಸಂತೋಷ!

"ನಿಮ್ಮ ಕೆಲಸ ಕಾರ್ಯಗಳ ಗಡಿಬಿಡಿಯಲ್ಲಿ ನಮ್ಮ ನೆನಪು ಬಂದುದೇ ಹೆಚ್ಚು!" ಎಂದು ಹೇಳಿ ದುರ್ಲಭದೇವಿ ಮಂಗಳೇಶನನ್ನು ಅರ್ಥಗರ್ಭಿತವಾಗಿ ನೋಡಿದಳು.

"ಮಹಾರಾಣಿಯವರಿಗೆ ನಮ್ಮ ಮೇಲೆ ಏಕೋ ಅಸಮಾಧಾನವಿದ್ದಂತೆ ಇದೆ. ಬಹುಶಃ ವಿಷ್ಣುವರ್ಧನ ನಮ್ಮ ಮನೆಗೆ ಹೆಚ್ಚಾಗಿ ಬರುವುದರಿಂದ ಇರಬೇಕು. ಏನು ಮಾಡುವುದು ? 'ಅರಮನೆಗೆ ಪದೇ ಪದೇ ಬರುವುದು ಸರಿಯಲ್ಲ, ನೋಡಿದವರು ತಪ್ಪು ತಿಳಿಯುತ್ತಾರೆ' ಎಂದು ಎಷ್ಟೋ ಬಾರಿ ಅವನಿಗೆ ಹೇಳಿದ್ದೇನೆ, ಕೇಳುವುದಿಲ್ಲ. ವಿನಯಾದಿತ್ಯನೂ ವಿಷ್ಣುವರ್ಧನನೂ ತುಂಬಾ ಅಚ್ಚುಮೆಚ್ಚಿನ ಸ್ನೇಹಿತರು. ಒಬ್ಬರನ್ನು ಒಬ್ಬರು ಒಂದು ಅರಗಳಿಗೆ ಬಿಟ್ಟಿರ ಲಾರರು. ಅವನ ಸಲುವಾಗಿ ವಿಷ್ಣು ಮೇಲಿಂದ ಮೇಲೆ ಬರುತ್ತಾನೆ, ಅಷ್ಟೇ. ಮಕ್ಕಳೇ ಹೀಗೆ ! ದೊಡ್ಡವರ ಬಿಗುಮಾನ ಅವರಿಗೆ ಇಲ್ಲ. ಅವರಿಗೆ ಎಲ್ಲರೂ ಒಂದೇ"

ಎಂದು ಹೇಳಿ ಮಂಗಳೇಶನು ನಕ್ಕನು.

"ವಿಷ್ಣುವರ್ಧನ ಇತ್ತ ಮಗುವೂ ಅಲ್ಲ; ಅತ್ತ ಬೆಳೆದವನೂ ಅಲ್ಲ. ಅವನು ಒಂದು ವಯಸ್ಸಾದ ಮಗು ! ಎರಡರ ಇಬ್ಬಂದಿ. ಇತ್ತ ದೊಡ್ಡವರ ವಿವೇಕವೂ ಇಲ್ಲ, ಅತ್ತ ಮಕ್ಕಳ ಮುಗ್ಧತನವೂ ಇಲ್ಲ. ದೇವರು ಅವನ ದೇಹವನ್ನು ವಕ್ರವಾಗಿ ಮಾಡಿರುವುದರ ಜತೆಗೆ, ಬುದ್ಧಿಯನ್ನೂ ವಕ್ರವಾಗಿ ಮಾಡಿದ್ದಾನೆ. ನನಗೆ ಅವನದೇ ಚಿಂತೆಯಾಗಿದೆ !" ಎಂದು ಹೇಳಿ ಮಹಾರಾಣಿಯವರು ನಿಟ್ಟುಸಿರು ಬಿಟ್ಟರು.

"ಈಗ ವಿಷ್ಣುವರ್ಧನನ ಬಗ್ಗೆ ಇಷ್ಟು ಯೋಚಿಸಲು ಅಂತಹದೇನು ನಡೆಯಿತು ? ವೃಥಾ ಅವನನ್ನೇಕೆ ದೂರುತ್ತೀರಿ ?"

"ಇನ್ನೇನು ಆಗಬೇಕು ಮಂಗಳೇಶರೇ; ಈ ವಯಸ್ಸಿಗಾಗಲೇ ಇಷ್ಟು ಅನರ್ಥ ಮಾಡಿದ್ದಾನೆ. ಇನ್ನು ಬೆಳೆದ ಮೇಲೆ ದೇವರೇ ಗತಿ."

"ಈಗೇನಾಯಿತು ಅಂತಹ ಅನಾಹುತ ? ಏನು ವಿಷಯ ಸ್ಪಷ್ಟವಾಗಿ ಹೇಳಬಾರದೆ ?"

"ಅದೇನೆಂದು ನಿಮಗೂ ತಿಳಿದಿದೆ, ಆದರೂ ನನ್ನ ಬಾಯಲ್ಲಿ ಹೊರಡಿಸಲು ಹಾಗೆ ಕೇಳುತ್ತಿದ್ದೀರಿ, ಒಳ್ಳೆಯದು. ಆ ವಿಷ್ಣುವಿನ ಮನಸ್ಸಿನಲ್ಲಿ 'ನೀನೂ ಅರ್ಧ ಸಿಂಹಾಸನಕ್ಕೆ, ಅರ್ಧರಾಜ್ಯಕ್ಕೆ ಹಕ್ಕುದಾರ'ನೆಂಬ ವಿಷಬೀಜವನ್ನು ಯಾರು

ಬಿತ್ತಿದರೋ ಕಾಣೆ. ಅದರ ಬೇಗೆಯಲ್ಲಿ ನಮ್ಮ ಮನಶ್ಶಾಂತಿಯೆಲ್ಲ ಸುಟ್ಟುಭಸ್ಮ ವಾಗಿದೆ. ಅವನನ್ನೇನು ಮಾಡಬೇಕು ತಿಳಿಯದಾಗಿದೆ. ಯಾರೆಷ್ಟು ಹೇಳಿದರೂ ಬಿಡದೆ ತನ್ನ ಹಠ ಸಾಧಿಸುತ್ತಿದ್ದಾನೆ. ನೀವಾದರೂ ಅವನಿಗೆ ಬುದ್ಧಿ ಹೇಳಬಾರದೆ? ನಿಮ್ಮ ಮಾತಿಗೆ ಅವನು ಗೌರವಕೊಡುತ್ತಾನೆ !"

"ಮಹಾರಾಣಿಯವರೇ, ನಿಮಗೆ ಹೇಳುವುದೇನು ! ಇಂತಹ ಹಠಮಾಡ ಬಾರದೆಂದು ನಾನು ಅವನಿಗೆ ಅನೇಕ ಬಾರಿ ಹೇಳಿ, ಬೇಸತ್ತಿದ್ದೇನೆ. ವಿಷ್ಣು ತಾನು ಸಾಮ್ರಾಟನಾಗುವ ಹಠವನ್ನು ಬಿಟ್ಟುಕೊಟ್ಟಿಲ್ಲ. ನಾನೂ ಕಳೆದ ಒಂದು ವರ್ಷದಿಂದಲೂ ಸಹೋದರರ ನಡುವೆ ವೈಮನಸ್ಸನ್ನು ಬಗೆಹರಿಸಲು ಸಾಧ್ಯ ವಾದಷ್ಟು ಪ್ರಯತ್ನಿಸಿ ವಿಫಲನಾಗಿದ್ದೇನೆ. ಬಹುಶಃ ನನ್ನನ್ನು ಕೇಳುವುದಾದರೆ ವಿಷ್ಣುವಿನ ಹಠ ಈಡೇರಿಸಿಕೊಡುವುದೇ ಮೇಲೆಂದು ತೋರುತ್ತದೆ. ಇಲ್ಲದಿದ್ದರೆ ಮುಂದೆ ಸಹೋದರರಲ್ಲಿ ಸಿಂಹಾಸನಕ್ಕಾಗಿ ಅನ್ಯಾಯವಾಗಿ ನಿರಪರಾಧಿಗಳ ರಕ್ತ ಹರಿಸಬಹುದು; ನೀವು ಮನಸ್ಸು ಮಾಡಿದರೆ ಅದನ್ನು ತಪ್ಪಿಸಬಹುದು !"

"ವಿಷ್ಣುವರ್ಧನನೇಕೆ ಹೀಗೆ ಹಠಹಿಡಿಯುತ್ತಿದ್ದಾನೋ ನನಗೆ ತಿಳಿಯ ದಾಗಿದೆ. ಅವನ ನಿಜವಾದ ಅಂಜಿಕೆ ಏನು ? ನಿಮ್ಮೊಂದಿಗೆ ಏನಾದರೂ ಹೇಳಿದ್ದಾನೆಯೆ ?"

"ಅನೇಕ ಬಾರಿ ಹೇಳಿದ್ದಾನೆ ಮಹಾರಾಣಿಯವರೇ, ತನಗೂ ಪುಲಿಕೇ ಶಿಗೂ ಹೊಂದಿಬರುವುದಿಲ್ಲ. ಪುಲಿಕೇಶಿ ಸಾಮ್ರಾಟನಾದರೆ ತಾನು ಅವನು ಹೇಳಿ ದಂತೆ ಕೇಳಿಕೊಂಡು, ಘನತೆ ಗೌರವಗಳಿಲ್ಲದ ಹೇಡಿಯಂತೆ ಬಿದ್ದಿರಬೇಕು. ಇಲ್ಲವೇ ರಾಜ್ಯಕೋಶಗಳಿಲ್ಲದ ಭಿಕಾರಿಯಾಗಿ ಸೆರೆಮನೆಯಲ್ಲಿ ಕೊಳೆಯಬೇಕು. ಈ ಹೆದರಿಕೆ ಹೇಗೋ ಅವನ ತಲೆಯ ತುಂಬಾ ತುಂಬಿದೆ. ಯಾರೆಷ್ಟು ಹೇಳಿ ದರೂ ತನ್ನ ಹೆದರಿಕೆ ಬಿಟ್ಟುಕೊಡುವುದಿಲ್ಲ, ತನ್ನ ಹಠವನ್ನೂ ಬಿಟ್ಟುಕೊಡುವು ದಿಲ್ಲ. ನನಗೂ ಅವನು ಕಡೆತನಕ ಹೀಗೆ ಹಠಮಾಡುತ್ತಾ ಕುಳಿತರೆ ಏನು ಗತಿ ಎಂದು ಗಾಬರಿಯಾಗುತ್ತದೆ !"

"ಪುಲಿಕೇಶಿಯಿಂದ ತನ್ನ ಘನತೆ ಗೌರವಗಳಿಗೆ ಕುಂದುಬರುವುದೆಂದು ತಿಳಿದಿದ್ದರೆ ಇದೊಂದು ಹುಚ್ಚುಕಲ್ಪನೆ. ಪುಲಿಕೇಶಿ ಸಾಮ್ರಾಟನಾದರೆ, ವಿಷ್ಣು ವರ್ಧನನು ಯುವರಾಜ ಕುಮಾರನಾಗಿ ಮೆರೆಯಲಿ ! ಯಾರು ಬೇಡವೆನ್ನು ತ್ತಾರೆ ? ಅವನು ಇದಕ್ಕೆ ಏಕೆ ಒಪ್ಪಬಾರದು ? ಆಗ ಸಾಮ್ರಾಟರಿಗೆ ಸಲ್ಲುವ

ಗೌರವ ಅವನಿಗೂ ಸಲ್ಲುತ್ತದೆ."

"ಇದಕ್ಕೆ ವಿಷ್ಣು ಒಪ್ಪುವುದಿಲ್ಲ ಮಹಾರಾಣಿಯವರೇ, ನಾನು ಈ ಬಗ್ಗೆ ಹೇಳಿನೋಡಿದ್ದೇನೆ. ವ್ಯಕ್ತಿ ಸ್ವಾತಂತ್ರ್ಯವಿಲ್ಲದ ಯುವರಾಜ ಪದವಿಗಿಂತಲೂ, ಭಿಕಾರಿಯಾಗಿರುವುದು ಲೇಸೆಂದು ಹೇಳುತ್ತಿದ್ದಾನೆ. ಆದರೆ ತಾನು ಸ್ವತಂತ್ರ ಸಾಮ್ರಾಟನಾಗಬೇಕು, ಇಲ್ಲದಿದ್ದರೆ ತನಗೆ ರಾಜ್ಯಕೋಶಗಳೊಂದೂ ಬೇಡ ವೆನ್ನುತ್ತಿದ್ದಾನೆ."

"ಇದೇ ಅವನ ಮೊಂಡುತನ. ನಾನು ಕೇಳಿ ಕೇಳಿ ಬೇಸತ್ತಿದ್ದೇನೆ. ಅವನು ಒಳ್ಳೆಯ ಮಾತಿನಲ್ಲಿ ದಾರಿಗೆ ಬರದೆ ಇದ್ದರೆ, ಅವನನ್ನು ನಿರ್ಲಕ್ಷಿಸಿ ಪುಲಿಕೇಶಿಯ ಪಟ್ಟಾಭಿಷೇಕ ನಡೆಸಬೇಕೆಂದಿದ್ದೇನೆ. ನೀವು ನಮಗೆ ಬೆಂಬಲವಾಗಿ ನಿಂತುಕೊಳ್ಳಬೇಕು, ಅಷ್ಟೆ !"

"ಪುಲಿಕೇಶಿಗೆ ಸಿಂಹಾಸನವನ್ನು ಬಿಟ್ಟುಕೊಡುವುದಕ್ಕೆ ನಾನು ಹಿಂದೆಗೆ ಯುವುದಿಲ್ಲ ಮಹಾರಾಣಿಯವರೇ, ಆದರೆ ಸಹೋದರರ ನಡುವೆ ಇಷ್ಟು ತಿಕ್ಕಾಟ ಇರುವಾಗ, ಯಾರೊಬ್ಬರಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟರೂ ವೃಥಾ ಯಾದವೀ ಕಲಹಕ್ಕೆ ಕಾರಣವಾಗುವುದಲ್ಲಾ ಎಂದು ನಾನು ಯಾವ ನಿರ್ಧಾರ ವನ್ನೂ ಕೈಗೊಂಡಿಲ್ಲ. ನನ್ನ ಸ್ಪಷ್ಟ ಅಭಿಪ್ರಾಯ ಹೇಳುವುದಾದರೆ, ಸಿಂಹಾಸ ನದ ಪ್ರಶ್ನೆ ಇತ್ಯರ್ಥವಾಗದೆ, ಯಾರೊಬ್ಬರನ್ನು ಸಾಮ್ರಾಟರಾಗಿ ಮಾಡಿದರೂ, ಸಾಮ್ರಾಜ್ಯಕ್ಕೆ ಅಪಾಯವಿದೆ ತಾಯಿ !"

"ಸಿಂಹಾಸನದ ವಿಷಯದಲ್ಲಿ ಇತ್ಯರ್ಥವಾಗಬೇಕಾದ ಪ್ರಶ್ನೆ ಯಾವುದು ಉಳಿದಿದೆ? ಸಿಂಹಾಸನ ಯಾವಾಗಲೂ ಜ್ಯೇಷ್ಠ ಸಂತತಿಗೆ ಸಲ್ಲುತ್ತದೆ. ಪುಲಿಕೇಶಿ ಕೀರ್ತಿಶೇಷನಾದ ಕೀರ್ತಿವರ್ಮನ ಜ್ಯೇಷ್ಠಪುತ್ರನಾಗುವುದರಿಂದ ಅವನಿಗೆ ಸಲ್ಲ ಬೇಕು. ಇದರಲ್ಲಿ ಇತ್ಯರ್ಥವಾಗಬೇಕಾದ ಪ್ರಶ್ನೆ ಏನಿದೆ ?"

"ನಿಮ್ಮ ಅಭಿಪ್ರಾಯದಲ್ಲಿ ಸಿಂಹಾಸನದ ಪ್ರಶ್ನೆ ಇತ್ಯರ್ಥವಾಗಿದ್ದರೂ, ವಿಷ್ಣುವರ್ಧನನ ಅಭಿಪ್ರಾಯದಲ್ಲಿ,ಸಿಂಹಾಸನ ತನಗೂ ಸೇರಬೇಕೆಂದಿರುವುದರಿಂದ ಇಷ್ಟೆಲ್ಲ ಕ್ಲಿಷ್ಟತೆ ತಲೆದೋರಿದೆ ತಾಯಿ ! ಈ ವೈಮನಸ್ಸು ಬಗೆಹರಿದರೆ ಸಿಂಹಾ ಸನವನ್ನು ನೀವು ಹೇಳಿದ ವ್ಯಕ್ತಿಗೆ ಬಿಟ್ಟುಕೊಡಲು ನನ್ನ ಯಾವ ಅಭ್ಯಂತರವೂ ಇಲ್ಲ !"

"ಸಿಂಹಾಸನ ಕೇಳಿದವರಿಗೆಲ್ಲ ದೊರೆಯುವ ವಸ್ತುವೇ? ಅರ್ಹರಾದವರಿಗೆ

ಮಾತ್ರ ಅದು ಲಭ್ಯವಾಗುತ್ತದೆ. ವಿಷ್ಣು ಹಠಮಾಡಿದ ಮಾತ್ರಕ್ಕೆ ಅವನಿಗೆ ದೊರಕುವುದೆ ?"

"ಈ ಮಾತು ವಿಷ್ಣು ತಿಳಿದುಕೊಳ್ಳಬೇಕಲ್ಲ ತಾಯಿ."

"ಅವನೊಬ್ಬ ಹುಚ್ಚು ಹುಡುಗ ! ಅವನಿಗೇನು ತಿಳಿಯುತ್ತದೆ ? ಸಿಂಹಾಸನವೆಂದರೆ ಅವನು ಆಟದ ವಸ್ತುವೆಂದು ತಿಳಿದಂತೆ ಇದೆ. ಸಿಂಹಾಸನವೇರಲು ಅರ್ಹತೆ ಬೇಕು. ಮೇಲಾಗಿ ಹಿಂದಣ ಜನ್ಮದ ಪುಣ್ಯಬೇಕು. ಬಯಸಿದವರಿಗೆಲ್ಲಾ ಅದು ದೊರೆಯುವಂತಿದ್ದರೆ ಇದುವರೆಗೆ ಎಲ್ಲರೂ ಸಾಮ್ರಾಟರೇ ಆಗುತ್ತಿದ್ದರು?" ಎಂದು ಪರಿಹಾಸ್ಯಮಾಡಿ ನಕ್ಕರು.

"ನಮಗೆ ನಿಮಗೆ ಈ ವಿಷಯ ತಿಳಿಯುತ್ತದೆ ತಾಯಿ, ಆದರೆ ವಿಷ್ಣುವಿಗೆ ತಿಳಿಯಬೇಕಲ್ಲ ! ಅವನಂತೂ ಸಿಂಹಾಸನದಲ್ಲೂ, ಸಾಮ್ರಾಜ್ಯದಲ್ಲೂ ತನಗೂ ಪಾಲು ಬೇಕೆಂದು ಹಠ ಹಿಡಿದಿದ್ದಾನೆ. ಅವನ ಹಠವನ್ನು ನಾವು ನಿರ್ಲಕ್ಷಿಸುವಂತೆಯೂ ಇಲ್ಲ. ಏಕೆಂದರೆ ಸಿಂಹಾಸನಕ್ಕಾಗಿ ಹೋರಾಡಿ ಮಡಿಯಲು ವಿಷ್ಣು ನಿರ್ಧರಿಸಿದ್ದಾನೆ. ಅವನಿಗೆ ವಿದ್ರೋಹಿಗಳ ಬೆಂಬಲವೂ ಇದೆ. ಇದರಿಂದ ವೃಥಾ ರಕ್ತಪಾತ. ಇದನ್ನು ತಪ್ಪಿಸಬೇಕಾದರೆ ಸಹೋದರರಲ್ಲಿ ರಾಜ್ಯವನ್ನು ಸಮನಾಗಿ ಹಂಚಿಕೊಡುವುದೊಂದೇ ನಮಗೆ ಇರುವ ದಾರಿ."

"ಮಂಗಳೇಶರೇ, ನೀವೂ ಈ ನಿರ್ಧಾರಕ್ಕೆ ಬಂದಿದ್ದೀರಾ ?"

"ಏಕೆ ತಾಯಿ ?"

"ಸಿಂಹಾಸನ ಸಾರ್ವಭೌಮ ಪದವಿಗಳು ಅವಿಭಾಜ್ಯವೆಂದು ತಿಳಿದಿದ್ದೂ ನೀವು ಈ ಮಾತು ಹೇಳುತ್ತಿದ್ದೀರಾ ?"

"ಸದ್ಯದ ಪರಿಸ್ಥಿತಿಯಲ್ಲಿ ನಿರ್ವಾಹವಿಲ್ಲದೆ ಈ ಮಾತು ಹೇಳಬೇಕಾಗಿದೆ ತಾಯಿ. ಸಹೋದರರ ವೈಮನಸ್ಸು ಬಗೆಹರಿಯಬೇಕಾದರೆ ನಮಗೆ ಉಳಿದಿರುವುದು ಇದೊಂದೇ ಮಾರ್ಗ."

"ಅಖಂಡವಾದ ಸಾಮ್ರಾಜ್ಯವನ್ನು ತುಂಡರಿಸಲು ಸಾಧ್ಯವೇ ಇಲ್ಲ. ಬೇಕಿದ್ದರೆ ವಿಷ್ಣು ಯುವರಾಜನಾಗಿರಬಹುದು. ಆದರೆ ಸ್ವತಂತ್ರ ಸಾಮ್ರಾಟನಾಗಿ ಮೆರೆಯಲು ಸಾಧ್ಯವೇ ಇಲ್ಲ."

"ವಿಷ್ಣು ಯುವರಾಜನಾಗಿರಬೇಕೆಂದು ನೀವೇಕೆ ಒತ್ತಾಯ ಮಾಡುತ್ತೀರಿ ? ಪುಲಿಕೇಶಿಯೇಕೆ ಯುವರಾಜನಾಗಬಾರದು ?"

"ಎಲ್ಲಾದರೂ ಜ್ಯೇಷ್ಠೋಲ್ಲಂಘನ ಉಂಟೆ ?"

"ಇದಕ್ಕೆ ಶಾಸ್ತ್ರಗಳಲ್ಲಿ ಆಧಾರವಿದೆ ತಾಯಿ ! ಹಿರಿಯ ಮಗನು ರೋಗಿಷ್ಠನಾಗಿದ್ದರೆ, ದುರ್ಬಲನಾಗಿದ್ದರೆ, ಹುಚ್ಚನಾಗಿದ್ದರೆ, ಜಾತಿಭ್ರಷ್ಟನಾಗಿದ್ದರೆ, ಆಗ ಕಿರಿಯವನು ಸಾಮ್ರಾಟನಾಗಬಹುದು."

"ಸದ್ಯದ ಪರಿಸ್ಥಿತಿಯಲ್ಲಿ ನೀವು ಹೇಳಿದ ಯಾವ ಅನರ್ಹತೆಯೂ ಪುಲಿಕೇಶಿಗೆ ಇಲ್ಲ. ಅವನು ಪವಿತ್ರವಾದ ಚಾಲುಕ್ಯ ಸಿಂಹಾಸನವನ್ನೇರಲು ಎಲ್ಲ ರೀತಿಯಲ್ಲೂ ಅರ್ಹನಾಗಿದ್ದಾನೆ. ಅವನು ವೈಯಕ್ತಿಕ ಅರ್ಹತೆ ಪಡೆದಿರುವುದಲ್ಲದೆ ಜನತೆಯ ಅಭಿಮಾನಕ್ಕೂ, ಪ್ರೀತಿ ಗೌರವಗಳಿಗೂ ಪಾತ್ರನಾಗಿದ್ದಾನೆ. ಸಿಂಹಾಸನವೇನಿದ್ದರೂ ಪುಲಿಕೇಶಿಗೇ ಹೊರತು ವಿಷ್ಣುವರ್ಧನನಿಗೆ ದಕ್ಕುವುದಿಲ್ಲ."

"ಹಾಗಾದರೆ ಸಿಂಹಾಸನಕ್ಕಾಗಿ ಸಹೋದರರ ನಡುವೆ ಹೋರಾಟವೂ ತಪ್ಪುವುದಿಲ್ಲ ತಾಯಿ !"

"ಸಾಮ್ರಾಜ್ಯವನ್ನು ಭಗ್ನಗೊಳಿಸದೆ, ಸಹೋದರರ ನಡುವೆ ಯಾದವೀ ಕಲಹ ತಪ್ಪಿಸಲು ಬೇರೆ ಮಾರ್ಗವಿಲ್ಲವೆ ?"

"ಇದೆ ತಾಯಿ, ಸಹೋದರರಲ್ಲಿ ಯಾರೊಬ್ಬರೂ ಇನ್ನೊಬ್ಬರ ಸಲುವಾಗಿ ಆತ್ಮತ್ಯಾಗಕ್ಕೆ ಸಿದ್ಧರಾಗಬೇಕು. ಅಂದರೆ ತಮ್ಮ ಸ್ವಾರ್ಥವನ್ನು ಮತ್ತೊಬ್ಬರ ಹಿತಕ್ಕಾಗಿ ಬಿಟ್ಟುಕೊಡಬೇಕು."

"ವಿಷ್ಣುವರ್ಧನನು ತನ್ನ ಅಣ್ಣನಿಗಾಗಿ ಈ ಬಗೆಯ ತ್ಯಾಗ ಮಾಡಲಾರನೇ ?"

"ಮಾಡುವಂತೆ ಇದ್ದರೆ, ಅವನೇಕೆ ಇಷ್ಟು ಮೊಂಡುಹಠ ಹಿಡಿಯುತ್ತಿದ್ದ! ಸದ್ಯದ ಪರಿಸ್ಥಿತಿಯಲ್ಲಿ ತ್ಯಾಗವೇನಿದ್ದರೂ ಪುಲಿಕೇಶಿಯ ಕಡೆಯಿಂದ ಬರಬೇಕಾಗಿದೆ."

"ಯಾರ ಸಲುವಾಗಿ ಯಾರ ತ್ಯಾಗ ? ಬುದ್ಧಿಗೇಡಿಯಾದ ಆ ವಿಷ್ಣುವಿನ ಪಕ್ಷ ನೀವು ಕಟ್ಟುವಿರೆಂದು ನಾನು ತಿಳಿದಿರಲಿಲ್ಲ. ನಾನು ಬದುಕಿರುವವರೆಗೆ ಈ ಸಾಮ್ರಾಜ್ಯ ಪುಲಿಕೇಶಿಗಲ್ಲದೆ ಅನ್ಯರಿಗೆ ದಕ್ಕಲಾರದು ! ಈ ಮಾತನ್ನು ಚೆನ್ನಾಗಿ ನೆನಪಿನಲ್ಲಿಡಲು ವಿಷ್ಣುವಿಗೆ ಹೇಳಿ."

"ಹಾಗಾದರೆ, ಯಾದವೀಕಲಹಕ್ಕೆ ನೀವೇ ನಾಂದಿ ಹಾಕಿಕೊಟ್ಟಂತೆ ಆಗುತ್ತದೆ ! ನೀವು ಅಖಂಡ ಚಾಲುಕ್ಯ ಸಾಮ್ರಾಜ್ಯದ ಕನಸು ಮರೆಯದಿದ್ದರೆ, ಖಂಡಿತ ರಕ್ತಪಾತ ಹರಿಯುತ್ತದೆ ! ಸಿಂಹಾಸನವನ್ನು ನಿರಪರಾಧಿಗಳ ರಕ್ತದಿಂದ ಮಲಿನಗೊಳಿಸುವುದಕ್ಕಿಂತಲೂ, ಸ್ವತಂತ್ರವಾದ ಎರಡು ರಾಜ್ಯಗಳಾಗಿ ಚಾಲುಕ್ಯ ಸಾಮ್ರಾಜ್ಯ ಒಡೆಯುವುದೇ ಲೇಸು."

"ಪರಮಪೂಜ್ಯರಾದ ಪುಲಿಕೇಶಿ ಸಾರ್ವಭೌಮರು ರಕ್ತ ಹರಿಸಿ ಕಟ್ಟಿ ವಿಸ್ತರಿಸಿದ ಚಾಲುಕ್ಯ ಸಾಮ್ರಾಜ್ಯವು ನನ್ನ ಕಣ್ಣೆದುರಿನಲ್ಲಿ ಹರಿದು ಹಂಚಿ ಹೋಗುವುದನ್ನು ನೋಡುವುದಕ್ಕಿಂತ ಸಾಯುವುದೇ ಮೇಲು ! ನನ್ನ ಪ್ರಾಣವನ್ನಾದರೂ ಬಲಿಕೊಟ್ಟು ಈ ಸಾಮ್ರಾಜ್ಯವನ್ನು ಅಖಂಡವಾಗಿ ಉಳಿಸುವೆನೇ ಹೊರತು, ಗೃಹಚ್ಛಿದ್ರಕ್ಕೆ ಅವಕಾಶ ಕೊಡಲಾರೆ. ಬೇಕಿದ್ದರೆ ವಿಷ್ಣುವರ್ಧನನು ನನ್ನ ಗೋರಿಯ ಮೇಲೆ ತನ್ನ ಸಾಮ್ರಾಜ್ಯವನ್ನು ನಿರ್ಮಿಸಿಕೊಳ್ಳಲಿ. ನಾನು ಬದುಕಿರುವತನಕ ಇದಕ್ಕೆ ಅವಕಾಶ ಕೊಡಲಾರೆ ! ಈ ಮಾತು ಖಂಡಿತ !" ನಿಷ್ಠುರದ ಧ್ವನಿಯಲ್ಲಿ ಮಹಾರಾಣಿಯವರು ಹೇಳಿದರು.

"ಹಾಗಾದರೆ, ಸಹೋದರರ ನಡುವೆ ವಿರಸ ಬಗೆಹರಿಯುವವರೆಗೂ ರಾಜ್ಯಾಡಳಿತದಲ್ಲಿ ಯಾವ ಬದಲಾವಣೆಯೂ ಆಗದೆ ಈಗಿರುವಂತೆಯೇ ಮುಂದುವರೆಯುವುದೇ ಕ್ಷೇಮವೆಂದು ತೋರುತ್ತದೆ ತಾಯಿ. ಸಹೋದರರು ತಮ್ಮ ವೈಮನಸ್ಸನ್ನು ಬಗೆಹರಿಸಿಕೊಂಡು, ಒಮ್ಮತಕ್ಕೆ ಬಂದ ಕೂಡಲೇ ನೀವು ಇಚ್ಛಿಸುವ ವ್ಯಕ್ತಿಗೆ ಸಿಂಹಾಸನವನ್ನು ಬಿಟ್ಟುಕೊಡುತ್ತೇನೆ. ಅಲ್ಲಿಯವರೆಗೆ ಸಾಮ್ರಾಜ್ಯದ ಹಿತದೃಷ್ಟಿಯಿಂದ ನಾನೇ ರಾಜಪ್ರತಿನಿಧಿಯಾಗಿ ಮುಂದುವರಿಯಬೇಕಾಗಿದೆ" ಎಂದು ವಿಷಾದದಿಂದ ಮಂಗಳೇಶನು ಹೇಳಿದ.

ಅಷ್ಟರಲ್ಲಿ ದಾಸಿಯು ವಿಷ್ಣುವರ್ಧನನನ್ನು ಅಲ್ಲಿಗೆ ಕರೆತಂದಳು. ಅವನು ಮಂಗಳೇಶನನ್ನು ನೋಡುತ್ತಲೇ ಓಡಿ ಬಂದು ಅವರನ್ನು ಬಾಚಿತಬ್ಬಿಕೊಂಡು ಗದ್ಗದ ಕಂಠದಲ್ಲಿ,

"ಅಪ್ಪಾಜಿ, ನೀವು ನನ್ನನ್ನು ಬಿಟ್ಟು ಎಲ್ಲಿಗೂ ಹೋಗಬೇಡಿ ! ನಾನು ನಿಮ್ಮ ಜೊತೆಯಲ್ಲಿಯೇ ಬರುತ್ತೇನೆ. ನನ್ನನ್ನು ಕಂಡರೆ ಇವರು ಯಾರಿಗೂ ಆಗುವುದಿಲ್ಲ. ನನ್ನನ್ನು ಅಂತ್ಯಜನಂತೆ ನಿಕೃಷ್ಟವಾಗಿ ಕಾಣುತ್ತಿದ್ದಾರೆ. ಮೂರು ದಿನಗಳಿಂದಲೂ ನನ್ನನ್ನು ಆಟಪಾಠಗಳಿಗೂ ಬಿಡದೆ ನಿರ್ಬಂಧದಲ್ಲಿ ಇರಿಸಿದ್ದಾರೆ.

ನಾನು ಇಲ್ಲೇ ಇದ್ದರೆ ನನ್ನ ಜೀವಕ್ಕೂ ಖಂಡಿತ ಅಪಾಯವಿದೆ! ಮೊದಲು ನನ್ನನ್ನು ಬಿಡುಗಡೆ ಮಾಡಿಸಿ, ನಿಮ್ಮೊಡನೆ ಕರೆದೊಯ್ಯಿರಿ. ನಿಮ್ಮ ವಿಷ್ಣು ಬದುಕಿರುವುದು ನಿಮಗೆ ಬೇಕಾಗಿದ್ದರೆ, ಮೊದಲು ಈ ಕೆಲಸ ಮಾಡಿರಿ" ಎಂದು ಹೇಳಿಕೊಂಡು ಅವನು ಗಳಗಳನೆ ಅತ್ತನು.

ವಿಷ್ಣುವರ್ಧನನ ಮಾತುಕೇಳಿ ಮಹಾರಾಣಿ ದುರ್ಲಭದೇವಿ, ಪುಲಿಕೇಶಿಯರು ದಂಗುಬಡಿದು ಕುಳಿತರು.

"ಯಾಕೆ ಮಗು ? ಅಂತಹುದು ಏನಾಯಿತೀಗ ? ಕೊಂಚ ಸಮಾಧಾನ ತಾಳು !" ಎಂದು ಮಂಗಳೇಶನು ಸಮಾಧಾನ ಪಡಿಸಿದನು.

"ಇನ್ನೇನಾಗಬೇಕು ಅಪ್ಪಾಜಿ! ಕೇಶಣ್ಣನು ಸಾಮ್ರಾಟನಾಗಲು ವಿರೋಧಿಸಿದೆನೆಂದು ನನ್ನನ್ನು ಅವರು ಸೆರೆಮನೆಯಲ್ಲಿ ಇಟ್ಟರು. ನಾಳೆ ನನ್ನಿಂದ ತಮ್ಮ ಪಿತೂರಿ ಈಡೇರುವುದಿಲ್ಲವೆಂದು ತಿಳಿದಮೇಲೆ ನನ್ನನ್ನು ಕೊಲ್ಲಲೂ ಅವರು ಹೇಸುವುದಿಲ್ಲ! ಮೊದಲು ನನ್ನನ್ನು ಇಲ್ಲಿಂದ ಬಿಡುಗಡೆ ಮಾಡಿ, ನಿಮ್ಮ ದಮ್ಮಯ್ಯ"—ಎಂದು ಅಂಗಲಾಚಿ ಬೇಡಿಕೊಂಡನು. ಈ ಮಾತನ್ನು ಕೇಳಿ ಮಹಾರಾಣಿಯವರಿಗೆ ಸಿಡಿಲು ಬಡಿದಂತೆ ಆಯಿತು. ಅವರು ಸ್ತಬ್ಧರಾಗಿ ಕುಳಿತರು. ಆದರೆ ಪುಲಿಕೇಶಿಗೆ ವಿಷ್ಣುವರ್ಧನನ ಆರೋಪ ಕೇಳಿ ರಕ್ತ ಕುದಿಯಿತು. ಅವನು ಸಿಟ್ಟಿನಿಂದ ಮುಷ್ಟಿಯನ್ನು ಬಿಗಿದು,

"ಎಲಾ ದ್ರೋಹಿ ! ನಿನ್ನನ್ನು ಸಹೋದರನೆಂದು ನಾವು ಪ್ರೀತಿವಿಶ್ವಾಸಗಳಿಂದ ನೋಡಿಕೊಂಡುದಕ್ಕೆ ಪಿತೂರಿಯ ಆರೋಪದ ಜೊತೆಗೆ, ಕೊಲೆಯ ಆರೋಪವನ್ನೂ ಹೊರಿಸುತ್ತಿದ್ದೀಯಾ ? ನಿನ್ನನ್ನು ಏನುಮಾಡಬೇಕು ಗೊತ್ತೇ ?" ಎಂದು ವಿಷ್ಣುವರ್ಧನನ ಮೇಲೆ ಕಾಲಯಮನಂತೆ ನುಗ್ಗಿದ.

"ಸಮಾಧಾನ ತಂದುಕೋ ಕೇಶಣ್ಣ ! ಅವನಂತೂ ಬುದ್ಧಿಗೇಡಿಯಾಗಿ ನಮ್ಮ ಮೇಲೆ ಮಿಥ್ಯಾಪವಾದ ಹೊರಿಸಿದ. ಅಂದ ಮಾತ್ರಕ್ಕೆ ನಾವು ಅಪರಾಧಿಗಳಾಗಿ ಬಿಟ್ಟೇವೆ ? ನಾವು ವಿಷ್ಣುವಿಗೆ ದ್ರೋಹ ಬಗೆಯುತ್ತಿರುವುದೂ ಇಲ್ಲದಿರುವುದೂ ನಾವು ನಿರ್ಣಯಿಸಬೇಕಾಗಿಲ್ಲ. ದೇವರು ನಿರ್ಣಯಿಸುತ್ತಾನೆ! ಅವನ ಮೂರ್ಖತನದ ಮಾತಿಗೆ ನೀನೇಕೆ ಸಿಟ್ಟಿಗೇಳುವೆ ?" ಎಂದು ಮಹಾರಾಣಿ ದುರ್ಲಭದೇವಿ ಪುಲಿಕೇಶಿಯನ್ನು ಕೈಹಿಡಿದು ಹಿಂದಕ್ಕೆ ಕರೆತಂದು ತಮ್ಮ ಬಳಿ ಕೂಡಿಸಿಕೊಂಡರು. ಪುಲಿಕೇಶಿಯು ಪೆಟ್ಟುತಿಂದ ಸರ್ಪದಂತೆ ಬುಸುಗುಟ್ಟುತ್ತಾ,

ವಿಷ್ಣುವರ್ಧನನನ್ನು ತಿರಸ್ಕಾರದಿಂದ ನೋಡುತ್ತಾ ಕುಳಿತುಕೊಂಡ.

"ಮಹಾರಾಣಿಯವರೇ, ಇದೆಲ್ಲಾ ಏನು ಸಂಗತಿ ? ವಿಷ್ಣು ಯಾಕೆ ಇಷ್ಟು ಹೆದರಿದ್ದಾನೆ ?" ಎಂದು ಮಂಗಳೇಶನು ಶಾಂತನಾಗಿಯೇ ಹೇಳಿದ. ಮಹಾರಾಣಿ ದುರ್ಲಭದೇವಿಯು ನಡೆದ ಸಂಗತಿಯನ್ನು ಸಂದೇಹಕ್ಕೆಡೆಗೊಡದಂತೆ ಹೇಳಿದರು:

"ಮಂಗಳೇಶರೇ, ವಿಷ್ಣುವರ್ಧನನ ಗುರುಕುಲದ ಶಿಕ್ಷಣ ಇನ್ನೂ ಮುಗಿದಿಲ್ಲವೆಂಬುದು ನಿಮಗೂ ತಿಳಿದಿದೆ. ಮೊನ್ನೆಯ ದಿನ ಕುಲಪತಿಗಳಾದ ಬೆಣ್ಣಮ ಸೋಮಯಾಜಿಗಳು ವಿಷ್ಣುವು ಗುರುಕುಲಕ್ಕೆ ವರ್ಷವಾದರೂ ಇನ್ನೂ ಬಾರದಿರುವುದನ್ನು ಕಂಡು ವಿಚಾರಿಸಿಕೊಂಡು ಬರಲು ತಮ್ಮ ಒಬ್ಬ ಶಿಷ್ಯರನ್ನು ಕಳುಹಿಸಿಕೊಟ್ಟಿದ್ದರು. ನಾವು ವಿಷ್ಣುವನ್ನು ಗುರುಕುಲಕ್ಕೆ ಕಳುಹಿಸಿ ಕೊಡಲು ಎಷ್ಟೋ ಪ್ರಯತ್ನಿಸಿದೆವು. ಆದರೆ ವಿಷ್ಣುವು ಗುರುಕುಲಕ್ಕೆ ಹೋಗುವುದಿಲ್ಲವೆಂದು ಹಠ ಹಿಡಿದಿದ್ದಾನೆ. ಹೋಗಲಿ, ಗುರುಕುಲಕ್ಕೆ ಹೋಗದಿದ್ದರೂ, ಮನೆಯಲ್ಲೇ ಕುಳಿತು, ಪಾಠ ಪ್ರವಚನಗಳನ್ನು ಮುಂದುವರಿಸಲೆಂದು ಯೋಗ್ಯ ಗುರುಗಳನ್ನು ನೇಮಿಸಿದೆವು. ಆದರೆ ವಿಷ್ಣುವಿಗೆ ಕಲಿಯುವುದು ಬೇಕಿಲ್ಲ! ಅವನನ್ನು ಬಲವಂತವಾಗಿ ಪಾಠ ಪ್ರವಚನಗಳಿಗೆ ಹಾಕಿರುವುದು ನಾವು ಸೆರೆಮನೆಯಲ್ಲಿ ಹಾಕಿದಂತೆ ಆಗಿದೆ. ತನ್ನ ಹುಚ್ಚು ಅಲೆದಾಟಕ್ಕೆ ನಾವು ಧಕ್ಕೆ ತಂದೆವೆಂದು ನಮ್ಮ ಮೇಲೆ ಇಲ್ಲ ಸಲ್ಲದ ಆರೋಪ ಹೊರಿಸುತ್ತಿದ್ದಾನೆ, ಅಷ್ಟೇ...."

"ಮಹಾರಾಣಿಯವರೇ, ನೀವು ತಪ್ಪು ತಿಳಿಯದಿದ್ದರೆ ನನ್ನದೊಂದು ಮಾತಿದೆ. ವಿಷ್ಣುವಿನದು ಒಂದು ಕಡೆ ನಿಲ್ಲದ ಹಕ್ಕಿಯಂತೆ ಹಾರುತ್ತಿರುವ ಸ್ವಭಾವ. ಇಂತಹವನನ್ನು ಅವನ ಇಷ್ಟದ ವಿರುದ್ಧ ನೀವು ಪಾಠ ಪ್ರವಚನಗಳಿಗೆ ಹಾಕಿದರೆ ಅವನಿಗೆ ಸಂತೋಷವಾಗುವುದೆ ? ಅವನು ಗುರುಕುಲದಲ್ಲಿ ಹತ್ತು ವರ್ಷಗಳ ಕಾಲ ವ್ಯಾಸಂಗ ಮಾಡಿದ್ದಾನೆ. ಅವನಿಗೆ ಪಾಠಪ್ರವಚನಗಳಲ್ಲಿ ಆಸಕ್ತಿ ಇಲ್ಲ. ಅವನನ್ನು ಇಚ್ಛೆ ಬಂದಂತೆ ಇರಲು ಬಿಡುವುದೇ ಒಳ್ಳೆಯದು. ಅವನೇನು ಎಳೆಮಗುವಲ್ಲ. ತನ್ನ ಜವಾಬ್ದಾರಿಯನ್ನು ಅರಿತಿದ್ದಾನೆ. ಅವನೂ ಪುಲಿಕೇಶಿಯಂತೆ ರಾಜ್ಯಾಡಳಿತದಲ್ಲಿ ಶಿಕ್ಷಣ ಪಡೆಯಲಿ! ಇದು ನಿನಗೆ ಸಮ್ಮತವೇ ವಿಷ್ಣು ?"

"ಅಪ್ಪಾಜಿ! ನೀವು ನನ್ನನ್ನು ಅರಿತಂತೆ ಇವರು ಯಾರೂ ನನ್ನನ್ನು ಅರಿತುಕೊಂಡಿಲ್ಲ. ನಾನು ರಾಜಪುತ್ರನಾಗಿ ಹುಟ್ಟಿ ವೇದ ಶಾಸ್ತ್ರ ಪುರಾಣಗಳನ್ನು

ಕಲಿತು ಮಾಡಬೇಕಾದದ್ದೇನು ? ಅವುಗಳಿಂದ ಜೀವನ ಮಾಡಲು: ನಾನು ಬ್ರಾಹ್ಮಣನಲ್ಲ. ನನಗೆ ಕ್ಷತ್ರಿಯೋಚಿತವಾದ ವಿದ್ಯೆ ಕಲಿಯುವುದರಲ್ಲಿ ಹೆಚ್ಚು ಆಸಕ್ತಿ ಇದೆ. ಆದರೆ ಅವಕ್ಕೆ ಅಬ್ಬೆ ಅವಕಾಶ ಕೊಡುತ್ತಿಲ್ಲ. ನನ್ನನ್ನು ಬಲ ವಂತವಾಗಿ ಅರಮನೆಯಲ್ಲಿ ಕೊಳೆಸುತ್ತಿದ್ದಾರೆ. ಹೀಗೆ ಮಾಡಿದರೆ ನನಗೆ ಹುಚ್ಚು ಹಿಡಿಯುವುದು ಖಂಡಿತ. ನಾನು ಒಂದು ಗಳಿಗೆ ಇಲ್ಲಿ ಇರಲಾರೆ ! ಮೊದಲು ನನ್ನನ್ನು ನಿಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿ" ಎಂದು ವಿಷ್ಣು ಹೇಳಿದನು.

ಈ ಮಾತು ಕೇಳಿ ಮಹಾರಾಣಿ ದುರ್ಲಭದೇವಿಯವರು ಪೆಚ್ಚಾಗಿ ಕುಳಿತರು. ಅವರಿಗೆ ತಮ್ಮ ಎಪ್ಪತ್ತು ವರ್ಷಗಳ ಜೀವನದಲ್ಲಿ ಇಂತಹ ಪೆಟ್ಟು ಬಿದ್ದಿರಲಿಲ್ಲ. ಅವರ ದೀರ್ಘ ಆಯುಷ್ಯದಲ್ಲಿ ಇಂತಹ ಸೋಲು ಉಂಟಾಗಿರಲಿಲ್ಲ. ಅವರು ಒಂದು ಸಾಮ್ರಾಜ್ಯವನ್ನು ಯಶಸ್ವಿಯಾಗಿ ಆಳಿದ್ದರು. ರಾಜ್ಯದ ನೂರು ಸಮಸ್ಯೆಗಳನ್ನು ಸುಲಭವಾಗಿ ಬಗೆಹರಿಸಿದ್ದರು. ಅನೇಕ ಸಂಧಿವಿಗ್ರಹಗಳನ್ನು ತೀರ್ಮಾನಿಸಿದ್ದರು. ತುಂಬಿದ ಯೌವನದಲ್ಲಿ ಪತಿ, ವೃದ್ಧಾಪ್ಯದಲ್ಲಿ ಪುತ್ರನನ್ನು ಕಳೆದುಕೊಂಡು ತಬ್ಬಲಿ ಮಕ್ಕಳ ಯೋಗಕ್ಷೇಮಕ್ಕೆ ಹೆಗಲು ಕೊಟ್ಟದ್ದರೂ, ಅವರಿಗೆಂದಿಗೂ ಇಂತಹ ಪೆಟ್ಟು ಬಿದ್ದಿರಲಿಲ್ಲ; ಇಂತಹ ಸೋಲು ದೊರಕಿರಲಿಲ್ಲ. ತಾವು ಸಾಕಿ ಸಲುಹಿ ದೊಡ್ಡವನನ್ನಾಗಿ ಮಾಡಿದ ಮೊಮ್ಮಗ ಇಂದು ತಮ್ಮ ಕರುಳು ಬಳ್ಳಿಯನ್ನು ಕತ್ತರಿಸಿಕೊಂಡು ಹೋಗಿದ್ದನು. ತಾನು ಯಾರ ಸಹ ವಾಸವನ್ನು ದುಷ್ಟಜಂತುವಿನ ಸಹವಾಸವೆಂದು ವರ್ಜಿಸಿದ್ದಳೋ, ಅವನ ಆಶ್ರಯಕ್ಕೆ ತಾನಾಗಿ ಹೋಗಲು ಇಚ್ಛಿಸಿದ್ದನು. ಇದುವರೆಗೆ ಅವನನ್ನು ತಡೆ ದಂತೆ ಈಗ ತಡೆಯಲು ಅವರಿಗೆ ಸಾಧ್ಯವಿರಲಿಲ್ಲ. ತಡೆದರೂ ತಮ್ಮ ಮಾತನ್ನು ಧಿಕ್ಕರಿಸುವನೆಂಬುದು ತಿಳಿದಿತ್ತು. ಎಂತಹ ಸೋಲು ? ಆದರೂ ಎದೆಯನ್ನು ವಜ್ರಕಠೋರವಾಗಿ ಮಾಡಿಕೊಂಡು ಕರ್ಕಶಧ್ವನಿಯಲ್ಲಿ ಹೇಳಿದರು :

"ಮಗು ವಿಷ್ಣು ! ಇಲ್ಲಿದ್ದರೆ ನಿನ್ನ ಪ್ರಾಣಕ್ಕೆ ಗಂಡಾಂತರವೆಂದು ತಿಳಿ ದಿದ್ದರೆ, ನಿನ್ನ ಇಷ್ಟಬಂದ ಕಡೆಗೆ ಹೋಗು ? ನಾನು ಬೇಡವೆನ್ನುವುದಿಲ್ಲ. ಆದರೆ ಜಗತ್ತಿನಲ್ಲಿ ಎಲ್ಲಿ ಹೋದರೂ, ಇಂತಹ ಸುರಕ್ಷಿತವಾದ ಸ್ಥಳ ಬೇರೆ ದೊರೆಯಲಾರದೆಂಬುದನ್ನು ಚೆನ್ನಾಗಿ ನೆನಪಿನಲ್ಲಿಡು ! ನೀನು ಎಲ್ಲೇ ಇರು, ನೆಮ್ಮದಿಯಾಗಿದ್ದರೆ ಸಾಕು. ನಾವು ನಿನ್ನ ಶ್ರೇಯಸ್ಸನ್ನು ಹಾರೈಸುತ್ತೇವೆಯೇ

ಹೊರತು ಕೇಡು ಬಗೆಯುವುದಿಲ್ಲ. ಒಂದು ವೇಳೆ ನಿನಗೆ ಮತ್ತೆ ಇಲ್ಲಿಗೆ ಹಿಂದಿರುಗ ಬೇಕೆನಿಸಿದರೆ, ನಿನ್ನ ಮನೆಯಲ್ಲಿ ನಿನಗೆ ಸದಾ ಸ್ವಾಗತವಿದೆ" ಎಂದು ಹೇಳಿ, ಅಲ್ಲಿ ಕುಳಿತಿರಲಾರದೆ ಅಪಮಾನಿತರಾದವರಂತೆ ಮುಖವನ್ನು ಸೆರಗಿನಲ್ಲಿ ಮುಚ್ಚಿ ಕೊಂಡು ದುಃಖದಿಂದಾ ಕುಸಿಯುತ್ತಾ ಹೊರಟು ಹೋದರು. ವಿಷ್ಣುವರ್ಧನನು ಮಾತ್ರ ಇವುಗಳಿಂದ ವಿಚಲಿತನಾಗದೆ, ಮಂಗಳೇಶನ ಹಿಂದೆ ಹೊರಟನು. ಅವನು ಕಣ್ಮರೆಯಾಗುವವರೆಗೆ ಪುಲಿಕೇಶಿ ಅವನನ್ನೇ ದಿಟ್ಟಿಸಿ ನೋಡುತ್ತಿದ್ದು ಅವನು ಹೊರಟು ಹೋದ ಮೇಲೆ,

"ಅಯ್ಯೋ ವಿಷ್ಣು ! ನಿನಗೆ ಎಂತಹ ದುರ್ಬುದ್ಧಿ ಬಂತು ?" ಎಂದು ಉದ್ಗಾರ ತೆಗೆದನು.

## ೮

ಮಹಾರಾಣಿ ದುರ್ಲಭದೇವಿ ತಮ್ಮ ಅಂತಃಪುರದ ಒಳಕೋಣೆಯಲ್ಲಿ ಶೋಕವೇ ಮೂರ್ತಿವೆತ್ತಂತೆ ಕುಳಿತಿದ್ದರು. ವಿಷ್ಣುವರ್ಧನನು ಮಂಗಳೇಶನ ಹಿಂದೆ ಹೊರಟು ಹೋದಲಾಗಾಯಿತು ಅವರಿಗೆ ಅನ್ನನಿದ್ರೆಗಳು ಸೇರದಾಗಿ ದ್ದವು. ಅವನನ್ನು ತಮ್ಮ ಇನ್ನೊಂದು ಜೀವವಾಗಿ ಸಾಕಿದ್ದರು. ಬಾಲ್ಯದಲ್ಲೇ ತಾಯಿಯನ್ನೇ ಕಳೆದುಕೊಂಡ ತಬ್ಬಲಿ ಎಂದು ಅವನನ್ನು ಅತಿಶಯವಾದ ಪ್ರೀತಿ ಯಿಂದ ನೋಡಿಕೊಂಡಿದ್ದರು. ಎಲ್ಲರೂ ಹುಟ್ಟುತ್ತಲೇ ತಾಯಿಯನ್ನು ನುಂಗಿದ ಮಗುವೆಂದು ಅವನನ್ನು ಹೀಯಾಳಿಸಿದರೂ ಒಂದು ದಿನವಾದರೂ ದುರ್ಲಭ ದೇವಿಯ ಬಾಯಲ್ಲಿ ಕೆಟ್ಟಶಬ್ದ ಬಂದಿರಲಿಲ್ಲ. ಅವನು ವಿರೂಪಗೊಂಡ ಮಗು ವೆಂದು ಅವನ ವಿಷಯದಲ್ಲಿ ಇನ್ನೂ ಹೆಚ್ಚಿನ ಸಹಾನುಭೂತಿ ಇತ್ತು. ಪ್ರಸೂತಿ ಕಾಗೃಹದಲ್ಲೇ ತಾಯಿಯನ್ನು ಕಳೆದುಕೊಂಡ ಅವನು ಉಳಿಯುವುದಿಲ್ಲವೆಂದು ವೈದ್ಯರೂ ಕೈಬಿಟ್ಟಿದ್ದರೂ ದುರ್ಲಭದೇವಿ ಮಾಡಿದ ಆರೈಕೆ, ಸಂತತವಾದ ಪೋಷಣೆಗಳಿಂದ ಅವನು ಎಲ್ಲರಂತೆ ಬೆಳೆದು ದೊಡ್ಡವನಾಗಿದ್ದ. ಇಂದು ಅವನು ಅವರಿಂದ ದೂರ ಸಿಡಿದುಬಿದ್ದಿದ್ದ. ಮಂಗಳೇಶನ ದ್ರೋಹ ಕಡೆಗೂ ಫಲಿಸಿತ್ತು.

ಅವನು ಕಡೆಗೂ ಸಹೋದರರ ನಡುವೆ ಭೇದ ಹುಟ್ಟಿಸಿ, ತನ್ನ ಅಧಿಕಾರವನ್ನು ಭದ್ರಪಡಿಸಿಕೊಂಡಿದ್ದನು. ಈಗ ಮುಂದೇನು ?

ಇದುವರೆಗೆ ವಿಷ್ಣು ತಮ್ಮ ಮಾತು ಕೇಳಿ ತನ್ನ ಒರಟು ಹಠ ಬಿಡಬಹುದೆಂಬ ದೂರದ ಆಸೆ ಇತ್ತು. ಒಂದು ವೇಳೆ ಅವನು ಹಠ ಮಾಡಿದರೂ ಅದನ್ನು ನಿರ್ಲಕ್ಷಿಸಿ, ತಮ್ಮ ಇಚ್ಛೆಯಂತೆ ಪುಲಿಕೇಶಿಗೆ ಪಟ್ಟಾಭಿಷೇಕ ಮಾಡಿ ಅನಂತರ ವಿಷ್ಣುವಿನ ಮನವೊಲಿಸಿಕೊಂಡು ಯುವರಾಜಪದವಿಯನ್ನಿತ್ತು ಸಮಾಧಾನಗೊಳಿಸಿಕೊಳ್ಳಬಹುದೆಂಬ ದೂರದ ಆಸೆ ಇತ್ತು. ಆದರೆ ಅದಕ್ಕೆ ತಿಲಾಂಜಲಿಯನ್ನು ಬಿಟ್ಟಂತೆ ಆಗಿತ್ತು. ತಾವು ವಿಷ್ಣುವಿಗೆ ಇಚ್ಛೆ ಬಂದೆಡೆಗೆ ಹೋಗಲು ಸ್ವಾತಂತ್ರ್ಯಕೊಟ್ಟರೂ, ಅವನು ತಾಯಿಯ ಸುತ್ತ ಸುತ್ತುವ ಕರುವಿನಂತೆ, ತಮ್ಮ ಬಳಿಯೇ ಉಳಿಯುವನೆಂದು ಅವರು ಭಾವಿಸಿದ್ದರು. ಅವರ ನಿರೀಕ್ಷೆ ವಿಫಲವಾಗಿತ್ತು ! ವಿಷ್ಣುವರ್ಧನನು ಹದಿನೇಳು ವರ್ಷಗಳು ತನ್ನನ್ನು ತಮ್ಮ ಪ್ರೀತಿಯ ರಕ್ಷಾಕವಚದಲ್ಲಿ ಕಾಪಾಡಿದ್ದ ಅಬ್ಬೆಯನ್ನು ತೊರೆದು, ಮಂಗಳೇಶನ ಆಶ್ರಯಕ್ಕೆ ಹೊರಟು ಹೋಗಿದ್ದ. ಅವನಿಗೆ ಪುಲಿಕೇಶಿಯ ಪಕ್ಷಕಟ್ಟಿದ ತನ್ನ ಅಬ್ಬೆಯಿಂದ ತನಗೆ ನ್ಯಾಯ ದೊರೆಯುವುದಿಲ್ಲವೆಂದು ತಿಳಿದಿತ್ತು. ಮೇಲಾಗಿ ಅಬ್ಬೆ ದುರ್ಲಭದೇವಿ, ಅಧಿಕಾರದ ಸಲುವಾಗಿ ಅವನಿಗೆ ದ್ರೋಹ ಬಗೆಯುತ್ತಿರುವಳೆಂದು ಮಂಗಳೇಶನು ಹೇಳಿದ್ದ ಮಾತು—ಬಿತ್ತಿದ್ದ ವಿಷಬೀಜ—ಮೊಳೆತು ಮರವಾಗಿತ್ತು. ಅದರ ಫಲ ತಾನೂ ಅನುಭವಿಸಬೇಕಾಗಿ ಬರುವುದೆಂದು ಮಂಗಳೇಶನು ತಿಳಿಯದೆ ಹೋದುದು ಅವನ ದುರ್ದೈವವೇ ಸರಿ !

ಮಹಾರಾಣಿ ದುರ್ಲಭದೇವಿ ಚಿಂತಾಕ್ರಾಂತಳಾಗಿ ಕುಳಿತುದನ್ನು ಕಂಡು ಪುಲಿಕೇಶಿಗೆ ವ್ಯಾಕುಲವಾಯಿತು. ತಮ್ಮ ಚಿಂತೆಯಿಂದ ಅಬ್ಬೆ ಕಂಗೆಡುವುದನ್ನು ನೋಡುವುದು ಅವನಿಂದ ಸಾಧ್ಯವಾಗಲಿಲ್ಲ. ಅವರು ಅಬ್ಬೆಯನ್ನು ಸಮಾಧಾನಪಡಿಸಲು ಬಂದನು.

"ಅಬ್ಬೆ, ಸಿಂಹಾಸನದ ಸಲುವಾಗಿ ನೀವು ಚಿಂತಿಸಬಾರದು; ನಾನು ಬದುಕಿರುವವರೆಗೆ, ಅದು ಛಿದ್ರವಾಗಲು ಅವಕಾಶ ಕೊಡುವುದಿಲ್ಲ, ಪೂಜ್ಯ ಪಿತಾಮಹಾರಾದ ಪುಲಿಕೇಶಿ ಸಾರ್ವಭೌಮರು ಅಧಿಕ ಬಲಿದಾನದಿಂದ ಕಟ್ಟಿದ ಸಾಮ್ರಾಜ್ಯ ಮರಳಿನ ಮನೆಯಂತೆ ಕುಸಿಯಲು ಅವಕಾಶ ಕೊಡುವುದಿಲ್ಲ. ಚಾಲುಕ್ಯ ಸಾಮ್ರಾಜ್ಯ ಅಖಂಡವಾಗಿ ಉಳಿಯಲು ನನ್ನ ದೇಹದಲ್ಲಿ ತೊಟ್ಟು

ರಕ್ತವಿರುವವರೆಗೂ ಹೋರಾಡುತ್ತೇನೆ. ನೀವು ಚಿಂತಿಸಬಾರದು. ನಿಮ್ಮ ಪುಲಿಕೇಶಿ ಬದುಕಿರುವವರೆಗೂ ಸಾಮ್ರಾಜ್ಯಕ್ಕೆ ಯಾವ ಗಂಡಾಂತರವೂ ಇಲ್ಲ" ಎಂದು ಹೇಳಿದನು.

"ಮಗು, ನನಗೆ ನಿನ್ನ ಬಗ್ಗೆ ಚಿಂತೆ ಇಲ್ಲ. ಆದರೆ ನನಗೆ ವಿಷ್ಣುವಿನದೇ ಚಿಂತೆಯಾಗಿದೆ! ಅವನಿಗೆ ನಿನ್ನಂತೆ ತನಗೆ ಶತ್ರುಗಳಾರು, ಮಿತ್ರರಾರು ಎಂಬ ವಿವೇಕವಿಲ್ಲ. ಇದ್ದಿದ್ದರೆ, ಅವನು ತಿಳಿದೂ ತಿಳಿದೂ, ದ್ರೋಹಿಯಾದ ಮಂಗಳೇಶನ ಆಶ್ರಯಕ್ಕೆ ಹೋಗಿ ಸರ್ವನಾಶಮಾಡಿಕೊಳ್ಳುತ್ತಿದ್ದನೆ? ಇನ್ನು ಆ ದ್ರೋಹಿಯ ಮಾತು ಕೇಳಿಕೊಂಡು ಅವನು ನಿನ್ನ ವಿರುದ್ಧ ಕತ್ತಿ ಕಟ್ಟದೆ ಇರುವನೆ? ಸಿಂಹಾಸನದ ಸಲುವಾಗಿ ರಕ್ತಪಾತ ಹರಿಯದೆ ಇರುವುದೆ?" ಗದ್ಗದ ಕಂಠದಲ್ಲಿ ಹೇಳಿದರು ದುರ್ಲಭದೇವಿ.

"ಅಬ್ಬೆ, ನಿಮ್ಮ ಪಾದಸಾಕ್ಷಿಯಾಗಿ ಸಿಂಹಾಸನಕ್ಕಾಗಿ ನಾನು ಹೋರಾಡುವುದಿಲ್ಲ. ತೊಟ್ಟು ರಕ್ತ ಹರಿಸುವುದಿಲ್ಲ. ಈ ಬಗ್ಗೆ ಅಭಯಕೊಡುತ್ತೇನೆ. ನೀವು ನಿಶ್ಚಿಂತರಾಗಿರಿ!"

"ಸಿಂಹಾಸನಕ್ಕೆ ನಡೆಯುವ ಹೋರಾಟವನ್ನು ನೀನು ಹೇಗೆ ತಪ್ಪಿಸಬಲ್ಲೆ. ಮಗು? ಆ ತಿಳಿಗೇಡಿ ವಿಷ್ಣುವರ್ಧನ ಇನ್ನು ನಿನ್ನ ಇಲ್ಲವೇ ನನ್ನ ಮಾತ, ಕೇಳುತ್ತಾನೆಯೇ? ಈ ಜನ್ಮದಲ್ಲಿ ಹೋರಾಟವಿಲ್ಲದೆ ಅಖಂಡ ಚಾಲುಕ್ಯ ಸಾಮ್ರಾಜ್ಯ ನಿನ್ನದಾಗುವುದನ್ನು ಕಾಣುವೆನೆ?" ನಿಟ್ಟುಸಿರುಬಿಟ್ಟರು.

"ಅಬ್ಬೆ, ನೀವಿಷ್ಟು ನಿರಾಶರಾಗುವ ಕಾರಣವಿಲ್ಲ. ಇಂದು ಚಾಲುಕ್ಯ ಸಿಂಹಾಸನ ಅಖಂಡವಾಗಿ ಉಳಿಸಲು ನಮಗೆ ಇನ್ನೂ ಒಂದು ದಾರಿ ಇದೆ. ಸಿಂಹಾಸನದ ಸಲುವಾಗಿ ನಡೆಯುವ ಹೋರಾಟವನ್ನು ತಪ್ಪಿಸಲು ನಮ್ಮಿಬ್ಬರಲ್ಲಿ ಒಬ್ಬರು ಸ್ವಾರ್ಥತ್ಯಾಗ ಮಾಡಬೇಕು."

"ಈ ಬಗೆಯ ತ್ಯಾಗಬುದ್ಧಿ ವಿಷ್ಣುವಿಗೆ ಇದ್ದಿದ್ದರೆ, ತನ್ನದಲ್ಲದ ಸಿಂಹಾಸನಕ್ಕಾಗಿ ಇಷ್ಟೇಕೆ ಹಠಹಿಡಿಯುತ್ತಿದ್ದ? ಅವನು ರಾಜ್ಯಲೋಭಿಯಾಗದೆ ಇದ್ದಿದ್ದರೆ ಸುಸೂತ್ರವಾಗಿ ನಡೆಯಬೇಕಾಗಿದ್ದ ಪಟ್ಟಾಭಿಷೇಕಕ್ಕೆ ಏಕಿಷ್ಟು ತೊಡಕಾಗುತ್ತಿತ್ತು? ಇಲ್ಲಿರುವಾಗಲೇ ದ್ರೋಹಿ ಮಂಗಳೇಶನ ಮಾತು ಕೇಳಿಕೊಂಡು ಹಠಮಾಡುತ್ತಿದ್ದ. ಇನ್ನು ಆ ಮಂಗಳೇಶನ ಆಶ್ರಯಕ್ಕೆ ಹೋದಮೇಲೆ ತ್ಯಾಗದ ಮನೋಭಾವ ಬೆಳೆಯುವುದೇ? ವಿಷ್ಣುವಿನಿಂದ ತ್ಯಾಗವನ್ನು ನಿರೀಕ್ಷಿ

ಸುವುದೂ ಬೇವಿನಮರ ಸಿಹಿಯಾಗುವುದೂ ಒಂದೇ. ನನಗೆ ಆ ಆಸೆ ಇಲ್ಲ ಮಗು."

"ಅಬ್ಬೆ, ನನ್ನದೊಂದು ಕೋರಿಕೆ ಇದೆ, ನಡಸಿಕೊಡುತ್ತೀರಾ ?"

"ಏನು ಮಗು ?"

"ನಮ್ಮ ದುರ್ದೈವದಿಂದ ನಿರಾತಂಕವಾಗಿ ದೊರೆಯಬೇಕಾಗಿದ್ದ ಸಿಂಹಾಸನಕ್ಕೆ ಇಲ್ಲದ ವಿಘ್ನಗಳು ಬಂದಿವೆ. ಈ ಸಿಂಹಾಸನದ ಸಲುವಾಗಿ ವಿಷ್ಣುವರ್ಧನ ನನ್ನನ್ನೂ ನಿಮ್ಮನ್ನೂ ತಪ್ಪು ತಿಳಿಯುವಂತೆ ಆಗಿದೆ. ನಮ್ಮಿಬ್ಬರ ಭಾತೃಪ್ರೇಮದ ನಡುವೆ ಈ ಸಿಂಹಾಸನದ ಪ್ರಶ್ನೆ ಅಡ್ಡ ಬಂದಿದೆ. ಅನ್ಯೋನ್ಯವಾಗಿದ್ದ ನಾವು ಇಂದು ಶತ್ರುಗಳಂತೆ ದೂರ ಸಿಡಿದಿದ್ದೇವೆ. ಈ ಅನಿಷ್ಟ ಸಿಂಹಾಸನದ ಸಲುವಾಗಿ ವಿಷ್ಣು ನಮ್ಮ ಮೇಲೆ ಕೊಲೆಯಂತಹ ಹೀನ ಅಪರಾಧವನ್ನು ಹೊರಿಸಲು ಹಿಂದೆ ಮುಂದೆ ನೋಡಲಿಲ್ಲ. ನಿಮ್ಮನ್ನು ಚಿಂತೆಗೀಡುಮಾಡಿ, ಸಹೋದರನೊಡನೆ ಕಾದಾಡಿ ಈ ಸಿಂಹಾಸನವನ್ನು ನನ್ನದುಮಾಡಿಕೊಳ್ಳುವುದಕ್ಕಿಂತಲೂ ಇಷ್ಟೆಲ್ಲ ವೈಮನಸ್ಸು–ದುಃಖಗಳಿಗೆ ಕಾರಣವಾದ ಈ ಸಿಂಹಾಸನವನ್ನು ನಾನು ತೊರೆಯಲು ನಿರ್ಧರಿಸಿದ್ದೇನೆ. ಇನ್ನಾದರೂ ವಿಷ್ಣು ನಮ್ಮವನಾಗಲಿ. ಮಂಗಳೇಶನ ವಿಷವರ್ತುಳದಿಂದ ಹೊರಬಂದು ನಿಮ್ಮ ಮಾತಿನಂತೆ ನಡೆದುಕೊಂಡು, ನಿಮ್ಮ ಅಭಿಮಾನದ ಮೊಮ್ಮಗನಾಗಲಿ."

"ಸಿಂಹಾಸನವನ್ನು ತಮ್ಮನಿಗೆ ವಹಿಸಿಕೊಟ್ಟು ನೀನು ಏನು ಮಾಡಬೇಕೆಂದಿರುವೆ ?"

"ಸರ್ವರ ಹಿತಕ್ಕಾಗಿ ಪರಿವ್ರಾಜಕ ಸಂನ್ಯಾಸಿಯಾಗುತ್ತೇನೆ." ಈ ಮಾತು ಕೇಳಿ ರಾಣಿ ದುರ್ಲಭದೇವಿಯು ಹೌಹಾರಿದರು.

"ಮಗು, ತಮಾಷೆಗೆ ಈ ಮಾತು ಹೇಳುತ್ತಿಲ್ಲವಷ್ಟೆ?"

"ಅಬ್ಬೆ, ನಿಮ್ಮಾಣೆಗೂ ಈ ಮಾತು ಸತ್ಯ! ಪುಲಿಕೇಶಿ ಎಂದಾದರೂ ವಿನೋದಕ್ಕಾದರೂ ಸುಳ್ಳು ಹೇಳಿರುವುದನ್ನು ನೋಡಿರುವಿರಾ ?"

"ಮಗು, ಏನು ನಿನ್ನ ಮಾತು ? ಇಂತಹ ಕೆಟ್ಟಮಾತನ್ನು ಆಡಿ, ನನ್ನ ಮನನೋಯಿಸಲು, ನಿನಗೆ ಹೇಗೆ ತಾನೆ ಮನಸ್ಸಾಗುತ್ತಿದೆ ?"

"ನನ್ನ ಮಾತಿನಿಂದ ನಿಮ್ಮ ಮನಸ್ಸಿಗೆ ನೋವಾಗುತ್ತಿದೆಯೇ ?"

"ನಿನ್ನ ಮಾತು ಕೇಳಿ ನನಗೆ ಸಂತೋಷವಾಗುವುದೆಂದು ಭಾವಿಸಿರು

ವೆಯಾ? ನಿನ್ನ ಬಾಯಲ್ಲಿ ಈ ಮಾತು ಕೇಳುವ ಸಲುವಾಗಿ ನಾನು ಹತ್ತು ವರ್ಷಗಳ ಕಾಲ ಸಿಂಹಾಸನ ಅನ್ಯರ ಪಾಲಾಗದಂತೆ, ಘಟಸರ್ಪದಂತೆ ಕಾಯ್ದೆನೇ? ಹತ್ತು ವರ್ಷಗಳ ಕಾಲ ಅನ್ನ ನೀರುಗಳನ್ನು ಬಿಟ್ಟು ಹಗಲಿರುಳೂ ನಿಮ್ಮದೇ ಚಿಂತೆಯಲ್ಲಿ ಕೊರಗಿ ಕಂಗೆಡುತ್ತಿದ್ದೇನೆ? ನಿಮ್ಮ ಭವಿಷ್ಯದ ಭದ್ರತೆಯ ಚಿಂತೆಯಲ್ಲಿ ನಾನು ಅಹೋರಾತ್ರಿ ನರಕಯಾತನೆಯನ್ನು ಅನುಭವಿಸಿದುದು ನಿನ್ನಿಂದ ಈ ಮಾತು ಕೇಳುವುದಕ್ಕಾಗಿಯೆ? ಅಯ್ಯೋ ಮಗು, ನೀನು ನನ್ನ ವಿಷಯದಲ್ಲಿ ಇಷ್ಟು ನಿರ್ದಯನಾದೆಯಾ? ನಿನ್ನಿಂದ ಈ ಮಾತು ಕೇಳಲು ಇಷ್ಟು ದಿನ ಕಾಯಬೇಕಾಯಿತೆ? ಈ ದುರ್ದಿನವನ್ನು ನೋಡಲು ಜೀರ್ಣವಾದ ಈ ದೇಹವನ್ನು ಹೊತ್ತುಕೊಂಡು ಬದುಕಿರಬೇಕಾಯಿತೇ? ಹಾಯ್!" ಎನ್ನುತಾ ಹಾಗೇ ನೆಲಕ್ಕೆ ಉರುಳಿದರು.

ಪುಲಿಕೇಶಿ ಸಿಂಹಾಸನದ ತ್ಯಾಗದ ಮಾತು ಕೇಳಿ, ಅವರ ಹೃದಯಕ್ಕೆ ಅಂತಹ ಪೆಟ್ಟು ಬಿದ್ದಿತ್ತು. ಕೂಡಲೇ ದಾಸಿಯರು ಬಂದು ಮಹಾರಾಣಿಯವರನ್ನು ಎತ್ತಿ ಹಾಸಿಗೆಯ ಮೇಲೆ ಮಲಗಿಸಿ, ಶೈತ್ಯೋಪಚಾರ ಮಾಡಿದರು. ಅವರು ಮೂರ್ಛೆ ತಿಳಿದು ಎದ್ದು ಕುಳಿತುಕೊಳ್ಳುವವರೆಗೆ ಪುಲಿಕೇಶಿಯ ಜೀವದಲ್ಲಿ ಜೀವವಿರಲಿಲ್ಲ. ತನ್ನ ಮಾತಿನಿಂದ ಅವರಿಗೆ ಇಂತಹ ಮರ್ಮಾಘಾತವಾದೀತೆಂದು ಅವನು ಕನಸುಮನಸಿನಲ್ಲಿ ಊಹಿಸಿರಲಿಲ್ಲ.

ಇಷ್ಟಾದರೂ ಪುಲಿಕೇಶಿಯು ವಿಚಲಿತನಾಗಲಿಲ್ಲ. ಸಿಂಹಾಸನಕ್ಕಾಗಿ ನಡೆಯುವ ಯಾದವೀಕಲಹವನ್ನು ತಪ್ಪಿಸಲು ಇದರ ಹೊರತು ಬೇರೆ ಮಾರ್ಗವಿರಲಿಲ್ಲ. ತನ್ನ ಪ್ರಾಣವನ್ನಾದರೂ ಬಲಿಕೊಟ್ಟು ಸಿಂಹಾಸನಕ್ಕಾಗಿ ನಡೆಯುವ ಹೋರಾಟವನ್ನು ತಪ್ಪಿಸುವುದಾಗಿ ವಚನ ಸ್ವೀಕರಿಸಿದ ಪುಲಿಕೇಶಿಗೆ ತನ್ನ ವಚನ ಪಾಲಿಸಲು ಆತ್ಮಾರ್ಪಣೆ ಹೊರತು ಬೇರೆ ದಾರಿಯೇ ಇರಲಿಲ್ಲ. ಈ ಬಗ್ಗೆ ಅವನು ದೀರ್ಘವಾಗಿ ಆಲೋಚಿಸಿ, ಆ ನಿರ್ಧಾರಕ್ಕೆ ಬಂದಿದ್ದ. ಯಾರೆಷ್ಟು ಹೇಳಿದರೂ, ಅವನು ತನ್ನ ನಿರ್ಧಾರವನ್ನು ಬಿಟ್ಟುಕೊಡುವ ಸ್ಥಿತಿಯಲ್ಲಿ ಇರಲಿಲ್ಲ.

ಸಮಂತಭದ್ರನು ಪುಲಿಕೇಶಿಯು ಸಿಂಹಾಸನ ತ್ಯಾಗಮಾಡುವ ಸುದ್ದಿ ಕೇಳಿ ಗಾಬರಿಗೊಂಡು ಒಂದೇ ಉಸಿರಿನಲ್ಲಿ ಅರಮನೆಗೆ ಓಡಿಬಂದನು. ದುರ್ಲಭದೇವಿಯವರನ್ನು ಕಂಡು.

"ಮಹಾರಾಣಿಯವರೇ, ಈ ವಾರ್ತೆ ನಿಜವೇ? ರಾಜಕುಮಾರ ಪುಲಿಕೇಶಿ

ಸಹೋದರರ ಸಲುವಾಗಿ ಸಿಂಹಾಸನತ್ಯಾಗ ಮಾಡುತ್ತಾರಂತೆ ಹೌದೆ ?" ಎಂದು ಬಡಬಡಿಸಿದನು.

"ನಿಮಗೆ ಈ ಸುದ್ದಿ ಯಾರು ಹೇಳಿದರು ಅಮಾತ್ಯರೆ ?"

"ಅರಮನೆ ಗುರುಮನೆಯಲ್ಲೆಲ್ಲಾ ಈ ಸುದ್ದಿ ಹರಡಿದೆ ! ಈ ಸುದ್ದಿ ಕೇಳಿ ರಾಜಧಾನಿಯ ಜನ ಕಂಗೆಟ್ಟಿದ್ದಾರೆ. ಈ ಸುದ್ದಿ ನಿಜವೇ ತಾಯಿ ?"

"ನಮ್ಮ ದುರ್ದೈವದಿಂದ ಈ ಸುದ್ದಿ ನಿಜ ಅಮಾತ್ಯರೇ !"

"ಏನು ? ಪುಲಿಕೇಶಿಯು ಈ ಕುಬ್ಜವಿಷ್ಣುವರ್ಧನನ ಸಲುವಾಗಿ ಸಿಂಹಾಸನ ಹಾಗೂ ರಾಜ್ಯತ್ಯಾಗ ಮಾಡುವರೆ ?"

"ಹೌದು ಪ್ರಧಾನರೇ ?"

"ಹಾಗಾದರೆ, ನಮಗಿಂತ ನಿರ್ಭಾಗ್ಯರು ಈ ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ."

"ಏಕೆ ಪ್ರಧಾನರೆ ?"

"ಇನ್ನೇನು ತಾಯಿ, ಕೈಗೆ ಬಂದ ತುತ್ತು ಬಾಯಿಗೆ ಇಲ್ಲದಂತಾಗಿದೆ ನಮಗೆ ! ಪುಲಿಕೇಶಿ ಸಾಮ್ರಾಟರಾಗುವ ಕನಸನ್ನು ಕಟ್ಟಿಕೊಂಡು, ಹಾಲು ಜೇನುಗಳ, ಸುಖಸಂಮೃದ್ಧಿಗಳ, ಜೀವನವನ್ನು ಅವರ ಆಳ್ವಿಕೆಯಲ್ಲಿ ಇದಿರು ನೋಡುತ್ತಿದ್ದ ನನಗೆ—ನನ್ನಂತಹ ಸಹಸ್ರಾರು ಜನರಿಗೆ—ಇದರಿಂದ ಎಷ್ಟು ನಿರಾಶೆಯಾಗಿದೆ ಎಂದು ನೀವು ಊಹಿಸಬಲ್ಲಿರಾ ? ನಾವು ಅಹೋರಾತ್ರಿ ಎಚ್ಚೆತ್ತು ಯಾವ ಸಿಂಹಾಸನ ಶತ್ರುಗಳ ಪಾಲಾಗದಂತೆ ರಕ್ಷಿಸಿದೆವೋ ಅದು ಅವರದಾಗುವ ಗಳಿಗೆಬಂದಾಗ ಅವರು ಅದನ್ನು ತಮ್ಮನ ಸಲುವಾಗಿ ಬಿಟ್ಟು ಕೊಡುವರೆಂದರೆ, ಇದಕ್ಕಿಂತ ಬೇರೆ ದೌರ್ಭಾಗ್ಯ ನಮಗೆ ಬೇಕೆ ?"

"ಹೌದು, ಅಮಾತ್ಯರೇ, ನಿಜಕ್ಕೂ ನಾವೆಲ್ಲರೂ ನಿರ್ಭಾಗ್ಯರು."

"ಈ ಬಗ್ಗೆ ನೀವು ಕೇಶಣ್ಣನಿಗೆ ಬುದ್ಧಿ ಹೇಳಲಿಲ್ಲವೇ ತಾಯಿ."

"ಹೇಳುವಷ್ಟು ಹೇಳಿ ಸೋತಿದ್ದೇನೆ ಅಮಾತ್ಯರೆ."

"ನಿಮ್ಮ ಮಾತೆಂದರೆ ಅವರಿಗೆ ವೇದವಾಕ್ಯ ಸಮಾನವಾಗಿತ್ತು! ಅವರು ನಿಮ್ಮ ಮಾತನ್ನು ತಿರಸ್ಕರಿಸಿದರೆ ? ಆಶ್ಚರ್ಯ !"

"ಈ ವಿಷಯದಲ್ಲಿ ಅವನು ಯಾರ ಮಾತನ್ನೂ ಕೇಳುವಂತೆ ಇಲ್ಲ, ಅಮಾತ್ಯರೆ."

"ಇಂತಹ ದುಡುಕು ನಿರ್ಧಾರವನ್ನು ಅವರು ಏಕೆ ಕೈಗೊಂಡರು ತಾಯಿ? ಯಾರನ್ನು ಕೇಳಿ ಕೈಗೊಂಡರು ?"

"ಈ ಬಗ್ಗೆ ಯಾರ ಮಾತನ್ನೂ ಕೇಳಲಿಲ್ಲ ಆ ತಿಳಿಗೇಡಿ. ವಿಷ್ಣುವರ್ಧನ ಆ ದ್ರೋಹಿ ಮಂಗಳೇಶನ ಮಾತು ಕೇಳಿಕೊಂಡು ಸಿಂಹಾಸನಕ್ಕಾಗಿ ಆಮರಣಾಂತ ಹೋರಾಡುವುದಾಗಿ ಸ್ಪಷ್ಟವಾಗಿ ತಿಳಿಸಿಬಿಟ್ಟಿದ್ದಾನೆ. ಇಷ್ಟಕ್ಕೆಲ್ಲ ಕಾರಣವಾಯಿತು, ಅಮಾತ್ಯರೇ. ಕೀರ್ತಿಶೇಷರಾದ ಪುಲಿಕೇಶಿ ಸಾರ್ವಭೌಮರು ಅಪಾರ ಬಲಿದಾನ ತ್ಯಾಗಗಳಿಂದ ಕಟ್ಟಿ ವಿಸ್ತರಿಸಿದ ಸಾಮ್ರಾಜ್ಯವನ್ನು ಅಖಂಡವಾಗಿ ಉಳಿಸಲು ಪುಲಿಕೇಶಿ ಈ ದುಡುಕು ನಿರ್ಧಾರ ಕೈಗೊಂಡಿದ್ದಾನೆ."

"ಇಂತಹ ದುಡುಕು ನಿರ್ಧಾರ ಯಾರ ಸಲುವಾಗಿ ? ಯಾರ ತ್ಯಾಗ ? ಈ ಬಗೆಯ ನಿರ್ಧಾರದಿಂದ ಅವರು ನಿರೀಕ್ಷಿಸುವ ಸತ್ಫಲ ದೊರೆಯುವುದೇ ? ನಿಜವಾಗಿಯೂ ಇದರಿಂದ ರಾಷ್ಟ್ರಘಾತವಾಗುತ್ತದೆ ತಾಯಿ !"

"ಈ ಮಾತು, ನಾನು ಎಷ್ಟೋ ಹೇಳಿನೋಡಿದೆ ಅಮಾತ್ಯರೇ. 'ನೀನು ಮಾಡುವ ತ್ಯಾಗದಿಂದ ನೀನು ಬಯಸುವ ಪ್ರತಿಫಲ ದೊರೆಯುವುದಿಲ್ಲ. ಇದರಿಂದ ವೃಥಾ ಆತ್ಮಘಾತ'ವೆಂದು ಎಷ್ಟೋ ಹೇಳಿದೆ. ಅವನು ತನ್ನ ನಿರ್ಧಾರ ಕೈಬಿಡಲಿಲ್ಲ. 'ಸದ್ಯದ ಪರಿಸ್ಥಿತಿಯಲ್ಲಿ ಸಿಂಹಾಸನವನ್ನು ಮಂಗಳೇಶನ ಕೈಯಿಂದ ತಪ್ಪಿಸಲು ಇದೊಂದೇ ದಾರಿ ಉಳಿದಿರುವುದು' ಎಂದು ಒಂದೇ ಹಠ ಹಿಡಿದಿದ್ದಾನೆ. ನೀವಾದರೂ ಅವನಿಗೆ ಬುದ್ಧಿ ಹೇಳಬಾರದೆ ಅಮಾತ್ಯರೇ ?"

"ನಿಮ್ಮ ಮಾತನ್ನು ಕೇಳದೆ ಇರುವ ಪುಲಿಕೇಶಿ ಇನ್ನು ನನ್ನ ಮಾತನ್ನು ಕೇಳುವನೆ ?"

"ಯಾರ ಪುಣ್ಯದಿಂದಲಾದರೂ ಪುಲಿಕೇಶಿ ತನ್ನ ನಿರ್ಧಾರದಿಂದ ಹಿಮ್ಮೆಟ್ಟಿದರೆ ಸಾಕಾಗಿದೆ, ಅಮಾತ್ಯರೇ."

"ಆಗಲಿ ತಾಯಿ. ನಾನು ಪುಲಿಕೇಶಿಯೊಂದಿಗೆ ಮಾತನಾಡಿ ಅವರ ಮನವೊಲಿಸಲು ಪ್ರಯತ್ನಿಸುತ್ತೇನೆ. ಅವರು ಸಿಂಹಾಸನಕ್ಕೆ ನ್ಯಾಯವಾದ ಹಕ್ಕುದಾರರು. ಕೈಲಾಸವಾಸಿಗಳಾದ ಕೀರ್ತಿವರ್ಮರ ಜ್ಯೇಷ್ಠ ಪುತ್ರರು. ಹೀಗಿದ್ದೂ ಅವರು ತಮ್ಮ ಹಕ್ಕನ್ನು ದುರ್ಬಲನೂ, ತಿಳಿಗೇಡಿಯೂ, ಸ್ವಾರ್ಥ ಸಾಧಕನೂ ಆದ ಆ ಕುಬ್ಜವಿಷ್ಣುವರ್ಧನನಿಗೆ ಹಠಮಾಡಿದ ಮಾತ್ರಕ್ಕೆ ಬಿಟ್ಟುಕೊಡುವದೆಂದರೆ ಯಾರಿಗೆ ಸಂತೋಷವಾಗುತ್ತದೆ ತಾಯಿ."

"ಅಮಾತ್ಯರೇ, ನನ್ನ ದುಃಖವನ್ನು ನಾನು ಯಾರ ಮುಂದೆ ತೋಡಿ ಕೊಳ್ಳಲಿ? ಕಳೆದ ಹತ್ತು ವರ್ಷಗಳಿಂದ ಕಣ್ಣಿಗೆ ನಿದ್ರೆ ಇಲ್ಲದೆ ಮಕ್ಕಳು ಬೆಳೆದು ದೊಡ್ಡವರಾಗುವುದನ್ನೇ ಕಾಯುತ್ತಿದ್ದುದು ಇದನ್ನು ನೋಡುವ ಸಲುವಾಗಿಯೇ? ಸಿಂಹಾಸನವನ್ನು ನಮ್ಮ ಮಕ್ಕಳ ಸಲುವಾಗಿ ಉಳಿಸಿಕೊಳ್ಳಲು ನಾನು ಪಟ್ಟ ಭವಣೆ ಶ್ರಮ ಅಲ್ಪವೇ? ಆದರೆ ನನ್ನ ಕರುಳ ಕೊರಗನ್ನು ಯಾರ ಮುಂದೆ ತೋಡಿಕೊಳ್ಳುವುದು! ಎಲ್ಲವನ್ನೂ ದೈವದ ಉಡಿಗೆ ಹಾಕಿ ನಿಶ್ಚಿಂತಳಾಗಿರ ಬೇಕೆಂದುಕೊಂಡರೂ, ನನ್ನ ಕಣ್ಣೆದುರಿಗೆ ನಾನು ಹಲವು ವರ್ಷಗಳಿಂದ ಕಟ್ಟುತ್ತಾ ಬಂದಿರುವ ರನ್ನಮಂದಿರ ಪುಡಿಪುಡಿಯಾಗುವುದನ್ನು ಕಂಡು ನನ್ನ ಸಂಯಮದ ಕೋಟೆ ಛಿದ್ರಛಿದ್ರವಾಗಿದೆ ಅಮಾತ್ಯರೇ!" ಎಂದು ಹೇಳಿ ಎದೆ ಬಿರಿಯುವಂತೆ, ಬಿಕ್ಕಿಬಿಕ್ಕಿ ಅತ್ತರು.

ಸಮಂತಭದ್ರನು ತನ್ನ ಜೀವನದಲ್ಲಿ ಮಹಾರಾಣಿಯವರು ಹೀಗೆ ಅತ್ತು ದನ್ನು ಎಂದೂ ಕಂಡಿರಲಿಲ್ಲ. ಅವನು ಮಹಾರಾಣಿಯವರ ಪತಿವಿಯೋಗವನ್ನು ಕಂಡಿದ್ದ. ಪುತ್ರ ವಿಯೋಗವನ್ನೂ ಕಂಡಿದ್ದ. ಎಂದೂ ಯಾರ ಮುಂದೂ ಮಹಾರಾಣಿ ದುರ್ಲಭದೇವಿಯವರು ಇಷ್ಟು ದುಃಖಪ್ರದರ್ಶನ ಮಾಡಿರಲಿಲ್ಲ. ಮಹಾರಾಣಿಯವರ ಬತ್ತಿದ ನೋರೆಯಲ್ಲಿ ಕಣ್ಣೀರು ಕಾರಂಜಿಯಂತೆ ಪುಟಿಸು ವುದನ್ನು ಕಂಡು ಸಮಂತಭದ್ರನು ಹೇಳಿದ:

"ತಾಯಿ, ಪುಲಿಕೇಶಿಯ ದುಡುಕು ನಿರ್ಧಾರದಿಂದ ನಿಮಗಾಗಿರುವ ನಿರಾಶೆ ಎಷ್ಟೆಂದು ನಾನು ಬಲ್ಲೆ! ಆದರೆ ಇದೇ ಪುಲಿಕೇಶಿಯ ಅಂತಿಮ ನಿರ್ಧಾರ ವಲ್ಲವೆಂದು ನನ್ನ ಹೃದಯಾಂತರಾಳದಲ್ಲಿ ಅಂತರವಾಣಿ ನುಡಿಯುತ್ತಿದೆ. ಪುಲಿ ಕೇಶಿಯು ಭಾವೋನ್ಮಾದದಲ್ಲಿ ಈ ದುಡುಕು ನಿರ್ಧಾರ ಕೈಗೊಂಡಿರಬಹುದು. ಅವನನ್ನು ವಿವೇಕದ ಒರೆಗೆ ಹಚ್ಚಿದರೆ, ತನ್ನ ನಿರ್ಧಾರವನ್ನು, ಸ್ವಾರ್ಥಕ್ಕಾಗಿ ಅಲ್ಲದಿದ್ದರೂ, ದೇಶದ ಹಿತಕ್ಕಾಗಿ, ಹಿಂತೆಗೆದುಕೊಳ್ಳಬಹುದೆಂದು ಅನಿಸುತ್ತಿದೆ. ಯಾವುದಕ್ಕೂ ಇನ್ನೂ ಕಾರ್ಯ ಮಿಂಚಿಹೋಗಿಲ್ಲ. ಪುಲಿಕೇಶಿಯ ಮನವೊಲಿ ಸಲು ನನ್ನಿಂದಾಗುವ ಎಲ್ಲ ಪ್ರಯತ್ನ ಮಾಡುತ್ತೇನೆ. ಸಾಧ್ಯವಾದರೆ ಮಂಗಳೇಶ ರೊಡನೆಯೂ ಮಾತನಾಡಿ ಬರುತ್ತೇನೆ. ವಿಧಿ ನಮ್ಮನ್ನು ಪರೀಕ್ಷಿಸಲು ಒಡ್ಡಿದ ಅಗ್ನಿ ಪರೀಕ್ಷೆ ಇದು. ಇದರಲ್ಲಿ ನಾವು ಸೋಲಬಾರದು ತಾಯಿ! ಬಂದುದನ್ನು ಧೈರ್ಯವಾಗಿ ಎದುರಿಸಬೇಕು. ನೀವು ಯಾವುದಕ್ಕೂ ದುಃಖಿಸಬಾರದು

ತಾಯಿ" ಎಂದು ದುರ್ಲಭದೇವಿಗೆ ಸಾಂತ್ವನ ವಚನಗಳಿಂದ ಸಮಾಧಾನ ಹೇಳಿದ ಸಮಂತಭದ್ರ.

"ಅಮಾತ್ಯರೇ, ಪುಲಿಕೇಶಿಯು ಭಾವೋನ್ಮಾದದಲ್ಲಿ ಸಿಂಹಾಸನ ತ್ಯಾಗದ ನಿರ್ಧಾರಮಾಡಿರಬೇಕೆಂದು ನನಗೂ ಅನಿಸುತ್ತಿದೆ. ಹಾಗಿದ್ದರೆ, ವಿವೇಕದ ಪ್ರಖರ ಕಿರಣಗಳ ಮುಂದೆ ಅದು ಮಂಜಿನಂತೆ ಕರಗಲೇಬೇಕು. ನಮ್ಮ ಪ್ರಯತ್ನ ಮಾಡೋಣ. ಇಷ್ಟರಮೇಲೆ ದೈವೇಚ್ಛೆ ಇದ್ದಂತೆ ಆಗಲಿ" ಎಂದು ಹೇಳಿ ಸಮಂತಭದ್ರನನ್ನು ಬೀಳ್ಕೊಟ್ಟರು.

ಪ್ರಧಾನ ಅಮಾತ್ಯ ಸಮಂತಭದ್ರನು ಪುಲಿಕೇಶಿಯನ್ನು ವಿಹಾರದ ಹೆಸರಿನಲ್ಲಿ ನಗರದಾಚೆಯ ಪ್ರಶಾಂತ ಸ್ಥಳಕ್ಕೆ ಕರೆದೊಯ್ದು, ಏಕಾಂತವಾಗಿದ್ದಾಗ ಅವನೊಡನೆ ಮಾತುತೆಗೆದನು.

"ಕೇಶಣ್ಣ, ನಿನ್ನ ವಿಷಯದಲ್ಲಿ ನಾನು ಭಯಂಕರವಾದ ಸುದ್ದಿ ಕೇಳಿದೆ, ನಿಜವೆ ?"

"ಯಾವ ಸುದ್ದಿ ಅಮಾತ್ಯರೆ ?"

"ನೀನು ನಿನ್ನ ಸಹೋದರ ವಿಷ್ಣುವರ್ಧನನ ಸಲುವಾಗಿ ಸಿಂಹಾಸನವನ್ನು ತ್ಯಾಗಮಾಡಲು ನಿರ್ಧರಿಸಿರುವೆಯಂತೆ ನಿಜವೆ ?"

"ಹೌದು, ಅಮಾತ್ಯರೆ."

ಈ ಸುದ್ದಿಯನ್ನು ನೀನು ನನಗೇಕೆ ಇದುವರೆಗೆ ತಿಳಿಸಲಿಲ್ಲ. ಈ ಸುದ್ದಿ ಕೇಳಬಾರದಷ್ಟು ಪರಕೀಯನಾದೆನೆ ?"

"ಹಾಗೆ ತಿಳಿಯಬೇಡಿ ಅಮಾತ್ಯರೆ. ನಾನು ಈ ಬಗ್ಗೆ ತುಂಬಾ ವಿಚಾರ ಮಾಡಬೇಕಾಗಿದ್ದುದರಿಂದ, ನನ್ನ ನಿರ್ಧಾರವನ್ನು ಯಾರಿಗೂ ತಿಳಿಸಲಿಲ್ಲ. ಇನ್ನೂ ಈ ಬಗ್ಗೆ ಮಂಗಳೇಶನಿಗಾಗಲಿ, ವಿಷ್ಣುವರ್ಧನನಿಗಾಗಲೀ ತಿಳಿಸಲಿಲ್ಲ. ಅಂತಲೇ ಈ ವಿಷಯವನ್ನು ನಿಮಗೂ ಹೇಳಲಿಲ್ಲ !"

"ನೀನು ಈ ನಿರ್ಧಾರ ಕೈಗೊಳ್ಳಲು ಕಾರಣವೇನು ? ನಮ್ಮಿಂದೇನಾದರೂ ಅಪಚಾರವಾಯಿತೆ ?"

"ನನಗೆ ಯಾರಿಂದಲೂ ಅಪಚಾರವಾಗಿಲ್ಲ ಅಮಾತ್ಯರೆ ! ನಾನೇ ಯೋಚಿಸಿ ಸಿಂಹಾಸನದ ಸಲುವಾಗಿ ಸಹೋದರರ ನಡುವೆ ಯಾದವೀಕಲಹ ನಡೆಯುವುದನ್ನು ತಪ್ಪಿಸಲು ಈ ನಿರ್ಧಾರ ಕೈಗೊಂಡಿದ್ದೇನೆ, ಅಷ್ಟೆ!"

"ಈ ನಿರ್ಧಾರ ಕೈಗೊಳ್ಳುವ ಮುನ್ನ ನನ್ನನ್ನು ಒಂದು ಮಾತು ಕೇಳಿದ್ದರೆ ಚೆನ್ನಾಗಿತ್ತು" ಎಂದು ರಾಗವಾಗಿ ಹೇಳಿದ ಸಮಂತಭದ್ರ.

"ಏಕೆ ಅಮಾತ್ಯರೇ ? ನನ್ನ ಸ್ಥಿತಿಯಲ್ಲಿ ನೀವು ಇದ್ದಿದ್ದರೆ ಏನು ಮಾಡುತ್ತಿದ್ದಿರಿ ?"

"ಖಂಡಿತ ಇಂತಹ ದುಡುಕು ನಿರ್ಧಾರ ಕೈಗೊಳ್ಳುತ್ತಿರಲಿಲ್ಲ."

"ನನ್ನದು ದುಡುಕು ನಿರ್ಧಾರವೆ ?"

"ಅಲ್ಲದೆ ಮತ್ತೇನು ?"

"ಕಾರಣ ತಿಳಿಯಬಹುದೆ ?"

"ಕೇಶಣ್ಣ, ನಾನು ಹೀಗೆ ಕೇಳುವೆನೆಂದು ನೀನು ಕೋಪಮಾಡಿಕೊಳ್ಳಬೇಡ. ಸಿಂಹಾಸನವನ್ನು ತಮ್ಮನಿಗೆ ಬಿಟ್ಟುಕೊಡಲು ನಿನಗೆ ಯಾವ ಅಧಿಕಾರವಿದೆ ?"

"ನನಗೆ ಯಾವ ಅಧಿಕಾರವೂ ಇಲ್ಲವೆಂದು ಒಪ್ಪಿಕೊಳ್ಳುತ್ತೇನೆ ಅಮಾತ್ಯರೆ" ಶಾಂತನಾಗಿಯೇ ಪುಲಿಕೇಶಿ ಉತ್ತರಕೊಟ್ಟ.

"ಹಾಗಾದರೆ ಸಿಂಹಾಸನವನ್ನು ನಿನ್ನ ತಮ್ಮನಿಗೇಕೆ ಬಿಟ್ಟುಕೊಡಲು ನಿರ್ಧರಿಸಿರುವೆ ?"

"ಸಿಂಹಾಸನವನ್ನು ನಾನು ತಮ್ಮನಿಗೆ ಬಿಟ್ಟುಕೊಡಲಿಲ್ಲ. ಸಿಂಹಾಸನದ ಹಕ್ಕನ್ನು ಮಾತ್ರ ನಾನು ಬಿಟ್ಟುಕೊಡುತ್ತಿದ್ದೇನೆ? ನನ್ನ ಹಕ್ಕನ್ನು ಮಾತ್ರ ಸಹೋದರನ ಸಲುವಾಗಿ ತ್ಯಾಗಮಾಡುತ್ತಿದ್ದೇನೆ, ಅಷ್ಟೆ!"

"ನಿನ್ನ ಹಕ್ಕನ್ನೇ ಆಗಲಿ, ತ್ಯಾಗಮಾಡಲು ನಿನಗೆ ಯಾವ ಅಧಿಕಾರವಿದೆ ? ಪವಿತ್ರವಾದ ರತ್ನಸಿಂಹಾಸನ ವಂಶಪಾರಂಪರ್ಯವಾಗಿ ಬರತಕ್ಕದ್ದು. ಅದು ಜ್ಯೇಷ್ಠ ಸಂತಾನಕ್ಕೆ ಮಾತ್ರ ಮೀಸಲು. ಅನ್ಯರಿಗೆ ದೊರೆಯತಕ್ಕ ವಸ್ತುವಲ್ಲ ಅದು. ಅದರಲ್ಲೂ ಜ್ಯೇಷ್ಠಪುತ್ರನಿರುವಾಗ ಕನಿಷ್ಠನಿಗೆ ಸಲ್ಲುವುದೇ ಇಲ್ಲ !"

"ಸಿಂಹಾಸನದ ಹಕ್ಕು ನನ್ನದೆಂದು ನೀವು ಒಪ್ಪಿಕೊಳ್ಳುತ್ತೀರಾ ?"

"ಹೌದು."

"ನನ್ನದಾದ ಹಕ್ಕನ್ನು ನಾನು ಸಂತೋಷದಿಂದ ತಮ್ಮನಿಗೆ ಬಿಟ್ಟುಕೊಡುತ್ತಿದ್ದೇನೆ."

"ಇದರಲ್ಲಿ ಸ್ವಸಂತೋಷದ ಪ್ರಶ್ನೆ ಇಲ್ಲ ಕೇಶಣ್ಣ! ಪವಿತ್ರವಾದ ಸಿಂಹಾ

ಸನವನ್ನೇರಲೂ ಅರ್ಹತೆ ಬೇಕು. ಇಷ್ಟಬಂದವರೆಲ್ಲರೂ ಕುಳಿತುಕೊಳ್ಳಲು ಅದೇನು ಸಾಮಾನ್ಯ ಗದ್ದುಗೆಯೇ ?"

"ಸಿಂಹಾಸನದಲ್ಲಿ ಮಂಡಿಸಲು ನಾನು ಅರ್ಹನಾದರೆ, ನನ್ನ ಬೆನ್ನಿನಲ್ಲಿ ಬಿದ್ದಿರುವ, ಸಹೋದರನಾದ ವಿಷ್ಣುವರ್ಧನನಿಗೆ ಅರ್ಹತೆಯಿಲ್ಲವೆ ?"

"ವಿಷ್ಣುವರ್ಧನ ನಿನ್ನ ಸಹೋದರನಿರಬಹುದು. ಆದರೆ ಅವನು ಜ್ಯೇಷ್ಠ ಪುತ್ರನಲ್ಲ !"

"ವಿಷ್ಣುವರ್ಧನನು ಕಿರಿಯನಾದ ಮಾತ್ರಕ್ಕೆ ಸಿಂಹಾಸನವನ್ನೇರಲು ಹಕ್ಕಿಲ್ಲವೆ ?"

"ವಿಷ್ಣುವರ್ಧನನಿಗೆ ಸಿಂಹಾಸನದ ಹಕ್ಕು ಇದ್ದಿದ್ದರೆ, ಕೀರ್ತಿವರ್ಮ ಮಹಾರಾಜರು ದಿವಂಗತರಾದ ಕೂಡಲೇ, ಅವರ ಸಹೋದರರಾದ ಮಂಗಳೇಶರೇಕೆ ಸಾಮ್ರಾಟರಾಗದೆ ಹೋಗುತ್ತಿದ್ದರು ! ಸಿಂಹಾಸನದ ಮೇಲೆ ಕುಳಿತರೂ, ತಮ್ಮನ್ನು ರಾಜಪ್ರತಿನಿಧಿಗಳೆಂದು ಏಕೆ ಕರೆದುಕೊಳ್ಳುತ್ತಿದ್ದರು ?"

ಈ ಮಾತಿಗೆ ಪುಲಿಕೇಶಿ ಉತ್ತರ ಕೊಡಲಿಲ್ಲ.

"ಮಗು, ಪುಲಿಕೇಶಿ, ನೀನು ಭಾವೋನ್ಮಾದದಲ್ಲಿ, ತ್ಯಾಗದ ಹುಚ್ಚು ಕಲ್ಪನೆಯಲ್ಲಿ ಸಿಂಹಾಸನ ತ್ಯಾಗಮಾಡಲು ಹೊರಟಿರುವೆ ! ಆದರೆ ಚೆನ್ನಾಗಿ ವಿಚಾರಮಾಡು. ನಿನ್ನ ತ್ಯಾಗದಿಂದ ನೀನು ನಿರೀಕ್ಷಿಸುವ ಫಲ ದೊರಕುವುದೆ ? ನೀನು ನಿನ್ನ ಸಿಂಹಾಸನದ ಹಕ್ಕಿಗೆ ತಿಲಾಂಜಲಿ ಇತ್ತು ಸಿಂಹಾಸನದ ಮೇಲೆ ದ್ರೋಹಿಯಾದ ಮಂಗಳೇಶನ ಕೈಬೊಂಬೆಯಾದ ವಿಷ್ಣುವರ್ಧನನನ್ನು ಕೂಡಿಸಲು ಬಯಸುತ್ತಿರುವೆ. ಅದರೆ ವಿಷ್ಣು ವಿಶಾಲವಾದ ಸಾಮ್ರಾಜ್ಯವನ್ನು ದಕ್ಷ ರೀತಿಯಲ್ಲಿ ಆಳಲು ಸಮರ್ಥನೆ ? ಅವನು ಸಾಮ್ರಾಟನಾದರೆ ಮೂರು ಗಳಿಗೆ ಸಾಮ್ರಾಜ್ಯವನ್ನು ಶತ್ರುಗಳಿಂದ ಉಳಿಸಿಕೊಳ್ಳಲಾರ ! ಆ ಮಾತು ಹಾಗಿರಲಿ, ವಿಷ್ಣು ಸಾಮ್ರಾಟನಾದರೆ ನಿನಗೆ ಬರುವ ಲಾಭವೇನು ? ಅವನು ನಿನ್ನ ಮಾತಿನಂತೆ ನಡೆಯುವುದು ಅಸಂಭವ. ಅವನು ರಾಜ್ಯಾಡಳಿತದಲ್ಲಿ ಮಂಗಳೇಶನ ನೆರವನ್ನು ಕೋರುವುದು ಅಷ್ಟೇ ಸಂಭವ. ಅಂದರೆ ಮಂಗಳೇಶನು ವಿಷ್ಣುವಿನ ಹೆಸರಿನಲ್ಲಿ ಸಾಮ್ರಾಟನಾಗುತ್ತಾನೆ. ಮುಂದೊಂದು ದಿನ, ವಿಷ್ಣುವನ್ನು ಮೂಲೆಗೊತ್ತಿ, ಸಿಂಹಾಸನವನ್ನು ತಾನೇ ಆಕ್ರಮಿಸಿಕೊಳ್ಳುತ್ತಾನೆ ! ನೀನು ಸಿಂಹಾಸನವನ್ನು ವಿಷ್ಣುವಿಗೆ ತ್ಯಾಗಮಾಡಿ, ಸಾಧಿಸಬೇಕೆಂದು ಯೋಚಿಸಿರು

ವುದು ಇದನ್ನೆ? ಚೆನ್ನಾಗಿ ಯೋಚಿಸು, ಮಗು!" ಎಂದು ಆತ್ಮೀಯವಾಗಿ ಸಮಂತಭದ್ರ ಹೇಳಿದ.

"ನಾನು ಸಿಂಹಾಸನಕ್ಕಾಗಿ ನಡೆಯುವ ಹೋರಾಟವನ್ನು ತಪ್ಪಿಸಲು ವಿಷ್ಣುವಿಗೆ ಸಿಂಹಾಸನವನ್ನು ಬಿಟ್ಟುಕೊಡುತ್ತಿದ್ದೇನೆಯೇ ಹೊರತು ಮಂಗಳೇಶ ನನ್ನು ಸಾಮ್ರಾಟನನ್ನಾಗಿ ಮಾಡಲೆಂದಲ್ಲ. ನಾನು ಬದುಕಿರುವವರೆಗೆ ಮಂಗಳೇಶನು ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಅವಕಾಶ ಕೊಡಲಾರೆ."

"ಚಾಲುಕ್ಯ ಸಿಂಹಾಸನವನ್ನು ಮಂಗಳೇಶನು ಆಕ್ರಮಿಸುವುದನ್ನು ನೀನು ಹೇಗೆ ತಪ್ಪಿಸಬಲ್ಲೆ?"

"ನಾನು ವಿಷ್ಣುವಿನ ಬೆಂಬಲಕ್ಕೆ ನಿಂತು ಸಾಮ್ರಾಜ್ಯವು ದ್ರೋಹಿಗಳ ಪಾಲಾಗದಂತೆ ರಕ್ಷಿಸುತ್ತೇನೆ!"

"ವಿಷ್ಣು ನಿನ್ನ ಮಾತಿನಂತೆ ನಡೆಯದಿದ್ದರೆ?"

ಈ ಮಾತಿಗೆ ಪುಲಿಕೇಶಿ ಉತ್ತರ ಕೊಡಲಿಲ್ಲ.

"ವಿಷ್ಣುವಿಗೆ ನಿನ್ನಲ್ಲಿ ಅಷ್ಟು ಗೌರವಬುದ್ಧಿ ಇದ್ದಿದ್ದರೆ ಸಿಂಹಾಸನದ ಸಲುವಾಗಿ ಇಷ್ಟು ಹಗರಣವೇಕಾಗುತ್ತಿತ್ತು! ಅವನಲ್ಲಿ ನೀನು ತನ್ನ ಶ್ರೇಯಾ ಕಾಂಕ್ಷಿ ಎಂಬ ನಂಬಿಕೆ ಇದ್ದಿದ್ದರೆ ಇಂದೇಕೆ ಸಿಂಹಾಸನದಲ್ಲಿ ಪಾಲು ಕೇಳುತ್ತಿದ್ದ?"

"ಈಗ ನನ್ನ ವಿಷಯದಲ್ಲಿ ಅವನಿಗೆ ಯಾವುದೋ ಅವ್ಯಕ್ತ ಭೀತಿ ಇದೆ. ನಾನು ಸಾಮ್ರಾಟನಾದರೆ, ತನ್ನ ಸ್ಥಾನಮಾನಗಳಿಗೆ ಮಾತ್ರವಲ್ಲ—ಪ್ರಾಣಕ್ಕೂ ಅಪಾಯವೆಂಬ ಹುಚ್ಚು ಕಲ್ಪನೆಯನ್ನು ಅವನು ಹೇಗೊ ತಲೆಯಲ್ಲಿ ತುಂಬಿ ಕೊಂಡಿದ್ದಾನೆ. ಅಂತಲೇ ತನಗೆ ಸ್ವತಂತ್ರವಾದ ಸ್ಥಾನಮಾನ, ತನ್ನದೇ ಆದ ಅಧಿಕಾರಪದವಿಗಳನ್ನು ಬಯಸುತ್ತಿದ್ದಾನೆ. ನಾಳೆ ವಿಷ್ಣುವೇ ಸಾಮ್ರಾಟನಾದರೆ ನನ್ನ ವಿಷಯದಲ್ಲಿ ತಾನು ತಿಳಿದ ತಪ್ಪು ಕಲ್ಪನೆಗಳಿಗಾಗಿ ಪಶ್ಚಾತ್ತಾಪಪಟ್ಟು ಅವನು ನನ್ನಲ್ಲಿ ಹಿಂದಿನ ಪ್ರೀತಿ, ವಿಶ್ವಾಸ, ಗೌರವಗಳನ್ನು ಹೊಂದುತ್ತಾನೆ. ನಾನು ಸಾಮ್ರಾಟನಾಗಿ ಸಾಧಿಸುವುದಕ್ಕಿಂತಲೂ ಇದು ಹಿರಿಯ ಸಾಧನೆಯೆಂದೇ ನನ್ನ ಭಾವನೆ!"

"ಮಗು ಪುಲಿಕೇಶಿ, ನೀನು ಇನ್ನೂ ಕನಸಿನ ಲೋಕದಲ್ಲೇ ವಿಹರಿಸು ತ್ತಿದ್ದೀ! ವಾಸ್ತವಿಕ ಜಗತ್ತಿನ ರೀತಿನೀತಿಗಳು ನೀನು ತಿಳಿದಷ್ಟು ಸರಳವಾಗಿಲ್ಲ. ಅಂತಲೇ ನೀನು ಕಟ್ಟಿಕೊಂಡಿರುವ ತ್ಯಾಗದ ಕಲ್ಪನೆ ಬರಿ ಭ್ರಮೆ. ನೀನು ವಿಷ್ಣುವರ್ಧನನ ಹೃದಯಪರಿವರ್ತನೆಗಾಗಿ ಸಿಂಹಾಸನತ್ಯಾಗದಂತಹ ದುಡುಕು ನಿರ್ಧಾರ ಕೈಗೊಂಡಿರುವೆ. ಆದರೆ ಇದರಿಂದ ನೀನು ಭಾವಿಸುವ ಯಾವ ಸತ್ಪರಿಣಾಮ ಸಾಧಿಸುವುದಿಲ್ಲ. ಇದರಿಂದ ವಿಷ್ಣುವಿನ ಹೃದಯ ಪರಿವರ್ತನೆ ಯಾಗುವುದು ಹಾಗಿರಲಿ, ವಿಷ್ಣುವಿನ ದೃಷ್ಟಿಯಲ್ಲಿ ನೀನು ಕೈಲಾಗದ ಹೇಡಿ ಯಾಗಿ ತೋರುವೆ. ಜನತೆಯ ಕಣ್ಣಿನಲ್ಲೂ ಅಷ್ಟೇ. ಕೈಗೆ ಬಂದ ಸಾಮ್ರಾಟಪದವಿ ಯನ್ನು ಕ್ಷುಲ್ಲಕ ಕಾರಣಕ್ಕಾಗಿ ಬಿಟ್ಟುಕೊಟ್ಟ ನಿನ್ನನ್ನು ಜನತೆ ಹೇಡಿಯೆಂದು ತಿಳಿಯುತ್ತದೆ ಮಾತ್ರವಲ್ಲ. ನಿನ್ನಂತಹ ಹೇಡಿಯ ಕೈಯಲ್ಲಿ ಆಳಲ್ಪಡಲೂ ಒಪ್ಪುವುದಿಲ್ಲ. ತಾವೇ ದಂಗೆ ಎದ್ದು ನಿನ್ನನ್ನು ಅಧಿಕಾರದಿಂದ ಕೆಳಗುರುಳಿಸು ತ್ತಾರೆ. ಒಮ್ಮೆ ನೀನು ಸಿಂಹಾಸನತ್ಯಾಗಮಾಡಿ, ರಾಜ್ಯಾಡಳಿತದಲ್ಲಿ ತಮ್ಮನಿಗೆ ನೆರವಾಗಲು ನಿಂತರೂ, ನಿನಗೆ ಇನ್ನೂ ಅಧಿಕಾರ ಮೋಹ ಇದೆ ಎಂದು ಜನತೆ ತಿಳಿಯುತ್ತದೆ. ಸ್ವಯಂ ವಿಷ್ಣುವೂ ಹಾಗೇ ತಿಳಿಯಲು ಅವಕಾಶವಿದೆ. ಅಂದ ಮೇಲೆ ನಿನ್ನ ಸ್ಥಾನ ಎಷ್ಟು ಅಭದ್ರವೆಂಬುದು ನೀನೇ ಅರಿತುಕೊ! ನೀನು ತಮ್ಮನಿಗೆ ಸಿಂಹಾಸನ ಬಿಟ್ಟುಕೊಟ್ಟಮೇಲೆ, ನೀನು ಅಧಿಕಾರದ ಹಂಬಲವನ್ನು ಬಿಟ್ಟುಕೊಡುವುದು ಒಳಿತು. ನೀನು ಸಂನ್ಯಾಸ ಸ್ವೀಕರಿಸಿ ಜಗತ್ತಿನ ಸುಖ ದುಃಖಗಳಿಗೆ ತಿಲಾಂಜಲಿಯನ್ನು ಕೊಡುವುದಾದರೆ ಮಾತ್ರ ಸಿಂಹಾಸನವನ್ನು ತಮ್ಮನಿಗೆ ಬಿಟ್ಟುಕೊಡು! ಸಿಂಹಾಸನವನ್ನು ತ್ಯಾಗಮಾಡಿಯೂ, ಅಧಿಕಾರದ ಆಸೆ ಇಟ್ಟುಕೊಂಡು ಇದ್ದರೆ ಮಾತ್ರ ನಿನ್ನದು ಅವ್ಯವಹಾರ ಮಾತ್ರವಲ್ಲ— ತಿಳಿಗೇಡಿತನದ ನಿರ್ಧಾರವಾಗುತ್ತದೆ."

ಎಂದು ಕೊಂಚ ನಿಷ್ಠುರವಾಗಿ ಹೇಳಿದ ಸಮಂತಭದ್ರ.

"ಅಮಾತ್ಯರೇ, ನನ್ನದು ತಿಳಿಗೇಡಿತನದ ಹುಚ್ಚು ಕಲ್ಪನೆಯೆಂದು ನೀವು ಬೇಕಾದರೆ ಕರೆಯಿರಿ. ನನ್ನ ಉದ್ದಿಶ್ಯ ಪವಿತ್ರವಾದುದೆಂದು ನೀವು ಒಪ್ಪಲೇ ಬೇಕು. ಒಮ್ಮೆ ವಿಷ್ಣುವರ್ಧನ ಅಧಿಕಾರಕ್ಕೆ ಬರಲಿ, ನನ್ನ ತ್ಯಾಗ ಅವನ ಹೃದಯಪರಿವರ್ತನೆಮಾಡದೆ ಇರುವುದಿಲ್ಲ. ಒಮ್ಮೆ ಅವನು ಮಂಗಳೇಶನ ದುಷ್ಟಪ್ರಭಾವದಿಂದ ಪಾರಾದರೆ, ಅವನನ್ನು ಅಡ್ಡದಾರಿಗೆ ಎಳೆಯುವ ಎಲ್ಲ

ದುಷ್ಟ ಶಕ್ತಿಗಳನ್ನು ನಿರ್ಮೂಲಗೊಳಿಸಬಹುದು. ಎಲ್ಲ ದ್ರೋಹಿಗಳನ್ನೂ ಸ್ವಾರ್ಥ ಸಾಧಕರನ್ನೂ, ಮೂಲೋತ್ಪಾಟನ ಮಾಡಬಹುದು. ಅಂದ ಮೇಲೆ ನನ್ನ ತ್ಯಾಗ ವ್ಯರ್ಥವಾಗುವುದೆ ?"

"ಅಯ್ಯೋ ಮಗು ! ನಿನ್ನ ಕಲ್ಪನೆಯ ಜಗತ್ತಿಗೂ ಇಲ್ಲಿನ ಜಗತ್ತಿಗೂ ಬಹಳ ವ್ಯತ್ಯಾಸವಿದೆ ಎಂಬುದನ್ನು ನೀನು ಅರಿಯದೆಹೋದೆಯಲ್ಲ. ನೀನು ಗುರುಕುಲದಲ್ಲಿ ಹತ್ತುವರ್ಷ ಓದಿಯೂ, ಇನ್ನೂ ವ್ಯವಹಾರಜ್ಞಾನದಲ್ಲಿ ಇಷ್ಟು ಮುಗ್ಧನಾಗಿರುವೆ ಎಂದು ತಿಳಿದಿರಲಿಲ್ಲ. ನೀನು ಕನಸುಗಾರನಾದರೆ, ಆದರ್ಶವಾದಿಯಾದರೆ, ನಾನು ಬೇಡವೆನ್ನುವುದಿಲ್ಲ. ಆದರೆ ನಿನ್ನ ಆದರ್ಶಕ್ಕೆ ಈ ಲೋಕದಲ್ಲಿ ಬುನಾದಿಯನ್ನುಹಾಕಿ ನಿನ್ನಕನಸಿನ ಗೋಪುರಕಟ್ಟಿಕೋ ಎಂದಷ್ಟೇ ನಾನು ಹೇಳುವುದು. ನಿನ್ನ ಆದರ್ಶದ ಹೊಂಗನಸು ಈ ಲೋಕದಲ್ಲಿ ಅರಳುವ ಹೂವಾಗಬೇಕೆಂದೇ ನನ್ನ ಆಶಯ. ನೀನು ಆದರ್ಶ–ವಾಸ್ತವತೆಗಳ ದಿವ್ಯಸೇತುವೆ ನಿರ್ಮಿಸುವುದಾದರೆ ನಾನು ಬೇಡವೆನ್ನುವುದಿಲ್ಲ. ಆದರೆ ನಿಂತ ನೆಲವನ್ನು ಮರೆತು, ಗಗನಕುಸುಮಗಳನ್ನು ಕೀಳಲು ಕೈಹಾಕಬೇಡ. ಜಾರಿ ಬೀಳುವ ಪ್ರಸಂಗ ಬರುವುದು. ಅಷ್ಟೇ ಜಗತ್ತಿನ ಪಾಲಿಗೆ ಹುಚ್ಚನಾಗಿ ಕಾಣುವ ಪ್ರಸಂಗ ಬಂದೀತು !"

"ಜಗತ್ತು ನನ್ನನ್ನು ಹುಚ್ಚನೆಂದು ಕರೆದರೂ ಸರಿಯೇ, ನಾನು ಆದರ್ಶವಿಲ್ಲದ ಬದುಕನ್ನು ಬಾಳಲಾರೆ. ಆದರ್ಶವಿಲ್ಲದ ಬಾಳ್ವೆ ಪಶು ಸಮಾನ ಬಾಳ್ವೆ. ಆದರ್ಶವಿಲ್ಲದ ಬಾಳ್ವೆ ಮೊನೆಯಿಲ್ಲದ ಕರವಾಳದಂತೆ ಇದ್ದೂ ನಿಷ್ಪ್ರಯೋಜನ. ನನ್ನ ಜೀವನ ಪ್ರಜಾಸೇವೆಗೆ ಮೀಸಲಾಗಬೇಕು.ನಾನು ಸುಖ ಶಾಂತಿ ಸಮೃದ್ಧಿಗಳನ್ನು ಜನತೆಗೆ ತಂದುಕೊಡಬೇಕು. ಒಟ್ಟಿನಲ್ಲಿ ಹೇಳುವುದಾದರೆ, ಹಿಂದೆ ಯಾರೂ ಪಡೆಯದ ಕೀರ್ತಿಯನ್ನು ಇಹಪರಗಳಲ್ಲಿ ಪಡೆಯಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದೆ. ಆದರೆ ಸಾಮ್ರಾಟಪದವಿಗೆ ತಿಲಾಂಜಲಿಯನ್ನು ಕೊಟ್ಟ ಮಾತ್ರಕ್ಕೆ ಜೀವನದ ಬೆಲೆಯನ್ನುಹೆಚ್ಚಿಸುವ, ನನ್ನ ಜೀವಿತದ ಸರ್ವಸ್ವವಾದ ಆದರ್ಶವನ್ನು ಬಿಟ್ಟುಕೊಡಬೇಕೆ ? ಇಂದು ಸಾಮ್ರಾಟನಾಗಿ, ಜನತೆಯ ಸೇವೆ ಮಾಡಲು ಸಾಧ್ಯವಾಗದಿದ್ದರೆ, ಅವರ ಪಾದಸೇವಕನಾಗಿ ಸೇವೆ ಸಲ್ಲಿಸುತ್ತೇನೆ. ನನಗೆ ಅಧಿಕಾರ ಪದವಿಗಳ ಮೋಹ ಎಳ್ಳಷ್ಟೂ ಇಲ್ಲ ಅಮಾತ್ಯರೇ. ಇದ್ದಿದ್ದರೆ ನಾನು ವಿಷ್ಣುವರ್ಧನನಿಗೆ ಸಿಂಹಾಸನವನ್ನು ಒಪ್ಪಿಸಿಕೊಡಲು

ನಿರ್ಧರಿಸುತ್ತಿರಲಿಲ್ಲ. ನನಗೆ ಬೇಕಾಗಿರುವುದು ಜನತಾ ಸೇವೆಯೇ ಹೊರತು ಅಧಿಕಾರಪದವಿಗಳಲ್ಲ. ನಾನು ಸಾಮ್ರಾಟನಾಗಿರಲಿ, ಇಲ್ಲದಿರಲಿ, ಜನತಾ ಸೇವೆಗೆ ಅಡ್ಡಿಪಡಿಸುವವರು ಯಾರು ?"

"ನೀನು ಸಾಮಾನ್ಯ ವ್ಯಕ್ತಿಯಾಗಿದ್ದರೆ, ನಿನ್ನನ್ನು ಯಾರೂ ಅಡ್ಡಿಪಡಿಸುತ್ತಿರಲಿಲ್ಲ ಮಗು. ಆದರೆ, ನೀನು ರಾಜಪುತ್ರನೆಂಬುದನ್ನು ಮರೆಯಬೇಡ. ನೀನು ಅಧಿಕಾರ ಪದವಿಗಳಿಗೆ ಬಲಿಯಾಗದೆ ನಿಸ್ವಾರ್ಥಸೇವೆಯ ಕಂಕಣ ತೊಟ್ಟು ರಾಜಧಾನಿಯಲ್ಲಿದ್ದರೂ, ನಿನ್ನ ಜೀವಿತದ ಆದರ್ಶ ಕೈಗೂಡಲಾರದು ! ನೀನು ರಾಜಧಾನಿಯಲ್ಲಿ ಇದ್ದರೆ ನಿನ್ನಿಂದ ಎಂದಾದರೂ ತೊಂದರೆ ಇದೆ ಎಂದು ನಿನ್ನ ಸಹೋದರ ವಿಷ್ಣುವರ್ಧನನೇ ನಿನ್ನನ್ನು ಸೆರೆಯಲ್ಲಿಡುತ್ತಾನೆ. ಇಲ್ಲವೇ ನೀನು ಬದುಕಿರುವಷ್ಟು ಕಾಲ ಸಿಂಹಾಸನ ಭದ್ರವಿಲ್ಲವೆಂದು ನಿನ್ನನ್ನು ಮೋಸದಿಂದ ಕೊಲ್ಲಿಸಲು ಹೇಸುವುದಿಲ್ಲ. ಅಧಿಕಾರ ಪದವಿಗಳು ಎಂತಹವರನ್ನು ಹೇಗೆ ಮಾರ್ಪಡಿಸುವುವೆಂದು ಯಾರೂ ಹೇಳಲಾರರು ಮಗು ! ಹೀಗಾದರೆ ನಿನ್ನ ಬದುಕಿನ ಆದರ್ಶ ಮಣ್ಣುಗೂಡಿದಂತೆ ಆಗುವುದಿಲ್ಲವೆ ? ಇದನ್ನೆಲ್ಲಾ ಯೋಚಿಸಬೇಡವೆ ?"

"ಅಮಾತ್ಯರೇ, ಸಾವು ಯಾರಿಗೆ ತಪ್ಪಿದೆ? ಹುಟ್ಟಿದವರೆಲ್ಲರೂ ಸಾಯಲೇ ಬೇಕು. ಆದರೆ ನಾನು ಮಡಿದರೆ ಆದರ್ಶ ಸಾಧನೆಯಲ್ಲಿ ಮಡಿಯುತ್ತೇನೆ. ಇದಕ್ಕಿಂತಲೂ ಒಳ್ಳೆಯ ಕೊನೆ ಬಾಳಿಗೆ ಉಂಟೆ ? ನನ್ನ ಸಿಂಹಾಸನವನ್ನು ತಮ್ಮನಿಗೆ ಕೊಟ್ಟಮೇಲೂ ಅವನಿಗೆ ನನ್ನಲ್ಲಿ ನಂಬಿಕೆ ಉಳಿಯದಿದ್ದ ಮೇಲೆ, ಅಂತಹ ಬದುಕಿಗಿಂತ ಸಾವೇ ಸುಖಕರವಲ್ಲವೆ ? ನನ್ನನ್ನು ಸಾವಿಗೆ ಅಂಜುವ ಹೇಡಿ ಎಂದು ತಿಳಿದಿರಾ ?" ಎಂದು ಹೇಳಿ ವಿಷಣ್ಣನಾಗಿ ನಕ್ಕ ಪುಲಿಕೇಶಿ.

"ಮಗು, ನಾವಿಬ್ಬರೂ ಬೇರೆ ಬೇರೆ ಜಗತ್ತಿನಲ್ಲಿ ವಾಸಿಸುತ್ತಿದ್ದೇವೆ. ನಿನ್ನ ದೃಷ್ಟಿಯಲ್ಲಿ ನಿನ್ನ ಆದರ್ಶ ವಾಸ್ತವವೆನಿಸಿದರೆ ಅವು ಕೈಗೆ ಎಟುಕಲಾರದ ಗಗನ ಕುಸುಮಗಳೆಂದು ನನಗೆ ತೋರುತ್ತವೆ. ನಮ್ಮಿಬ್ಬರಲ್ಲಿ ದೃಷ್ಟಿಭೇದಕ್ಕಿಂತಲೂ, ನಿಂತಿರುವ ನೆಲಗಳೇ ಭಿನ್ನವಾಗಿವೆ. ನೀನು ಊರ್ಧ್ವಗಾಮಿಯಾದ ಗರುಡನಾದರೆ, ನಾನು ನೆಲದಲ್ಲಿ ಹರಿಯುವ ಕುಕ್ಕುಟದಂತೆ ಇದ್ದೇನೆ. ನಿನಗೆ ನಿನ್ನ ಆದರ್ಶ ಬದುಕಿಗೆ ಪ್ರೇರಕ ಶಕ್ತಿಯಿದ್ದರೆ ನನಗೆ ನನ್ನ ಆದರ್ಶ ಅದೇ ಪ್ರೇರಕ ಶಕ್ತಿಯಾಗಿದೆ. ಆದರೆ ವಾಸ್ತವ ಜಗತ್ತಿನ ಜನರೊಂದಿಗೆ ವ್ಯವಹರಿಸುವಾಗ

ನಾವು ವಾಸ್ತವ ಜಗತ್ತಿಗೆ ಇಳಿದುಬರಬೇಕೆಂಬುದನ್ನು ನೀನು ಒಪ್ಪಲೇಬೇಕು. ಒಂದು ವೇಳೆ ಒಪ್ಪದಿದ್ದರೂ ಜೀವನದ ವಿಹಂಗಮ ದೃಷ್ಟಿಗೆ ಅಧೋಮುಖವೂ ಅತ್ಯಗತ್ಯವೆಂಬುವನ್ನು ಒಪ್ಪಲೇಬೇಕು. ನೀನು ಕನಸಿನ ಗೋಪುರದಲ್ಲಿ ಕುಳಿತು ಕಲ್ಪನೆಯ ಆಳತೆಗೋಲಿನಿಂದ ಜಗತ್ತಿನ ವ್ಯಕ್ತಿಗಳ ಸ್ವಭಾವ, ರೀತಿನೀತಿಗಳನ್ನು ಅಳೆಯುವುದಕ್ಕಿಂತಲೂ, ವಾಸ್ತವ ಜಗತ್ತಿಗೆ ಇಳಿದು ಬಂದು, ಇಲ್ಲಿನ ಮಾನ ದಂಡದಿಂದ ಇಲ್ಲಿನ ಜೀವನವನ್ನು ಅಳೆಯುವುದು ಒಳ್ಳೆಯದೆಂದು ನನ್ನ ಹೇಳಿಕೆ. ಇದಕ್ಕೆ ನೀನು ಸಮ್ಮತಿಸಬಹುದು, ಇಲ್ಲದಿರಬಹುದು. ಆದರೆ ಇದು ವಾಸ್ತವ ಸತ್ಯವೆಂಬ ಕಾರಣದಿಂದ ನಿನ್ನ ಮುಂದಿಡುತ್ತಿದ್ದೇನೆ. ನೀನು ಸಿಂಹಾಸನ ತ್ಯಾಗಕ್ಕೆ ನಿರ್ಧರಿಸುವುದಾದರೆ, ಅದರಿಂದ ಉದ್ಭವಿಸುವ ಲೌಕಿಕ ಸಮಸ್ಯೆಗ ಳನ್ನು ವ್ಯಾವಹಾರಿಕ ರೀತಿಯಲ್ಲಿ ವಿಚಾರಮಾಡಿ ಬಗೆಹರಿಸಬೇಕೆಂದು ನನ್ನ ಪ್ರಾರ್ಥನೆ!"

"ನನ್ನ ಸಿಂಹಾಸನ ತ್ಯಾಗ ನೀವು ವ್ಯಾವಹಾರಿಕ ದೃಷ್ಟಿಯಲ್ಲಿ ಅಲೌಕಿಕ ವ್ಯಾಪಾರವೆಂದು ತಿಳಿದಿದ್ದೀರಾ!"

"ಹೌದು ಮಗು, ನನಗೆ ಮಾತ್ರವಲ್ಲ. ಬೀದಿಯಲ್ಲಿ ಆಡುವ ಮಗುವಿಗೂ ಹಾಗೆಯೇ ತೋರುವುದೆಂದು ನನ್ನ ಗ್ರಹಿಕೆ !"

"ನಿಮಗೂ ನನಗೂ ದೃಷ್ಟಿಭೇದವಿರುವಾಗ, ನಮ್ಮಿಬ್ಬರ ವಿಚಾರಗಳಿಗೆ ಹೊಂದಾಣಿಕೆ ಇಲ್ಲ. ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ, ಎಂದು ವಿಷಾದದಿಂದ ಹೇಳಬೇಕಾಗಿದೆ ಅಮಾತ್ಯರೆ !"

"ನೀನು ಹೀಗೆ ಹೇಳಿದಮೇಲೆ ನಾನೇನು ತಾನೆ ಹೇಳಬಲ್ಲೆ ಮಗು ?"

"ಅಮಾತ್ಯರೇ, ನಡೆಯಲು ಕಲಿಯುವ ಮಕ್ಕಳು ಎಡವಿಬೀಳುವ ಸಂಭವ ಹೆಚ್ಚು. ಎಡವಿ ಬೀಳುವ ಸಂಭವ ಹೆಚ್ಚೆಂದು ಮಕ್ಕಳು ನಡೆಯುವುದನ್ನೇ ಬಿಡುವರೇ ? ನಾನು ವಾಸ್ತವ ಜಗತ್ತಿನಲ್ಲಿ ಇನ್ನೂ ನಡಿಗೆ ಕಲಿಯುತ್ತಿರುವ ಮಗು. ನಡೆಯುವಾಗ ಬಿದ್ದೇಳಬಹುದು. ಇದರಿಂದ ಪಾಠ ಕಲಿತಂತೆ ಆಗುವುದೇ ಹೊರತು, ಒಮ್ಮೆಯಾದ ಅನುಭವ ವ್ಯರ್ಥವಾಗುವುದಿಲ್ಲ. ನಾನು ಆದರ್ಶ ಹಾಗೂ ವಾಸ್ತವ ಜಗತ್ತುಗಳಿಗೆ ಸೇತುವೆ ಕಟ್ಟಲು ಯತ್ನಿಸುತ್ತಿರುವುದಾಗಿ ನೀವು ಹೇಳಿದ ಮಾತು, ಅಕ್ಷರಶಃ ಸತ್ಯ. ಆದರ್ಶ ಕೈಗೆ ಎಟುಕುವಂತೆ ಆಗಲು ಅದಕ್ಕೆ ಭದ್ರವಾದ ಬುನಾದಿ ಬೇಕೆಂಬ ಮಾತೂ ನಿಜ. ನಾನು ನೆಲದಮೇಲೆ ನಿಂತು ಅಂತರಿಕ್ಷವನ್ನು ಅಳೆಯುವ ಖಗೋಳಶಾಸ್ತ್ರಜ್ಞನಂತೆ ವಾಸ್ತವ ಜಗತ್ತಿನಲ್ಲಿ ನೀತೇ

ಆದರ್ಶ ಜಗತ್ತಿನ ಹೊಂಗನಸುಗಳನ್ನು ನನಸು ಮಾಡಿಕೊಳ್ಳಬೇಕೆಂದು ಆಶಿಸು ತ್ತಿದ್ದೇನೆ. ನನ್ನ ಪ್ರಯತ್ನ ವಿಫಲವಾಗಬಹುದು, ಸಫಲವಾಗಬಹುದು. ಆದರೆ ವಿಫಲತೆಯ ಹೆದರಿಕೆಯಿಂದ ಪ್ರಯತ್ನವನ್ನು ಮಾತ್ರ ನಿಲ್ಲಿಸಲಾರೆ. ನಾನು ಮಾಡುವ ತ್ಯಾಗ, ನಿಮಗೆ ಆದರ್ಶಲೋಕದ ಗಗನಕುಸುಮ. ನನಗೆ ಅದು ನನಸಾಗಬಹುದಾದ ಉದ್ಯಾನ ಕುಸುಮ. ಆದುದರಿಂದ ನಾನು ನಿರೀಕ್ಷಿಸುವ ಫಲ ನನ್ನ ತ್ಯಾಗದಿಂದ ಉಂಟಾಗುವುದೋ ಇಲ್ಲವೋ, ಆ ಫಲಾಫಲಾಪೇಕ್ಷೆ ನನ್ನನ್ನು ಬಾಧಿಸದು. ತ್ಯಾಗದಿಂದ ಉಂಟಾಗುವ ಅನಿರ್ವಚನೀಯ ಆನಂದದ ಸಲುವಾಗಿ ತಾನು ತ್ಯಾಗ ಮಾಡಬೇಕೆಂದಿದ್ದೇನೆ.ಹಿಂದೆ ಎಂತೆಂತಹಸಾಮ್ರಾಟರು ತಾವು ವೈಭವದಿಂದ ಆಳಿದ ಸಾಮ್ರಾಜ್ಯಗಳನ್ನು ಕ್ಷುಲ್ಲಕ ಕಾರಣಗಳಿಗೆ ಬಿಟ್ಟು ಕೊಟ್ಟು ತಪಸ್ಸಿಗೆ ತೆರಳಲಿಲ್ಲವೇ? ಭರತ ಬಾಹುಬಲಿಯ ಕತೆಯನ್ನು ಕೇಳಿಲ್ಲವೆ? ಸಿಂಹಾಸನದ ಸಲುವಾಗಿ ಹಿರಿಯಣ್ಣನ ಮೇಲೆ ಯುದ್ಧಕ್ಕೆ ಬಂದು ರಣಾಂಗಣ ದಲ್ಲಿ ಗೆದ್ದರೂ ತಾನು ಗೆದ್ದ ರಾಜ್ಯವನ್ನು ಅಣ್ಣನಿಗೆ ಹಿಂದಕ್ಕೆ ಒಪ್ಪಿಸಿ, ರಾಜ್ಯ ಲೋಭಕ್ಕೆ ಹೇಸಿ, ತಪಸ್ಸಿಗೆ ತೆರಳಲಿಲ್ಲವೆ ? ಅಂತಹವರ ತ್ಯಾಗದ ಮುಂದೆ, ನನ್ನ ತ್ಯಾಗ ಕ್ಷುಲ್ಲಕವೆಂದೇ ಹೇಳಬೇಕು. ನೀವು ಅದನ್ನೇ ದೊಡ್ಡದೆಂದು ಹೇಳು ತ್ತಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ" ಎಂದು ಹೇಳಿ ದೀರ್ಘವಾಗಿ ನಿಟ್ಟುಸಿರು ಬಿಟ್ಟನು.

"ಮಗು, ನೀನು ಅತಿಯಾಗಿ ಓದಿ ಕೆಟ್ಟೆ" ಎಂದು ಉದ್ಗಾರ ತೆಗೆದ ಸಮಂತಭದ್ರ.

## ೯

ಪುಲಿಕೇಶಿಯನ್ನು ಒಲಿಸುವುದು ಅಸಾಧ್ಯವೆಂದು ತಿಳಿದಮೇಲೆ ಅಮಾತ್ಯ ಸಮಂತಭದ್ರನಿಗೆ ವಿಷ್ಣುವರ್ಧನನು ಸಿಂಹಾಸನಕ್ಕಾಗಿ ಹಠಹಿಡಿಯದಂತೆ ಮಾಡುವುದೊಂದೇ ಉಳಿದಿದ್ದ ದಾರಿ. ಅವನೂ ಪುಲಿಕೇಶಿಯಂತೆ ತನ್ನ ಮೊಂಡು ಹಠವನ್ನು ಬಿಡದೆ ಇದ್ದರೆ ಪರಿಸ್ಥಿತಿ ಗಂಭೀರವಾಗುವುದೆಂದು ಸಮಂತಭದ್ರನು

ಭಾವಿಸಿದನು. ಏನೇ ಆಗಲಿ, ತಾನು ಬದುಕಿರುವ ತನಕ ಸಿಂಹಾಸನ ಪುಲಿಕೇಶಿಯ ಹೊರತು ಅನ್ಯರ ಪಾಲಾಗಲು ಅವಕಾಶಕೊಡಬಾರದು. ತನ್ನ ಸರ್ವಸ್ವವನ್ನು ಬಲಿ ಕೊಟ್ಟಾದರೂ ಸರಿ, ಸಾಮ್ರಾಜ್ಯದ ದುರಂತವನ್ನು ತಪ್ಪಿಸಬೇಕೆಂದು ಯೋಚಿಸಿ ವಿಷ್ಣುವರ್ಧನನನ್ನು ನೋಡಲು ನಿಶ್ಚಯಿಸಿದನು.

ಆದರೆ ಇದು ಅಷ್ಟು ಸುಲಭವಾಗಿರಲಿಲ್ಲ. ಮಂಗಳೇಶನ ಆಶ್ರಯದಲ್ಲಿದ್ದ ವಿಷ್ಣುವರ್ಧನನನ್ನು ಏಕಾಂತದಲ್ಲಿ ನೋಡಲು ಸಾಧ್ಯವಿರಲಿಲ್ಲ. ಪುಲಿಕೇಶಿಯ ಪಕ್ಷದವರಿಂದ ವಿಷ್ಣುವರ್ಧನನ ಜೀವಕ್ಕೆ ಅಪಾಯ ಬರಬಹುದೆಂದು ಮಂಗಳೇಶನು ವಿಷ್ಣುವಿನ ಮೇಲೆ ಸರ್ಪಕಾವಲು ಹಾಕಿದ್ದನು. ತನ್ನ ಅಪ್ಪಣೆಯಿಲ್ಲದೆ ವಿಷ್ಣುವರ್ಧನನನ್ನು ನೋಡಲು ಅವಕಾಶ ಕೊಡುತ್ತಿರಲಿಲ್ಲ. ಉಳಿದವರ ಮಾತು ಹಾಗಿರಲಿ. ವಿಷ್ಣುವರ್ಧನನನ್ನು ಸಾಕಿ ಸಲುಹಿ ದೊಡ್ಡವನನ್ನಾಗಿ ಮಾಡಿದ ಮಹಾರಾಣಿ ದುರ್ಲಭದೇವಿಗೂ ವಿಷ್ಣುವನ್ನು ನೋಡಲು ಮಂಗಳೇಶನು ಅನುಮತಿಕೊಟ್ಟಿರಲಿಲ್ಲ.

ಆ ದಿನ ದುರ್ಲಭದೇವಿ ಪುಲಿಕೇಶಿಯ ಸಿಂಹಾಸನದ ತ್ಯಾಗದ ನಿರ್ಧಾರವನ್ನು ಕೇಳಿ ಕಂಗೆಟ್ಟು, ಈ ನಿರ್ಧಾರದಿಂದ ಅವನನ್ನು ಹಿಮ್ಮೆಟ್ಟಿಸಲು ಬೇರೆ ದಾರಿ ಕಾಣದೆ, ವಿಷ್ಣುವಿಗೆ ತನ್ನ ಹಠ ಬಿಟ್ಟುಕೊಡಲು, ಅವನನ್ನು ಬೇಡಲು ಮಂಗಳೇಶನ ಅರಮನೆಗೆ ಬಂದಿದ್ದರು. ಮಂಗಳೇಶನು ಅಪರೂಪಕ್ಕೆ ಬಂದ ದುರ್ಲಭದೇವಿಯನ್ನು ವಿಶ್ವಾಸದಿಂದ ಬರಮಾಡಿಕೊಂಡರೂ ಅವರ ಆಕಸ್ಮಿಕ ಆಗಮನ ಅವನನ್ನು ಆಶ್ಚರ್ಯಗೊಳಿಸಿತು.

"ಮಹಾರಾಣಿಯವರು ಅಪರೂಪಕ್ಕೆ ದಯಮಾಡಿಸಿದ್ದಾರೆ..." ಎಂದು ಹೇಳಿ ನಕ್ಕ ಮಂಗಳೇಶ.

"ವಿಷ್ಣುವರ್ಧನನನ್ನು ನೋಡಿ ಬಹಳ ದಿನಗಳಾಯಿತು. ಹಾಗೇ ನೋಡಿಹೋಗಲು ಬಂದೆ."

"ವಿಷ್ಣುವರ್ಧನ ಎಲ್ಲೋ ಗೆಳೆಯರೊಡನೆ ಆಟಕ್ಕೆ ಹೋಗಿರಬೇಕು !" ಎಂದ ಮಂಗಳೇಶ.

"ವಿಷ್ಣುವಿನ ಕೂಡ ಕೊಂಚ ಮಾತನಾಡುವುದಿತ್ತು !"

"ಅದೇನು ಸಂಗತಿ ನನ್ನ ಸಂಗಡಲೇ ಹೇಳಿದರೆ, ವಿಷ್ಣು ಬಂದಮೇಲೆ ತಿಳಿಸುತ್ತೇನೆ."

"ಇಲ್ಲ, ಅವನು ಆಟದಿಂದ ಹಿಂದಿರುಗಿದ ಕೂಡಲೇ ನನ್ನ ಅರಮನೆಗೆ ಕಳುಹಿಸಿಕೊಡಿ, ಅಲ್ಲೇ ಮಾತನಾಡುತ್ತೇನೆ!"

"ವಿಷಯ ಅಷ್ಟು ಮಹತ್ವದ್ದೇ!"

"ಹೌದು!"

"ಆದರೆ...."

"ಏಕೆ ಅನುಮಾನಿಸುತ್ತಿದ್ದೀರಿ?"

"ಮಹಾರಾಣಿಯವರು ನನ್ನ ಮಾತನ್ನು ಅನ್ಯಥಾ ಭಾವಿಸಬಾರದು! ವಿಷ್ಣುವರ್ಧನ ನಿಮ್ಮ ಅರಮನೆಗೆ ಬರಲು ಸಮ್ಮತಿಸಲಾರ!"

"ಏಕೆ?"

"ಅಲ್ಲಿಗೆ ಬಂದರೆ, ತನ್ನ ಜೀವಕ್ಕೆ ಗಂಡಾಂತರಬರಬಹುದೆಂದು ವಿಷ್ಣು ಅಂಜಿದ್ದಾನೆ!"

"ನನ್ನ ಬಳಿಯಲ್ಲೂ ಅವನ ಜೀವಕ್ಕೆ ಗಂಡಾಂತರವೆ?"

"ನಿಮ್ಮನ್ನು ಕಂಡರೆ ಅವನಿಗೆ ಅಂಜಿಕೆಯಿಲ್ಲ, ಮಹಾರಾಣಿಯವರೇ. ಆದರೆ ಅವನಿಗೆ ಇರುವ ಅಂಜಿಕೆ ಪುಲಿಕೇಶಿಯದು! ಅವನನ್ನು ಕಂಡರೆ ಹುಲಿಯನ್ನು ಕಂಡಷ್ಟು ಹೆದರುತ್ತಿದ್ದಾನೆ. ಪುಲಿಕೇಶಿ ಸಿಂಹಾಸನಕ್ಕಾಗಿ ತನ್ನನ್ನು ಕೊಲೆಮಾಡಲೂ ಹೇಸುವುದಿಲ್ಲವೆಂದು ಎಷ್ಟೋ ಬಾರಿ ಹೇಳಿದ್ದಾನೆ. ಹೀಗಿರುವಲ್ಲಿ ಅವನು ಅಲ್ಲಿಗೆ ಬರಲು ಸಮ್ಮತಿಸುವನೆಂಬ ಧೈರ್ಯ ನನಗೆ ಇಲ್ಲ..."

"ಏನು, ಪ್ರಾಣಕ್ಕಿಂತಲೂ ಪ್ರಿಯವಾಗಿ ಪ್ರೀತಿಸುವ ಪುಲಿಕೇಶಿಯಿಂದ ಅವನ ಜೀವಕ್ಕೆ ವಿಪತ್ತು ಬರುವುದೆ? ತಮ್ಮನ ಸಲುವಾಗಿ ಯಾವ ತ್ಯಾಗವನ್ನು ಬೇಕಾದರೂ ಮಾಡಲು ಸಿದ್ಧನಿರುವ ಪುಲಿಕೇಶಿಯಿಂದ ವಿಷ್ಣುವಿಗೆ ಅಪಾಯವೆ?"

"ಈ ಬಗ್ಗೆ ಯಾರೆಷ್ಟು ಹೇಳಿದರೂ ಅವನಿಗೆ ನಂಬಿಕೆಯಿಲ್ಲ ತಾಯಿ."

"ಹಾಗಿದ್ದರೆ, ವಿಷ್ಣು ನಮ್ಮ ಅರಮನೆಗೆ ಬರುವುದು ಬೇಡ. ಅವನು ಆಟದಿಂದ ಹಿಂತಿರುಗಿದ ಕೂಡಲೇ ನನಗೆ ಸುದ್ದಿ ಕಳುಹಿಸಿ ಕೊಡಿ. ನಾನೇ ಬಂದು ನೋಡುತ್ತೇನೆ!"

"ಹಾಗೇ ಆಗಲಿ ತಾಯಿ!" ಎಂದು ಮಂಗಳೇಶನು ಹೇಳಿದ್ದರೂ ವಿಷ್ಣುವನ್ನು ದುರ್ಲಭದೇವಿಯು ನೋಡುವುದು ಅವನಿಗೆ ಇಷ್ಟವಿರಲಿಲ್ಲ. ಅಂತಲೇ ಅವನು ವಿಷ್ಣು ಅರಮನೆಯಲ್ಲಿ ಇದ್ದರೂ ಭೇಟಿಗೆ ಅವಕಾಶ ಕೊಟ್ಟಿರಲಿಲ್ಲ.

ಮತ್ತೆ ಬರುವುದಾಗಿ ಹೇಳಿ ಹೋಗಿದ್ದ ದುರ್ಲಭದೇವಿಯೂ ವಿಷ್ಣುವನ್ನು ನೋಡಲು, ಬಂದಿರಲಿಲ್ಲ. ತಮ್ಮ ಬಳಿ ಬಂದರೆ ಅಪಾಯವೆಂದು ತಿಳಿದಿರುವ ವಿಷ್ಣು ಇನ್ನು ತಮ್ಮ ಮಾತನ್ನು ಕೇಳುವನೆಂಬ ಭರವಸೆಯಾದರೂ ಎಲ್ಲಿ? ಅವನನ್ನು ಕಂಡು ಮಾತನಾಡಿ ಪ್ರಯೋಜನವಿಲ್ಲವೆಂದು ಅವರು ವಿಷ್ಣುವರ್ಧನ ನನ್ನು ನೋಡಲಿಚ್ಛಿಸಿರಲಿಲ್ಲ.

ವಸ್ತುಸ್ಥಿತಿ ಹೀಗಿರುವಾಗ, ವಿಷ್ಣುವರ್ಧನನು ಸಮಂತಭದ್ರನಿಗೆ ಏಕಾಂತ ವಾಗಿ ದೊರಕುವುದಾದರೂ ಹೇಗೆ?

ಆದರೂ ಸಮಂತಭದ್ರನು ಹತಾಶನಾಗಲಿಲ್ಲ. ಸಮಯ ಸಾಧಿಸಿ ವಿಷ್ಣು ವರ್ಧನನು ಒಬ್ಬನೇ ಇರುವ ಸುಸಂಧಿಯನ್ನು ಸಾಧಿಸಿ, ಅವನೊಡನೆ ಮಾತು ತೆಗೆದನು :

"ಮಗು, ವಿಷ್ಣುವರ್ಧನ, ನಿನ್ನೊಡನೆ ಒಂದು ಮಹತ್ವದ ವಿಷಯ ಮಾತನಾಡಲು ಬಂದಿದ್ದೇನೆ. ನೀನೇಕೆ ಮಹಾರಾಣಿಯವರ ಅಂತಃಪುರವನ್ನು ಬಿಟ್ಟು ಮಂಗಳೇಶರ ಆಶ್ರಯಕ್ಕೆ ಬಂದೆ ಎಂಬುದು ನನಗೆ ಇನ್ನೂ ಸಮಸ್ಯೆ ಯಾಗಿದೆ. ನಿನ್ನ ಮೇಲೆ ಪ್ರಾಣವಿಟ್ಟುಕೊಂಡಿದ್ದ ನಿನ್ನ ಅಜ್ಜಿ ಇದೇ ಕೊರಗಿ ನಿಂದ ಹಾಸಿಗೆ ಹಿಡಿದಿದ್ದಾರೆ. ಒಮ್ಮೆಯಾದರೂ ಅವರನ್ನು ನೋಡಲು ಬರ ಬಾರದೆ? ಅವರು ನಿನಗೆ ಮಾಡಿರುವ ಅಪರಾಧವಾದರೂ ಏನು?"

"ಅವರು ಮಾಡಿದ ಅಪರಾಧವೆ? ನಾನು ಅಲ್ಲಿ ಹೆಚ್ಚು ಕಾಲ ಇದ್ದಿದ್ದರೆ, ಅವರು ನನ್ನ ಪ್ರಾಣಕ್ಕೇ ಸಂಚಕಾರ ತರುತ್ತಿದ್ದರು! ಅಷ್ಟರಲ್ಲಿ ನಾನು ಎಚ್ಚತ್ತುಕೊಂಡು ಅಪಾಯದಿಂದ ಪಾರಾದೆ."

"ಮಗು, ನಿನ್ನ ಅಜ್ಜಿಯ ಮೇಲೆ ಎಂತಹ ಆರೋಪ ಹೊರಿಸುತ್ತಿದ್ದೀಯೆ! ನಿನ್ನನ್ನು ಹದಿನೇಳುವರ್ಷಕಾಲ ಸಾಕಿಸಲಹಿದ ಅಜ್ಜಿಯವರು ನಿನ್ನ ಜೀವಕ್ಕೆ ಗಂಡಾಂತರ ತರುತ್ತಿದ್ದರೆ? ಎಂತಹ ಮಾತನಾಡುವೆ ಮಗು? ಯಾರೋ ದ್ರೋಹಿಗಳ ಮಾತು ಕೇಳಿಕೊಂಡು ಅವರ ವಿಷಯದಲ್ಲಿ ನೀನು ವೃಥಾ ಸಂಶಯ ಹೊಂದಿರುವೆ ಅಷ್ಟೇ. ನಿನ್ನ ಅಜ್ಜಿ ಎಷ್ಟು ಒಳ್ಳೆಯವರೆಂದು ನೀನು ಕಾಣೆಯಾ? ನೀನು ಹೊರಟುಹೋದ ಮೇಲೆ ನಿನ್ನ ಯೋಚನೆಯಲ್ಲಿ ಅವರು ಅನ್ನನಿದ್ರೆ ಗಳನ್ನು ಬಿಟ್ಟಿದ್ದಾರೆ. ಇಂತಹವರ ಮೇಲೆ ಕೊಲೆಯ ಆರೋಪ ಹೊರೆಸು ತ್ತಿರುವೆಯಾ?"

"ನನ್ನ ವಿಷಯದಲ್ಲಿ ಅವರಿಗೆ ಇರುವ ಪ್ರೀತಿ ಎಷ್ಟೆಂದು ನನಗೆ ತಿಳಿದಿದೆ ಅಮಾತ್ಯರೇ ! ಅವರಿಗೆ ನನ್ನ ವಿಷಯದಲ್ಲಿ ಮೊದಲಿನಿಂದ ಪ್ರೀತಿ ಇಲ್ಲ; ಅವರು ಪುಲಿಕೇಶಿಯ ಅಭಿಮಾನಿಗಳು. ಅವನಿಗೇ ಸಿಂಹಾಸನವನ್ನು ದೊರಕಿಸಿಕೊಟ್ಟು, ಅವನ ಹೆಸರಿನಲ್ಲಿ ತಾವೇ ಆಳಲು ನೋಡುತ್ತಿದ್ದಾರೆ. ಇಂಥವರು ನನ್ನನ್ನು ಪ್ರೀತಿಸುವರೆ ? ನನಗೆ ಅವರ ನಿಜವಾದ ಸ್ವರೂಪ ತಿಳಿದಿದೆ. ನಾನು ಅವರ ಬಣ್ಣದ ಮಾತುಗಳಿಗೆ ಬೆರಗಾಗುವುದಿಲ್ಲ !"

"ಅವರು ನಿಮಗೆ ಬಗೆದ ದ್ರೋಹವಾದರೂ ಏನು ?"

"ಸಿಂಹಾಸನದಲ್ಲಿ ಪಾಲು ಕೇಳಿದವನನ್ನು ಮೋಸದಿಂದ ಗುರುಕುಲಕ್ಕೆ ಅಟ್ಟಲು ನೋಡಿದರು. ನಾನು ವಿರೋಧಿಸಿದಾಗ, ನನ್ನನ್ನು ಪಾಠಪ್ರವಚನಗಳ ನೆಪದಲ್ಲಿ, ಅರಮನೆಯಲ್ಲಿ ಸೆರೆಯಲ್ಲಿಟ್ಟರು. ಸಿಂಹಾಸನದ ಮೇಲೆ ಕಣ್ಣಿಟ್ಟಿರುವ ಅವರು ನಮ್ಮನ್ನು ಕೊಲೆಮಾಡಲೂ ಹೇಸುತ್ತಿರಲಿಲ್ಲ ! ಆದರೆ ಚಿಕ್ಕಪ್ಪಾಜಿ ಯವರು ಸಕಾಲದಲ್ಲಿ ನನ್ನ ನೆರವಿಗೆ ಬಂದರು. ಇಲ್ಲದೇ ಇದ್ದರೆ ನನ್ನ ಕತೆ ಎಂದೋ ಪೂರೈಸುತ್ತಿತ್ತು !"

"ಮಗು, ಎಂತಹ ಹುಚ್ಚು ಮಾತು ನಿನ್ನದು ! ತಮ್ಮದಾದ ಸಿಂಹಾಸನ ವನ್ನು ಪಡೆಯಲು ಅವರು ನಿನ್ನನ್ನು ಕೊಲೆ ಮಾಡಬೇಕೆ ? ಎಂತಹ ಹುಚ್ಚು ಕಲ್ಪನೆ ನಿನ್ನದು ! ಸಿಂಹಾಸನ ಎಂದಿದ್ದರೂ ಪುಲಿಕೇಶಿಯದು. ಅದಕ್ಕೆ ಅವನೇ ನ್ಯಾಯವಾದ ಹಕ್ಕುದಾರ ! ತನ್ನದಾಗುವ ಸಿಂಹಾಸನಕ್ಕಾಗಿ ನಿನ್ನ ವಿರುದ್ಧ ಕತ್ತಿ ಕಟ್ಟುವ ಅಗತ್ಯವಾದರೂ ಏನು ? ನಿನ್ನ ಪ್ರಾಣಕ್ಕೆ ಗಂಡಾಂತರ ತರಲು ಕಾರಣವಾದರೂ ಎಲ್ಲಿದೆ ? ಅಯ್ಯೋ ಹುಚ್ಚಪ್ಪಾ, ಯಾರೋ ನಿನ್ನ ತಲೆಯಲ್ಲಿ ಇಲ್ಲದ ಸಲ್ಲದ ಕಲ್ಪನೆಗಳನ್ನು ತುಂಬಿದ್ದಾರೆ. ನಿನ್ನ ನೆರಳಿಗೆ ನೀನೇ ಅಂಜುವಂತೆ ಮಾಡಿದ್ದಾರೆ ! ಎಲ್ಲಾದರೂ ಕಿರಿಯಮಗನಿಗೆ ಸಿಂಹಾಸನ ದೊರೆಯುವುದುಂಟೆ? ನಿನ್ನ ಮಾತು ಕೇಳಿ ಯಾರಾದರೂ ನಕ್ಕಾರು, ಇಂತಹ ಮಾತನ್ನು ಯಾರ ಮುಂದೆಯೂ ಹೇಳಬೇಡ. ನಿನಗೆ ತಲೆ ಕೆಟ್ಟಿದೆ ಎಂದು ತಿಳಿದಾರು !" ಎಂದು ಪರಿಹಾಸ್ಯಮಿಶ್ರಿತಧ್ವನಿಯಲ್ಲಿ ಹೇಳಿದ ಸಮಂತಭದ್ರ.

"ನಾನು ಹೇಳುವುದರಲ್ಲಿ ತಪ್ಪೇನಿದೆ ಅಮಾತ್ಯರೇ, ನಾನು ಕಿರಿಯಮಗ ನಾದ ಮಾತ್ರಕ್ಕೆ ಸಿಂಹಾಸನದಲ್ಲಿ ಹಕ್ಕು ಏಕೆ ಇಲ್ಲ? ಪುಲಿಕೇಶಿ ಸಾಮ್ರಾಟನಾಗ ಬಹುದಾದರೆ, ನಾನೇಕೆ ಆಗಬಾರದು ! ಅವನಿಗೆ ಇರುವ ಅರ್ಹತೆ ಏನು,

ನನಗಿರುವ ಅನರ್ಹತೆ ಏನು ? ನಾನೂ ಅವನಂತೆ, ಸಾಮ್ರಾಟ ಕೀರ್ತಿವರ್ಮರ ಹೊಟ್ಟೆಯಲ್ಲಿ ಹುಟ್ಟಿಲ್ಲವೆ ?"

"ನೀನು ಗತಿಸಿದ ಸಾಮ್ರಾಟರ ಹೊಟ್ಟೆಯಲ್ಲಿ ಹುಟ್ಟಿರಬಹುದು, ಆದರೆ, ಪವಿತ್ರವಾದ ಸಿಂಹಾಸನದ ಹಕ್ಕು ಇರುವುದು ಹಿರಿಯ ಮಗನಿಗೆ ಮಾತ್ರ. ಇದು ಹಿಂದಿನಿಂದ ನಡೆದು ಬಂದಿರುವ ಸಂಪ್ರದಾಯ ಮಾತ್ರವಲ್ಲ, ಇದಕ್ಕೆ ಶಾಸ್ತ್ರಾಧಾರವಿದೆ !"

"ಜ್ಯೇಷ್ಠೋಲ್ಲಂಘನೆಗೂ ಶಾಸ್ತ್ರಾಧಾರವಿರುವುದಾಗಿ ಚಿಕ್ಕಪ್ಪಾಜಿಯವರು ಹೇಳುತ್ತಿದ್ದಾರಲ್ಲಾ....!"

"ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ. ಆದರೆ, ಪುಲಿಕೇಶಿ ಎಲ್ಲ ರೀತಿಯಲ್ಲಿ ಸಾಮ್ರಾಟನಾಗಲು ಅರ್ಹತೆಯನ್ನು ಪಡೆದಿದ್ದಾನೆ. ಅಲ್ಲದೆ ಅವನು ಪ್ರಜೆಗಳ ಪ್ರೀತಿವಿಶ್ವಾಸಗಳನ್ನು ಗಳಿಸಿದ್ದಾನೆ. ನಿನಗೆ ಅಧಿಕಾರಪದವಿಗಳ ಆಸೆ ಇದ್ದರೆ, ನೀನು ಹಿಡಿದಿರುವ ದಾರಿ ಸರಿಯಲ್ಲ. ನೀನು ನಿನ್ನ ಮೊಂಡುಹಠವನ್ನು ಬಿಟ್ಟುಕೊಟ್ಟು, ನಮ್ಮ ಇಚ್ಛೆಯಂತೆ ನಡೆಯುವುದಾದರೆ, ಸಾಮ್ರಾಟಪದವಿಗೆ ಯಾವ ರೀತಿಯಲ್ಲೂ ಕಡಿಮೆ ಇಲ್ಲದ ಯುವರಾಜಪದವಿ ನಿನ್ನದಾಗುವುದು. ಇಂದು ದುಡುಕಿ ನಾಳೆ ಆ ಪದವಿಯನ್ನೂ ಕಳೆದುಕೊಳ್ಳುವುದು ವಿವೇಕಿಗಳ ಲಕ್ಷಣವಲ್ಲ. ನೀನು ನಮ್ಮ ಮಾತು ಕೇಳು, ಇದರಲ್ಲಿ ನಿನಗೆ ಶ್ರೇಯಸ್ಸಿದೆ !"

"ನನ್ನ ಹಿತೈಷಿಗಳಾರು, ಹಿತಶತ್ರುಗಳಾರು ಎಂಬುದು ನನಗೆ ಚೆನ್ನಾಗಿ ತಿಳಿದಿದೆ ಅಮಾತ್ಯರೇ. ನಾನು ಪುಲಿಕೇಶಿಯ ಕೈಕೆಳಗೆ ಯುವರಾಜನಾಗುವುದಕ್ಕಿಂತಲೂ, ನಿರ್ಗತಿಕನಾಗುವುದು ಲೇಸು ! ನನಗೆ ಬೇಕಿರುವುದು ಸಾಮ್ರಾಟಪದವಿಯೇ ಹೊರತು ಯುವರಾಜ ಪದವಿಯಲ್ಲ !"

"ಪುಲಿಕೇಶಿಯ ಕೈಕೆಳಗೆ ಯುವರಾಜನಾದ ಮಾತ್ರಕ್ಕೆ ನಿನ್ನ ಘನತೆ ಗೌರವಗಳಿಗೆ ಕುಂದೆಂದು ಬಗೆದಿರುವೆಯಾ ?"

"ನಾನು ಘನತೆ ಗೌರವಗಳ ಆಶೆಗೆ ಬಲಿಯಾಗಿ, ಪ್ರಾಣಕ್ಕೆ ಅಪಾಯ ತಂದುಕೊಳ್ಳುವುದೆ ?"

"ಪುಲಿಕೇಶಿಯಿಂದ ಪ್ರಾಣಕ್ಕೆ ಅಪಾಯವೆಂದು ನೀನೇಕೆ ತಿಳಿಯಬೇಕು ? ಅವನು ನಿನ್ನನ್ನು ಎಷ್ಟು ಪ್ರೀತಿಸುತ್ತಾನೆಂಬುದು ನಿನಗೆ ತಿಳಿದಿದ್ದರೆ, ಈ ಮಾತನ್ನು ಹೇಳುತ್ತಿರಲಿಲ್ಲ !"

"ನನ್ನನ್ನು ಅವನು ಎಷ್ಟು ಪ್ರೀತಿಸುತ್ತಾನೆಂಬುದು ನನಗೆ ತಿಳಿದಿದೆ_ ಕಟುಕನು ತನ್ನ ಕುರಿಮರಿಯನ್ನು ಪ್ರೀತಿಸುವಂತೆಯೇ ಅವನು ನನ್ನನ್ನು ಪ್ರೀತಿಸುತ್ತಿದ್ದಾನೆ. ನಾಳೆ ಅಧಿಕಾರಕ್ಕೆ ಬಂದಕೂಡಲೇ ನನ್ನ ತಲೆಯನ್ನು ಕತ್ತರಿಸುತ್ತಾನೆ. ಅವನಿಗೆ ನಾನು ಅಷ್ಟು ಅಂಜದಿದ್ದರೆ, ನಾನೇಕೆ ಅಜ್ಜಿಯವರ ಆಶ್ರಯಬಿಟ್ಟು ಬರುತ್ತಿದ್ದೆ ? ನಾನೇಕೆ ಅನಾಯಾಸವಾಗಿ ದೊರೆಯಬಹುದಾಗಿದ್ದ ಯುವರಾಜಪದವಿಯನ್ನು ತಿರಸ್ಕರಿಸಿ ಸ್ವತಂತ್ರ ಸಾಮ್ರಾಟನಾಗಲು ಬಯಸುತ್ತಿದ್ದೆ ?"

"ನಿನಗೆ ಪುಲಿಕೇಶಿಯ ವಿಷಯದಲ್ಲಿ ದ್ರೋಹಿಗಳು ಯಾರೋ ಇಲ್ಲದ ಸಂದೇಹ, ಭೀತಿಗಳನ್ನು ತುಂಬಿದ್ದಾರೆ. ನೀನು ಸ್ವಾರ್ಥ ಸಾಧಕರ ಮಾತು ಕೇಳಬೇಡ. ನನ್ನ ಮಾತನ್ನು ನಂಬು. ಪುಲಿಕೇಶಿಯಿಂದ ನಿನ್ನ ಕೂದಲೂ ಕೊಂಕಾಗದಂತೆ ನಾನು ನೋಡಿಕೊಳ್ಳುತ್ತೇನೆ. ಬೇಕಿದ್ದರೆ ಶ್ರೀಮಕುಟೇಶ್ವರನ ಆಣೆಯಿಟ್ಟು ವಚನಕೊಡುತ್ತೇನೆ. ನಿನಗೆ ರಾಜಧಾನಿಯಲ್ಲಿರುವುದು ಅಪಾಯವೆನಿಸಿದರೆ, ನಿನಗೆ ಇಷ್ಟಬಂದ ಪ್ರಾಂತ್ಯಕ್ಕೆ ಮಾಂಡಲೇಶ್ವರನಾಗಿ ನೇಮಿಸುತ್ತೇನೆ. ನೀನು ಒಳಾಡಳಿತದಲ್ಲಿ ಸ್ವತಂತ್ರ ಸಾಮ್ರಾಟನಂತೆಯೇ ಮೆರೆಯಬಹುದು. ಕೇವಲ ಪುಲಿಕೇಶಿಯ ಅಂಕಿತವನ್ನು ಒಪ್ಪಿಕೊಂಡ ಮಾತ್ರಕ್ಕೆ ನೀನು ಅವನ ಸೇವಕನಾಗುವುದಿಲ್ಲ. ಸ್ವತಂತ್ರ ಸಾಮ್ರಾಟನ ಘನತೆ ಗೌರವಗಳಿಂದ ನೀನು ನಿನ್ನ ರಾಜ್ಯವನ್ನು ಇಷ್ಟಬಂದಂತೆ ಆಳಬಹುದು."

"ನನಗೆ ಬೇಕಾಗಿರುವುದು ಮಾಂಡಲೇಶ್ವರ ಪದವಿಯಲ್ಲ, ಸಾಮ್ರಾಟ ಪದವಿ !"

"ನೀನು ಸಾಮ್ರಾಟನಾಗಲು ಈ ಜನ್ಮದಲ್ಲಿ ಸಾಧ್ಯವಿಲ್ಲ. ವೃಥಾ ಏಕೆ ಹಠಮಾಡುತ್ತಿರುವೆ ? ಇದರಿಂದ ಯಾವ ಪ್ರಯೋಜನವೂ ಇಲ್ಲ. ಒಂದು ವೇಳೆ ನೀನು ಸಾಮ್ರಾಟನಾದರೂ, ಆ ಪದವಿಯನ್ನು ಉಳಿಸಿಕೊಳ್ಳಲಾರೆ ! ನನ್ನ ಮಾತನ್ನು ಕೇಳು. ಇದರಿಂದ ನಿನಗೂ ಕ್ಷೇಮ, ಸಾಮ್ರಾಜ್ಯಕ್ಕೂ ಕ್ಷೇಮ."

"ಸಾಮ್ರಾಜ್ಯವನ್ನು ಪುಲಿಕೇಶಿಯು ಆಳಬಲ್ಲವನಾದರೆ, ನಾನೇಕೆ ಆಳಲಾರೆ ? ಪುಲಿಕೇಶಿಗೆ ಕೊಡುವಂತೆ, ಸಾಮ್ರಾಟನಾಗಲು ನನಗೂ ಒಂದು ಅವಕಾಶ ಕೊಟ್ಟು ನೋಡಿ !"

"ಇಷ್ಟಬಂದವರಿಗೆಲ್ಲ ಅವಕಾಶ ಕೊಟ್ಟು ನೋಡಲು ಅರಸೊತ್ತಿಗೆ ಏನು

ಮಠದ ಗದ್ದುಗೆಯಲ್ಲ. ವಂಶಪಾರಂಪರ್ಯವಾಗಿ ನಡೆದು ಬಂದ ಪವಿತ್ರ ಸಿಂಹಾಸನ ದಲ್ಲಿ ನಿಜವಾದ ಉತ್ತರಾಧಿಕಾರಿಗಳಲ್ಲದೆ, ಅನ್ಯರು ಶೋಭಿಸುವುದನ್ನು ಜನತೆ ಸಹಿಸುವುದಿಲ್ಲ; ಸಾಮ್ರಾಜ್ಯನಿಷ್ಠ ಸೇವಕರು ಸಹಿಸುವುದಿಲ್ಲ. ಇಂದು ನೀನು ಸಿಂಹಾಸನಕ್ಕಾಗಿ ಹಠ ಹಿಡಿದರೆ, ನಾಳೆ ಜನತೆಯ ಕಣ್ಣಿನಲ್ಲಿ ಅಪರಾಧಿಯಾಗಿ ನ್ಯಾಯಾಲಯದಲ್ಲಿ ನಿಲ್ಲಬೇಕಾದ ಪ್ರಸಂಗ ಬರಬಹುದು ! ಜನತೆಯ ಸೈರಣೆಗೂ ಮಿತಿ ಇದೆ. ಅದು ತನ್ನ ಅಭೀಷ್ಟ ಸಾಧನೆಗೆ ಅಡ್ಡಬರುವ ವ್ಯಕ್ತಿಗಳನ್ನಾಗಲೀ ಶಕ್ತಿಗಳನ್ನಾಗಲೀ ನೋಡುವುದಿಲ್ಲ. ಜನತೆಯ ಅಸಂತುಷ್ಟಿಗೆ ಸಿಕ್ಕಿ ನೀನು ವೃಥಾ ಕಾರಣಕ್ಕಾಗಿ ಹುತಾತ್ಮನಾಗಬಾರದೆಂದೇ ಇಷ್ಟೆಲ್ಲ ಎಚ್ಚರಿಕೆಯ ಮಾತು ಹೇಳಬೇಕಾಯಿತು. ಇನ್ನು ನೀನು ನಿನ್ನ ಮೊಂಡುಹಠಬಿಡದೆ ಇದ್ದರೆ, ಅದರ ಪರಿಣಾಮ ಅನುಭವಿಸಬೇಕಾಗಿ ಬರುತ್ತದೆ."

"ನೀವು ನನ್ನನ್ನು ಹೆದರಿಸಿ, ಕಾರ್ಯ ಸಾಧಿಸಲು ಬಂದಂತಿದೆ. ಆದರೆ ಅದಕ್ಕೆಲ್ಲ ಸೊಪ್ಪು ಹಾಕುವವನು ವಿಷ್ಣುವಲ್ಲ, ಅಮಾತ್ಯರೇ !" ವಿಷ್ಣು ನಿಷ್ಠುರ ವಾಗಿ ಹೇಳಿದ.

"ನಾನು ಹೆದರಿಸಲು ಬಂದವನಲ್ಲ, ಕುಮಾರ ! ಬುದ್ಧಿ ಹೇಳಲು ಬಂದವನು. ದುಡುಕಿ ನಾಳೆ ಅದಕ್ಕಾಗಿ ಪಶ್ಚಾತ್ತಾಪಪಡಬಾರದೆಂದು ಇಷ್ಟೆಲ್ಲ ಹೇಳಬೇಕಾಯಿತು. ನೀನು ನಿನ್ನ ಹಠವನ್ನು ಬಿಡದೆ ಇದ್ದರೆ, ಅದನ್ನು ಬಲಾ ತ್ಕಾರದಿಂದ ಬಿಡಿಸಬೇಕಾದ ಕಹಿಪ್ರಸಂಗ ಬರುವುದನ್ನು ತಪ್ಪಿಸಲು ಇಷ್ಟೆಲ್ಲಾ ಹೇಳಬೇಕಾಯಿತು, ಅಷ್ಟೆ !"

"ನೀವು ಒತ್ತಾಯದಲ್ಲಿ ವಿಷ್ಣುವಿನ ಒಪ್ಪಿಗೆಯನ್ನು ಪಡೆಯಲಾರಿರಿ. ಪ್ರಾಣಹೋದರೂ ಸರಿ ! ಪುಲಿಕೇಶಿ ಸಾಮ್ರಾಟನಾಗುವುದನ್ನು ವಿರೋಧಿಸು ತ್ತೇನೆ! ನನ್ನ ಹಕ್ಕುಸಾಧನೆಗಾಗಿ ಹೋರಾಡುತ್ತೇನೆ. ಈ ಕಾರ್ಯದಲ್ಲಿ ಅಸು ವನ್ನು ನೀಗುವೆನೇ ಹೊರತು, ಆತ್ಮ ಒಪ್ಪದ ಕಾರ್ಯಕ್ಕೆ ಒಪ್ಪಲಾರೆ. ಅನ್ಯಾಯಕ್ಕೆ ಮಣಿಯಲಾರೆ ! ಈ ಮಾತನ್ನು ನೀವೂ ತಿಳಿದಿರುವುದು ಒಳ್ಳೆ ಯದು ಅಮಾತ್ಯರೇ."

"ಹಾಗಾದರೆ ನೀನು ಸಿಂಹಾಸನದ ಸಲುವಾಗಿ ಹೋರಾಡಲು ನಿಶ್ಚಯಿ ಸಿರುವೆ ಎಂದಾಯಿತು !"

"ಹೌದು. ಪ್ರಾಣಹೋದರೂ ಹಿಡಿದ ಛಲವನ್ನು ಬಿಡಲಾರೆ."

"ಹಾಗಾದರೆ, ಮಂಗಳೇಶನ ಬೋಧನೆ ಚೆನ್ನಾಗಿ ಆಗಿದೆ ! ಇಲ್ಲದೆ ಇದ್ದರೆ ನಿನಗೆ ಇಷ್ಟು ಧೈರ್ಯಬರುತ್ತಿತ್ತೆ ? ಆದರೂ ಈ ಮಾತನ್ನು ನೆನಪಿನಲ್ಲಿಡು ಕುಮಾರ ವಿಷ್ಣುವರ್ಧನ ! ಸಿಂಹಾಸನದ ಸಲುವಾಗಿ ಹೋರಾಡಲು ನಿಶ್ಚಯಿಸಿದ್ದರೆ, ಮೊದಲು ನನ್ನನ್ನು, ಅನಂತರ ನಿನ್ನ ಅಬ್ಬೆಯನ್ನು ಅನಂತರ ನನ್ನಂತಹ ಸಹಸ್ರಾರು ಸ್ವಾಮಿನಿಷ್ಠ ಸೇವಕರನ್ನು ಕೊಂದು ಸಿಂಹಾಸನವನ್ನೇರಬೇಕಾಗುತ್ತದೆ. ನಾವು ಬದುಕಿರುವ ತನಕ, ಪವಿತ್ರವಾದ ಸಿಂಹಾಸನ ನಿನ್ನಿಂದ ಅಪವಿತ್ರವಾಗಲು ಬಿಡುವುದಿಲ್ಲ ! ಈ ಮಾತು ಸತ್ಯ ಯಾವುದನ್ನೂ ಯೋಚಿಸಿ, ನಿಧಾನವಾಗಿ ನನಗೆ ತಿಳಿಸು ! ನಾನಿನ್ನು ಬರುತ್ತೇನೆ !" ಎಂದು ಹೇಳಿ ಬಿರುಗಾಳಿಯ ವೇಗದಲ್ಲಿ ಅಲ್ಲಿಂದ ಸಮಂತಭದ್ರ ಹೊರಟು ಹೋದನು.

ವಿಷ್ಣುವರ್ಧನ ಅವನು ಕೊಟ್ಟ ಕೊನೆಯ ಎಚ್ಚರಿಕೆಯನ್ನು ಕೇಳಿ ದಂಗುಬಡಿದು ಬಹಳಹೊತ್ತು ಹಾಗೆಯೇ ಕುಳಿತಿದ್ದ. ಗೆಳೆಯರು ಬಂದು ಎಚ್ಚರಿಸಿದಾಗಲೇ, ಎಚ್ಚರ !

ವಿಷ್ಣುವರ್ಧನ ಅರಮನೆಗೆ ಹಿಂತಿರುಗಿ ನಡೆದ ಸಂಗತಿಯನ್ನೆಲ್ಲಾ ಮಂಗಳೇಶನಿಗೆ ಹೇಳಿದ.

"ಈಗೇನು ಮಾಡುವುದು ಅಪ್ಪಾಜಿ ? ಆ ಪಿಶಾಚಿ ಸಮಂತಭದ್ರ ಏನೇನೋ ಹೇಳಿಹೋಗಿದ್ದಾನೆ. ನೆನೆದರೆ, ಯಾಕೋ ಹೆದರಿಕೆಯಾಗುತ್ತದೆ. ನಾನು ಹಿಡಿದ ಹಠದಿಂದ ಇಷ್ಟೆಲ್ಲ ಹತ್ಯಾಕಾಂಡ ನಡೆಯುವುದಾದರೆ, ನಾನು ರಾಜ್ಯಕೋಶಗಳನ್ನು ತೊರೆದು ಎಲ್ಲಾದರೂ ಹೊರಟುಹೋಗುತ್ತೇನೆ. ನನ್ನೊಬ್ಬನ ಸಲುವಾಗಿ ನೀವು ಇಷ್ಟೊಂದು ಜನರ ದ್ವೇಷ ಕಟ್ಟಿಕೊಳ್ಳುವುದು ನನಗೆ ಇಷ್ಟವಿಲ್ಲ—ಇಷ್ಟೊಂದು ಜನ ನಿರಪರಾಧಿಗಳ ರಕ್ತ ಹರಿಯುವುದು ಬೇಕಿಲ್ಲ ! ನಾನು ಎಲ್ಲಾದರೂ ಹೊರಟು ಹೋಗುತ್ತೇನೆ. ಪುಲಿಕೇಶಿಯೇ ರಾಜನಾಗಿ ಸುಖವಾಗಿರಲಿ !" ಎಂದು ಆತಂಕಗೊಂಡ ಧ್ವನಿಯಲ್ಲಿ ವಿಷ್ಣುವರ್ಧನ ಹೇಳಿದ.

"ಮಗು ವಿಷ್ಣು, ನೀನು ಸಮಂತಭದ್ರನ ಮಾತುಗಳನ್ನು ಲಕ್ಷಿಸಬೇಡ. ಅವನು ನಿನ್ನನ್ನು ಹೆದರಿಸಲು ಹಾಗೆ ಹೇಳಿದ್ದಾನೆ. ಪುಲಿಕೇಶಿಯ ಪಕ್ಷದಲ್ಲಿ ಯಾರಿದ್ದಾರೆಂದು ತಿಳಿದಿರುವೆ ? ಆ ನಿನ್ನ ಅಬ್ಬೆ, ಈ ಸಮಂತಭದ್ರ, ಆ ಎರಪ್ಪ ದಂಡನಾಯಕ, ಅಷ್ಟೆ ! ಪುಲಿಕೇಶಿಯ ಪಕ್ಷದವರು ಬೆರಳಿನಲ್ಲಿ ಎಣಿಸಬಹು

ದಾದಷ್ಟು ಕಡಿಮೆ ಸಂಖ್ಯೆಯಲ್ಲಿದ್ದಾರೆ. ಅರಮನೆಯಲ್ಲೂ, ಆಸ್ಥಾನದಲ್ಲೂ, ಸೈನ್ಯದಲ್ಲೂ, ರಾಜ್ಯದ ಪ್ರಮುಖ ಹುದ್ದೆಗಳಲ್ಲೂ ನಮ್ಮ ಪಕ್ಷದವರೇ ತುಂಬಿದ್ದಾರೆ. ಅಲ್ಲದೆ, ಸಮಯಕ್ಕೆ ಕೈಗಾವಲಿಗೆ ಇರಲೆಂದು, ನಾನು ರಾಹಪ್ಪಯ್ಯನ ನೇತೃತ್ವದಲ್ಲಿ ಒಂದು ಸ್ವಂತ ಸೈನ್ಯ ಸಜ್ಜುಗೊಳಿಸುತ್ತಿದ್ದೇನೆ. ನಾಳೆ ಆಜ್ಞೆ ಮಾಡಿದರೆ, ಪುಲಿಕೇಶಿಯನ್ನೂ ಆ ನಿನ್ನ ಅಬ್ಬೆ ಸಮಂತಭದ್ರರನ್ನೂ ಸೆರೆಹಿಡಿದು ತಂದು ನಿನ್ನ ಕಾಲಮೇಲೆ ಕೆಡಹುತ್ತಾರೆ. ಒಂದು ಮಾತಿನಲ್ಲಿ ಹೇಳುವುದಾದರೆ, ನಿನ್ನ ಅಬ್ಬೆ, ಹಾಗೂ ಪುಲಿಕೇಶಿ ತಮ್ಮ ಅರಮನೆಯಲ್ಲೇ ನಿರ್ಬಂಧದಲ್ಲಿ ಇದ್ದಾರೆ. ನಾನು ಕಣ್ಸಂಜ್ಞೆಮಾತ್ರದಿಂದ, ಅವರ ಅರಮನೆಯನ್ನು ಸೆರೆಮನೆಯಾಗಿ ಮಾರ್ಪಡಿಸಬಲ್ಲೆ ! ಇನ್ನು ಸಮಂತಭದ್ರ ! ಅದೊಂದು ಮುದಿಹದ್ದು ! ಅವನ ಕಡೆಯವರು ಸೈನ್ಯದಲ್ಲಿ ಕೆಲವರು ಇದ್ದಾರೆ. ಆದರೇನು ! ಅವರನ್ನು ನಿಮಿಷ ಮಾತ್ರದಲ್ಲಿ ನಿವಾರಿಸಿಕೊಳ್ಳಬಹುದು ! ನೀನು ಯಾರಿಗೂ ಅಂಜುವ ಕಾರಣ ವಿಲ್ಲ. ಯಾವುದೇ ಬಗೆಯ ಹೋರಾಟ ಇಲ್ಲವೇ ರಕ್ತಪಾತ ನಡೆಯದಂತೆ, ಸಿಂಹಾಸನವನ್ನು ನಿನ್ನದು ಮಾಡುವ ಹೊಣೆಗಾರಿಕೆ ನನ್ನದು. ನೀನು ನಿಶ್ಚಿಂತೆಯಿಂದ ಇರು" ಎಂದು ಹೇಳಿ ವಿಷ್ಣುವರ್ಧನನನ್ನು ಹುರಿದುಂಬಿಸಿ ಕಳುಹಿಸಿದ ಮಂಗಳೇಶ. ಅವನ ಮಾತನ್ನು ನಿಜವೆಂದು ನಂಬಿ ವಿಷ್ಣುವರ್ಧನ ತಾನು ಸಾಮ್ರಾಟನಾಗುವ ದಿನ ದೂರವಿಲ್ಲವೆಂದು ಹಿಗ್ಗುತ್ತಾ ಹೊರಟ.

ವಿಷ್ಣುವರ್ಧನನೊಂದಿಗೆ ಮಾತನಾಡಿದ ಮೇಲೆ ಸಮಂತಭದ್ರನಿಗೆ ಪುಲಿಕೇಶಿಯ ಸಿಂಹಾಸನಾರೋಹಣ ತಾನು ತಿಳಿದಿದ್ದುದಕ್ಕಿಂತಲೂ ಹೆಚ್ಚು ತೊಡಕಿನದೆಂಬುದು ತಿಳಿಯಿತು. ವಿಷ್ಣುವರ್ಧನನು ಬಾಲಿಶಭಾವದಲ್ಲಿ ಸಿಂಹಾಸನಕ್ಕಾಗಿ ಮೊಂಡುಹಠಮಾಡುತ್ತಿದ್ದಾನೆಂದು ಅವನು ತಿಳಿದಿದ್ದನು. ಆದರೆ ವಿಷ್ಣುವರ್ಧನನೊಂದಿಗೆ ಮಾತನಾಡಿದ ಮೇಲೆ, ಮಂಗಳೇಶನೇ ವಿಷ್ಣುವರ್ಧನನ ಮೂಲಕ ಇಷ್ಟೆಲ್ಲ ಮಾತನಾಡಿದಂತೆ ಅನಿಸಿತು ! ಕೇವಲ ಮುಗ್ಧ ಬಾಲಕನಾಗಿದ್ದ ವಿಷ್ಣುವಿನ ತಲೆಯಲ್ಲಿ ಇಷ್ಟೆಲ್ಲ ದ್ರೋಹ ಚಿಂತನೆಯನ್ನು ತುಂಬಿದ ಮಂಗಳೇಶ, ನಾಳಿನ ಹೋರಾಟಕ್ಕಾಗಿ ಸಿದ್ಧತೆಯನ್ನು ಮಾಡಿಕೊಂಡಿರುವನೆಂಬ ಸಂಗತಿ, ವಿಷ್ಣುವಿನ ಮಾತಿನ ಸರಣಿಯಿಂದ ವ್ಯಕ್ತವಾಗಿತ್ತು. ಸಿಂಹಾಸನವನ್ನು ತಮ್ಮದು ಮಾಡಿಕೊಳ್ಳಲು ಹೋರಾಟಕ್ಕೂ ಸಿದ್ಧನಾಗಿ ಕುಳಿತ ವಿಷ್ಣುವರ್ಧನನನ್ನು ದಾರಿಗೆ ಹಚ್ಚಲು ಹೋರಾಟವೊಂದೇ ದಾರಿ ಎಂದು ತಿಳಿಯಲು ಅವನಿಗೆ

ಹೆಚ್ಚು ಕಾಲ ಬೇಕಾಗಲಿಲ್ಲ. ಪುಲಿಕೇಶಿಯು ರಾಜ್ಯತ್ಯಾಗ ಮಾಡಲು ನಿರ್ಧರಿಸಿ ರುವುದರ ಅರ್ಥ ಅವನಿಗೆ ಈಗ ಹೆಚ್ಚು ಸ್ಪಷ್ಟವಾಗಲಾರಂಭಿಸಿತು. ಸಿಂಹಾಸನ ಕ್ಕಾಗಿ ನಡೆಯುವ ಹೋರಾಟ–ರಕ್ತಪಾತಗಳನ್ನು–ತಪ್ಪಿಸಲೆಂದೇ ಅವನು ಆತ್ಮ ತ್ಯಾಗಕ್ಕೆ ಸಿದ್ಧನಾಗಿದ್ದನು. ಆದರೆ, ನ್ಯಾಯಧರ್ಮಗಳಿಗಾಗಿ ಹೋರಾಟ ಅನಿವಾರ್ಯವೆಂದು ಸಮಂತಭದ್ರನು ಬಗೆದನು.

ಪವಿತ್ರವಾದ ಚಾಲುಕ್ಯ ಸಿಂಹಾಸನ ದ್ರೋಹಿಗಳ ಪಾಲಾಗುವುದನ್ನು ತಪ್ಪಿಸುವ ಸಲುವಾಗಿ ಹೋರಾಟ ಅನಿವಾರ್ಯವೆಂದು ತಿಳಿದನು. ತಮ್ಮ ಕಣ್ಣೆದು ರಿಗೇ ಇಂತಹ ಅನ್ಯಾಯ ನಡೆಯುವುದನ್ನು ತಾವು ನೋಡಿಕೊಂಡಿದ್ದರೆ, ತಾವು ಉಂಡ ಮನೆಗೆ ದ್ರೋಹ ಬಗೆದಂತೆ ಆಗುವುದೆಂದೇ ಅವನ ಗ್ರಹಿಕೆ! ಸಾಮ್ರಾಜ್ಯದ ಅನ್ನದಿಂದ ಬೆಳೆದ ದೇಹವನ್ನು ಸಾಮ್ರಾಜ್ಯದ ಹಿತಕ್ಕಾಗಿ ಬಲಿಕೊಡಬೇಕೆಂದು ಅವನು ನಿರ್ಧರಿಸಿದನು. ಅವನ ದೃಷ್ಟಿಯಲ್ಲಿ ಸಿಂಹಾಸನಕ್ಕಾಗಿ ನಡೆಯುವ ಹೋರಾಟ ಪುಲಿಕೇಶಿಯ ಸಲುವಾಗಿ ನಡೆಯುವ ಹೋರಾಟವಾಗಿ ಕಾಣಿಸದೆ ನ್ಯಾಯಧರ್ಮಗಳಿಗೆ ನಡೆಸುವ ಧರ್ಮಯುದ್ಧವಾಗಿತ್ತು. ಈ ಧರ್ಮಯುದ್ಧಕ್ಕೆ ತನ್ನಂತಹ ಸಹಸ್ರಾರು ಸ್ವಾಮಿನಿಷ್ಠರು ದೀಕ್ಷೆತೊಡುವ ಮೊದಲು, ರಣಕಹಳೆ ಮೊಳಗಿಸುವ ಮುನ್ನ ಕಡೆಯ ಬಾರಿಗೆ, ಮಂಗಳೇಶನನ್ನು ನೋಡಿ, ಸಾಧ್ಯ ವಾದರೆ ಸಿಂಹಾಸನಕ್ಕಾಗಿ ನಡೆಯುವ ಹೋರಾಟವನ್ನು ತಪ್ಪಿಸಲು ಹೊರಟನು.

ಅಪರೂಪಕ್ಕೆ ಬಂದ ಸಮಂತಭದ್ರನನ್ನು ಮಂಗಳೇಶನು ಕೃತಕ ವಿಶ್ವಾಸ ದಿಂದಲೇ ಬರಮಾಡಿಕೊಂಡು ಆದರಿಸಿದ.

ಪ್ರಾಸ್ತಾವಿಕ ಮಾತುಕತೆಗಳು ಮುಗಿದಮೇಲೆ,

"ಅಮಾತ್ಯರು, ಯಾವುದೋ ಪ್ರಬಲ ರಾಜಕಾರಣವಿಲ್ಲದೆ ನಮ್ಮನ್ನು ಹುಡುಕಿಕೊಂಡು ಬರುವುದಿಲ್ಲ!" ಎಂದು ಹೇಳಿ ಅವನ ಮುಖವನ್ನು ದಿಟ್ಟಿಸಿ ನೋಡಿದನು, ನೋಟಮಾತ್ರದಿಂದಲೇ ಅವನ ಹೃದಯಾಂತರಾಳದ ವಿಷಯ ಗಳನ್ನು ಭೇದಿಸುವಂತೆ.

"ಮಹತ್ವದ ರಾಜಕಾರಣದ ಸಲುವಾಗಿಯೇ ನಾನು ಬರಬೇಕಾಯಿತು ಪ್ರಭು!"

"ಏನು ಸಂಗತಿ, ನಿಸ್ಸಂಕೋಚವಾಗಿ ತಿಳಿಸಿ!"

"ಪ್ರಭುಗಳು ಪುಲಿಕೇಶಿ ಪ್ರಾಪ್ತವಯಸ್ಕನಾದ ಕೂಡಲೇ ಸಿಂಹಾಸನ

ವನ್ನು ಒಪ್ಪಿಸಿಕೊಸುವುದಾಗಿ ಹೇಳಿದ್ದೀರಿ. ಕಳೆದೆರಡು ವರ್ಷಗಳಲ್ಲಿ ಕುಮಾರರು ರಾಜ್ಯಾಡಳಿತದಲ್ಲಿ ಸಾಕಷ್ಟು ಅನುಭವವನ್ನು ಪಡೆದಿದ್ದಾರೆ. ಸಾಮ್ರಾಜ್ಯದ ಮಹಾಜನತೆ, ಕುಮಾರರ ಪಟ್ಟಾಭಿಷೇಕವನ್ನು ಎದುರು ನೋಡುತ್ತಿದೆ. ಇನ್ನೇಕೆ ಪಟ್ಟಾಭಿಷೇಕಕ್ಕೆ ತಡೆಯಾಗಬೇಕು ? ತಾವು ಹಿರಿಯರಾಗಿ ನಿಂತು ಈ ಉತ್ಸವ ವನ್ನು ನೆರವೇರಿಸಿಕೊಡಬೇಕೆಂದು ಸಾಮ್ರಾಜ್ಯದ ಹಿತೈಷಿಗಳೆಲ್ಲರ ಅಭೀಷ್ಟ ವಾಗಿದೆ !" ಎಂದನು. ಇದುವರೆಗೆ ಸಿಂಹಾಸನದ ಸಲುವಾಗಿ ಸಹೋದರರಲ್ಲಿ ಉಂಟಾಗಿರುವ ಯಾವ ವೈಮನಸ್ಯವೂ ತನಗೆ ತಿಳಿಯದೆಂಬಂತೆ !

ಇದನ್ನು ಕೇಳಿ ಮಂಗಳೇಶ ಚಕಿತನಾಗದಿರಲಿಲ್ಲ. ಅಮಾತ್ಯರು ಈ ವಿಷಯವನ್ನು ಎಷ್ಟು ಸರಳ ರೀತಿಯಲ್ಲಿ ಸಾಧಿಸಿಕೊಳ್ಳಬೇಕೆಂದಿದ್ದಾರೆ, ಎಂದು ಕೊಂಡನು. ಅವಳ ಸರಳ ಮಾತಿಗೆ ಮರುಳಾಗುವವನು ತಾನಲ್ಲ ಎಂದು ಮನಸ್ಸಿ ನಲ್ಲಿಯೇ ಅಂದುಕೊಂಡು,

"ಕುಮಾರರು ಪಟ್ಟಾಭಿಷಿಕ್ತರಾಗುವುದನ್ನು ನೋಡಲು ನಿಮ್ಮಷ್ಟೇ ನಾನೂ ಕುತೂಹಲಿಯಾಗಿದ್ದೇನೆ ಅಮಾತ್ಯರೇ ! ಆದರೆ ಸಹೋದರರಲ್ಲಿ ಉಂಟಾಗಿರುವ ವಿರಸದಿಂದಾಗಿ, ನಿರ್ವಾಹವಿಲ್ಲದೆ ಅದನ್ನು ತಡೆದಿದ್ದೇನೆ. ಸಹೋದರರಲ್ಲಿ ಒಮ್ಮತವೇರ್ಪಟ್ಟಕೂಡಲೇ, ನೀವು ಇಚ್ಛಿಸಿದ ವ್ಯಕ್ತಿಗೆ ರಾಜ್ಯವನ್ನು ಒಪ್ಪಿಸಿ ಕೊಟ್ಟು ನಾನು ವಿಶ್ರಾಂತಿಗೆ ತೆರಳಬೇಕೆಂದಿದ್ದೇನೆ. ನಮ್ಮ ದುರ್ದೈವದಿಂದ ದಿನದಿನಕ್ಕೂ ಸಹೋದರರಲ್ಲಿ ವಿರಸ ಹೆಚ್ಚಾಗುತ್ತಿದೆಯೇ ಹೊರತು ಬಗೆಹರಿ ಯುವ ಸೂಚನೆ ಕಂಡುಬಂದಿಲ್ಲ ! ಪರಿಸ್ಥಿತಿ ಹೀಗಿರುವಾಗ, ನಾನು ಏನು ತಾನೆ ಮಾಡಬಲ್ಲೆ ? ಅಮಾತ್ಯರೇ, ನಾನು ನಿಮ್ಮಷ್ಟೇ ನಿಸ್ಸಹಾಯಕನಾಗಿದ್ದೇನೆ" ಎಂದು ಅಷ್ಟೇ ಸರಳವಾಗಿ ಉತ್ತರಕೊಟ್ಟನು.

ಈ ಮಾತಿಗೆ ಸಮಂತಭದ್ರನು ಚಕಿತನಾಗಲಿಲ್ಲ. ಈ ಮಾತಿನ ಹಿಂದೆ ಅಡಗಿದ್ದ ದ್ರೋಹಚಿಂತನೆ ಅವನಿಗೆ ಹೊಸದೇನೂ ಅಲ್ಲ. ಆದರೆ ದುಡುಕಿದರೆ, ಕೆಲಸಗೆಡುವುದೆಂದು, ಸರಳರೀತಿಯಲ್ಲಿಯೇ ಈ ಸಿಂಹಾಸನದ ತೊಡಕನ್ನು ಬಗೆ ಹರಿಸಲು ಅವನು ಸರಳವಾಗಿ ಹೇಳಿದ :

"ಎಲ್ಲವನ್ನೂ ತಿಳಿದ ಪ್ರಭುಗಳಿಗೆ ಹೇಳುವುದೇನಿದೆ ? ಈಗ ನೀವು ರಾಜಪ್ರತಿನಿಧಿಗಳಾದರೂ, ಅನಭಿಷಿಕ್ತ ಸಾಮ್ರಾಟರೇ ಆಗಿದ್ದೀರಿ ! ನಿಮ್ಮ ಮಾತಿಗೆ ಯಾರೂ ಎದುರು ಹೇಳುವುದಿಲ್ಲ ! ಅಷ್ಟು ಎದೆಗಾರಿಕೆ ಯಾರಿಗೂ

ಇಲ್ಲ. ಮೇಲಾಗಿ ನೀವು ರಾಜಕುಟುಂಬಕ್ಕೆ ಸೇರಿದ್ದೀರಿ. ಸಿಂಹಾಸನದ ಹಿತೈಷಿಗಳಾಗಿದ್ದೀರಿ. ಇಬ್ಬರು ಸಹೋದರರಿಗೂ ಬೇಕಾದವರಾಗಿದ್ದೀರಿ. ನೀವು ಈ ಬಗ್ಗೆ ಒಂದು ತೀರ್ಮಾನ ಕೈಗೊಂಡರೆ, ಅದನ್ನು ಯಾರೂ ವಿರೋಧಿಸಲಾರರು ! ಅದನ್ನು ಶಿರಸಾವಹಿಸಿ, ಕುಮಾರರು ನಡೆಯುವರೆಂಬ ನಂಬಿಕೆ ನನಗೆ ಇದೆ ! ಆದರೆ ಏಕೋ ನೀವು ಯಾವ ನಿರ್ಧಾರವನ್ನೂ ಕೈಗೊಳ್ಳದೆ, ತಮ್ಮ ವೈಮನಸ್ಸನ್ನು ಬಗೆಹರಿಸಿಕೊಳ್ಳಲು ಕುಮಾರರನ್ನೇ ಬಿಟ್ಟಿರುವುದರಿಂದ, ಪಟ್ಟಾಭಿಷೇಕ ಮುಂದುಮುಂದಕ್ಕೆ ಹೋಗುತ್ತಿದೆ ! ಈ ಬಗ್ಗೆ ನೀವು ಯಾವುದೊಂದು ತೀರ್ಮಾನ ಕೈಗೊಳ್ಳದೆ ಇದು ಬಗೆಹರಿಯುವುದಿಲ್ಲ ಪ್ರಭು. ಇಂದು ನಾಳೆ ಪಟ್ಟಾಭಿಷೇಕ ನಡೆಯಬಹುದೆಂದು ಸಾಮ್ರಾಜ್ಯದ ಜನತೆ ಕಾದು ಕಾದು ಬೇಸತ್ತಿದ್ದಾರೆ. ಅವರನ್ನು ನಿರಾಶೆಗೊಳಿಸಬಾರದು ಪ್ರಭು. ಅವರು ನಮ್ಮಲ್ಲಿ ಇಟ್ಟಿರುವ ನಂಬಿಕೆಯನ್ನು ನಾವು ಉಳಿಸಿಕೊಳ್ಳಬೇಕು."

"ನನಗೂ ಹಾಗೇ ಅನಿಸುತ್ತದೆ. ಈ ಸಹೋದರರ ತಿಕ್ಕಾಟದಿಂದ ನನ್ನ ಮನಸ್ಸಿಗೂ ಬೇಸರವಾಗಿದೆ. ಆದರೆ, ಈ ಬಗ್ಗೆ ಯಾವುದೇ ತೀರ್ಮಾನ ಕೈಗೊಳ್ಳಲಾಗದ ಸ್ಥಿತಿಯಲ್ಲಿ ನಾನಿದ್ದೇನೆ ! ಏನು ಮಾಡಲಿ ಅಮಾತ್ಯರೇ ?"

"ನಿಮ್ಮ ತೊಂದರೆ ಏನು ಪ್ರಭು ? ಸಿಂಹಾಸನಕ್ಕೆ ಯಾರು ನ್ಯಾಯವಾದ ಹಕ್ಕುದಾರರೋ, ಸಾಮ್ರಾಜ್ಯಕ್ಕೆ ಯಾರು ಉತ್ತರಾಧಿಕಾರಿಗಳೋ ಅವರಿಗೆ ಸಿಂಹಾಸನ ಬಿಟ್ಟುಕೊಡುವುದರಲ್ಲಿ ಯಾವ ತೊಡಕು ಇದೆ ? ನೀವು ದೃಢ ಮನಸ್ಸು ಮಾಡಬೇಕು, ಅಷ್ಟೆ !"

"ಇದು ನೀವು ಹೇಳುವಷ್ಟು ಸುಲಭವಾಗಿಲ್ಲ ಅಮಾತ್ಯರೇ, ಇದರಲ್ಲಿ ಅನೇಕ ಮನಃಕ್ಲೇಶ, ಧರ್ಮಸಂಕಟಗಳು ಇವೆ ! ಸಹೋದರರ ಕಗ್ಗಂಟು ಬಿಡಿಸದೆ, ಅವರ ವೈಷಮ್ಯ ಬಗೆಹರಿದು, ಒಳ್ಳೆಯ ಸಂಬಂಧ ಏರ್ಪಡದೆ ನಾನು ಯಾರಿಗೆ ಸಿಂಹಾಸನವನ್ನು ಕೊಟ್ಟರೂ ಇದರಿಂದ ಸಾಮ್ರಾಜ್ಯಕ್ಕೆ ಹಾನಿ ಇದೆ. ಸಹೋದರರು ವೃಥಾ ಹೋರಾಡಿ, ರಕ್ತಪಾತ ಹರಿಸುತ್ತಾರೆ ! ಸಿಂಹಾಸನದ ಸಲುವಾಗಿ ನಿರಪರಾಧಿಗಳ ರಕ್ತ ಹರಿಯುವುದು ನನಗೆ ಇಷ್ಟವಿಲ್ಲ. ಅದರ ಸಲುವಾಗಿಯೇ ಯಾರಿಗೂ ಸಿಂಹಾಸನ ಕೊಡದೆ ನಾನೇ ಪ್ರತಿನಿಧಿಯಾಗಿ ಮುಂದುವರೆಯಬೇಕಾಗಿ ಬಂದಿದೆ ! ಇದು ನನಗೂ ಪ್ರಿಯವಾದ ಸಂಗತಿಯಲ್ಲ. ಏನು ಮಾಡುವುದು ? ನಿರ್ವಾಹವಿಲ್ಲವಾಗಿದೆ. ನನ್ನನ್ನು ಜನ ಸಿಂಹಾಸನವನ್ನು ಬಿಟ್ಟು

ಕೊಡಲಾರದೆ, ಲೋಭಿತನದಿಂದ ಪಟ್ಟಾಭಿಷೇಕವನ್ನು ಮುಂದುಮುಂದಕ್ಕೆ ಹಾಕುತ್ತಿರುವನೆಂದು ಆಡಿಕೊಳ್ಳುತ್ತಿದ್ದಾರೆ. ಆದರೆ ನನ್ನ ಕಷ್ಟ ಅವರಿಗೇನು ಗೊತ್ತು? ಸಹೋದರರು ತಮ್ಮ ವಿವಾದವನ್ನು ಬಗೆಹರಿಸಿಕೊಂಡ ಗಳಿಗೆಯಲ್ಲೇ ಸಿಂಹಾಸನವನ್ನು ತೊರೆಯುತ್ತೇನೆ. ನನಗೆ ರಾಜ್ಯಭಾರವಾಡಿ ಸಾಕಾಗಿದೆ. ನನ್ನ ಹೃದಯ ಮನಸ್ಸುಗಳು ವಿಶ್ರಾಂತಿಯ ಸಲುವಾಗಿ ಹಾತೊರೆಯುತ್ತಿವೆ! ಆದರೆ ನನಗೆ ಬಿಡುಗಡೆ ಎಂದು ದೊರೆಯುವುದೋ ಆ ಶ್ರೀ ಮಕುಟೇಶ್ವರನಿಗೇ ಗೊತ್ತು!"

ಎಂದು ನಿಟ್ಟುಸಿರು ಬಿಟ್ಟನು.

ಇದನ್ನು ಕೇಳಿ ಸಮಂತಭದ್ರನು 'ಭಲಾ, ಮಂಗಳೇಶ!' ಎಂದು ತನ್ನಲ್ಲೇ ಹೊಗಳಿದನು. ಇಷ್ಟಲ್ಲದೆ, ವಿಷ್ಣುವರ್ಧನನು ಅಷ್ಟು ಸುಲಭವಾಗಿ ಆಪನಿಗೆ ಮಾರುಹೋದನೇ ಎಂದುಕೊಂಡ ತನ್ನಲ್ಲೇ. ಆದರೂ ಅದನ್ನು ತೋರಗೊಡದೆ ಕೇಳಿದ:

"ನಿಮ್ಮ ಚಿಂತೆಯನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ ಪ್ರಭು! ಆದರೆ, ಅದಕ್ಕೆ ಪರಿಹಾರ ನಿಮ್ಮ ಕೈಯಲ್ಲೆ ಇದೆ. ಆದರೆ ನೀವು ಅತ್ತ ಗಮನಹರಿಸಿಲ್ಲ ಅಷ್ಟೆ!" ಎಂದ ನಮ್ರವಾಗಿ.

"ಇದಕ್ಕೆ ಪರಿಹಾರವೆಲ್ಲಿದೆ ಅಮಾತ್ಯರೇ?"

"ಪ್ರಭು, ಮನಸ್ಸಿದ್ದ ಕಡೆ ಮಾರ್ಗವಿದ್ದೇ ಇದೆ. ನೀವು ಇಬ್ಬರು ಸಹೋದರರಿಗೂ ಬೇಕಾದವರು. ಮೇಲಾಗಿ ರಾಜಕುಟುಂಬಕ್ಕೆ ಸೇರಿದ್ದೀರಿ. ನೀವೂ ಮಹಾರಾಣಿಯವರೂ ಕಲೆತು ಮಾತಾಡಿ, ಪುಲಿಕೇಶಿಗೆ ಪಟ್ಟಾಭಿಷೇಕಮಾಡಿ, ವಿಷ್ಣುವರ್ಧನನಿಗೆ ಯುವರಾಜ ಪದವಿಯನ್ನು ಇತ್ತರೆ, ಸಹೋದರರ ವಿವಾದ ಇತ್ಯರ್ಥವಾಗುತ್ತದೆ. ಸಹೋದರರು ಮುಂದೆ ಅನ್ಯೋನ್ಯವಾಗಿರುತ್ತಾರೆ! ಇದಕ್ಕಾಗಿ ನೀವು ಇಷ್ಟು ಚಿಂತಿಸಬೇಕೆ?"

"ಇದು ಸಾಧ್ಯವಾಗಿದ್ದರೆ, ನಾನೇಕೆ ಇದುವರೆಗೆ ರಾಜಪ್ರತಿನಿಧಿಯಾಗಿ ಮುಂದುವರಿಯಬೇಕಾದ ಪ್ರಮೇಯವಿತ್ತು? ಸಹೋದರರಲ್ಲಿ ಈ ಬಗ್ಗೆ ವೈಮನಸ್ಸಿದೆ ಒಂದು ವೇಳೆ ಇದಕ್ಕೆ ಪುಲಿಕೇಶಿ ಒಪ್ಪಿದರೂ, ವಿಷ್ಣುವರ್ಧನನು ಈ ಏರ್ಪಾಡಿಗೆ ಒಪ್ಪುತ್ತಿಲ್ಲ. ಅದೇ ನನ್ನ ಧರ್ಮಸಂಕಟ?"

"ವಿಷ್ಣುವರ್ಧನನು ಈ ಏರ್ಪಾಡಿಗೆ ಏಕೆ ಒಪ್ಪುವುದಿಲ್ಲ?"

"ನಿಮ್ಮೊಂದಿಗೆ ಏಕೆ ಮರೆಮಾಚುವುದು? ಅವನಿಗೆ ಪುಲಿಕೇಶಿಯಲ್ಲಿ ನಂಬಿಕೆ ಇಲ್ಲ. ಅವನು ಸಾಮ್ರಾಟನಾದರೆ ತನ್ನ ಜೀವಕ್ಕೆ ಗಂಡಾಂತರವಿದೆ ಎಂದು ಹೆದರಿದ್ದಾನೆ. ಅಂತಲೇ ಅವನ ಆಶ್ರಯದಿಂದ ತಪ್ಪಿಸಿಕೊಂಡು ನನ್ನಲ್ಲಿ ಬಂದು ಆಶ್ರಯಹೊಂದಿದ್ದಾನೆ. ನಾಳೆ ಅವನು ಸಾಮ್ರಾಜ್ಯವನ್ನು ತನಗೆ ಹಂಚಿಕೊಡ ಬೇಕೆಂದು ಹಠಹಿಡಿದಿದ್ದಾನೆ! ಇದು ನಿಮಗೂ ತಿಳಿದಿರುವ ಸಂಗತಿ! ಆದರೆ, ಮಹಾರಾಣಿಯವರು ತಾವು ಬದುಕಿರುವ ತನಕ ಸಾಮ್ರಾಜ್ಯ ಒಡೆಯಲು ಅವ ಕಾಶ ಕೊಡುವುದಿಲ್ಲವೆಂದು ಹೇಳುತ್ತಿದ್ದಾರೆ! ಅಂತಲೇ ಈ ತೊಡಕು ಬಗೆ ಹರಿಯದಾಗಿದೆ."

"ಅವರು ಹೇಳುವ ಮಾತು ನಿಜ. ಚಾಲುಕ್ಯಸಿಂಹಾಸನ ನಮ್ಮ ಕಣ್ಣೆದುರಿನಲ್ಲಿ ಛಿದ್ರವಾಗುವುದನ್ನು ನೋಡುವುದಕ್ಕಿಂತ ಸಾಯುವುದು ಮೇಲು. ಯಾವ ಸ್ವಾಮಿನಿಷ್ಠ ಸೇವಕನು ತಾನೇ ಈ ಕಾರ್ಯಕ್ಕೆ ಸಮ್ಮತಿಸಬಲ್ಲ?"

"ಹಾಗಾದರೆ ಈ ಜನ್ಮದಲ್ಲಿ ಸಹೋದರರ ನಡುವೆ ಸಮರಸ ಉಂಟಾಗಲು ಸಾಧ್ಯವಿಲ್ಲ."

"ನೀವೇಕೆ ಹಾಗೆ ತಿಳಿಯಬೇಕು? ನೀವು ವಿಷ್ಣುವಿಗೆ ಬುದ್ಧಿ ಹೇಳಿ ಅವನ ಮೊಂಡುಹಠ ಬಿಡುವಂತೆ ಮಾಡಬೇಕು."

"ನಿಮಗಿನ್ನೂ ವಿಷ್ಣುವಿನ ಸ್ವಭಾವ ತಿಳಿಯದು, ಅಮಾತ್ಯರೇ. ಅವನು ಈ ವಿಷಯದಲ್ಲಿ ವಜ್ರಕಠೋರನಾಗಿದ್ದಾನೆ. ಸಿಂಹಾಸನದ ಸಲುವಾಗಿ, ಹೋರಾಡಿ ಮಡಿಯುವುದು ಲೇಸೆಂದು ತಿಳಿದಿದ್ದಾನೆ. ಅವನನ್ನು ಸಮಾಧಾನಪಡಿಸುವುದು ಯಾರಿಂದಲೂ ಸಾಧ್ಯವಿಲ್ಲ."

"ಅವನನ್ನೇನು ನೋಡುವುದು? ಅವನನ್ನು ನಿರ್ಲಕ್ಷಿಸಿ ಪುಲಿಕೇಶಿಗೆ ಪಟ್ಟ ಗಟ್ಟಿ ಸಾಮ್ರಾಜ್ಯವನ್ನು ಒಪ್ಪಿಸಿರಿ! ಮುಂದೆ ತಮ್ಮನನ್ನು ದಾರಿಗೆ ಹಚ್ಚುವುದು ಹೇಗೆಂದು ಅವನು ನೋಡಿಕೊಳ್ಳುತ್ತಾನೆ."

"ಸಿಂಹಾಸನವನ್ನು ಪುಲಿಕೇಶಿಗೆ ಬಿಟ್ಟುಕೊಟ್ಟರೆ ಖಂಡಿತ ರಕ್ತಪ್ರವಾಹ ಹರಿಯುತ್ತದೆ! ಇದಕ್ಕೆ ನಾನು ಸಿದ್ಧನಿಲ್ಲ."

"ನೀವು ವಿಷ್ಣುವಿಗೆ ಬುದ್ಧಿ ಹೇಳಿ ದಾರಿಗೆ ತರಬೇಕು. ಇಲ್ಲವೇ ಅವ ನನ್ನು ನಿರ್ಲಕ್ಷಿಸಿ ಪುಲಿಕೇಶಿಗೆ ಪಟ್ಟಕಟ್ಟಬೇಕು."

"ಇದು ನನ್ನಿಂದ ಸಾಧ್ಯವಾಗುವಂತೆ ಇದ್ದರೆ ಇದುವರೆಗೆ ಮಾಡದೆ

ಇರುತ್ತಿದ್ದೆನೆ ?"

"ವಿಷ್ಣುವರ್ಧನನು ನಿಮ್ಮ ಕೈಗೂ ಮೀರಿದ್ದಾನೆಯೆ ?"

"ಹೌದು ! ಅವನು ನಾವು ತಿಳಿದಿರುವಷ್ಟು ತಿಳಿಗೇಡಿ ಬಾಲಕನಲ್ಲ. ಅವನು ತನ್ನ ಹಿತರಕ್ಷಣೆ ತಾನು ಮಾಡಿಕೊಳ್ಳುತ್ತಿದ್ದಾನೆ ! ತಿಳಿದೂ ತಿಳಿದೂ, ಅವನನ್ನು ಇಷ್ಟದ ವಿರುದ್ಧ ಹೇಗೆ ಒತ್ತಾಯ ಪಡಿಸಲಿ."

ಈ ಮಾತು ಕೇಳಿ ಸಮಂತಭದ್ರನಿಗೆ ಸಿಟ್ಟು ಬಾರದೆ ಇರಲಿಲ್ಲ.

"ಪ್ರಭು, ಸಾಮ್ರಾಜ್ಯದ ಹಿತೈಷಿಗಳಾದ ತಾವು ಸಹೋದರರ ವೈಮನಸ್ಸನ್ನು ಬಗೆಹರಿಸಲೆತ್ನಿಸುವುದನ್ನು ಬಿಟ್ಟು ಅವರ ವೈಮನಸ್ಸಿನ ಬೆಂಕಿಗೆ ತುಪ್ಪ ಹೊಯ್ಯುವಿರಾ ? ನಾನು ಸ್ಪಷ್ಟವಾಗಿ ಮಾತನಾಡುತ್ತಿರುವುದಕ್ಕೆ ಕ್ಷಮಿಸಬೇಕು. ಸಾಮ್ರಾಜ್ಯದ ಜನತೆ ನಿಮ್ಮ ವಿಷಯದಲ್ಲಿ ಬೇಸರಗೊಂಡಿದೆ. ವಿಷ್ಣು ಇಷ್ಟು ಹಠಮಾರಿಯಾಗಲು ನಿಮ್ಮ ಪ್ರೋತ್ಸಾಹವೇ ಕಾರಣವೆಂದು ಹೇಳುತ್ತಿದ್ದಾರೆ. ನಾಳೆ ಸಹೋದರರು ಸಿಂಹಾಸನಕ್ಕಾಗಿ ಹೋರಾಡಿದರೆ, ಅದರ ಹೊಣೆಗಾರಿಕೆ ನಿಮ್ಮದೆಂದು ಹೇಳುತ್ತಿದ್ದಾರೆ. ಜನತೆಯ ನಿರೀಕ್ಷಣೆಯನ್ನು ನೀವು ವ್ಯರ್ಥಗೊಳಿಸಬಾರದು ಪ್ರಭು !"

"ಅಮಾತ್ಯರೇ, ಸಾಕುಮಾಡಿ, ನಿಮ್ಮ ದೋಷಾರೋಪಣೆ ! ಸಹೋದರರಲ್ಲಿ ಸಿಂಹಾಸನಕ್ಕಾಗಿ ವಿರಸ ಉಂಟಾದರೆ ಅದಕ್ಕೆ ನಾನು ಹೊಣೆಯೆ? ನನ್ನನ್ನು ನೀವು ಹೊಣೆಗಾರರಾಗಿಮಾಡಿದರೆ, ನೀವೂ, ಆ ನಿಮ್ಮ ಮಹಾರಾಣಿಯೂ ಇದಕ್ಕೆ ಅಷ್ಟೇ ಹೊಣೆಗಾರರಾಗುವಿರೆಂಬುದನ್ನು ಮರೆಯಬಾರದು."

ಮಂಗಳೇಶನೂ ಕೆರಳಿ ಹೇಳಿದ.

"ನನ್ನ ಅಭಿಪ್ರಾಯ ಹೇಳಲಿಲ್ಲ ಪ್ರಭು. ಜನತೆ ತಮ್ಮನ್ನು ಯಾವ ರೀತಿಯಲ್ಲಿ ನೋಡುತ್ತಿದೆ ಎಂಬುದನ್ನು ಬಿನ್ನವಿಸಿದೆ. ನಾವು ತಿಳಿದೋ ತಿಳಿಯದೆಯೋ ಅನ್ಯಾಯ ಪ್ರವರ್ತಕರಾಗಬಹುದು, ಅದರ ವಿಮರ್ಶೆ ಜನತೆಗೆ ಸೇರಿದೆ! ಜನತೆಯ ಕಣ್ಣಿನಲ್ಲಿ ಅಪರಾಧಿಗಳಾದರೆ, ಅದು ನಮ್ಮನ್ನು ಎಂದಿಗೂ ಮನ್ನಿಸುವುದಿಲ್ಲ !"

"ಜನತೆಯ ಸಾವಿರ ನಾಲಗೆ, ಸಾವಿರ ಕಥೆ ಹೇಳುತ್ತದೆ. ಇದಕ್ಕೆಲ್ಲಾ ನಾವು ಹೊಣೆಯೆ ?"

"ಜನತಾಜನಾರ್ದನನನ್ನು ನಾವು ನಿರ್ಲಕ್ಷಿಸುವುದು ಸರಿಯಲ್ಲ ಪ್ರಭು !

ಅದು ಮಲಗಿರುವ ಘಟಸರ್ಪದಂತೆ, ಅದನ್ನು ಕೆರಳಿಸಿ, ಯಾರೂ ಬದುಕ ಲಾರರು ! ಅಂತಹ ಅಪಚಾರ ನಮ್ಮಿಂದಾಗಬಾರದೆಂದು ನನ್ನ ಪ್ರಾರ್ಥನೆ !"

"ಅಮಾತ್ಯರೇ, ನೀವು ಹೇಳುವುದನ್ನು ಸ್ಪಷ್ಟವಾಗಿ ಹೇಳಿಬಿಡಿ. ಸುತ್ತಿ ಸುತ್ತಿ ಏಕೆ ಹೇಳುತ್ತಿದ್ದೀರಿ ?"

"ಸಾಮ್ರಾಜ್ಯದ ಹಿತೈಷಿಗಳೆಲ್ಲರೂ ವಿಷ್ಣುವರ್ಧನನನ್ನು ಪುಲಿಕೇಶಿಯ ವಿರುದ್ಧ ಎತ್ತಿಕಟ್ಟಿರುವುದು ನೀವೇ ಎಂದು ಹೇಳುತ್ತಿದ್ದಾರೆ. ಅವರ ಮಾತು ನಿಜವಿರಬಹುದು, ಇಲ್ಲವೇ ಸುಳ್ಳಿರಬಹುದು. ನಿಮ್ಮ ವರ್ತನೆ ಇಂತಹ ಸಂದೇಹ ಬಲವಾಗಿ ಬೇರೂರಲು ಅವಕಾಶ ಕೊಟ್ಟಿದೆ. ನೀವು ಸ್ವಾರ್ಥಕ್ಕಾಗಿ ಸಹೋದರ ರನ್ನು ಎತ್ತಿಕಟ್ಟಿರುವುದಾಗಿ ಜನ ಹೇಳುತ್ತಿದ್ದಾರೆ. ನಿಮಗೆ ಅಂತಹ ಯಾವ ಸ್ವಾರ್ಥವೂ ಇಲ್ಲದಿದ್ದರೆ, ಪುಲಿಕೇಶಿಗೆ ನ್ಯಾಯವಾಗಿ ದೊರೆಯಬೇಕಾದ ಸಿಂಹಾಸನ ವನ್ನು ಬಿಟ್ಟುಕೊಡಲು ಹೀಗೆ ಹಿಂದೆ ಮುಂದೆ ನೋಡುತ್ತಿರಲಿಲ್ಲವೆಂದು ಹೇಳುತ್ತಿ ದ್ದಾರೆ. ನೀವು ಇನ್ನಾದರೂ ಎಚ್ಚತ್ತುಕೊಳ್ಳುವುದು ಒಳ್ಳೆಯದು."

"ಏನು ನಾನು ಸ್ವಾರ್ಥಕ್ಕಾಗಿ ಅಣ್ಣತಮ್ಮಂದಿರನ್ನು ಎತ್ತಿಕಟ್ಟಿದ್ದೇನೆಯೆ?" ಆಶ್ಚರಿಯಿಂದ ಕೇಳಿದ. ಅನಂತರ ಅವನು,

"ನನಗಿರುವ ಸ್ವಾರ್ಥವಾದರೂ ಏನು ತಿಳಿಯಬಹುದೆ ?" ಎಂದು ಕೇಳಿದ.

"ಕಡೆತನಕ ನೀವೇ ಸಾಮ್ರಾಟರಾಗಿ ಮೆರೆಯಬೇಕೆಂಬುದೇ ನಿಮ್ಮ ಸ್ವಾರ್ಥ. ಸಿಂಹಾಸನವನ್ನು ಆಕ್ರಮಿಸಿಕೊಂಡು, ವಂಶಪಾರಂಪರ್ಯವಾಗಿ ಅನುಭವಿಸಬೇಕೆಂಬುದೇ ನಿಮ್ಮ ಸ್ವಾರ್ಥ !"

"ಇದು ಮಿಥ್ಯಾರೋಪ ! ಪ್ರಭುಗಳ ಮೇಲೆ ಆರೋಪ ಹೊರಿಸುವ ದ್ರೋಹಿಗಳಿಗೆ ಯಾವ ಶಿಕ್ಷೆಕಾದಿದೆ ತಿಳಿದಿದೆಯೇ, ಅಮಾತ್ಯರೇ ?"

"ತಿಳಿದಿದೆ ಪ್ರಭು, ಮರಣದಂಡನೆ."

"ಆದರೂ, ಈ ದ್ರೋಹಚಿಂತನೆಯನ್ನು ನನಗೆ ಆರೋಪಿಸುತ್ತಿರಾ ?"

"ಹೌದು."

"ಹಾಗಾದರೆ ನಿಮಗೆ ತಲೆ ಭಾರವಾಗಿರಬೇಕು ಅಷ್ಟೆ."

"ಸಾಮ್ರಾಜ್ಯದ ಹಿತಕ್ಕಾಗಿ, ತಲೆಯನ್ನು ಮಾತ್ರವಲ್ಲ, ದೇಹವನ್ನು ಬೇಕಾದರೂ ತುಂಡರಿಸಿ ಚಲ್ಲಬಲ್ಲೆ ಪ್ರಭು ! ಆದರೆ ನಾನು ಬದುಕಿರುವವರೆಗೆ ಅನ್ಯಾಯಕ್ಕೆ, ಅಧರ್ಮಕ್ಕೆ, ಮಣಿಯುವುದಿಲ್ಲ. ಸನುಂತಭದ್ರನು—ಅವನಂತಹ

ಸಹಸ್ರಾರು ಸ್ವಾಮಿನಿಷ್ಠ ಸೇವಕರು–ಬದುಕಿರುವವರೆಗೆ ನಿಮ್ಮ ದ್ರೋಹ ಈಡೇರ ಲಾರದು ! ಈ ಮಾತು ಚೆನ್ನಾಗಿ ನೆನಪಿಡಿ" ಎಂದು ಹೇಳಿ ಅಲ್ಲಿ ನಿಲ್ಲದೆ ಸಮಂತ ಭದ್ರನು ಹೊರಟುಹೋದ. ಮಂಗಳೇಶನು ಮಾತ್ರ ಭೂತದರ್ಶನವಾದಂತೆ ಗಾಬರಿಗೊಂಡು ನಿಂತಿದ್ದ. ಸಮಂತಭದ್ರನು ಹೊರಟುಹೋದ ಮೇಲೆ "ಆ ದ್ರೋಹಿಯನ್ನು ಹಿಡಿಯಿರಿ! ಅವನನ್ನು ಬಂಧಿಸಿ, ಸೆರೆಮನೆಯಲ್ಲಿ ಇಡಿರಿ !" ಎಂದು ಬೊಬ್ಬೆ ಇಟ್ಟ. ಸೈನಿಕರಾರೂ ಅವನ ಕಣ್ಣಿಗೆ ಬೀಳಲಿಲ್ಲ.

"ಹಾಳು ಸೈನಿಕರು ಸಮಯಕ್ಕೆ ಒದಗುವುದಿಲ್ಲ ! ಇಂತಹವರನ್ನು ನಂಬಿ ನಾನು ಸಾಮ್ರಾಟನಾಗಬೇಕೆಂದಿರುವೆ.ಅವರು ನಡುನೀರಿನಲ್ಲಿ ಕೈಬಿಡುತ್ತಾರೋ, ದಡವನ್ನು ಮುಟ್ಟಿಸುತ್ತಾರೋ ಕಾಣೆ" ಎಂದು ತನ್ನಲ್ಲೆ ಉದ್ಗಾರ ತೆಗೆದನು. ತಡವಾಗಿ ಬಂದ ಸೈನಿಕರನ್ನು ದುರದುರನೆ ನೋಡಿ "ಪಾಪಿಗಳಿರಾ, ತೊಲಗಿ!" ಎಂದು ಗರ್ಜಿಸಿ, ಅಲ್ಲಿಂದ ಹೊರಟುಹೋದನು.

ಸೈನಿಕರು ಮಾತ್ರ ಮಂಗಳೇಶನನ್ನು ಅವಾಕ್ಕಾಗಿ ನೋಡುತ್ತಾ ನಿಂತರು. ಇಂದಿನ ಮಂಗಳೇಶನ ವರ್ತನೆ ಅವರಿಗೆ ಅರ್ಥವಾಗದೆ ಹೋಗಿತ್ತು.

## ೧೦

ಸಮಂತಭದ್ರನು ಮಂಗಳೇಶನ ಅರಮನೆಯಿಂದ ಹೊರಟವನು ನೇರ ದುರ್ಲಭದೇವಿಯ ಅಂತಃಪುರಕ್ಕೆ ಬಂದನು. ಮಹಾರಾಣಿಗೆ ಎಲ್ಲ ಸಂಗತಿ ಯನ್ನೂ ತಿಳಿಸುವವರೆಗೆ ಮನಸ್ಸಿಗೆ ಸಮಾಧಾನ ಉಳಿಯಲಿಲ್ಲ.

"ಕಡೆಗೂ ಮಂಗಳೇಶನ ಧೂರ್ತತನ ಹೊರಬಿತ್ತು! ವಿಷ್ಣುವರ್ಧನನನ್ನು ಪುಲಿಕೇಶಿಯ ವಿರುದ್ಧ ಮನಸ್ಸು ಕೆಡಿಸಿ, ಅವನ ಮೇಲೆ ಎತ್ತಿ ಕಟ್ಟಿರುವ ನೀಚನು ಅವನೇ ಎಂಬುದು ಇಂದು ಸ್ಪಷ್ಟವಾಯಿತು. ಸಾಮ್ರಾಜ್ಯದ ಹಿತೈಷಿಯ ಸೋಗು ಹಾಕಿ ಸ್ವಾರ್ಥ ಸಾಧಿಸುತ್ತಿರುವ ಆ ನೀಚನನ್ನು ನಾವು ಇದುವರೆಗೆ ಅಧಿಕಾರದಿಂದ ಉರುಳಿಸದೆ ಇದ್ದುದೇ ಮಹಾಪರಾಧವಾಯಿತು. ಈಗ ಅವನನ್ನು ಅಧಿಕಾರ ಚ್ಯುತನನ್ನಾಗಿ ಮಾಡಲು ಕಾರ್ಯೋನ್ಮುಖರಾಗ

ದಿದ್ದರೆ, ನಮ್ಮೆಲ್ಲರನ್ನೂ ಅವನು ಆಪೋಶನ ತೆಗೆದುಕೊಳ್ಳುವುದು ಖಂಡಿತ. ನಾನಂತೂ ಅವನಿಗೆ ಕಡೆಯ ಎಚ್ಚರಿಕೆ ಕೊಟ್ಟು ಬಂದಿದ್ದೇನೆ. ಈಗ ನಾವು ಉಳಿಯಬೇಕು, ಇಲ್ಲವೇ ಅವನು ಉಳಿಯಬೇಕು. ಇಬ್ಬರೂ ಉಳಿಯಲು ಸಾಧ್ಯವೇ ಇಲ್ಲ" ಎಂದು ತನ್ನ ಅಂತಿಮ ತೀರ್ಮಾನವನ್ನು ಹೇಳಿದನು.

ಎಲ್ಲವನ್ನೂ ಕೇಳಿಕೊಂಡ ಮಹಾರಾಣಿಯವರು,

"ದ್ರೋಹಿ ಮಂಗಳೇಶನನ್ನು ನಾವು ಇಂದು ಹೊಸದಾಗಿ ನೋಡುತ್ತಿದ್ದೇವೆಯೇ? ಮೊದಲಿನಿಂದಲೂ ಅವನು ಸ್ವಾರ್ಥಿ! ಅಧಿಕಾರಲೋಭಿ! ತನ್ನ ಸ್ವಾರ್ಥ ಸಾಧನೆಗಾಗಿ, ಸಾಮ್ರಾಜ್ಯದ ಹಿತೈಷಿಯಂತೆ ವೇಷಕಟ್ಟಿದ್ದಾನೆ ಅಷ್ಟೆ. ಅವನ ಗೋಮುಖವ್ಯಾಘ್ರತನವನ್ನು ನಾನು ಎಂದೋ ಭೇದಿಸಿದ್ದೇನೆ. ಅವನನ್ನು ನಾವು ಈ ಮೊದಲೇ ಅಧಿಕಾರದಿಂದ ಉರುಳಿಸಬೇಕಾಗಿತ್ತು. ಈಗ ಅವನು ಅಧಿಕಾರದಲ್ಲಿ ಭದ್ರವಾಗಿರುವುದಲ್ಲದೆ, ವಿಷ್ಣುವರ್ಧನನನ್ನು ತನ್ನ ಕೈಗೊಂಬೆಯಾಗಿ ಮಾಡಿಕೊಂಡಿದ್ದಾನೆ. ವಿಷ್ಣುವರ್ಧನನು ಅವನ ಆಶ್ರಯದಲ್ಲಿ ಇರುವವರೆಗೆ, ಮಂಗಳೇಶನ ಮೇಲೆ ನಾವು ಕೈ ಮಾಡುವಂತೆ ಇಲ್ಲ. ಈಗ ನಾವು ದುಡುಕಿದರೆ, ಅದರ ಪರಿಣಾಮವನ್ನು ಆ ನಿರ್ಭಾಗ್ಯ ವಿಷ್ಣು ಅನುಭವಿಸಬೇಕಾಗುತ್ತದೆ. ಈಗ ನಾವು ಅತ್ಯಂತ ಎಚ್ಚರದಿಂದ ಹೆಜ್ಜೆ ಇಡಬೇಕಾಗಿದೆ! ವಿಷ್ಣುವೊಬ್ಬನು ನಮ್ಮವನಾಗಿದ್ದರೆ...ಅವನು ನಮ್ಮ ಬಳಿಯಲ್ಲೇ ಇದ್ದಿದ್ದರೆ...." ಎಂದು ಮಹಾರಾಣಿಯವರು ವಿಷ್ಣುವಿನದೇ ಆದ ಚಿಂತೆಯಲ್ಲಿ ಮೈಮರೆತರು.

"ವಿಷ್ಣು ನಮ್ಮವನಾಗುವುದು ದೂರದ ಮಾತು ತಾಯಿ! ಅವನನ್ನು ನಾವು ಭೇಟಿಮಾಡುವುದೇ ದುಸ್ತರವಾಗಿರುವಾಗ, ಇನ್ನು ಅವನು ನಮ್ಮವನಾಗುವುದು ಸಾಧ್ಯವೇ?" ಎಂದು ಸಮಂತಭದ್ರ ತನ್ನ ಸಂಶಯು ವ್ಯಕ್ತಪಡಿಸಿದ.

"ವಿಷ್ಣು ನಮಗೆ ಅನುಕೂಲವಾಗಲೆಂದು ನಾನು ಆಶಿಸುತ್ತಿಲ್ಲ. ಅವನ ಹೃದಯ ಪರಿವರ್ತನೆಯಾಗಲೆಂದೂ ನಿರೀಕ್ಷಿಸುತ್ತಿಲ್ಲ. ಆದರೆ ಅವನು ಈ ಸಮಯದಲ್ಲಿ ನಮ್ಮನ್ನು ತೊರೆದು ನಮ್ಮ ಶತ್ರುವಾದ ಮಂಗಳೇಶನ ಆಶ್ರಯಕ್ಕೆ ಹೋಗಬಾರದಾಗಿತ್ತು! ಈಗ ಅವನ ಜೀವಕ್ಕೆ ಮಂಗಳೇಶನಿಂದ ಗಂಡಾಂತರವಿದೆ. ಒಂದುವೇಳೆ ಮಂಗಳೇಶನು ವಿಷ್ಣುವಿನ ಪಕ್ಷಕಟ್ಟಿ ಸಿಂಹಾಸನವನ್ನು ಅವನಿಗೆ ದೊರಕಿಸಿಕೊಟ್ಟರೂ, ನಾಳೆ ಶತ್ರು ನಿಷ್ಕಂಟಕವಾದ ಮೇಲೆ ವಿಷ್ಣುವನ್ನು ಸಿಂಹಾಸನದಿಂದ ಉರುಳಿಸಿ, ಇಲ್ಲವೇ ಅವನನ್ನು ಒಮ್ಮೆಲೇ ನಿವಾರಿಸಿ, ತಾನೇ ಸಿಂಹಾಸನ

ವನ್ನು ಆಕ್ರಮಿಸಿಕೊಳ್ಳುವುದು ಖಂಡಿತ.ಅನ್ಯಾಯವಾಗಿ ವಿಷ್ಣುವರ್ಧನನು ತನ್ನ ಮೊಂಡುಹಠದಿಂದ ಎಂತಹ ವಿನಾಶದ ಹಾದಿಯನ್ನು ತುಳಿದಿದ್ದಾನೆಂಬುದನ್ನು ಯೋಚಿಸಿದರೆ ನನಗೆ ಕರುಳಿಗೆ ಬೆಂಕಿ ಬಿದ್ದಷ್ಟು ಸಂಕಟವಾಗುತ್ತದೆ. ಈಗ ನಾವು ಏನು ಮಾಡಲು ಹೊರಟರೂ ವಿಷ್ಣುವಿನ ಜೀವಕ್ಕೆ ಮುಳುವಾಗುತ್ತದೆ. ನನ್ನ ವಿಷ್ಣುವನ್ನು ನಾನು ಮತ್ತೆ ಜೀವಂತವಾಗಿ ನೋಡುತ್ತೇನೆಯೇ? ಆ ದುರುಳನ ಕೈಯಿಂದ ವಿಷ್ಣುವನ್ನು ಪಾರುಮಾಡುವುದು ಹೇಗೆ ಅಮಾತ್ಯರೇ?" ಎಂದು ವ್ಯಾಕುಲಚಿತ್ತದಿಂದ ಕೇಳಿದರು. ಅವರ ಮಾತೃಹೃದಯ ತಮಗೆ ದ್ರೋಹ ಬಗೆಯುತ್ತಿರುವ ವಿಷ್ಣುವರ್ಧನನ ಶ್ರೇಯಾಕಾಂಕ್ಷೆಯನ್ನೇ ನೋಡುತ್ತಿತ್ತು! ತಮಗೆ ಕೇಡು ಬಗೆಯುತ್ತಿದ್ದ ಅವನ ಕ್ಷೇಮಚಿಂತನೆಯನ್ನೇ ನೆನೆಯುತ್ತಿತ್ತು! ಇದನ್ನು ನೋಡಿ ಅಮಾತ್ಯ ಸಮಂತಭದ್ರನಿಗೆ ಆಶ್ಚರ್ಯವಾಗದೆ ಇರಲಿಲ್ಲ. ಅವನಿಗೆ ತಾಯಿ ಕರುಳಿನ ಹಿರಿಮೆ ಆ ಕ್ಷಣಕ್ಕೆ ಗೋಚರಿಸಿ ದುರ್ಲಭದೇವಿಯ ವಿಷಯದಲ್ಲಿ ಅವನಿಗಿದ್ದ ಗೌರವ ಇಮ್ಮಡಿಸಿತು.

"ಮಹಾರಾಣಿಯವರೇ, ನೀವು ವಿಷ್ಣುವರ್ಧನನ ವಿಷಯದಲ್ಲಿ ಚಿಂತಿಸ ಬಾರದು. ಹೇಗಾದರೂ ಮಾಡಿ, ಅವನನ್ನು ದುರುಳ ಮಂಗಳೇಶನ ಕೈಯಿಂದ ಪಾರುಮಾಡಿ, ನಿಮ್ಮ ಉಡಿಗೆ ತಂದುಹಾಕುತ್ತೇನೆ. ಅಲ್ಲಿಯವರೆಗೆ ಮಂಗಳೇಶ ನನ್ನು ಅಧಿಕಾರದಿಂದ ಉರುಳಿಸುವ ಯಾವ ಪ್ರಯತ್ನವನ್ನೂ ಕೈಗೊಳ್ಳುವುದಿಲ್ಲ. ಒಮ್ಮೆ ವಿಷ್ಣುವರ್ಧನ ನಮ್ಮವನಾದರೆ ಮಂಗಳೇಶನ ಪತನ ಸನ್ನಿಹಿತವಾಯಿ ತೆಂದೇ ತಿಳಿಯಿರಿ! ಅಲ್ಲಿಯವರೆಗೆ ನಾವು ತುಂಬಾ ಎಚ್ಚರದಿಂದ ಇದ್ದು ಕಾರ್ಯ ಸಾಧಿಸಬೇಕಾಗಿದೆ!" ಎಂದು ಮಹಾರಾಣಿಯವರಿಗೆ ಭರವಸೆ ಇತ್ತನು.

"ಮಂಗಳೇಶನ ವಜ್ರಕೋಟೆಯಲ್ಲಿ ಭದ್ರವಾಗಿರುವ ವಿಷ್ಣು ನಮ್ಮವ ನಾಗಲು ಸಾಧ್ಯವೆ? ಮಂಗಳೇಶನ ಸೈನಿಕರ ಸರ್ಪಕಾವಲಲ್ಲಿ ಇರುವ ವಿಷ್ಣುವು ಮತ್ತೆ ನಮಗೆ ದೊರೆಯುವನೆ? ಆ ಆಸೆ ನಮಗಿಲ್ಲ ಅಮಾತ್ಯರೇ!"

"ಮಹಾರಾಣಿಯವರೇ, ಇನ್ನೊಂದು ವಾರದಲ್ಲಿ ಹೇಗಾದರೂ ಮಾಡಿ ವಿಷ್ಣುವನ್ನು ತಂದೊಪ್ಪಿಸುವ ಭಾರ ನನಗೆ ಇರಲಿ. ಆ ಬಗ್ಗೆ ನೀವು ನಿಶ್ಚಿಂತೆ ಯಿಂದ ಇರಿ. ಈಗ ಇನ್ನೊಂದು ವಿಷಯ ಕುರಿತು ಯೋಚಿಸಬೇಕಾಗಿದೆ. ಈಗ ನಾವು ಮಲಗಿದ್ದ ಫಣಿಯನ್ನು ಕೆರಳಿಸಿದ್ದೇವೆ. ಮಂಗಳೇಶನು ನಮ್ಮನ್ನುಯಾವ ಗಳಿಗೆಯಲ್ಲಾದರೂ ಸೆರೆಹಿಡಿಯಬಹುದು. ಈಗಿನಿಂದಲೇ ನಮ್ಮ ಆತ್ಮರಕ್ಷಣೆಯ

ದಾರಿ ಮಾಡಿಕೊಳ್ಳುವುದು ಕ್ಷೇಮ. ನೀವೂ ಪುಲಿಕೇಶಿಯೂ ಈ ಅರಮನೆಯಲ್ಲಿ ಇರುವುದು ಒಳ್ಳೆಯದಲ್ಲ. ಕೋಟೆಯ ಮೇಲಿನ ಅರಮನೆಯನ್ನು ನಿಮ್ಮ ವಾಸಕ್ಕೆ ಸಿದ್ಧಪಡಿಸಿದ್ದೇನೆ. ನೀವು ಅಲ್ಲಿ ಬಿಡಾರ ಹೂಡಿ. ಅರಮನೆಯ ಹಾಗೂ ಕೋಟೆಯ ರಕ್ಷಣೆಗೆ ಸಶಸ್ತ್ರರಾದ ಸಹಸ್ರಮಂದಿ ಸ್ವಾಮಿನಿಷ್ಠ ಸೇವಕರನ್ನು ನೇಮಿಸಿದ್ದೇನೆ. ನನ್ನ ಅಪ್ಪಣೆಯಿಲ್ಲದೆ ಯಾರೂ ನಿಮ್ಮನ್ನು ನೋಡುವಂತೆ ಇಲ್ಲ. ಅಲ್ಲಿ ನಿಮ್ಮಿಬ್ಬರ ಜೀವ ಸುಭದ್ರವಾಗಿರುವುದೆಂದು ನನ್ನ ಭಾವನೆ!"

ಎಂದು ಹೇಳಿದ ಸಮಂತಭದ್ರ.

ಈ ಸಲಹೆ ಮಹಾರಾಣಿ ದುರ್ಲಭದೇವಿಗೆ ಪ್ರಿಯವೆನಿಸಿತು. ಸದ್ಯದ ಪರಿಸ್ಥಿತಿಯಲ್ಲಿ ತಮ್ಮ ಎಚ್ಚರದಲ್ಲಿ ತಾವು ಇರುವುದು ಲೇಸೆಂದು ತಿಳಿದಿದ್ದುದರಿಂದ ಅಂದೇ ಮಹಾರಾಣಿಯವರು ಕೋಟೆಯ ಮೇಲಿನ ಅರಮನೆಗೆ ತೆರಳಲು ನಿಶ್ಚಯಿಸಿದರು.

ಸಮಂತಭದ್ರನು ವಿಷ್ಣುವರ್ಧನನನ್ನು ತಂದು ಮಹಾರಾಣಿಯವರಿಗೆ ಒಪ್ಪಿಸುವುದಾಗಿ ಹೇಳಿ ಹೋಗಿದ್ದರೂ, ಈ ಕಾರ್ಯ ಅವನು ಹೇಳುವಷ್ಟು ಸುಲಭಸಾಧ್ಯವಾಗಿರಲಿಲ್ಲ. ವಿಷ್ಣುವರ್ಧನನಿಗೆ ಪುಲಿಕೇಶಿಯ ಪಕ್ಷದವರಿಂದ ಯಾವುದೇ ಬಗೆಯ ಅಪಾಯ ಬರದಂತೆ, ಮಂಗಳೇಶನು ಎಲ್ಲ ಎಚ್ಚರಿಕೆ ತೆಗೆದುಕೊಂಡಿದ್ದನು. ತನ್ನ ಅಪ್ಪಣೆಯಿಲ್ಲದೆ ಯಾರಿಗೂ ವಿಷ್ಣುವನ್ನು ನೋಡಲು ಅವಕಾಶ ಕೊಡುತ್ತಿರಲಿಲ್ಲ. ವಿಷ್ಣುವನ್ನು ಯಾವ ಪ್ರಸಂಗದಲ್ಲೂ ಅರಮನೆಯಿಂದ ಹೊರಗೆ ಕಳುಹಿಸುತ್ತಿರಲಿಲ್ಲ. ಸದಾ ವಿಷ್ಣುವಿನ ಬೆನ್ನ ಹಿಂದೆ ಮಂಗಳೇಶನ ನಂಬಿಕೆಯ ಕಾಪಿನ ಭಟರು ಇದ್ದೇ ಇರುತ್ತಿದ್ದರು. ಅವರ ಕಣ್ಣು ತಪ್ಪಿಸಿ, ವಿಷ್ಣುವನ್ನು ಅಪಹರಿಸುವುದು ಆಗದ ಮಾತಾಗಿತ್ತು. ಉಪಾಯಾಂತರದಲ್ಲಿ ಈ ಕಾರ್ಯ ಸಾಧಿಸಬೇಕಾಗಿತ್ತು. ಅದಕ್ಕಾಗಿ ಸಮಂತಭದ್ರನು ಹೊಂಚಿ ಕಾಯುತ್ತಿದ್ದಾಗ, ಅಂತಹದೊಂದು ಸುಸಂಧಿ ತಾನಾಗಿ ಒದಗಿ ಬಂದಿತ್ತು.

ಮಂಗಳೇಶನು ರಾಜ್ಯಲೋಭಿಯಾಗಿದ್ದರೂ ದೈವಭೀರುವಾದ ಮನುಷ್ಯನಾಗಿದ್ದನು. ಕೀರ್ತಿವರ್ಮನ ಕಾಲದಲ್ಲಿ ಅವನು ವಾತಾಪಿಯ ಗುಡ್ಡದಲ್ಲಿ ಅದ್ಭುತವೆನಿಸುವ ಮಹಾವಿಷ್ಣುವಿನ ಗುಹಾಂತರ್ದೇವಾಲಯವನ್ನು ನಿರ್ಮಿಸಿ ತನ್ನ ದೈವಭಕ್ತಿಗೆ ಶಾಶ್ವತವಾದ ಕಾಣಿಕೆಯನ್ನು ಅರ್ಪಿಸಿದ್ದನು. ಅವನು ಆರ್ಯಪುರದ ಅನೇಕ ದೇವಾಲಯಗಳಿಗೆ ದತ್ತಿಗಳನ್ನೂ ಬಿಟ್ಟದ್ದುದಲ್ಲದೆ, ಮಹಾಕೂಟದ

ಶ್ರೀ ಮಕುಟೇಶ್ವರನಿಗೆ ಅನೇಕ ಒಡವೆವಸ್ತುಗಳನ್ನು ಮಾಡಿಸಿಕೊಟ್ಟು ನಿತ್ಯಸೇವೆಗಾಗಿ ಅನೇಕ ಗ್ರಾಮುಗಳನ್ನು ಉಂಬಳಿಯಾಗಿ ಹಾಕಿಕೊಟ್ಟಿದ್ದನು. ದೈವದ ವಿಷಯದಲ್ಲಿ ಇದ್ದಷ್ಟೇ ಶ್ರದ್ಧೆ ಗೋಬ್ರಾಹ್ಮಣರ ವಿಷಯದಲ್ಲೂ ಇತ್ತು. ಎಷ್ಟೇ ಕಷ್ಟವಾದರೂ ಆತನು ದೇವತಾರ್ಚನೆ ಇಲ್ಲದೆ ಅತಿಥಿ ಅಭ್ಯಾಗತರನ್ನು ಸೇವಿಸದೆ, ಊಟ ಮಾಡುತ್ತಿರಲಿಲ್ಲ. ಅವನು ಪ್ರತಿಯೊಂದು ಹಬ್ಬಹರಿದಿನಗಳಲ್ಲೂ ಇಷ್ಟ ದೈವಕ್ಕೆ ವಿಶೇಷ ಪೂಜೆ ಸಲ್ಲಿಸಿ, ಅನಂತರ ನಿತ್ಯದ ವ್ಯವಹಾರಗಳಿಗೆ ತೊಡಗುತ್ತಿದ್ದನು.

ಆ ದಿನ ಮಹಾಕೂಟದ ಶ್ರೀಮಕುಟೇಶ್ವರನಾಥನಿಗೆ ಯಾವುದೋ ವಿಶೇಷ ಪೂಜೆ ನಡೆಯುವುದಿತ್ತು. ಅದಕ್ಕೆ ಮಂಗಳೇಶನು ಆಮಂತ್ರಿಸಲ್ಪಟ್ಟಿದ್ದನು. ಅವನು ಅಂದಿನ ಪೂಜೆಗೆ ಪತ್ನೀಪುತ್ರರೊಡಗೂಡಿ ಹೋಗಲು ನಿಶ್ಚಯಿಸಿದ್ದನು. ಆದರೆ ಮನೆಯಲ್ಲಿ ವಿಷ್ಣುವನ್ನು ಒಬ್ಬನನ್ನೇ ಬಿಡಲು ಇಷ್ಟವಾಗದೆ ಜೊತೆಯಲ್ಲಿ ಅವನನ್ನೂ ಕರೆದೊಯ್ದನು. ಅವರ ಸಲುವಾಗಿ ವಿಶೇಷವಾಗಿ ಸಜ್ಜುಗೊಳಿಸಲ್ಪಟ್ಟ ರಥಗಳು ಸಿದ್ಧವಾಗಿದ್ದುವು. ಅವರು ನಿಶ್ಚಿತ ವೇಳೆಗೆ ಆ ಮನೆಯನ್ನು ಬಿಟ್ಟು ಮಹಾಕೂಟದ ದಾರಿ ಹಿಡಿದರು. ಐವತ್ತು ಮಂದಿ ಸೈನಿಕರು ಕುದುರೆಗಳ ಮೇಲೆ ಅವರ ಬೆಂಗಾವಲಿಗೆ ಹೊರಟರು. ಅವರು ಮಹಾಕೂಟವನ್ನು ಸೇರಿ, ಸ್ವಾಮಿಯ ಕೈಂಕರ್ಯವನ್ನು ಮುಗಿಸಿಕೊಳ್ಳುವ ವೇಳೆಗೆ ರಾತ್ರಿ ಒಂಬತ್ತು ಗಂಟೆಯಾಗಿತ್ತು. ಕತ್ತಲೆಯ ಮಬ್ಬುಗತ್ತಲೆಯಲ್ಲಿ, ಪ್ರಕಾಶಮಾನವಾಗಿ ಉರಿಯುತ್ತಿದ್ದ ಸೂಡಿಯ ಬೆಳಕಿನಲ್ಲಿ, ಮಂಗಳೇಶನ ಪರಿವಾರ ರಥಗಳಲ್ಲಿ ಕುಳಿತುಕೊಳ್ಳಲು ಹೊರಟಿತು. ಆ ಸಮಯದಲ್ಲಿ ಒಬ್ಬರನ್ನೊಬ್ಬರು ನೋಡಿಕೊಂಡಾಗ, ವಿಷ್ಣುವರ್ಧನ ಅವರ ಗುಂಪಿನಿಂದ ಕಣ್ಮರೆಯಾಗಿದ್ದುದು ತಿಳಿಯಿತು. ವಿಷ್ಣುವರ್ಧನನೆಲ್ಲಿ ? ವಿಷ್ಣುವರ್ಧನನೆಲ್ಲಿ ? ಎಂದುಕೊಂಡು ಮಂಗಳೇಶನು ದೇವಾಲಯದ ಪ್ರಾಕಾರವನ್ನೆಲ್ಲಾ ಹುಡುಕಿದ. ಎಲ್ಲೂ ವಿಷ್ಣುವರ್ಧನನು ಕಾಣಲಿಲ್ಲ. ದೇವಾಲಯದ ಒಳಗೆ, ಹೊರಗೆ ವಿಷ್ಣುವರ್ಧನನು ಇರಬಹುದಾದ ಸ್ಥಳಗಳನ್ನೆಲ್ಲಾ ಒಂದೂ ಬಿಡದೆ ಶೋಧಿಸಿದರು. ಎಲ್ಲೂ ವಿಷ್ಣುವರ್ಧನ ಪತ್ತೆಯಾಗಲಿಲ್ಲ. ಪೂಜಾವೇಳೆಯಲ್ಲಿ ಇದ್ದ ವಿಷ್ಣುವರ್ಧನ, ಈಗ ಅರಮನೆಗೆ ಹಿಂದಿರುಗುವಾಗ ಕಣ್ಮರೆಯಾಗಿದ್ದ ! ವಿಷ್ಣುವರ್ಧನ ಎಲ್ಲಿ ಹೋದನು? ಏನಾದನು ? ಎಂದು ಯಾರಿಗೂ ತಿಳಿಯದೆ ಹೋಗಿತ್ತು. ಹಾಗಾದರೆ ವಿಷ್ಣು

ವರ್ಧನನನ್ನು ಯಾರೋ ಅಪಹರಿಸಿರಬೇಕು ಎಂದು ಮಂಗಳೇಶನು ಯೋಚಿಸಿದನು ವಿಷ್ಣುವರ್ಧನನನ್ನು ಈ ಕಾಳ್ಗತ್ತಲೆಯಲ್ಲಿ ಯಾರು ಅಪಹರಿಸಿದ್ದಾರು ? ಅದೂ ಇಷ್ಟು ಆಕಸ್ಮಿಕ ರೀತಿಯಲ್ಲಿ ?

ಕೂಡಲೇ ವಿಷ್ಣುವರ್ಧನನನ್ನು ಶೋಧಿಸಲು ಸೈನಿಕರು ಎಲ್ಲೆಡೆಗೂ ಹೊರಟರು. ಸ್ವಯಂ ಮಂಗಳೇಶನೇ ಸೂಡಿಯ ಬೆಳಕನ್ನು ಹಾಯಿಸುತ್ತಾ "ವಿಷ್ಣು ! ವಿಷ್ಣು !" ಎಂದು ಕೂಗಿಕೊಳ್ಳುತ್ತಾ ಮಹಾಕೂಟದ ಬಳಿಯ ಗಿಡಮರಗಳನ್ನೆಲ್ಲಾ ಹುಡುಕಿದನು. ಎಲ್ಲೂ ವಿಷ್ಣುವರ್ಧನನ ಸುಳಿವು ಹತ್ತಲಿಲ್ಲ. "ಅಯ್ಯೋ ವಿಷ್ಣು, ನಿನ್ನನ್ನು ದೇವರ ಸೇವೆಗೆಂದು ಕರೆತಂದು, ಶತ್ರುಗಳ ವಶಕ್ಕೆ ಒಪ್ಪಿಸಿದಂತೆ ಆಯಿತಲ್ಲಾ ! ಸ್ವಾಮಿ ಮಕುಟೇಶ್ವರ, ನಿನ್ನ ಭಕ್ತನನ್ನು ಈ ರೀತಿಯಲ್ಲಿ ವಂಚಿಸಬಹುದೇ ?" ಎಂದು ಭಾವೋದ್ರೇಕದಲ್ಲಿ ಉದ್ಗಾರ ತೆಗೆಯುತ್ತಾ ಅಂತರಪಿಶಾಚಿಯಂತೆ ಕತ್ತಲಲ್ಲಿ ಸುತ್ತಿದನು.

ಅಷ್ಟರಲ್ಲಿ ದೂರದಲ್ಲಿ ಏನೋ ಗದ್ದಲವಾದಂತೆ ತೋರಿತು. ಸೈನಿಕರು ಸೂಡಿ ಬೆಳಕಿನೊಡನೆ ಅತ್ತ ನುಗ್ಗಿದರು. ಇದ್ದಕ್ಕಿದ್ದಂತೆ ಗದ್ದಲ ಹೆಚ್ಚಾಯಿತು. ಒಂದೆರಡು ನಾಯಿಗಳು ಬಗುಳಿದವು. ಎಲ್ಲರ ಗಮನ ಅತ್ತ ಕೇಂದ್ರೀಕೃತವಾಯಿತು. "ಹಿಡಿಯಿರಿ, ಕಳ್ಳರನ್ನು ಹಿಡಿಯಿರಿ!" ಎಂದುಕೊಳ್ಳುತ್ತಾ ಸೈನಿಕರು ಓಡುವುದು ಕೇಳಿಸಿತು. ಕೆಲವು ನಿಮಿಷಗಳ ಹೋರಾಟದನಂತರ, ಸೈನಿಕರು ಕಪ್ಪುವಸ್ತ್ರ ಧರಿಸಿದ್ದ ಇಬ್ಬರು ಕಳ್ಳರನ್ನು ಹೊತ್ತುಕೊಂಡು ಬಂದು ಮಂಗಳೇಶನ ಮುಂದೆ ನಿಲ್ಲಿಸಿದರು. ಅವರ ಹಿಂದೆ ಒಬ್ಬ ಸೈನಿಕನು ಅಳುತ್ತಿದ್ದ ವಿಷ್ಣುವರ್ಧನನನ್ನು ಹೊತ್ತುಕೊಂಡು ಬಂದು ಅವನನ್ನು ಮಂಗಳೇಶನ ವಶಕ್ಕೆ ಒಪ್ಪಿಸಿದನು. ಮಂಗಳೇಶನು ತನ್ನ ಕೈತಪ್ಪಿಹೋಗಿದ್ದ ವಿಷ್ಣುವನ್ನು ಬಾಚಿ ತಬ್ಬಿಕೊಂಡು "ವಿಷ್ಣು ! ವಿಷ್ಣು !" ಎಂದು ಬಡಬಡಿಸಿದ. ಅವನಿಗೆ ಗಾಳಿಹಾಕಿ ಶೈತ್ಯೋಪಚಾರ ಮಾಡಿದ ಮೇಲೆ ವಿಷ್ಣುವು ತಿಳಿವುಗೊಂಡು ಅಳುತ್ತಾ ತಾನು ಕಣ್ಮರೆಯಾದ ಕತೆಯನ್ನು ನಿರೂಪಿಸಿದನು.

ವಿಷ್ಣುವರ್ಧನ ಅರಮನೆಯ ನಿರ್ಬಂಧದಿಂದ ತನಗೆ ದೊರೆತ ಬಿಡುಗಡೆಗೆ ಹಿಗ್ಗುತ್ತಾ, ಆ ದಿನವೆಲ್ಲಾ ಉಲ್ಲಾಸದಿಂದ ಇದ್ದನು. ಅವನು ಯಾವುದೇ ಅಪಾಯವನ್ನು ನಿರೀಕ್ಷಿಸದೆ ಶ್ರೀಮಕುಟೇಶ್ವರಸ್ವಾಮಿಯ ಸೇವೆಯಲ್ಲಿ ಭಾಗವಹಿಸಿದ್ದನು. ತೀರ್ಥಪ್ರಸಾದ, ರಾಜಾಶೀರ್ವಾದಗಳೆಲ್ಲ ಮುಗಿದಮೇಲೆ, ಇನ್ನೇನು ಅವನು ರಥದಲ್ಲಿ ಕುಳಿತುಕೊಳ್ಳಬೇಕೆಂದಿರುವಾಗ ಇದ್ದಕ್ಕಿದ್ದಂತೆ,

ಯಾರೋ ತನ್ನ ಮೇಲೆ ಬಿದ್ದು ಬಾಯಿಗೆ ಬಟ್ಟೆ ತುರುಕಿ ಬಲವಂತವಾಗಿ ಕತ್ತಲೆಯ ಪ್ರದೇಶಕ್ಕೆ ಹೊತ್ತುಕೊಂಡು ಹೋದಂತೆ ಆಯಿತು. ವಿಷ್ಣುವು ಹೆದರಿಕೆಯಿಂದ ಚೀರಿದನು. ಕತ್ತಲಿನಲ್ಲಿ ಯಾರೂ ನೆರವಿಗೆ ಬರಲಿಲ್ಲ. ಹತ್ಯಾಕಾರಿಗಳು ಅವನನ್ನು ಹೊತ್ತುಕೊಂಡು ಲಗುಬಗೆಯಿಂದ ಹೊರಟರು. ಸ್ವಲ್ಪ ದೂರದಲ್ಲೇ ಒಂದು ಮರಕ್ಕೆ ಕುದುರೆಯನ್ನು ಕಟ್ಟಿಹಾಕಿತ್ತು. ವಿಷ್ಣುವರ್ಧನನನ್ನು ಕುದುರೆಯ ಮೇಲೆ ಹಾಕಿಕೊಂಡು, ಅಲ್ಲಿಂದ ಪರಾರಿಯಾಗಬೇಕೆನ್ನುವುದರಲ್ಲಿ ಯಾಕೋ ಕುದುರೆ ಕೆನೆಯಿತು. ಅದರ ಕೆನೆತವನ್ನು ಕೇಳಿ, ಇನ್ನಿತರ ಕುದುರೆಗಳು ಕೆನೆದು ಗದ್ದಲ ಮಾಡಿದವು. ವಿಷ್ಣುವರ್ಧನನ ಶೋಧೆಗೆ ಹೊರಟಿದ್ದ ರಾಹುತರು ಈ ವಿಲಕ್ಷಣ ಕೆನೆತವನ್ನು ಕೇಳಿ, ಅದು ಬಂದ ದಿಕ್ಕಿಗೆ ಕುದುರೆಗಳನ್ನು ಓಡಿಸಿಕೊಂಡು ಬಂದರು. ಮೂಡಿಯ ಬೆಳಕಿನಲ್ಲಿ ವಿಷ್ಣುವರ್ಧನನನ್ನು ಹತ್ಯಾಕಾರಿಗಳಿಬ್ಬರು ಕುದುರೆಯ ಮೇಲೆ ಹೊತ್ತುಕೊಂಡು ಹೋಗುತ್ತಿದ್ದುದು ಕಾಣಿಸಿತು. ಅವರು ಚಣಮಾತ್ರದಲ್ಲಿ ಕಳ್ಳರನ್ನು ಸುತ್ತುಗಟ್ಟಿ, ಅವರ ಮೇಲೆ ಬಿದ್ದು, ನೆಲಕ್ಕೆ ಕೆಡವಿ ಸೆರೆ ಹಿಡಿದುಕೊಂಡು ಬಂದು ಮಂಗಳೇಶನಿಗೆ ಒಪ್ಪಿಸಿದರು. ವಿಷ್ಣುವರ್ಧನನು ಘಾತುಕರ ಕೈಯಿಂದ ಸುದೈವದಿಂದ ಪಾರಾಗಿದ್ದನು. ಅವನಿಗೆ ಯಾವ ಅಪಾಯವೂ ಆಗಿರಲಿಲ್ಲ.

ವಿಷ್ಣುವರ್ಧನನನ್ನು ಆ ನೀಚರು ಏಕೆ ಹೊತ್ತುಕೊಂಡು ಹೋದರು ? ಅವರನ್ನು ವಿಚಾರಣೆಗೆ ಗುರಿಪಡಿಸಿ, ಚಿತ್ರಹಿಂಸೆ ಕೊಟ್ಟಾಗ, ಅವರು ಬಾಯಿಬಿಟ್ಟರು. ಅವರು ಹೇಳಿದ ಕತೆಯನ್ನು ಕೇಳಿ ಮಂಗಳೇಶನ ಕೂದಲು ನಿಮಿರಿದವು.

ಮಹಾರಾಣಿ ದುರ್ಲಭದೇವಿಗೆ ವಚನಕೊಟ್ಟ ಮೇಲೆ ಸಮಂತಭದ್ರನು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಅವನು ಉಪಾಯವಾಗಿ ಮಂಗಳೇಶನ ಅಂತಃಪುರಕ್ಕೆ ಪ್ರವೇಶ ದೊರಕಿಸಿಕೊಂಡು, ಅಲ್ಲಿನ ವಿದ್ಯಮಾನಗಳನ್ನು ತನಗೆ ವರದಿ ಮಾಡಲು ಒಬ್ಬ ದಾಸಿಯನ್ನು ಗೂಢಚಾರಳಾಗಿ ನೇಮಿಸಿದ್ದನು. ಅವಳ ಮೂಲಕ ಆ ದಿನ ವಿಷ್ಣುವರ್ಧನನೊಡನೆ ಮಂಗಳೇಶನು ಮಹಾಕೂಟಕ್ಕೆ ಹೋಗುವುದು ತಿಳಿದಿತ್ತು. ಈ ಸುಸಂಧಿಯನ್ನು ಸಾಧಿಸಿ ಯಾವುದೇ ಅನುಮಾನಕ್ಕೆ ಅವಕಾಶ ಕೊಡದಂತೆ ವಿಷ್ಣುವರ್ಧನನನ್ನು ಸೆರೆಹಿಡಿಯಲು ಯೋಚಿಸಿ, ಸಮಂತಭದ್ರನು ತನ್ನ ನಂಬುಗೆಯ ಇಬ್ಬರು ಸೇವಕರನ್ನು ನೇಮಿಸಿ

ದ್ದನು. ಅವರು ಕಪ್ಪು ಸಮವಸ್ತ್ರಗಳನ್ನು ಧರಿಸಿ, ರಥಗಳನ್ನು ನಿಲ್ಲಿಸಿದ್ದ ಗಿಡ ಮರಗಳ ನೆರಳಿನಲ್ಲಿ ಹೊಂಚಿಕಾದಿದ್ದು ವಿಷ್ಣುವರ್ಧನನು ರಥದ ಬಳಿಗೆ ಬರುತ್ತಲೇ ಅವನನ್ನು ಅಪಹರಿಸಿಕೊಂಡು ಹೋಗಿದ್ದರು. ಆದರೆ ಅವರ ದುರ್ದೈವಕ್ಕೆ ಕುದುರೆಯ ಹೇಷಾರವದಿಂದ ಅವರ ಯೋಜನೆ ಎಲ್ಲವೂ ವಿಫಲವಾಗಿತ್ತು.

ವಿಷ್ಣುವರ್ಧನನನ್ನು ಸಮಂತಭದ್ರನು ಅಪಹರಿಸಲೆತ್ನಿಸಿದ ಸಂಚು ತಿಳಿದ ಮೇಲೆ, ಮಂಗಳೇಶನು ದ್ವೇಷದಿಂದ ಕಿಡಿಕಿಡಿಯಾದನು.

"ನೀಚ ಸಮಂತಭದ್ರ ! ನನ್ನ ಮೇಲಿನ ಕ್ರೋಧದಿಂದ ವಿಷ್ಣುವರ್ಧನನ ಮೇಲೆ ಸೇಡುತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದೆಯಾ ?"

ಎಂದು ಉದ್ಗಾರ ತೆಗೆದ. ಈ ಸಂಚನ್ನು ಯೋಚಿಸಿದಂತೆ, ಇದೆಲ್ಲವೂ ಪುಲಿಕೇಶಿಗೆ ಸಿಂಹಾಸನದ ಹಕ್ಕು ನಿಷ್ಕಂಟಕವಾಗಲು ಮಹಾರಾಣಿಮಾಡಿದ ಪಿತೂರಿ, ತಮ್ಮ ಕೈಬಿಟ್ಟುಹೋಗಿದ್ದ ವಿಷ್ಣುವರ್ಧನನನ್ನು ಒತ್ತಾಯದಿಂದ ಸೆರೆ ಹಿಡಿದು, ಅವನು ತಮ್ಮ ಮಾತು ಕೇಳದಿದ್ದರೆ, ಅವನನ್ನು ನಿವಾರಿಸಿಕೊಂಡು, ತಾನೇ ಸಿಂಹಾಸನಕ್ಕೆ ಏಕೈಕ ಹಕ್ಕುದಾರನಾಗಲು ಪುಲಿಕೇಶಿಯು ಮಾಡಿದ ಪಿತೂರಿ ಎಂದು ಹೊಳೆಯಿತು. ಅವರ ಬೆಂಬಲವಿಲ್ಲದಿದ್ದರೆ ಅಮಾತ್ಯ ಸಮಂತ ಭದ್ರನಿಗೆ ರಾಜಕುಮಾರನ ಮೇಲೆ ಕೈಮಾಡುವಷ್ಟು ಧೈರ್ಯ ಬರುತ್ತಿತ್ತೆ ?

ಯೋಚಿಸಿದಂತೆ, ಮಹಾರಾಣಿಯ ದ್ರೋಹಚಿಂತನೆ ಅನೇಕ ರೂಪಗಳಲ್ಲಿ ಕಾಣಿಸತೊಡಗಿತ್ತು. ಸಮಂತಭದ್ರನು ಕೆಲವು ದಿನಗಳ ಹಿಂದೆ ತನ್ನನ್ನು ಧಿಕ್ಕರಿಸಿ ನುಡಿದುಹೋಗಿದ್ದ ! ಮಹಾರಾಣಿಯವರು ಕೆಳಗಿನ ಅರಮನೆಯನ್ನು ಬಿಟ್ಟು ಬೆಟ್ಟದ ಮೇಲಿನ ಅರಮನೆಗೆ ಹೋಗಿದ್ದರು. ಈಗ ವಿಷ್ಣುವರ್ಧನನ ಮೇಲೆ ದುರಾಕ್ರಮಣ ನಡೆದಿತ್ತು. ಅಂದಮೇಲೆ ಪುಲಿಕೇಶಿಯ ಪಕ್ಷದವರು ತನ್ನ ಕೈಯಿಂದ ಸಿಂಹಾಸನವನ್ನು ಬಲಾತ್ಕಾರದಲ್ಲಿ ಕಿತ್ತುಕೊಳ್ಳಲು ಯೋಚಿಸಿದ್ದಾರೆ, ಅದಕ್ಕಾಗಿ ಸಿದ್ಧರಾಗುತ್ತಿದ್ದಾರೆ ಎಂಬುದು ಮಂಗಳೇಶನಿಗೆ ಸುಸ್ಪಷ್ಟವಾಯಿತು. ತಾನು ಅವರಿಂದ ಅಪಾಯ ನಿರೀಕ್ಷಿಸುವ ಮುನ್ನವೇ ಅವರಿಂದ ಅಪಾಯ ಎದುರುಗೊಂಡಿತ್ತು. ಇನ್ನು ತಾನು ಸುಮ್ಮನಿರಬಾರದು, ಶತ್ರುಗಳ ಕಾರಸ್ಥಾನವನ್ನು ಮೊಳಕೆಯಲ್ಲೆ ಹೊಸೆದುಹಾಕಬೇಕು. ಇಲ್ಲದೆ ಇದ್ದರೆ, ತನ್ನ ಜೀವಕ್ಕೂ ಅವರಿಂದ ಅಪಾಯ ಬರಬಹುದು....ಎಂದು ಯೋಚಿಸಿ, ಅರಮನೆಗೆ ಹಿಂತಿರುಗಿದ ಕೂಡಲೇ ರಾಹಪ್ಪಯ್ಯನನ್ನು ಕರೆಸಿಕೊಂಡು, ವಿಷ್ಣುವರ್ಧನನ

ರಕ್ಷಣೆಗೆ ಹಾಗೂ ಅರಮನೆಯ ರಕ್ಷಣೆಗೆ ವಿಶೇಷವಾದ ಏರ್ಪಾಡುಮಾಡಿದನು.

ಮಾರನೆಯ ದಿನ ಮಹಾರಾಣಿಯ ಗೋಮುಖವ್ಯಾಘ್ರತನವನ್ನು ಬಯಲುಮಾಡಿ, ಅವರಿಗೆ ಕಡೆ ಎಚ್ಚರಿಕೆಯನ್ನು ಕೊಟ್ಟು, ಅವರ ಬಲಾಬಲಗಳನ್ನು ತಿಳಿದು ಬರಲು, ಮಂಗಳೇಶನು ಬೆಟ್ಟದ ಮೇಲಿನ ಅರಮನೆಗೆ ಬಂದನು.

ಸೇವಕರು ಬಂದು ಮಂಗಳೇಶನು ಮಹಾರಾಣಿಯವರ ಭೆಟ್ಟಿಗೆ ಬಂದಿರುವ ವಿಷಯ ತಿಳಿಸಿದಾಗ, ಅಲ್ಲೇ ಇದ್ದ ಸಮಂತಭದ್ರನಿಗೂ ಆಶ್ಚರ್ಯವಾಗದೆ ಇರಲಿಲ್ಲ. ಅವನು ಮಹಾರಾಣಿಯವರಿಗೆ, ಹಿಂದಣರಾತ್ರಿ ನಡೆದಿದ್ದ ವಿಫಲವಾದ ಆಕ್ರಮಣದ ಕತೆಯನ್ನು ನಿರೂಪಿಸಲು ಬಂದಿದ್ದ. ವಿಷ್ಣು ತಮ್ಮ ಕೈಗೆ ಸಿಕ್ಕಿದವನು, ಬಾಯಿಗೆ ಬಾರದೆಹೋಗಿದ್ದ. ಮಹಾರಾಣಿಯವರು ತಮ್ಮ ದೌರ್ಭಾಗ್ಯವನ್ನು ಹಳಿದುಕೊಳ್ಳುತ್ತಿರುವಾಗಲೇ ಮಂಗಳೇಶನು ಭೆಟ್ಟಿಗೆ ಬಂದಿರುವ ವಾರ್ತೆ ಕೇಳಿ ಸಿಡಿಲು ಬಡಿದಂತೆ ಆಯಿತು. ಈಗ ಮಂಗಳೇಶನಿಗೆ ಭೆಟ್ಟಿಕೊಡಬಾರದೆಂದು ಮನಸ್ಸು ಅಂಜಿತು. ಆದರೆ ಮಂಗಳೇಶನಿಗೆ ಭೆಟ್ಟಿಯನ್ನು ನಿರಾಕರಿಸಿದರೆ, ತಾವಾಗಿ ಅವನ ತಲೆಯಲ್ಲಿ ಸಂದೇಹದ ಬೀಜ ಬಿತ್ತಿದಂತಾಗುವುದು ಮಾತ್ರವಲ್ಲ—ವಿಷ್ಣುವಿನ ಆಕ್ರಮಣದ ತಪ್ಪನ್ನು ಒಪ್ಪಿಕೊಂಡಂತೆ ಆಗುವುದೆಂದು ಅವರ ಮನಸ್ಸು ಅಳುಕಿತು.

"ಆಗಲಿ, ಮಂಗಳೇಶನನ್ನು ಕಡೆಯಬಾರಿಗೆ, ನೋಡಿಯೇ ಬಿಡೋಣ. ಅವನ ಧೂರ್ತತನವಂತೂ, ಬಯಲಾಗಿದೆ. ಅವನ ದ್ರೋಹಚಿಂತನೆಗೆ ತಾವು ಸೊಪ್ಪು ಹಾಕುವವರಲ್ಲ—ಎಂಬುದನ್ನು ಸ್ಪಷ್ಟಪಡಿಸಿಕೊಡಬೇಕು. ತಮ್ಮ ಕೋರಿಕೆಯಂತೆ ಸಿಂಹಾಸನವನ್ನು ಪುಲಿಕೇಶಿಗೆ ಬಿಟ್ಟುಕೊಡದಿದ್ದರೆ, ಮುಂದಿನ ಪರಿಣಾಮ ನೆಟ್ಟಗಾಗುವುದಿಲ್ಲವೆಂಬ ಮುನ್ನೆಚ್ಚರಿಕೆಯನ್ನು ಕೊಟ್ಟುಬಿಡಬೇಕು!" ಎಂದು ಯೋಚಿಸಿ, ಸಮಂತಭದ್ರನ ಸಲಹೆಯನ್ನು ಮನ್ನಿಸದೆ, ಮಂಗಳೇಶನನ್ನು ತಮ್ಮ ಬಳಿಗೆ ಕರೆತರಲು ದೂತರನ್ನು ಕಳುಹಿಸಿಕೊಟ್ಟರು.

"ಮಹಾರಾಣಿಯವರು ಏಳುಸುತ್ತಿನ ಕೋಟೆಯಲ್ಲಿ ಮನೆ ಮಾಡಿದ್ದಾರೆ. ಬಹುಶಃ ಕೆಳಗಿನ ಕೋಟೆಯಲ್ಲಿ ದುಷ್ಟ ಮೃಗಗಳ ಕಾಟ ಹೆಚ್ಚಾಯಿತೆಂದೆ ?" ಮಂಗಳೇಶನು ಅರ್ಥಗರ್ಭಿತವಾಗಿ ನುಡಿಯುತ್ತಾ, ಮಹಾರಾಣಿಯವರು ತೋರಿಸಿದ ಆಸನದಲ್ಲಿ ಕುಳಿತುಕೊಂಡನು.

"ಮಂಗಳೇಶರು ವ್ಯಂಗ್ಯವಾಗಿ ಮಾತನಾಡುತ್ತಿದ್ದಾರೆ. ನಾವು ಯಾರಿಗೂ ಅಂಜಿ ಇಲ್ಲಿಗೆ ಬರಲಿಲ್ಲ. ಕೆಳಗಿನ ಅರಮನೆ ಬೇಸರವಾಯಿತು. ಕೆಲಕಾಲ

ಇಲ್ಲಿದ್ದು ಹೋಗಲು ಬಂದೆವು, ಅಷ್ಟೆ. ಇದರಲ್ಲಿ ಯಾವ ವಿಶೇಷವೂ ಇಲ್ಲ!" ಎಂದರು ದುರ್ಲಭದೇವಿ.

"ನಿಮಗೆ ನಮ್ಮೊಡನೆ ವ್ಯವಹಾರ—ಮಾತುಕತೆಗಳು—ಅಪ್ರಿಯವಾದ ಮಾತ್ರಕ್ಕೆ ನಮಗೆ ನಿಮ್ಮ ಒಡನಾಟ ಅಪ್ರಿಯವಾಗಿಲ್ಲ. ನಾವು ರಾಜ್ಯದ ಚಿಂತೆಗೆ ತಲೆಕೊಟ್ಟಮೇಲೆ, ಎಲ್ಲರ ಕ್ಷೇಮಚಿಂತನೆ ನಮಗೆ ಸೇರಿದೆ. ನೀವು ಕೆಳ ಕೋಟೆಯ ಅರಮನೆ ಬಿಟ್ಟು ಇಲ್ಲಿಗೆ ವಾಸಕ್ಕೆ ಬಂದಿದ್ದೀರೆಂದು ಕೇಳಿದೆ. ಹಾಗೆಯೆ ವಿಚಾರಿಸಿಕೊಂಡು ಹೋಗಲು ಬಂದೆ. ನನ್ನಿಂದ ನಿಮ್ಮ ಏಕಾಂತಕ್ಕೆ ಭಂಗವಾಗಿದ್ದರೆ ಕ್ಷಮಿಸಿ!" ಎಂದು ಹೇಳಿ. ಅಲ್ಲೇ ಇದ್ದ ಸಮಂತಭದ್ರನ ಕಡೆ ನೋಡಿದ.

"ನಮ್ಮ ಏಕಾಂತಕ್ಕೆ ನಿಮ್ಮಿಂದ ಭಂಗವಾಗಿಲ್ಲ, ಅದರ ಬದಲು, ನಿಮ್ಮ ಆಗಮನದಿಂದ ನಮಗೆ ಸಂತೋಷವೇ ಆಗಿದೆ!" ಎಂದು ಮಹಾರಾಣಿಯವರೇ ಹೇಳಿದರು.

"ನಿಮಗೆ ಇನ್ನೂ ನನ್ನ ವಿಷಯದಲ್ಲಿ ಇಷ್ಟು ವಿಶ್ವಾಸವಿರುವುದು ತುಂಬಾ ಸಂತೋಷ. ನಿಮಗೆ ಇಲ್ಲಿ ಎಲ್ಲ ಅನುಕೂಲವಿದೆತಾನೆ? ನೀವು ಇಲ್ಲಿಗೆ ಬರುವ ವಿಷಯ ನನಗೆ ತಿಳಿದಿದ್ದರೆ, ನಿಮ್ಮ ವಾಸಕ್ಕೆ ಬೇಕಾದ ಎಲ್ಲ ಸೌಲಭ್ಯ ಕಲ್ಪಿಸಿ ಕೊಡುತ್ತಿದ್ದೆ. ನೀವು ಇಲ್ಲಿಗೆ ಬರುವುದು ನನಗೆ ಮೊದಲೇ ತಿಳಿಸಲಿಲ್ಲ. ಬಹುಶಃ ನನ್ನಲ್ಲಿ ನಿಮಗೆ ಮೊದಲಿನ........"

"ನಂಬಿಕೆ ಇಲ್ಲವೆಂದು ತಿಳಿಯಬಾರದು. ನಾವು ಕೆಲವು ದಿನಗಳಮಟ್ಟಿಗೆ ಇಲ್ಲಿಗೆ ಬಂದಿದ್ದೇವೆ, ಅಷ್ಟೆ. ಇಷ್ಟರ ಸಲುವಾಗಿ ನಿಮಗೇಕೆ ತೊಂದರೆ ಕೊಡ ಬೇಕೆಂದು, ಸಮಂತಭದ್ರರಿಗೆ ಹೇಳಿ, ನಮಗೆ ಬೇಕಾದ ಎಲ್ಲ ಅನುಕೂಲ ಮಾಡಿ ಕೊಂಡಿದ್ದೇವೆ. ನೀವು ಈ ಬಗ್ಗೆ ವಿಶೇಷ ಅರ್ಥ ಕಲ್ಪಿಸುವ ಕಾರಣವಿಲ್ಲ" ಎಂದು ಮಹಾರಾಣಿಯವರು ಹೇಳಿ ಮಂಗಳೇಶನ ಆಗಮನದ ಆಂತರ್ಯವನ್ನು ಭೇದಿಸುವಂತೆ ಅವನ ಮುಖವನ್ನು ನೋಡಿದರು.

"ಮಹಾರಾಣಿಯವರೆ, ನಾನು ಸರಳ ಮಾತಿನ ಮನುಷ್ಯ. ಮನಸ್ಸಿ ನಲ್ಲಿರುವುದನ್ನು ಮುಚ್ಚುಮರೆ ಇಲ್ಲದೇ ತಿಳಿಸುವುದೇ ನನ್ನ ಸ್ವಭಾವ. ನೀವು ಏನೂ ತಿಳಿಯಬಾರದು; ನೀವು ಹಠಾತ್ತನೆ ಇಲ್ಲಿಗೆ ಸ್ಥಳಾಂತರಿಸಿರುವುದು, ಕೋಟೆಯ ರಕ್ಷಣೆಗೆ ಬಲವಾದ ಕಾವಲು ಇರಿಸಿರುವುದು, ನಾನು ನಿಮ್ಮನ್ನು

ಕಾಣಲು ಅನುಮತಿ ಬೇಡಬೇಕಾಗಿರುವುದು ಇದನ್ನೆಲ್ಲಾ ನೋಡಿದರೆ ನಿಮಗೆ ನನ್ನ ವಿಷಯದಲ್ಲಿ ಮೊದಲಿನ ನಂಬಿಕೆ ಇಲ್ಲ. ನನ್ನ ವಿಷಯದಲ್ಲಿ ಸಂಶಯ ಪಟ್ಟು ಮುನ್ನೆಚ್ಚರಿಕೆ ತೆಗೆದುಕೊಳ್ಳುತ್ತಿರುವಂತೆ ಕಾಣಿಸುತ್ತಿದೆ. ನಾನು ನಿಮಗೆ ಏನಾದರೂ ತೊಂದರೆ ಕೊಟ್ಟಿದ್ದೇನೆಯೆ ? ನಿಮಗೆ ಅನುಮಾನಾಸ್ಪದ ವಾದ ರೀತಿಯಲ್ಲಿ ನಡೆದುಕೊಂಡಿದ್ದೇನೆಯೆ ? ಏಕಿಷ್ಟು ನನ್ನ ವಿಷಯದಲ್ಲಿ ನೀವು ಭೀತಿಗೊಂಡಿದ್ದೀರೊ ತಿಳಿಯದಾಗಿದೆ. ನೀವೇ ನಮ್ಮ ವಿಷಯದಲ್ಲಿ ಸಂದೇಹಪಟ್ಟ ಮೇಲೆ ಇನ್ನು ನಾವು ಯಾರನ್ನು ವಿಶ್ವಾಸಿಗಳೆಂದು ನಂಬುವುದು?"

"ನಾವು ಯಾರನ್ನೂ ಸಂಶಯದಿಂದ ನೋಡುತ್ತಿಲ್ಲ. ನಮ್ಮ ಎಲ್ಲ ಚಟುವಟಿಕೆಗಳ ವಿಷಯದಲ್ಲಿ ವೃಥಾ ಸಂದೇಹ ತಾಳುತ್ತಿರುವವರು ನೀವೇ ಹೊರತು ನಾನಲ್ಲ !" ಎಂದರು ಮಹಾರಾಣಿ ದುರ್ಲಭದೇವಿ.

"ನನ್ನ ವಿಷಯದಲ್ಲಿ ನೀವು ಸಂದೇಹಿಸುತ್ತಿರುವಿರೋ, ನಿಮ್ಮ ವಿಷಯದಲ್ಲಿ ನಾನು ಸಂದೇಹಿಸುತ್ತಿರುವೆನೋ ಎಂಬುದಕ್ಕೆ ನೀವು ಬೆಟ್ಟದ ಮೇಲಿನ ಅರಮನೆಗೆ ಬಂದಿರುವುದೇ ಸಾಕ್ಷಿ. ನೀವು ನನ್ನ ವಿಷಯದಲ್ಲಿ ಮನಸ್ಸನ್ನು ಕೆಡಿಸಿಕೊಂಡಿದ್ದೀರಿ. ದ್ರೋಹಿಗಳ ಮಾತು ಕೇಳಿಕೊಂಡು ನನ್ನಲ್ಲಿ ದ್ರೋಹ ಚಿಂತನೆಮಾಡುತ್ತಿದ್ದೀರಿ, ನಿಮಗೆ ನನ್ನಲ್ಲಿ ಮೊದಲಿನ ನಂಬಿಕೆ ಇಲ್ಲ. ನನ್ನಿಂದ ಯಾವುದೋ ಕೇಡು ಕಾದಿರುವಂತೆ, ಮುಂಜಾಗ್ರತೆ ವಹಿಸುತ್ತಿದ್ದೀರಿ; ನಗರದಲ್ಲಿ ಈಗಾಗಲೆ ಅಶಾಂತಿ ತಲೆದೋರಿದೆ. ಸೈನಿಕರಲ್ಲಿ ವಿಶೇಷ ಚಟುವಟಿಕೆಗಳು ಆರಂಭವಾಗಿವೆ. ಜನ ನೀವು ಇಲ್ಲಿಗೆ ಬಂದಿರುವುದಕ್ಕೂ, ವಿಷ್ಣು ನನ್ನ ಬಳಿ ಆಶ್ರಯ ಬೇಡಿರುವುದಕ್ಕೂ ವಿಪರೀತಾರ್ಥ ಕಲ್ಪಿಸಿಕೊಂಡು, ಹೆದರಿ ಕುಳಿತಿದ್ದಾರೆ. ಜನ ಸಿಂಹಾಸನದ ಸಲುವಾಗಿ ಯಾವುದೋ ಹೋರಾಟ ನಡೆಯಲಿದೆ, ಎಂದು ಪ್ರಕ್ಷುಬ್ಧರಾಗಿದ್ದಾರೆ. ಅಂತಹ ಪ್ರಸಂಗ ಏನು ನಡೆಯಿತು. ಜನತೆಯ ಭಯ ನಿರ್ಮೂಲಗೊಳಿಸಿ, ಅಭಯ ಕೊಡಬೇಕಾಗಿರುವ ನೀವೇ ಹೀಗೆ ಭಯಗ್ರಸ್ತರಾಗಿ ಮುಂಜಾಗ್ರತೆ ವಹಿಸಿಕೊಂಡ ಮೇಲೆ ಇನ್ನು ಜನತೆಗೆ ಅಭಯ ಕೊಡುವವರು ಯಾರು ?"

"ಜನತೆ ನಿಮ್ಮ ವಿಷಯದಲ್ಲಿ ಮೊದಲಿನಿಂದಲೂ ಸಂದೇಹಿಸುತ್ತಾ ಬಂದಿದೆ ಮಂಗಳೇಶರೇ ! ನೀವು ನ್ಯಾಯವಾದ ಹಕ್ಕುದಾರನಾದ ಪುಲಿಕೇಶಿಗೆ ಸಿಂಹಾ

ಸನವನ್ನು ಬಿಟ್ಟುಕೊಡದೆ, ಇನ್ನೂ ರಾಜಪ್ರತಿನಿಧಿಗಳಾಗಿ ಮುಂದುವರಿಯುತ್ತಿರುವುದನ್ನು ನೋಡಿ, ನೀವು ರಾಜ್ಯಲೋಭದಿಂದ, ಸಿಂಹಾಸನವನ್ನು ದುರಾಕ್ರಮಿಸಿಕೊಳ್ಳಲು ನೋಡುತ್ತಿರುವುದಾಗಿ, ಜನತೆ ಸಂಶಯಗ್ರಸ್ತವಾಗಿದೆ. ಅದಕ್ಕೆ ತಕ್ಕಂತೆ ನೀವು ನಮ್ಮ ಆಶ್ರಯದಲ್ಲಿದ್ದ ವಿಷ್ಣುವರ್ಧನನನ್ನು ನಿಮ್ಮ ವಶಕ್ಕೆ ತೆಗೆದುಕೊಂಡು, ಅವನನ್ನು ಪುಲಿಕೇಶಿಯ ವಿರುದ್ಧ ಎತ್ತಿಕಟ್ಟಿರುವಿರಿ. ಇದನ್ನೆಲ್ಲಾ ನೋಡಿ, ಜನತೆಗೆ ಗಾಬರಿ, ಕಳವಳಗಳಾಗದೆ ಇರುವುದೆ ? ಜನತೆಗೆ ಭಯ ನಿರ್ಮೂಲಗೊಳಿಸಬೇಕಾಗಿರುವುದು ನೀವೇ ಹೊರತು, ನಾವಲ್ಲ !"

ಎಂದು ಮಹಾರಾಣಿಯವರು ನಿಷ್ಠುರವಾಗಿ ಹೇಳಿದರು.

"ಮಹಾರಾಣಿಯವರೇ, ಎಲ್ಲವನ್ನು ತಿಳಿದ ನೀವೂ ವಿಷ್ಣುವನ್ನು ನಾನು ವಶಕ್ಕೆ ತೆಗೆದುಕೊಂಡು, ಪುಲಿಕೇಶಿಯ ವಿರುದ್ಧ ಎತ್ತಿಕಟ್ಟಿರುವೆನೆಂದು ಆರೋಪಿಸುತ್ತೀರಾ ? ವಿಷ್ಣುವನ್ನು ನಾನು ಕರೆದೆನೆ ? ಅವನಿಗೆ ನಿಮ್ಮಲ್ಲಿ ನಂಬಿಕೆ ತಪ್ಪಿ, ಇಲ್ಲಿದ್ದರೆ ತನ್ನ ಪ್ರಾಣ ಸುರಕ್ಷಿತವಲ್ಲವೆಂದು ಅವನಾಗಿ ಅವನೇ, ನನ್ನ ಆಶ್ರಯಕ್ಕೆ ಬಂದ. ಅವನಿಗೆ ಆಶ್ರಯವಿತ್ತರೆ ಇಷ್ಟೆಲ್ಲ ಸಂಶಯಕ್ಕೆ ಕಾರಣವಾಗುವುದೆಂದು ನನಗೆ ತಿಳಿದಿತ್ತು. ವಿಷ್ಣುವಿಗೆ, ನಿಮ್ಮ ಬಳಿಗೆ ಹಿಂದಿರುಗಲು ನಾನು ಎಷ್ಟೋ ಹೇಳಿದೆ. ಅವನು ಕೇಳಲಿಲ್ಲ. 'ಅಪ್ಪಾಜಿ, ನೀವು ನನಗೆ ಆಶ್ರಯ ಕೊಡದೆ ಇದ್ದರೆ, ಅರಮನೆಯ ಪುಷ್ಕರಣಿ ನನಗೆ ಆಶ್ರಯ ಕೊಡುತ್ತದೆ!' ಎಂದು ಹೇಳಿದ ಮೇಲೆ ಅವನನ್ನು ನಿರ್ವಾಹವಿಲ್ಲದೆ ಅರಮನೆಯಲ್ಲಿ ಇಟ್ಟುಕೊಳ್ಳಬೇಕಾಯಿತು. ಇದನ್ನು ನೀವು ನನ್ನ ದ್ರೋಹ ಚಿಂತನೆ ಎಂದು ಆರೋಪಿಸುತ್ತೀರಾ ?"

"ವಿಷ್ಣುವರ್ಧನನು ನಮ್ಮ ಆಶ್ರಯದಲ್ಲಿ ಇದ್ದರೆ ಅವನಿಗೆ ಯಾವ ಅಪಾಯವಿತ್ತು ? ಇದೆಲ್ಲ ನೀವು ಬಿತ್ತಿದ ಸಂಶಯದ ಬೀಜ ! ಇಷ್ಟು ದಿನ ಇಲ್ಲದಿದ್ದ ಅಪಾಯದ ಭೀತಿ ಒಮ್ಮೆಲೇ ಉಂಟಾಗಲು, ನೀವು ಅವನ ಮನಸ್ಸನ್ನು ಪುಲಿಕೇಶಿಯ ವಿರುದ್ಧ ಕೆಡಿಸಿದುದೇ ಕಾರಣ ! ವಿಷ್ಣುವಿನ ಸಂಶಯಕ್ಕೆ ನೀವೇ ಕಾರಣ ! ನಿಮ್ಮ ದ್ರೋಹ ಚಿಂತನೆಯಿಂದ ಅವನು ನಮ್ಮನ್ನೂ ಸಂದೇಹಿಸುವಂತೆ ಆಯಿತು !"

"ಮಹಾರಾಣಿಯವರು ನನ್ನನ್ನು ವೃಥಾ ಸಂದೇಹಿಸುತ್ತಿರುವುದರಿಂದಲೇ ಇಷ್ಟೆಲ್ಲ ಅನರ್ಥ ಪರಂಪರೆಗಳಿಗೆ ಕಾರಣವಾಯಿತು. ನಿಮ್ಮ ಮಹತ್ವಾಕಾಂಕ್ಷೆ ಎಲ್ಲರನ್ನೂ ಸಂದೇಹಿಸುವಂತೆಮಾಡಿದ್ದರೆ, ಅದು ನಿಮ್ಮ ತಪ್ಪೇ ಹೊರತು ನನ್ನ

ತಪ್ಪಲ್ಲ. ವಿಷ್ಣುವು ಇಲ್ಲಿ ಇದ್ದರೆ ಅಪಾಯವೆಂದು ನಾನು ಹೇಳಿದ ಮಾತಿಗೆ ನನ್ನಲ್ಲಿ ಸಂದೇಹ ವ್ಯಕ್ತಪಡಿಸಿ, ಸ್ವಾರ್ಥದ ಆರೋಪ ಹೊರಿಸಿದಿರಿ. ಆದರೆ ವಿಷ್ಣುವು ಇಲ್ಲಿ ಇದ್ದಿದ್ದರೆ ಖಂಡಿತವಾಗಿಯೂ ಅವನ ಜೀವಕ್ಕೆ ಅಪಾಯವಿತ್ತೆಂಬುದಕ್ಕೆ ನಿದರ್ಶನ ನಿನ್ನೆಯ ದಿನ ದೊರಕಿತು. ನಿನ್ನೆಯ ದಿನ ರಾತ್ರಿ ನಿಮ್ಮ ಕಡೆಯ ಯಾರೋ ದುರುಳರು ವಿಷ್ಣುವಿನ ಮೇಲೆ ಆಕ್ರಮಣ ಮಾಡಿದರು. ಸುದೈವದಿಂದ ವಿಷ್ಣು ಗಂಡಾಂತರದಿಂದ ಪಾರಾದ."

"ನಿನ್ನೆ ಯಾರು ವಿಷ್ಣುವಿನ ಮೇಲೆ ಆಕ್ರಮಣ ಮಾಡಿದರು ? ಅವನು ಹೇಗೆ ಪಾರಾದ ?" ಮಹಾರಾಣಿಯವರು ತಮಗೆ ಏನೂ ತಿಳಿಯದಂತೆ ಹೇಳಿದರು.

"ನಿಮಗೆ ಈ ವೇಳೆಗೆ ಈ ಎಲ್ಲ ಸಂಗತಿಗಳು ತಿಳಿದಿರಬೇಕು. ಆದರೂ ಕೇಳುತ್ತಿದ್ದೀರಿ" ಎಂದು ಹೇಳಿ ನಡೆದ ಆಕ್ರಮಣದ ಸಂಗತಿಯನ್ನೆಲ್ಲಾ ಕೆಲವೇ ಮಾತಿನಲ್ಲಿ ಹೇಳಿದ.

"ಇದರಲ್ಲಿ ಸಮಂತಭದ್ರರ ಕೈವಾಡವಿರುವುದು ನಮಗೆ ಸ್ಪಷ್ಟವಾಗಿದೆ. ಅವರು ಈ ಕಾರ್ಯವನ್ನು ಧೈರ್ಯವಹಿಸಿ ಮಾಡಲಾರರು. ಅಂದಮೇಲೆ ಇದರಲ್ಲಿ ನಿಮ್ಮ ಪಾತ್ರವೂ ಇದೆ ಎಂದಾಯಿತಲ್ಲವೆ ? ಆದರೂ ಏನೂ ತಿಳಿಯದಂತೆ ನನ್ನನ್ನು ಪ್ರಶ್ನಿಸುತ್ತೀರಾ ?"

"ವಿಷ್ಣುವಿನ ಜೀವದ ಮೇಲೆ ನಡೆದ ಯಾವುದೇ ಆಕ್ರಮಣ ನನಗೆ ತಿಳಿಯದು. ನಿಮ್ಮಾಣೆಗೂ ನನಗೆ ಇಂದು ಈ ತನಕ ಸುದ್ದಿ ತಿಳಿದಿರಲಿಲ್ಲ. ನೀವು ಹೇಳಿದ ಮೇಲೆ ವಿವರಗಳು ತಿಳಿದುದು. ಕುಮಾರನ ಮೇಲೆ ನಿನ್ನೆ ಮಹಾಕೂಟದಲ್ಲಿ ಆಕ್ರಮಣ ನಡೆದಂತೆ ಸಮಂತಭದ್ರರು ಹೇಳಿದ್ದರು. ಆದರೆ ವಿವರಗಳು ಅವರಿಗೂ ತಿಳಿದಿರಲಿಲ್ಲ. ಹೀಗಿರುವಲ್ಲಿ ಇದರಲ್ಲಿ ನಮ್ಮ ಪಾತ್ರವನ್ನು ಆರೋಪಿಸುತ್ತೀರಾ ?"

"ವಿಷ್ಣುವಿನ ಮೇಲಿನ ಆಕ್ರಮಣಕಾರಿಗಳಿಂದ ಸತ್ಯಾಂಶ ನಮಗೆ ತಿಳಿದಿದೆ. ಇದರಲ್ಲಿ ಸಮಂತಭದ್ರರ ಪಾತ್ರವಿರುವುದು ಖಂಡಿತ."

"ನನ್ನ ಮೇಲೆ ಮಿಥ್ಯಾರೋಪಣೆ ಹೊರಿಸುತ್ತಿದ್ದೀರಿ ಪ್ರಭು !"

"ಮಿಥ್ಯಾರೋಪಣೆಯಲ್ಲ ಅಮಾತ್ಯರೇ, ಸತ್ಯಾರೋಪಣೆ. ನೀವು ನಮ್ಮ ಅನ್ನ ತಿಂದು, ನಮಗೆ ದ್ರೋಹ ಬಗೆಯುವಿರೆಂದು ನಾನು ತಿಳಿದಿರಲಿಲ್ಲ. ನೀವು

ರಾಜದ್ರೋಹ ಮಾಡಿರುವುದು ಮಾತ್ರವಲ್ಲ, ಅನ್ನವಿಟ್ಟ ದಣಿಗೆ ವಿಶ್ವಾಸದ್ರೋಹ ವನ್ನೂ ಮಾಡಿದ್ದಿರಿ."

"ನಿಮಗಿಂತಲೂ ರಾಜದ್ರೋಹ, ವಿಶ್ವಾಸದ್ರೋಹ ನಾನು ಯಾವುದನ್ನೂ ಮಾಡಲಿಲ್ಲ ಪ್ರಭು. ನಾನು ದುಷ್ಟರ ಕೈಯಿಂದ ಕುಮಾರನ ಜೀವವನ್ನು ರಕ್ಷಿಸಲು ಪ್ರಯತ್ನಿಸಿದೆ. ಆದರೆ ನೀವು ನ್ಯಾಯವಾದ ಹಕ್ಕುದಾರರನ್ನು ವಂಚಿಸಿ, ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಯೋಚಿಸಿದ್ದೀರಿ. ನಿಮ್ಮ ರಾಜದ್ರೋಹದ ಮುಂದೆ ನನ್ನದು ಅತ್ಯಲ್ಪ ಪ್ರಭು."

"ನೀವು ನನ್ನನ್ನು ನಿಂದಿಸುತ್ತಿದ್ದೀರಿ. ನಿಮಗೆ ಎಷ್ಟು ಸೊಕ್ಕು ?"

"ನೀವು ಪರಮ ಪೂಜ್ಯರಾದ ಮಹಾಮಾತೊಶ್ರೀಯವರನ್ನು ಅವರ ನಿವಾಸಕ್ಕೇ ಬಂದು, ಅವರನ್ನು ನಿಂದಿಸಲು ಎಷ್ಟು ಧೈರ್ಯ ? ಅವರು ಕನಸು ಮನಸಿನಲ್ಲಿ ಎಣಿಸದಿದ್ದ ದ್ರೋಹಚಿಂತನೆಯನ್ನು ಅವರಿಗೆ ಹೊರಿಸಲು ನಿಮಗಾದರೂ ಎಷ್ಟು ಸೊಕ್ಕು ?" ಅಷ್ಟೇ ಉದ್ಧಟತನದಲ್ಲಿ ಸಮಂತಭದ್ರ ಉತ್ತರಿಸಿದ್ದ

"ಮಹಾರಾಣಿಯವರ ಬಳಿ ವಿಷ್ಣುವಿನ ಪ್ರಾಣಕ್ಕೆ ಅಪಾಯವಿತ್ತೆಂದು ನಾನು ಆರೋಪಿಸಿರುವುದು ಮಿಥ್ಯಾರೋಪವೆ ?"

"ಹೌದು ! ಪರಮಭಾಗವತ ಶಿರೋಮಣಿಗಳಾದ ಅವರು ತಮ್ಮ ಕರುಳಿನ ಬಳ್ಳಿಯನ್ನು ಕತ್ತರಿಸುವರೆ ? ತಮ್ಮ ಮೋಹದ ಮುದ್ದೆಯಾದ ಕುಮಾರನ ಜೀವಕ್ಕೆ ಎಂದಾದರೂ ಅಪಾಯ ತರುವರೇ ? ಕನಸುಮನಸಿನಲ್ಲಾದರೂ ಅಹಿತ ವನ್ನು ಕೋರುವರೆ ?"

"ಹಾಗಿದ್ದರೆ, ವಿಷ್ಣುವೇಕೆ ಇಲ್ಲಿಂದ ಹೊರಟುಹೋದ ?"

"ನೀವು ಕರೆಸಿಕೊಂಡಿರಿ, ನಿಮ್ಮ ಆಶ್ರಯಕ್ಕೆ ಬಂದ."

"ವಿಷ್ಣುವನ್ನು ನಾನು ಕರೆಸಿಕೊಂಡೆನೇ ?"

"ಹೌದು, ಅವನ ಮುಗ್ಧಮನಸ್ಸಿನಲ್ಲಿ, ಪುಲಿಕೇಶಿ ಹಾಗೂ ಮಹಾರಾಣಿ ಯವರ ಬಗ್ಗೆ ಇಲ್ಲದ ಸಂದೇಹ, ಭೀತಿಗಳನ್ನು ಬಿತ್ತಿ !"

"ನಾನು ವಿಷ್ಣುವನ್ನು ಕರೆಸಿಕೊಂಡೆನೆಂದೇ ತಿಳಿಯಿರಿ ! ನೀವೇಕೆ ಮೋಸ ದಿಂದ ಅರಿಯದ ಬಾಲಕನ ಮೇಲೆ ಆಕ್ರಮಣ ಮಾಡಿ, ಅವನ ಸುಕುಮಾರ ಜೀವಕ್ಕೆ ಗಂಡಾಂತರ ತರುತಿದ್ದೀರಿ ?"

"ನಾನು ವಿಷ್ಣುವಿನ ಜೀವಕ್ಕೆ ಗಂಡಾಂತರ ತರಬೇಕೆಂದು ಕನಸುಮನಸಿ

ನಲ್ಲಿ ಎಣಿಸಿದವನಲ್ಲ. ಅವನು ನಿಮ್ಮ ಬಳಿ ಇದ್ದರೆ, ಅವನಿಗೆ ನಿಮ್ಮಿಂದ ಕೇಡಾಗು ವುದು ಮಾತ್ರವಲ್ಲ. ಪಟ್ಟಾಭಿಷೇಕದ ಪ್ರಶ್ನೆ ತೊಡಕಾಗುವುದೆಂದು ಅವ ನನ್ನು ಮತ್ತೆ ಮಹಾರಾಣಿಯವರ ವಶಕ್ಕೆ ಒಪ್ಪಿಸಲು, ನಾನು ವಿಷ್ಣುವನ್ನು ಅಪಹರಿಸಲೆತ್ನಿಸಿದುದು ದಿಟ. ಆದರೆ ಇದರಲ್ಲಿ ನಿಮಗಿರುವಂತೆ ಯಾವುದೇ ಸ್ವಾರ್ಥ ನನಗೆ ಇರಲಿಲ್ಲ !"

"ಪುಲಿಕೇಶಿಯನ್ನು ಅಧಿಕಾರಕ್ಕೆ ತರಬೇಕೆಂಬುದೇ ನಿಮ್ಮ ಸ್ವಾರ್ಥ."

"ಇದು ಸ್ವಾರ್ಥವಲ್ಲ. ಪ್ರತಿಯೊಬ್ಬ ಸ್ವಾಮಿನಿಷ್ಠ ಸೇವಕನ ಬಹು ದಿನಗಳ ಹಾರೈಕೆ !"

"ಇದನ್ನು ಈಡೇರಿಸಿಕೊಳ್ಳಲು ವಿಷ್ಣು ಪ್ರತಿಬಂಧಕವೆಂದು ಅವನನ್ನು ಕೊಲೆ ಮಾಡಬೇಕೆಂದು ನಿಶ್ಚಯಿಸಿದ್ದಿರಿ."

"ಅಂತಹ ಯಾವ ನೀಚಭಾವನೆ ನನಗೆ ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ."

"ನನ್ನನ್ನು ಇಷ್ಟು ಸುಲಭವಾಗಿ ನೀವು ವಂಚಿಸಲಾರಿರಿ ! ಆ ದಿನ ವಿಷ್ಣು ವರ್ಧನನ ವಿರೋಧವನ್ನು ಒತ್ತಾಯದಿಂದ ನಿವಾರಿಸಿಕೊಳ್ಳುವುದಾಗಿ ಅವನಿಗೆ ಬೆದರಿಕೆ ಹಾಕಲಿಲ್ಲವೆ ? ಅಂದಿನ ನಿಮ್ಮ ಹೇಳಿಕೆ ಎಲ್ಲವೂ ನನಗೆ ವರದಿಯಾಗಿದೆ."

"ವಿಷ್ಣುವಿನ ವಿರೋಧ ಮಾತ್ರವಲ್ಲ, ದೇವರೇ ವಿರೋಧಿಸಿ ನಿಂತರೂ ನಾವು ಲೆಕ್ಕಿಸುವುದಿಲ್ಲ. ಪುಲಿಕೇಶಿಯು ಸಾಮ್ರಾಟನಾಗುವುದನ್ನು ಯಾರೂ ತಪ್ಪಿಸಲಾರರು ! ಈ ಮಾತು ಚೆನ್ನಾಗಿ ನೆನಪಿನಲ್ಲಿಡಿ."

"ಹಾಗಾದರೆ ಸಿಂಹಾಸನಕ್ಕಾಗಿ ನೀವು ಪುಲಿಕೇಶಿಯ ಪಕ್ಷಕಟ್ಟಿ ಹೋರಾಡು ವುದು ದಿಟವೆ ?"

"ಹೌದು."

"ಸಿಂಹಾಸನಕ್ಕಾಗಿ ನಿರಪರಾಧಿಗಳ ರಕ್ತಹರಿಸುವುದೂ ದಿಟವೆ ?"

"ಹೌದು. ಆದರೆ ನಿರಪರಾಧಿಗಳ ರಕ್ತಹರಿಸಬಾರದೆಂದೇ ನಾವು ಹತ್ತು ವರ್ಷ ಕಾಲ ಸಂಯಮದಿಂದ ನಿಮ್ಮ ದಬ್ಬಾಳಿಕೆಯನ್ನು ಸಹಿಸಿಕೊಂಡಿದ್ದೆವು. ನಿಮ್ಮ ದ್ರೋಹ ಚಿಂತನೆಯನ್ನು ಸಹಿಸಿಕೊಂಡಿದ್ದೆವು. ನಮ್ಮ ಸೈರಣೆಗೂ ಮಿತಿ ಇದೆ. ಇನ್ನೊಂದು ಗಳಿಗೆ ನಿಮ್ಮ ದಬ್ಬಾಳಿಕೆಯನ್ನು ಸಹಿಸಲಾರೆವು."

ಹಾಗಾದರೆ ನೀವು ಹೋರಾಟಕ್ಕೆ ಸಿದ್ಧರಾಗಿ ಕುಳಿತಿದ್ದೀರಾ ?"

"ಹೌದು. ಇದು ಸಿಂಹಾಸನಕ್ಕಾಗಿ ನಡೆಯುವ ಹೋರಾಟವಲ್ಲ, ಸತ್ಯ ಧರ್ಮಗಳಿಗಾಗಿ ನಡೆಯುವ ಹೋರಾಟ. ಇದರಲ್ಲಿ ನಾವು ಉಳಿಯಬೇಕು, ಇಲ್ಲವೇ ಮಡಿಯಬೇಕು ! ನಾವು ಬದುಕಿರುವ ತನಕ ಸಿಂಹಾಸನ ದುರಾಕ್ರಮಣ ವಾಗುವುದನ್ನು ಸಹಿಸಲಾರೆವು."

ಈ ಮಾತು ಕೇಳಿ ಮಂಗಳೇಶನು ಬೆರಗಾದರೂ ವಿಚಲಿತನಾಗಲಿಲ್ಲ. ಅವನಿಗೆ ಅಮಾತ್ಯ ಸಮಂತಭದ್ರನ ಮಾತು ಕೇಳಿ ಅವನನ್ನು ಅಲ್ಲೇ ತುಂಡರಿಸಿ ಕೆಡಹುವಷ್ಟು ಸಿಟ್ಟು ಬಂದಿದ್ದರೂ ತಾನು ಒಬ್ಬನೇ ಅಸಹಾಯನಾಗಿ ಅಲ್ಲಿರುವು ದನ್ನು ನೆನೆದು, ಈಗ ದುಡಿಕಿದರೆ, ತನ್ನ ಪ್ರಾಣಕ್ಕೆ ಅಪಾಯವೆಂದು ಅರಿತು, ಉಪಾಯವಾಗಿ ಅಲ್ಲಿಂದ ತಪ್ಪಿಸಿಕೊಂಡು ಹೋಗಲು, ತನ್ನ ಸಿಟ್ಟನ್ನು ನುಂಗಿ ಕೊಂಡು ಸಮಾಧಾನದ ಧ್ವನಿಯಲ್ಲಿ ಹೇಳಿದನು :

"ಅಮಾತ್ಯರೆ, ಭಾವೋದ್ರೇಕಕ್ಕೆ ಇದು ಸ್ಥಳವಲ್ಲ. ನನಗೆ ನಿಮ್ಮ ಸ್ಪಷ್ಟ ಮಾತುಗಳಿಂದ ಕೋಪ ಬರುವ ಬದಲು, ಸಂತೋಷವೇ ಆಗಿದೆ. ಈಗ ನಮಗೆ ಬೇಕಾಗಿರುವುದು ನುಡಿದುದನ್ನು ನಡೆಸುವ, ನಿಮ್ಮಂತಹ ಶ್ರದ್ಧಾವಂತ ಸ್ವಾಮಿ ನಿಷ್ಠರು ! ತಾವು ನಂಬಿದ ತತ್ವಕ್ಕಾಗಿ ಸರ್ವಸ್ವವನ್ನು ಬಲಿಗೊಡಲು ಹಿಂದೆಗೆಯದ ಸತ್ಯವ್ರತಿಗಳು! ನೀವು ಅಂತಹವರೆಂಬುದನ್ನು ನಾನು ಎಂದೋ ಮನಗಂಡಿದ್ದೇನೆ. ಅಂತಲೇ ನಿಮ್ಮ ಮಾತಿನಿಂದ ನಾನು ಅಸಮಾಧಾನಗೊಳ್ಳುವುದಕ್ಕಿಂತಲೂ, ಸಂತೋಷಪಟ್ಟಿದ್ದೇನೆ. ನಿಮ್ಮಂತಹ ಸ್ವಾಮಿನಿಷ್ಠ ಸೇವಕರನ್ನು ಪಡೆದ ನಾಡು, ಪ್ರಭು ಧನ್ಯ !.....ಈಗ ನಾವು ನಿರುದ್ವೇಗದಿಂದ ಕುಮಾರನ ಪಟ್ಟಾಭಿಷೇಕಕ್ಕೆ ಬಂದಿರುವ ತೊಡಕನ್ನು ಒಂದು ಮನೆಯವರಂತೆ ಕುಳಿತು ಬಗೆಹರಿಸಿಕೊಳ್ಳೋಣ. ಇದುವರೆಗೆ ನಾವು ದೂರದಿಂದ ಇದ್ದುಕೊಂಡು ಮನಸ್ಸಿನಲ್ಲಿರುವುದನ್ನು ಬಿಚ್ಚಿ ಆಡಿಕೊಳ್ಳದೆ, ಇಲ್ಲದ ಸಂಶಯಕ್ಕೆ ಅವಕಾಶಕೊಟ್ಟಿದ್ದೇವೆ. ಸರಳವಾಗಿದ್ದ ಸಿಂಹಾಸನದ ಪ್ರಶ್ನೆಯನ್ನು ಕ್ಲಿಷ್ಟಗೊಳಿಸಿದ್ದೇವೆ. ಈಗ ಸಾಮ್ರಾಜ್ಯದ ಹಿತೈಷಿ ಗಳಾದ ನಾವು ಈ ಬಗ್ಗೆ ವಿಚಾರಮಾಡಿ ಒಂದು ನಿರ್ಣಯಕ್ಕೆ ಬಂದರೆ, ಸಿಂಹಾಸನಕ್ಕಾಗಿ ವೃಥಾ ನಡೆಯಲಿರುವ ಹೋರಾಟವನ್ನೂ ರಕ್ತಪಾತವನ್ನೂ ತಪ್ಪಿಸಿದಂತೆ ಆಗುತ್ತದೆ !" ಎಂದು ಹೇಳಿ ಮಹಾರಾಣಿಯವರ ಕಡೆ ನೋಡಿದ.

"ಸಿಂಹಾಸನಕ್ಕಾಗಿ ಸಹೋದರರಲ್ಲಿ ಹೋರಾಟ ನಡೆಯುವುದು ನನಗೂ ಇಷ್ಟವಿಲ್ಲ. ಇದನ್ನು ಶಾಂತರೀತಿಯಲ್ಲಿ ಬಗೆಹರಿಸಿಕೊಳ್ಳಬೇಕೆಂಬುದೇ ನನ್ನ

ಅಭೀಷ್ಟ. ಇದು ಬಗೆಹರಿಯಲು ನೀವು ನೆರವಾದರೆ, ನಮಗಿಂತ ಭಾಗ್ಯಶಾಲಿಗಳು ಬೇರೆ ಇಲ್ಲ."

"ಸಿಂಹಾಸನದ ವಿಷಯದಲ್ಲಿ ಬಗೆಹರಿಸಲಾಗದ ಕ್ಲಿಷ್ಟತೆ ಯಾವುದೂ ಇಲ್ಲ. ಆದರೆ ವಿಷ್ಣುವರ್ಧನನ ಕೇಳಿಕೆಯನ್ನು, ಬಾಲಕನ ಅರ್ಥವಿಲ್ಲದ ಮೊಂಡುಹಟವೆಂದು ನೀವು ನಿರ್ಲಕ್ಷಿಸಬಾರದೆಂದು ನನ್ನ ಪ್ರಾರ್ಥನೆ. ಅವನು ಹೇಳುವುದನ್ನು ನೀವು ಕೊಂಚ ಸಹಾನುಭೂತಿಯಿಂದ ಕೇಳಿಕೊಳ್ಳಬೇಕು !"

"ವಿಷ್ಣುವರ್ಧನನ ಬಗ್ಗೆ ಮೊದಲಿನಿಂದಲೂ ನಮಗೆ ಹೆಚ್ಚು ಸಹಾನುಭೂತಿ ಇದೆ. ಅವನ ಇಚ್ಛೆ ಏನೆಂದು ಸ್ಪಷ್ಟಪಡಿಸಿರಿ. ಸಾಧ್ಯವಾದರೆ ನಡೆಸಿಕೊಡುತ್ತೇವೆ."

"ಪುಲಿಕೇಶಿಯ ವಿಷಯದಲ್ಲಿ ವಿಷ್ಣುವಿಗೆ ಇರುವ ಅಂಜಿಕೆ ನಿರಾಧಾರವಾದುದಲ್ಲ. ಪುಲಿಕೇಶಿಯ ಮನಸ್ಸು ಹಾಲಿನಷ್ಟು ನಿರ್ಮಲವಾದುದು, ಬೆಣ್ಣೆಯಷ್ಟು ಮೃದುವಾದುದು, ಗಂಗೆಯಷ್ಟು ಪರಿಶುದ್ಧವಾದುದೆಂದು ನಮಗೆ ನಿಮಗೆ ತಿಳಿದಿದೆ. ಆದರೆ ಅವನ ದರ್ಪೋಕ್ತಿಗಳನ್ನು ಕೇಳಿ ಪುಲಿಕೇಶಿಯು ಕೆಟ್ಟವನೆಂಬ ಭಾವನೆಯನ್ನು ವಿಷ್ಣು ತಲೆಯಲ್ಲಿ ತುಂಬಿಕೊಂಡಿದ್ದಾನೆ. ಇದನ್ನು ಹೆಚ್ಚಿಸಲು ಇತ್ತೀಚೆಗೆ, ಅವನ ಮೇಲೆ ಆಕ್ರಮಣ ನಡೆದಿದೆ. ಪುಲಿಕೇಶಿಯು ಸಾಮ್ರಾಟನಾದರೆ ಖಂಡಿತವಾಗಿಯೂ ತನ್ನ ಜೀವಕ್ಕೆ ಗಂಡಾಂತರವೆಂದು ತಿಳಿದಿದ್ದಾನೆ. ಅವನ ಭೀತಿ ನಿರ್ಮೂಲಕ್ಕೆ ಇರುವ ದಾರಿ ಎರಡೇ. ಸಾಮ್ರಾಜ್ಯವನ್ನು ಒಬ್ಬರ ಸಲುವಾಗಿ ಮತ್ತೊಬ್ಬರು ತ್ಯಾಗಮಾಡುವುದು. ಇಲ್ಲವೇ ಅಖಂಡವಾದ ಸಾಮ್ರಾಜ್ಯವನ್ನು ಎರಡು ಸ್ವತಂತ್ರ ರಾಜ್ಯಗಳಾಗಿ ಹಂಚಿಕೊಡುವುದು. ಮುಂದೆ ಸಹೋದರರಲ್ಲಿ ಪರಸ್ಪರ ನಂಬಿಕೆ ವಿಶ್ವಾಸಗಳು ಮೂಡಿದರೆ, ಆಗ ಅವರು ತಮ್ಮ ರಾಜ್ಯಗಳನ್ನು ಒಟ್ಟು ಸೇರಿಸಿ, ಚಾಲುಕ್ಯ ಸಾಮ್ರಾಜ್ಯದ ಅಖಂಡತೆಯನ್ನು ಕಾಯ್ದುಕೊಳ್ಳಲಿ."

"ನನ್ನ ಪ್ರಾಣಕ್ಕಿಂತಲೂ ಪ್ರಿಯವಾಗಿರುವ ಚಾಲುಕ್ಯ ಸಾಮ್ರಾಜ್ಯ ನನ್ನ ಕಣ್ಣೆದುರಿನಲ್ಲಿ ಒಡೆಯುವುದನ್ನು ನಾನು ನೋಡಲಾರೆ. ಅದನ್ನು ನೋಡುವುದಕ್ಕಿಂತಲೂ ಸಾವೇ ಸುಖಕರ. ಮಕ್ಕಳು ಸಾಮ್ರಾಜ್ಯವನ್ನು ಹಂಚಿಕೊಳ್ಳುವ ಮೊದಲು, ನನ್ನ ದೇಹವನ್ನು ಇಬ್ಭಾಗಮಾಡಿ ಹಂಚಿಕೊಂಡು, ಅನಂತರ ನನ್ನ ಗೋರಿಯ ಮೇಲೆ ತಮ್ಮ ಸಾಮ್ರಾಜ್ಯ ಸೌಧವನ್ನು ಕಟ್ಟಿಕೊಳ್ಳಲಿ" ಮಹಾರಾಣಿ

ದುರ್ಲಭದೇವಿಯವರು ಖಡಾಖಂಡಿತವಾಗಿ ಹೇಳಿಬಿಟ್ಟರು.

"ನನ್ನ ಅಭಿಪ್ರಾಯವೂ ಅಷ್ಟೇ. ಪೂಜ್ಯರಾದ ಪುಲಿಕೇಶಿ ಸಾರ್ವಭೌಮರೂ, ಕೀರ್ತಿವರ್ಮ ಮಹಾರಾಜರೂ ಅನೇಕ ಬಲಿದಾನದಿಂದ ಕಟ್ಟಿ ನಿಲ್ಲಿಸಿರುವ ಚಾಲುಕ್ಯ ಸಾಮ್ರಾಜ್ಯವನ್ನು ತುಂಡರಿಸಿ ಶತ್ರುಗಳ ಪಾಲು ಮಾಡುವುದಕ್ಕಿಂತಲೂ ಸಾಯುವುದು ಮೇಲು."

ಪ್ರಧಾನ ಸಮಂತಭದ್ರ ತನ್ನ ದನಿಗೂಡಿಸಿದ.

"ಹಾಗಾದರೆ, ನಮಗೆ ಇರುವ ದಾರಿ ಒಂದೇ. ಸಹೋದರರಲ್ಲಿ ಒಬ್ಬರ ಸಲುವಾಗಿ ಮತ್ತೊಬ್ಬರು ಸಿಂಹಾಸನ ತ್ಯಾಗಮಾಡುವುದು!" ಮಂಗಳೇಶನೆಂದ.

"ಸಿಂಹಾಸನಕ್ಕೆ ಪುಲಿಕೇಶಿಯೇ ನ್ಯಾಯವಾದ ಹಕ್ಕುದಾರ. ಸಾಂಪ್ರದಾಯಕವಾಗಿ, ಧರ್ಮಸಮ್ಮತವಾಗಿ, ಸಿಂಹಾಸನ ಜ್ಯೇಷ್ಠ ಸಂತತಿಯ ಹಕ್ಕು. ಸಾಮ್ರಾಟನಾಗಲು ಎಲ್ಲ ರೀತಿಯಲ್ಲಿ ಅರ್ಹತೆ ಪಡೆದಿರುವ, ಈಗಾಗಲೇ ಜನತೆಯ ಆಶೋತ್ತರಗಳಿಗೆ ಕಾರಣನಾಗಿರುವ ಪುಲಿಕೇಶಿ ಸಾಮ್ರಾಟನಾಗುವುದನ್ನೇ ಜನತೆ ಇದಿರು ನೋಡುತ್ತಿದೆ. ಅವರ ನಿರೀಕ್ಷೆಯನ್ನು ವ್ಯರ್ಥಗೊಳಿಸುವುದು ಸಾಮ್ರಾಜ್ಯದ ಹಿತೈಷಿಗಳ ಕರ್ತವ್ಯವಲ್ಲ"

ಎಂದ ಸಮಂತಭದ್ರ.

"ಅದೇನೋ ನಿಜ. ಆದರೆ, 'ಪ್ರಾಣಹೋದರೂ ಪುಲಿಕೇಶಿಯ ಅಧೀನದಲ್ಲಿ ಯಾವ ಪದವಿಯನ್ನೂ ಅಲಂಕರಿಸುವುದಿಲ್ಲ. ನಾನು ಸಾಮ್ರಾಟನಾಗದಿದ್ದರೆ, ದೇಶಾಂತರ ಹೋಗುತ್ತೇನೆ' ಎಂದು ವಿಷ್ಣುವರ್ಧನ ಒಂದೇ ಹಠ ಹಿಡಿದಿದ್ದಾನೆ. ಅವನ ಹಠ ಬಿಡಿಸಲು ಯಾರಿಂದಲೂ ಸಾಧ್ಯವಿಲ್ಲ. ಇಂಥವನು ಸಹೋದರನ ಸಲುವಾಗಿ ಸಿಂಹಾಸನ ತ್ಯಾಗಮಾಡುವನೆಂಬ ಭರವಸೆ ನನಗೆ ಇಲ್ಲ. ಸಿಂಹಾಸನ ಪುಲಿಕೇಶಿಯದಾದರೆ, ಅವನು ದೇಶಾಂತರ ಹೋಗುವುದು ಅಂದಮೇಲೆ ರಕ್ತಪಾತ ತಪ್ಪುವುದೆ ?"

"ಅಬ್ಬೆ, ನನ್ನ ಪ್ರಾಣವನ್ನು ಬಲಿಗೊಟ್ಟಾದರೂ ಸಿಂಹಾಸನಕ್ಕಾಗಿ ನಡೆಯುವ ಹೋರಾಟವನ್ನು, ರಕ್ತಪಾತವನ್ನು ತಪ್ಪಿಸುವುದಾಗಿ ನಾನು ನಿಮಗೆ ವಚನ ಕೊಟ್ಟಿದ್ದೇನೆ. ಅಖಂಡ ಸಾಮ್ರಾಜ್ಯಕ್ಕಾಗಿ ನನ್ನನ್ನೇ ಬಲಿಗೊಡಲು ಪ್ರತಿಜ್ಞೆ ಮಾಡಿದ್ದೇನೆ. ಈಗ ಅದನ್ನು ಈಡೇರಿಸುವ ಕಾಲ ಬಂದಿದೆ. ನೀವು ಯಾರೂ ಸಿಂಹಾಸನದ ಸಲುವಾಗಿ ಚಿಂತಿಸುವ ಕಾರಣವಿಲ್ಲ. ನಾನು ಸಹೋ

ದರ ವಿಷ್ಣುವರ್ಧನನ ಸಲುವಾಗಿ, ಆವನಲ್ಲಿ ನನಗಿರುವ ಪ್ರೀತಿವಿಶ್ವಾಸಗಳ ದ್ಯೋತಕವಾಗಿ ಇಂದೇ ಸಿಂಹಾಸನದ ಹಕ್ಕಿಗೆ ತಿಲಾಂಜಲಿಯನ್ನು ಕೊಟ್ಟಿದ್ದೇನೆ. ಈ ಮಾತು ಸೂರ್ಯ ಚಂದ್ರರ ಆಣೆಗೂ ನಿಮ್ಮೆಲ್ಲರ ಸಾಕ್ಷಿಯಾಗಿ ಸತ್ಯ !"

ಎಂದು ಹೇಳಿದ, ಇದುವರೆಗೆ ಎಲ್ಲ ಮಾತನ್ನು ಕೇಳಿಸಿಕೊಂಡು ಅಲ್ಲೇ ಕುಳಿತಿದ್ದ ಪುಲಿಕೇಶಿ.

ಈ ಮಾತು ಕೇಳಿ ಎಲ್ಲರೂ ಸಿಡಿಲುಬಡಿದಂತೆ ತಲ್ಲಣಗೊಂಡರು.



ಏನು ನಡೆಯಬಾರದೆಂದು ಮಹಾರಾಣಿ ದುರ್ಲಭದೇವಿ, ಸಮಂತಭದ್ರರು ಆಶಿಸಿದ್ದರೋ ಅದೇ ನಡೆದಿತ್ತು. ಪ್ರಾಪ್ತವಯಸ್ಕನಾಗಿ, ಸಿಂಹಾಸನವನ್ನೇರುವುದನ್ನೇ ಚಾತಪಕ್ಷಿಯಂತೆ ಕಾಯುತ್ತಿದ್ದ ಪುಲಿಕೇಶಿ ತಾನಾಗಿ ಸಿಂಹಾಸನ ತ್ಯಾಗ ಮಾಡಿದ್ದನು. ಯಾವ ಸಿಂಹಾಸನ ಅನ್ಯರ ಪಾಲಾಗಬಾರದೆಂದು ಅವರು ಕಳೆದ ಹತ್ತು ವರ್ಷಗಳಿಂದ ಸರ್ಪಕಾವಲು ಕಾಯುತ್ತ ಬಂದಿದ್ದರೋ, ಆ ಸಿಂಹಾಸನ ಅನ್ಯರ ಪಾಲಾಗುವ ಪ್ರಸಂಗ ಬಂದಿತ್ತು. ಪುಲಿಕೇಶಿಯು ಪಿತ್ರಾರ್ಜಿತವಾದ ಸಿಂಹಾಸನಕ್ಕೆ ನ್ಯಾಯವಾದ ಹಕ್ಕುದಾರನಾಗಿದ್ದರೂ, ಸಾಮ್ರಾಜ್ಯಕ್ಕೆ ನಿಜವಾದ ಉತ್ತರಾಧಿಕಾರಿಯಾಗಿದ್ದರೂ ತಮ್ಮನ ಸಲುವಾಗಿ ಅವುಗಳನ್ನು ತ್ಯಾಗ ಮಾಡಿದ್ದನು. ವಿಷ್ಣುವರ್ಧನನ ಮೊಂಡುಹಠಕ್ಕೆ ತನ್ನ ಸರ್ವಸ್ವವನ್ನೂ ಬಲಿಕೊಟ್ಟಿದ್ದನು. ಸಹೋದರನ ವಿಶ್ವಾಸ ನಂಬಿಕೆಗಳನ್ನು ಗಳಿಸುವುದಕ್ಕಾಗಿ ಸಾಮ್ರಾಜ್ಯದ ಜನತೆಯ ಆಶೋತ್ತರಗಳನ್ನೂ ನಂಬಿಕೆಯನ್ನೂ ಬುಡಮೇಲು ಮಾಡಿದ್ದನು.

ಹಾಯ್ ವಿಧಿ ! ಚಾಲುಕ್ಯಕುಲಚಂದ್ರಮನಿಗೆ ರಾಹುವಾಗಿ ಬಂದೆಯಾ ? ನನ್ನ ಹತ್ತು ವರ್ಷಗಳ ತಪಸ್ಸನ್ನು ವ್ಯರ್ಥಗೊಳಿಸಿದೆಯಾ ? ಅಯ್ಯೋ ನಿರ್ಭಾಗ್ಯ ದುರ್ಲಭದೇವಿ ! ಈ ಸಾಮ್ರಾಜ್ಯ ದುರಂತವನ್ನು ನೋಡುವ

ಸಲುವಾಗಿ ನೀನು ಇಷ್ಟು ದಿನ ಬದುಕಿದ್ದೆಯಾ ? ಕೀರ್ತಿಶೇಷರಾದ, ಪುಣ್ಯಸ್ವರೂಪರಾದ ಪುಲಿಕೇಶಿ ಸಾರ್ವಭೌಮರು ರಕ್ತಹರಿಸಿ ಕಟ್ಟಿದ ಸಾಮ್ರಾಜ್ಯ ದ್ರೋಹಿಗಳ ಪಾಲಾಗುವುದನ್ನು ನೋಡಲು ಇಷ್ಟು ದೀರ್ಘಕಾಲ ಜೀವವನ್ನು ಹಿಡಿದುಕೊಂಡು ಬದುಕಿರಬೇಕಾಯಿತೆ ? ಅಯ್ಯೋ ದೈವವೇ, ನಾನು ಮಾಡಿದ ದಾನಧರ್ಮಗಳು, ಪುಣ್ಯ ಕಾರ್ಯಗಳು, ನನ್ನ ಪ್ರೇಮದ ಪುತ್ಥಳಿ, ಸಾಮ್ರಾಜ್ಯ ಯಶೋಚಂದ್ರನ ಬೆನ್ನು ಕಾಯುಲಾರದೆ ಹೋದುವೆ ?....ಎಂದು ಮಹಾರಾಣಿ ದುರ್ಲಭದೇವಿ ಹಲವು ರೀತಿಯಲ್ಲಿ ಹಲುಬಿದರು.

ಎಷ್ಟು ದುಃಖಪಟ್ಟರೆತಾನೆ ಅವರಿಗಾದ ನಷ್ಟ ತುಂಬಿ ಬಂದಿತು ? ಎಷ್ಟು ಹಂಬಲಿಸಿದರೆ ತಾನೇ ಅವರ ದುಗಡ ಬಗೆಹರಿದೀತು ? ಪುಲಿಕೇಶಿಯ ದೃಢ ನಿರ್ಧಾರದಿಂದ ಮನನೊಂದು, ದೇಹ ಕುಗ್ಗಿ, ಐವತ್ತುವರ್ಷಗಳ ಮುಪ್ಪು ಒಂದೇ ರಾತ್ರಿಯಲ್ಲಿ ಅವರನ್ನು ಆವರಿಸಿತು. ಅವರು ಚಿಂತೆಯ ಭಾರದಲ್ಲಿ, ವಯಸ್ಸಿನ ಭಾರದಲ್ಲಿ ಬಸವಳಿದು ಬೆಂಡಾಗಿ, ಇದೇ ಕೊರಗಿನಲ್ಲಿ ಹಾಸಿಗೆಯನ್ನು ಹಿಡಿದರು.

ಆದರೂ ಪುಲಿಕೇಶಿಯು ಕೈಗೊಂಡಿದ್ದ ದೃಢನಿರ್ಧಾರದಿಂದ ಹಿಮ್ಮೆಟ್ಟಲಿಲ್ಲ. ತಾನು ಮಾಡಿದ್ದ ಸತ್ಯಪ್ರತಿಜ್ಞೆಯನ್ನು ಬಿಡಲಿಲ್ಲ. ತಮ್ಮನ ಸಲುವಾಗಿ ಮಾಡಿದ್ದ ತ್ಯಾಗಕ್ಕಾಗಿ ಪರಿತಪಿಸಲಿಲ್ಲ. ಅವನ ಮನಸ್ಸು ಸುಖದುಃಖಗಳಿಗೆ ಒಳಗಾಗದೆ, ಪ್ರಶಾಂತವಾರಿಧಿಯಂತೆ, ಸ್ತಬ್ಧವಾಗಿತ್ತು ತನ್ನ ಸುತ್ತಲಿನ ಜನರ ದುಃಖದಾರಿದ್ರ್ಯ, ನಲಿವು ನೋವುಗಳನ್ನು ಕಂಡು ಯಾವುದೇ ಬಗೆಯ ಚಂಚಲತೆ, ಭಾವೋದ್ರೇಕಕ್ಕೆ ಒಳಗಾಗಗದ ಜ್ಞಾನಿಯಂತೆ ಅವನು ಇದ್ದನು. ಸ್ಥಿತಪ್ರಜ್ಞನಂತೆ ಮೋಹ ಮಮತೆಗಳನ್ನೂ, ರಾಜಭೋಗಗಳನ್ನೂ ತೊರೆದು ಜಿತೇಂದ್ರಿಯನಾಗಿದ್ದನು. ಅವನ ಮುಖದಲ್ಲಿ ಕಾಣುತ್ತಿದ್ದ ನಿರ್ಧಾರ, ಕಣ್ಣುಗಳಲ್ಲಿದ್ದ ಶಾಂತಿ, ತುಟಿಯ ಮೇಲೆ ಮಿನುಗುತ್ತಿದ್ದ ಸಮಾಧಾನ ಸಂತೃಪ್ತಿಗಳ ಕೋಟೆಯನ್ನು ಭೇದಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ಇದುವರೆಗೆ ಸರಳಮನಸ್ಸಿನ ತರುಣನಾಗಿ ತೋರುತ್ತಿದ್ದ ಪುಲಿಕೇಶಿ ಈಗ ಅರ್ಥವಾಗದ ಭಾವವಿರಾಗಿಯಾಗಿ ಕಂಡನು ! ಅವನ ಮಹೋನ್ನತ ತ್ಯಾಗದ ಮುಂದೆ ವಿಷ್ಣುವರ್ಧನನು ನಿಜಕ್ಕೂ ಕುಬ್ಜನಾಗಿ ತೋರಿದನು. ಅವನ ವ್ಯಕ್ತಿತ್ವದ ದಿವ್ಯಪ್ರಕಾಶದ ಮುಂದೆ ವಿಷ್ಣುವರ್ಧನನು ಹೆಳವನೂ, ದುರ್ಬಲನೂ ಆದ ಮಗುವಾಗಿ ಕಾಣಿಸಿದನು.

ಜನ ಪುಲಿಕೇಶಿಯನ್ನು ಹೊಗಳಿದಂತೆ, ವಿಷ್ಣುವನ್ನೂ, ಮಂಗಳೇಶನನ್ನೂ ಹೀನಗಳೆದರು. ಪುಲಿಕೇಶಿಯ ಪಕ್ಷದ ಸ್ವಾಮಿನಿಷ್ಠ ಸೇವಕರು ಅನ್ಯಾಯವನ್ನು ಸಹಿಸದೆ, ಒಳಗೊಳಗೇ ಅಸಂತೃಪ್ತಿ ಅಸಮಾಧಾನಗಳಿಂದ ಕುದಿದರು. ಆದರೆ ತನ್ನ ಪಕ್ಷದವರು ತನ್ನ ಸಲುವಾಗಿ ಯಾವುದೇ ಪ್ರದರ್ಶನ–ಪ್ರತಿಭಟನೆಗಳನ್ನು ಮಾಡುವುದನ್ನು ಪುಲಿಕೇಶಿಯು ಬಹಿಷ್ಕರಿಸಿದ್ದನು. ಇದರಿಂದ ತನ್ನ ತ್ಯಾಗದ ಬೆಲೆ ಕುಗ್ಗುವುದೆಂದು ಬಗೆದಿದ್ದನು. ತಾನು ರಾಜಧಾನಿಯಲ್ಲಿ ಇರುವವರೆಗೆ ಸಿಂಹಾಸನದ ಸಲುವಾಗಿ ಯಾವುದೇ ಹೋರಾಟ, ರಕ್ತಪಾತ ನಡೆಯದಂತೆ ನೋಡಿಕೊಂಡು, ವಿಷ್ಣುವರ್ಧನನಿಗೆ ಸಿಂಹಾಸನ ಭದ್ರಪಡಿಸಿಕೊಡುವುದು ತನ್ನ ಕರ್ತವ್ಯವೆಂದು ತಿಳಿದಿದ್ದನು. ಆದರೆ ಅವನ ಈ ಕರ್ತವ್ಯದ ಹೊರೆಯನ್ನು ವಿಷ್ಣುವರ್ಧನನೇ ಸುಲಭವಾಗಿ ಕೆಳಗೆ ಇಳಿಸಿದನು.

ಮಂಗಳೇಶನ ಮೂಲಕ ವಿಷ್ಣುವರ್ಧನನು ಪುಲಿಕೇಶಿಯು ತನ್ನ ಸಲುವಾಗಿ ಸಿಂಹಾಸನ ತ್ಯಾಗಮಾಡುವ ಸಂಗತಿಯನ್ನು ಕೇಳಿದಾಗ ಅವನು ಈ ಸುದ್ದಿಯನ್ನು ನಂಬಲಿಲ್ಲ.

"ಅಪ್ಪಾಜಿ ಇದರಲ್ಲಿ ಯಾವ ಮೋಸವೂ ಇಲ್ಲ ತಾನೆ? ನಿಜವಾಗಿಯೂ, ಕೇಶಣ್ಣನು ನನ್ನ ಸಲುವಾಗಿ ಸಿಂಹಾಸನವನ್ನು ಬಿಟ್ಟುಕೊಟ್ಟಿದ್ದಾನೆಯೆ?"

ಎಂದು ಅಚ್ಚರಿಯಿಂದ ಕೇಳಿದ.

"ಹೌದು, ಮಗು! ನೀನು ಸಾಮ್ರಾಟನಾಗಿ ನೆಮ್ಮದಿಯಾಗಿ ಇರಬೇಕೆಂದು ಸಿಂಹಾಸನವನ್ನು ನಿನ್ನ ಸಲುವಾಗಿ ತೊರೆದಿದ್ದಾನೆ!"

"ಪುಲಿಕೇಶಿಯು ಸಿಂಹಾಸನವನ್ನು ತೊರೆದಮಾತ್ರಕ್ಕೆ ಅವನಿಂದ ಅಪಾಯವಿಲ್ಲವೆನ್ನಲು ಹೇಗೆ ಸಾಧ್ಯ? ಅವನು ರಾಜಧಾನಿಯಲ್ಲಿ ಇದ್ದರೆ, ಅವನ ಪಕ್ಷದ ಸಮಂತಭದ್ರ ಮುಂತಾದವರು ಈ ಅನ್ಯಾಯವನ್ನು ಖಂಡಿತ ಪ್ರತಿಭಟಿಸುತ್ತಾರೆ. ರಾಜಧಾನಿಯಲ್ಲಿರುವ ಪುಲಿಕೇಶಿಯ ಅಭಿಮಾನಿಗಳು ದಂಗೆ ಏಳುತ್ತಾರೆ. ಸಿಂಹಾಸನದಿಂದ ನನ್ನನ್ನು ಉರುಳಿಸಿ, ಮತ್ತೆ ಅದನ್ನು ಪುಲಿಕೇಶಿಗೆ ಕೊಡಲು ಸಾಮ್ರಾಜ್ಯದ ಹಿತೈಷಿಗಳೆಲ್ಲರೂ ನನ್ನ ವಿರುದ್ಧ ಪಿತೂರಿ ಮಾಡುತ್ತಾರೆ. ನನ್ನ ಸಿಂಹಾಸನ ನನ್ನದಾಗಿ ಉಳಿಯದಿದ್ದ ಮೇಲೆ ಪುಲಿಕೇಶಿ ಅದನ್ನು ನನ್ನ ಸಲುವಾಗಿ ತ್ಯಾಗ ಮಾಡಿ ಬಂದ ಫಲವೇನು? ಈ ಕೈಯಲ್ಲಿ ಕೊಟ್ಟ ಸಿಂಹಾಸನವನ್ನು ಇನ್ನೊಂದು ಕೈಯಲ್ಲಿ ಕಿತ್ತುಕೊಳ್ಳುತ್ತಾನೆ. ಅವನು ರಾಜಧಾನಿಯಲ್ಲಿ ಇರುವ

ವರೆಗೆ ಸಿಂಹಾಸನ ನನಗೆ ಭದ್ರವಿಲ್ಲ. ಅವನು ಕಣ್ಣುಕೀಸರಾಗಿರುವವರೆಗೆ ನನಗೆ ಶಾಂತಿ, ಸಮಾಧಾನಗಳು ಇಲ್ಲ, ಅಪ್ಪಾಜಿ!"

"ಹಾಗಾದರೆ ಪುಲಿಕೇಶಿಯನ್ನು ಏನುಮಾಡಬೇಕೆಂದು ಹೇಳುತ್ತೀ ಮಗು. ಅವನನ್ನು ಬಂಧಿಸಿ ಸೆರೆಯಲ್ಲಿಡಲು ಬಯಸುತ್ತೀಯಾ ?"

"ಇಲ್ಲ ಅಪ್ಪಾಜಿ ! ನನಗಾಗಿ ಸಿಂಹಾಸನ ತ್ಯಾಗಮಾಡಿದವನಿಗೆ ನಾವು ಅನ್ಯಾಯ ಮಾಡಬಾರದು."

"ಅವನನ್ನು ಒಮ್ಮೆಲೇ ನಿವಾರಿಸಿಕೊಳ್ಳಬೇಕೆನ್ನುವೆಯಾ ?"

"ಚಾಲುಕ್ಯ ಸಿಂಹಾಸನ–ಸಾಮ್ರಾಜ್ಯಗಳು ಅಖಂಡವಾಗಿ ಉಳಿಯಲು ತನ್ನನ್ನೇ ಬಲಿಕೊಟ್ಟ ಅವನನ್ನು ನಾವು ಬಲಿ ತೆಗೆದುಕೊಂಡರೆ ದೇವರು ಮೆಚ್ಚುವನೆ ?"

"ಹಾಗಾದರೆ ನಿನ್ನ ಆಶಯವಾದರೂ ಏನು ?"

"ಯಾವುದೇ ದ್ರೋಹ ಚಿಂತನೆ ಇಲ್ಲದೆ, ಸಾಮ್ರಾಜ್ಯವನ್ನು ನನಗೆ ಬಿಟ್ಟು ಕೊಟ್ಟ ಪುಲಿಕೇಶಿಗೆ ನಾವು ದ್ರೋಹ ಬಗೆಯುವುದು ಬೇಡ. ಅವನಿಗೆ ಯುವರಾಜ ಪದವಿಯನ್ನು ಕೊಡೋಣ. ಅದಕ್ಕೆ ಒಪ್ಪದಿದ್ದರೆ ಮಾಂಡಲೇಶ್ವರನನ್ನಾಗಿ ಮಾಡೋಣ !"

"ಪುಲಿಕೇಶಿಯು ಎಲ್ಲ ಅಧಿಕಾರ ಪದವಿಗಳಿಗೆ ತಿಲಾಂಜಲಿಯನ್ನು ಬಿಟ್ಟಿದ್ದಾನೆ."

"ಹಾಗಾದರೆ, ಸರ್ವಸಂಗಪರಿತ್ಯಾಗ ಮಾಡಿದ ಸಂನ್ಯಾಸಿಯಾಗಲು ನಿಶ್ಚಯಿಸಿದ್ದಾನೆಯೇ ?"

"ಈ ಬಗ್ಗೆ ಅವನ ಇಚ್ಛೆ ಏನೆಂಬುದು ಯಾರಿಗೂ ತಿಳಿಯದು."

"ಯಾವುದೇ ಅಧಿಕಾರ ಪದವಿಗಳಿಗೆ ಆಶಿಸದೆ, ಸಂನ್ಯಾಸಿಯಂತೆ ಪುಲಿಕೇಶಿಯು ರಾಜಧಾನಿಯಲ್ಲಿ ಇದ್ದರೂ, ಸಿಂಹಾಸನಕ್ಕೆ ಅವನ ಅಭಿಮಾನಗಳಿಂದ, ತೊಂದರೆ ತಪ್ಪುವುದಿಲ್ಲ, ಅಪ್ಪಾಜಿ. ಆದುದರಿಂದ ಅವನನ್ನು ರಾಜಧಾನಿಯಿಂದ ಮಾತ್ರವಲ್ಲ, ಸಾಮ್ರಾಜ್ಯದಿಂದ ಹೊರಗೆ ಕಳುಹಿಸುವುದೊಂದೇ ಅವನಿಂದ ವಿಪತ್ತನ್ನು ಪರಿಹರಿಸಿಕೊಳ್ಳಲು ನಮಗೆ ಇರುವ ದಾರಿ."

"ನಿನ್ನ ಇಚ್ಛೆ ಇಂತಿದ್ದರೆ, ಇದನ್ನು ಪುಲಿಕೇಶಿಗೆ ಹೋಗಿ ಈಗಲೇ ನಿವೇದಿಸಿಕೊಂಡು ಬರುತ್ತೇನೆ, ಮಗು."

"ಪುಲಿಕೇಶಿಯು ಈ ಮಾತಿನಿಂದ ನೊಂದುಕೊಂಡರೆ....?"

"ಅವನು ನೊಂದುಕೊಳ್ಳುವನೆಂದು ನಾವು ಸುಮ್ಮನಿದ್ದರೆ, ನಾಳೆ ಅವನ ಅಭಿಮಾನಿಗಳಿಂದ ನಮಗೆ ತೊಂದರೆ ಬರಬಹುದು. ಅದನ್ನು ಈಗಲೇ ನಿವಾರಿಸಿ ಕೊಳ್ಳುವುದು ಸಿಂಹಾಸನದ ಭದ್ರತೆಯ ದೃಷ್ಟಿಯಿಂದ ಕ್ಷೇಮ. ದೇಹದ ಕ್ಷೇಮ ಕ್ಕಾಗಿ, ಕೊಳೆತಭಾಗವನ್ನು ನಿರ್ದಯವಾಗಿ ಶಸ್ತ್ರಕ್ರಿಯೆಯಿಂದ ಕತ್ತರಿಸಿ ತೆಗೆದು ಹಾಕುವಂತೆ, ಸಾಮ್ರಾಜ್ಯದ ನೆಮ್ಮದಿಗೆ ವಿಘ್ನಕಾರಿಗಳಾದ ಎಲ್ಲ ವ್ಯಕ್ತಿಗಳನ್ನೂ, ಶಕ್ತಿಗಳನ್ನೂ ನಾವು ನಿರ್ದಯದಿಂದ ತುಳಿಯಬೇಕು ! ಇಲ್ಲದಿದ್ದರೆ ನಾವೇ ಅವರಿಗೆ ಬಲಿಯಾಗುವ ಪ್ರಸಂಗ ಬರಬಹುದು."

"ಸಿಂಹಾಸನತ್ಯಾಗವನ್ನು ಜಾಣ್ಮೆಯಿಂದ ಸಾಧಿಸಿದಂತೆ ಅವನ ದೇಶತ್ಯಾಗ ವನ್ನೂ ಜಾಣ್ಮೆಯಿಂದ ಸಾಧಿಸಿಕೊಳ್ಳಬೇಕಾಗಿದೆ ಅಪ್ಪಾಜಿ."

"ಮಗು, ವಿಷ್ಣು ನಾನು ನಿನ್ನನ್ನು ಏನೋ ಎಂದು ತಿಳಿದಿದ್ದೆ," ಇಷ್ಟೆಲ್ಲ ರಾಜಕೀಯ ಜ್ಞಾನ ನಿನಗೆ ಹೇಗೆ ಬಂದಿತು ?"

"ಇದೆಲ್ಲಾ ನಿಮ್ಮ ಗರುಡಿಯ ಮಹಿಮೆ ಅಪ್ಪಾಜಿ !" ಎಂದು ಹೇಳಿ ವಿಷ್ಣುವರ್ಧನ ಮುಸಿಮುಸಿ ನಕ್ಕನು.

ಮಂಗಳೇಶನು ಪುಲಿಕೇಶಿಯನ್ನು ಅಂತರ್ಯದಲ್ಲಿ ಕಂಡು ವಿಷ್ಣುವರ್ಧನನ ಭೀತಿಯನ್ನು ನಿವೇದಿಸಿಕೊಂಡಾಗ, ಪುಲಿಕೇಶಿಯು ನಗುತ್ತಾ ಹೇಳಿದ :

"ನೀರಿನಲ್ಲಿ ಮುಳುಗಿದವನಿಗೆ, ಚಳಿ ಏನು, ಗಾಳಿ ಏನು ಅಪ್ಪಾಜಿ ? ಅವನ ಸಲುವಾಗಿ ಸಿಂಹಾಸನವನ್ನು ತ್ಯಾಗಮಾಡಿದ್ದೇನೆ. ಇನ್ನೂ ನನ್ನಿಂದ ತನಗೆ ಅಪಾಯವಿದೆ ಎಂದು ವಿಷ್ಣುವರ್ಧನ ತಿಳಿದಿದ್ದರೆ, ಅವನ ಇಚ್ಛೆಯಂತೆ ದೇಶತ್ಯಾಗವನ್ನೂ ಮಾಡುತ್ತೇನೆ. ನನಗೆ ಬೇಕಾಗಿರುವುದು ಅವನ ಸುಖ. ನನ್ನ ವಿಷಯದಲ್ಲಿ ಮೊದಲಿನ ಪ್ರೀತಿವಿಶ್ವಾಸಗಳು ಅಷ್ಟೇ. ನಾನು ಅವನ ಸಹೋದರನಾಗಿ ಹುಟ್ಟಿದುದಕ್ಕೆ ಕಾಯೇನವಾಚಮನಸಾ, ಅವನಿಗೆ ದ್ರೋಹ ಬಗೆದಿಲ್ಲವೆಂದು ಅವನಿಗೆ ತಿಳಿದರೆ, ನನ್ನ ಸ್ವಾರ್ಥತ್ಯಾಗ, ಬಲಿದಾನಗಳು ಸಾರ್ಥಕವಾಯಿತೆಂದು ತಿಳಿಯುತ್ತೇನೆ. ಇಷ್ಟಾದರೂ, ವಿಷ್ಣು ನನ್ನ ವಿಷಯ ದಲ್ಲಿ ಸಂದೇಹಗ್ರಸ್ತನಾದರೆ, ಅದು ನನ್ನ ದುರ್ದೈವ !"

"ವಿಷ್ಣುವರ್ಧನನಿಗೆ ನಿನ್ನಲ್ಲಿ ಸಂದೇಹವಿಲ್ಲ, ಕೇಶಣ್ಣ. ಅವನಿಗೆ ನಿನ್ನಲ್ಲಿ ಮೊದಲಿನ ನಂಬಿಕೆ ಪ್ರೀತಿ ವಿಶ್ವಾಸಗಳು ಇವೆ. ಆದರೆ, ನಿನ್ನ ಅಭಿಮಾನಗಳಿಂದ

ತನಗೆ ಕೇಡಾಗಬಹುದೆಂದು ಅಂಜಿದ್ದಾನೆ. ನೀನು ರಾಜ್ಯತ್ಯಾಗನಮಾಡಿದರೆ, ನಿನ್ನ ಪಕ್ಷದವರಿಂದ, ತನಗಾಗಲೀ ಸಿಂಹಾಸನಕ್ಕಾಗಲೀ ಯಾವುದೇ ಅಪಾಯ ಬರಬಹುದೆಂದು ಅವನ ಗ್ರಹಿಕೆ! ಅವನ ಸಲುವಾಗಿ ನಾನು ನಿನ್ನಿಂದ...." ಮುಂದೆ ಮಾತನಾಡಲು ಮಂಗಳೇಶನ ಬಾಯಿ ಕಟ್ಟಿತ್ತು. ಪುಲಿಕೇಶಿಯ ಒಳ್ಳೆಯತನ ಅವನನ್ನು ಸಂಪೂರ್ಣವಾಗಿ ನಿರಸ್ತ್ರನನ್ನಾಗಿ ಮಾಡಿತ್ತು. ಈಗ ಅವನಿಗೆ ಪುಲಿಕೇಶಿಯ ಮಹೋನ್ನತ ವ್ಯಕ್ತಿತ್ವದ ಮುಂದೆ ತಾನು ಎಷ್ಟು ಕ್ಷುಲ್ಲಕ ವ್ಯಕ್ತಿ ಎಂಬ ಅನುಭವವಾಗುತ್ತಿತ್ತು. ಪುಲಿಕೇಶಿಯ ಕೈಯಿಂದ ರಾಜ್ಯ ಕೋಶಗಳನ್ನು ಕಸಿದುಕೊಂಡಂತೆ, ಈಗ ರಾಜ್ಯತ್ಯಾಗ ಮಾಡಲು ಪ್ರೇರೇಪಿಸು ತ್ತಿರುವುದು 'ದರೋಡೆ'ಯಾಗಿ ಕಾಣಿಸುತ್ತಿತ್ತು. ಅವನವಾದ ಸಿಂಹಾಸನ-ಸಾಮ್ರಾಜ್ಯಗಳನ್ನು ಕಿತ್ತುಕೊಂಡು, ತಾನು ಹುಟ್ಟಿ ಬೆಳೆದ ತಾಯಿಗಿಂತ ಅತಿ ಶಯವಾದ ಜನ್ಮಭೂಮಿಯಿಂದ ಅವನನ್ನು ಹೊರಡಿಸುತ್ತಿರುವುದು ನೀಚತನದ ಪರಮಾವಧಿಯಾಗಿ ಕಾಣಿಸುತ್ತಿತ್ತು. ಅಂತಲೇ ಮಂಗಳೇಶನಿಗೆ ಪುಲಿಕೇಶಿಯು ದೇಶತ್ಯಾಗ ಮಾಡಬೇಕೆಂದು ಹೇಳಲು ಬಾಯಿ ಕಟ್ಟಿತ್ತು!

ಮಂಗಳೇಶನ ಮನಸ್ಸಿನ ತಾಕಲಾಟವನ್ನು ಕಂಡುಕೊಂಡ ಪುಲಿಕೇಶಿ ನಗುತ್ತಾ ಹೇಳಿದ:

"ನಾನು ಇಲ್ಲಿರುವುದರಿಂದ ವಿಷ್ಣುವರ್ಧನನು, ತನಗೆ ಅಪಾಯವೆಂದು ತಿಳಿಯುವುದಾದರೆ, ನಾನು ಸಂತೋಷದಿಂದ ದೇಶತ್ಯಾಗ ಮಾಡುತ್ತೇನೆ...."

"ನನ್ನ ಮಾತಿನಿಂದ ನಿನಗೆ ನೋವಾಗಿದ್ದರೆ ಕ್ಷಮಿಸಬೇಕು. ಆದರೆ ಸದ್ಯದ ಪರಿಸ್ಥಿತಿಯಲ್ಲಿ...." ಮುಂದೆ ಮಾತು ಹೊರಡಲಿಲ್ಲ.

"ನಿಮ್ಮ ಸಲಹೆ ನನಗೆ ಪ್ರಿಯವೇ ಆಗಿದೆ. ಗುರುಕುಲದ ಶಿಕ್ಷಣ ಮುಗಿಸಿದ ಮೇಲೆ ಕೆಲವು ಕಾಲ ದೇಶಾಟನೆಮಾಡಿ, ಲೋಕ ಶಿಕ್ಷಣ ಪಡೆಯ ಬೇಕೆಂದಿದ್ದೆ. ಈಗ ಅದಕ್ಕೆ ಅವಕಾಶ ದೊರಕಿದಂತೆ ಆಯಿತು. ನಾನು ಕ್ಷೇತ್ರ ಯಾತ್ರೆ ಕೈಗೊಂಡು, ರಾಜಧಾನಿಯನ್ನು ತೊರೆಯುತ್ತೇನೆ. ನೀವೂ ಮಹಾರಾಣಿ ಯವರೂ ಸಾಮ್ರಾಜ್ಯದ ಇತರ ಹಿತೈಷಿಗಳೂ ಹಿರಿಯರಾಗಿ ನಿಂತು, ವಿಷ್ಣು ವರ್ಧನನಿಗೆ ಪಟ್ಟಾಭಿಷೇಕಮಾಡಿ, ಅವನು ಧರ್ಮದಿಂದ ರಾಜ್ಯಭಾರ ನಡೆಸು ವಂತೆ ನೋಡಿಕೊಳ್ಳಿ. ಪ್ರಜೆಗಳು ಇಟ್ಟಿರುವ ನಂಬಿಕೆ ಶ್ರದ್ಧೆಗಳನ್ನು ವ್ಯರ್ಥ ಗೊಳಿಸದಂತೆ, ಪ್ರಜಾವತ್ಸಲನಾದ ಸಾಮ್ರಾಟನಾಗುವಂತೆ ನೋಡಿಕೊಳ್ಳಿ. ನನ್ನ ಆಶೀರ್ವಾದವನ್ನು ವಿಷ್ಣುವರ್ಧನನಿಗೆ ತಿಳಿಸಿ. ನಾನು ನಾಳೆಯ ದಿನ ಪ್ರಾತಃ

ಕಾಲ ರಾಜಧಾನಿಯನ್ನು ಬಿಟ್ಟು ಹೊರಡುವುದಾಗಿ ಅವನಿಗೆ ಹೇಳಿ"

ಎಂದು ಹೇಳುತ್ತಿದ್ದಂತೆ, ತನಗೆ ತಿಳಿಯದಂತೆ ಪುಲಿಕೇಶಿಗೆ ಕಣ್ಣೀರು ಉಕ್ಕಿತು. ಅದನ್ನು ಮಂಗಳೇಶನೆದುರು ಪ್ರದರ್ಶಿಸಲಾರದೆ, ಅಲ್ಲಿಂದ ಎದ್ದು ಹೊರಟುಹೋದನು.

ಪುಲಿಕೇಶಿಯ ವಜ್ರಕಠೋರವಾದ ಮನಸ್ಸು ಕಡೆಗೂ ಮೃದುವಾಗಿತ್ತು. ಅವನು ರಾಜ್ಯಕೋಶಗಳನ್ನು ತೊರೆಯಲು ನಿರ್ಧರಿಸಿದಾಗ ಅವನಿಗೆ ದುಃಖ ವಾಗಿರಲಿಲ್ಲ. ಪ್ರಾಣಕ್ಕಿಂತ ಪ್ರಿಯವಾಗಿದ್ದ ಮಹಾರಾಣಿ ದುರ್ಲಭದೇವಿಯನ್ನೂ, ಒಡನಾಡಿಗಳಾದ ಸಮಂತಭದ್ರ ಮುಂತಾದ ಸ್ವಾಮಿನಿಷ್ಠ ಸೇವಕರನ್ನೂ ಬಿಟ್ಟು ಹೊರಡಲು ದುಃಖವಾಗಲಿಲ್ಲ. ತನ್ನನ್ನೇ ನಂಬಿದ್ದ ಪ್ರಜೆಗಳ ಆಶೋತ್ತರಗಳನ್ನು ನಿರರ್ಥಕಗೊಳಿಸಿದುದಕ್ಕಾಗಿ ವ್ಯಥೆಯಾಗಲಿಲ್ಲ. ಆದರೆ, ತಾನು ಹುಟ್ಟಿ ಬೆಳೆದ ತನ್ನ ಜನ್ಮಭೂಮಿಯಿಂದ ಹೊರಡಬೇಕೆಂದಾಗ, ಅವನ ಸಂಯಮದ ಕಟ್ಟೆ ಕಿತ್ತು ದುಃಖ ಒತ್ತರಿಸಿಕೊಂಡು ಬಂದಿತ್ತು, ಕಣ್ಣೀರಿನ ಕೋಡಿಹರಿದಿತ್ತು.

ಇದೆಲ್ಲವೂ ಒಂದೇ ಒಂದು ಕ್ಷಣ! ಮತ್ತೆ ಪುಲಿಕೇಶಿಯು ಮನಸ್ಸಿನ ಚಂಚಲತೆಗೆ ಸಂಯಮದ ಕಡಿವಾಣ ಹಾಕಿದನು. ಅವನ ಹತ್ತು ವರ್ಷಗಳ ಉಗ್ರವಾದ ಗುರುಕುಲದ ಶಿಕ್ಷಣ ಕಡೆಗೂ ವ್ಯರ್ಥವಾಗಲಿಲ್ಲ. ಅಲ್ಲಿ ಕಲಿತ ಸಂಯಮ ಅವನನ್ನು ಕೈಬಿಡಲಿಲ್ಲ. ಪುಲಿಕೇಶಿ ಮತ್ತೆ ಜಿತೇಂದ್ರಿಯನಾಗಿ, ಸುಖ ದುಃಖಗಳು ತನಗೆ ಸಂಬಂಧಿಸದ ಭಾವಗಳೆಂಬಂತೆ, ವಿರಾಗಿಯಾದನು! ಈಗ ಅವನ ಮನಸ್ಸು ಪ್ರಚಂಡ ಅಲೆ ಬಿರುಗಾಳಿಗಳಿಗೆ ಸಿಕ್ಕಿಯೂ ತನ್ನ ಸಹಜ ಗಾಂಭೀರ್ಯವನ್ನು ಬಿಟ್ಟುಕೊಡದ ವಾರಿಧಿಯಂತೆ ಮತ್ತೆ ಗಂಭೀರವಾಯಿತು. ಭಾವೋದ್ವೇಗಗಳಿಗೆ ಎಡೆಗೊಟ್ಟಿದ್ದ ಮನಸ್ಸು ಮತ್ತೆ ಪ್ರಶಾಂತವಾಯಿತು.

ಪುಲಿಕೇಶಿಯು ಸಿಂಹಾಸನವನ್ನು ತೊರೆದಂತೆ ದೇಶತ್ಯಾಗಮಾಡಲು ನಿಶ್ಚಯಿಸಿರುವ ಸಂಗತಿಯನ್ನು ಕೇಳಿ ಸಿಡಿಲಿನಿಂದ ಜರ್ಜರಿತರಾದ ಜನರಿಗೆ ಆಕಾಶ ಬಂದು ಬಿಡಿದಂತೆ ಆಯಿತು. ಈ ಸುದ್ದಿಯನ್ನು ಕೇಳಿ ಸಮಂತಭದ್ರ, ಮುಂತಾದ ಸ್ವಾಮಿನಿಷ್ಠ ಸೇವಕರು ಹೌಹಾರಿದರು. ಪುಲಿಕೇಶಿಯು ಸಿಂಹಾಸನ ವನ್ನು ತಮ್ಮನಿಗೆ ಬಿಟ್ಟುಕೊಟ್ಟರೂ ವಿಷ್ಣುವರ್ಧನನು ಅದನ್ನು ಉಳಿಸಿಕೊಳ್ಳದೆ, ಮತ್ತೆ ಪುಲಿಕೇಶಿಗೇ ಹಿಂದಿರುಗುವುದೆಂಬ ದೂರದ ಆಸೆ ಇಟ್ಟುಕೊಂಡಿದ್ದ ಅವ ರಿಗೆ, ಪುಲಿಕೇಶಿಯು ದೇಶತ್ಯಾಗ ಮಾಡುವ ಸುದ್ದಿ ಹುಣ್ಣಿನಮೇಲೆ ಬೊಕ್ಕೆ

ಬಿದ್ದಂತೆ ಭಾಸಿಸಿತು. ಮಹಾರಾಣಿ ದುರ್ಲಭದೇವಿ ಈ ಸುದ್ದಿಯನ್ನು ಕೇಳಿ, "ಅಯ್ಯೊ ಮಗು, ನೀನು ಎಂತಹ ಘೋರ ನಿರ್ಧಾರ ಕೈಗೊಂಡೆ! ನಮ್ಮೆಲ್ಲರನ್ನು ತೊರೆದು ಹೋಗುವೆಯಾ?" ಎಂದು ಉದ್ಗಾರ ತೆಗೆದು ಹಾಗೇ ಮೂರ್ಛೆ ಹೋದರು. ಕೂಡಲೇ ರಾಜವೈದ್ಯರು ಬಂದು ಶೈತ್ಯೋಪಚಾರ ಮಾಡಿದರೂ, ಮಹಾರಾಣಿಯವರು ಮೊದಲಿನ ಸ್ಥಿತಿಗೆ ಬರಲಿಲ್ಲ. ಅವರಿಗೆ ಪ್ರಜ್ಞೆ ಮರು ಕಳಿಸಿದರೂ ಇನ್ನೂ ಮಂಪರದ ಸ್ಥಿತಿಯಲ್ಲೇ ಇದ್ದರು. ಮೊದಲೇ ಮೇಲಿಂದ ಮೇಲೆ ಬಿದ್ದ ನಿರಾಶೆಯ ಪೆಟ್ಟನಿಂದ ಜರ್ಜರಿತವಾಗಿದ್ದ ದೇಹ ಮನಸ್ಸುಗಳು ಈಗ ನಿರ್ವಿಣ್ಣವಾಗಿದ್ದವು. ಅವು ಇಂದ್ರಿಯಪಟುತ್ವವನ್ನು ಎಂದೋ ಕಳೆದು ಕೊಂಡು ಜಡವಾಗಿದ್ದವು. ಈಗ ಚೇತನವೂ ಜಡವಾಗಿತ್ತು. ಅವರು ತಮ್ಮ ದೀರ್ಘ ನಿದ್ರೆಗೆ ಸಿದ್ಧರಾಗುವಂತೆ, ನಿದ್ರೆ–ಎಚ್ಚರಗಳ ನಡುವಣ ಮಂಪರದ ಸ್ಥಿತಿಯಲ್ಲಿ ಇದ್ದರು.

ಪ್ರಧಾನ ಅಮಾತ್ಯ ಸಮಂತಭದ್ರನ ಸ್ಥಿತಿ ಇನ್ನೂ ವಿಚಿತ್ರವಾಗಿತ್ತು.

ಇತ್ತ ಮಂಗಳೇಶನ ಕೈಯಿಂದ ಚಾಲುಕ್ಯ ಸಿಂಹಾಸನವನ್ನು ಉಳಿಸಿ ಕೊಳ್ಳುವುದು ಹೇಗೆಂದು ಯೋಚಿಸಬೇಕೆ? ಅತ್ತ ಪುಲಿಕೇಶಿಗೆ ಆಗಿರುವ ಅನ್ಯಾಯದಿಂದ ರೋಸಿ ಮಂಗಳೇಶನ ರಕ್ತಕ್ಕಾಗಿ ಹಂಬಲಿಸುತ್ತಿದ್ದ ಸ್ವಾಮಿನಿಷ್ಠ ಸೇವಕರನ್ನು ಸಮಾಧಾನಗೊಳಿಸುವುದು ಹೇಗೆಂದು ಯೋಚಿಸಬೇಕೆ? ಇತ್ತ ಮಂಗಳೇಶನ ಕೈಯಿಂದ ತನ್ನ ಜೀವ ಉಳಿಸಿಕೊಳ್ಳುವುದು ಹೇಗೆಂದು ಯೋಚಿಸ ಬೇಕೆ? ಅತ್ತ ಮಹಾರಾಣಿಯವರ ದೇಹಸ್ಥಿತಿಯನ್ನು ವಿಚಾರಿಸಿಕೊಳ್ಳಬೇಕೆ? ಇತ್ತ ಪುಲಿಕೇಶಿಯು ಅನ್ಯಾಯವಾಗಿ ಸಿಂಹಾಸನವನ್ನು ತ್ಯಾಗಮಾಡಿದನೆಂದು ಯೋಚಿಸಬೇಕೆ? ಅತ್ತ ಅವನು ದೇಶತ್ಯಾಗ ಮಾಡುವುದನ್ನು ತಪ್ಪಿಸುವುದು ಹೇಗೆಂದು ಯೋಚಿಸಬೇಕೆ? ಇಂತಹ ನೂರು ಚಿಂತೆಗಳಲ್ಲಿ ಅವನ ಕೂದಲು ಹಣ್ಣಾದುದರ ಜೊತೆಗೆ, ದೇಹ ಮನಸ್ಸುಗಳು ಹಣ್ಣಾಗಿದ್ದುವು.

ಆದರೂ ಕಟ್ಟಕಡೆಯ ಗಳಿಗೆಯಲ್ಲಿ ಯಾವುದೋ ಪವಾಡ ನಡೆದು ಎಲ್ಲವೂ ಸುಗಮವಾಗುವುದೆಂಬ ದೂರದ ಆಸೆ ಬಿಟ್ಟು ಹೋಗಲಿಲ್ಲ. ಪುಲಿಕೇಶಿಯು ಕಟ್ಟಕಡೆಯ ಗಳಿಗೆಯಲ್ಲಿ ತನ್ನ ನಿರ್ಧಾರವನ್ನು ಬಿಟ್ಟುಕೊಡಬಹುದೆಂಬ ಹೃದಯಾಂತರಾಳದ ಬಯಕೆ ಯಾವುದೋ ಪುಣ್ಯದಿಂದ ಈಡೇರಬಹುದು! ಸ್ವಯಂವಿಷ್ಣುವರ್ಧನನಿಗೆ ವಿವೇಕೋದಯವಾಗಿ ಹಠಬಿಟ್ಟುಕೊಟ್ಟು ಸಾಮ್ರಾ

ಜ್ಯದ ದುರಂತವನ್ನು ತಪ್ಪಿಸಬಹುದು ಎಂಬ ಆಶಾದೀವಿಗೆಯ ಕಿಡಿ ನಂದಿರಲಿಲ್ಲ. ಅವನು ಹೀಗೆ ಆಸೆ ನಿರಾಸೆಗಳ ತೂಗುಯ್ಯಾಲೆಯಲ್ಲಿರುವಾಗಲೇ ಬುದ್ಧರಾಜನು ಪುಲಿಕೇಶಿಯು ರಾಜ್ಯತ್ಯಾಗ ಮಾಡುವ ಸುದ್ದಿಯನ್ನು ಕೇಳಿ ವಾತಾಪಿಗೆ ಓಡಿ ಬಂದಿದ್ದನು.

ಕಾಲಚೂರ್ಯ ಮನೆತನದ ಶಂಕರಗಣನ ಮಗ ಬುದ್ಧರಾಜನು ಒಮ್ಮೆ ಚಾಲುಕ್ಯ ಸಿಂಹಾಸನದ ವಿರುದ್ಧ ದಂಗೆ ಎದ್ದು, ಪುಲಿಕೇಶಿಯ ಔದಾರ್ಯದಿಂದ ಕ್ಷಮೆಹೊಂದಿ, ತನ್ನ ರಾಜ್ಯಕ್ಕೆ ತೆರಳಿದಮೇಲೆ ಅವನು ಚಾಲುಕ್ಯಸಾಮ್ರಾಜ್ಯದ ಅತ್ಯಂತ ನಿಷ್ಠಾವಂತ ಸ್ವಾಮಿಭಕ್ತನಾಗಿದ್ದನು. ತನ್ನ ಜೀವವು ಪುಲಿಕೇಶಿಯಿಂದ ಉಳಿದುದನ್ನು ಅವನು ಮರೆತಿರಲಿಲ್ಲ. ತಾನು ಬದುಕಿರುವವರೆಗೆ, ತನಗೆ ದೊರೆತ ಪುನರ್ಜನ್ಮವನ್ನು ಪುಲಿಕೇಶಿಯ ಸೇವೆಯಲ್ಲಿ ವಿನಿಯೋಗಿಸುವುದಾಗಿ ಅವನು ಪ್ರತಿಜ್ಞೆ ಮಾಡಿ ತನ್ನ ಪ್ರಾಂತ್ಯಕ್ಕೆ ಹಿಂದಿರುಗಿದ್ದನು. ಅವನ ರಾಜ್ಯವು ಮಂಗಳೇಶನ ಕೈತಪ್ಪಿ, ಪುಲಿಕೇಶಿಯು ಸಾಮ್ರಾಟನಾಗುವುದನ್ನೇ ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದನು. ಅವನು ರಾಜಧಾನಿಯಾದ ವಾತಾಪಿಯವರೆಗೆ ಸಂಬಂಧವಿಟ್ಟುಕೊಂಡಿದ್ದು, ಅಲ್ಲಿ ನಡೆಯುವ ಪ್ರತಿಯೊಂದು ಘಟನೆಗಳನ್ನೂ ದೂರದಿಂದಲೇ ನಿರೀಕ್ಷಿಸುತ್ತ ಕುಳಿತಿದ್ದನು. ಒಂದು ವೇಳೆ ಸಿಂಹಾಸನಕ್ಕಾಗಿ ಹೋರಾಟ ನಡೆದರೆ, ಆ ಸಮಯದಲ್ಲಿ ಪುಲಿಕೇಶಿಗೆ ನೆರವಾಗಲು ದೊಡ್ಡದೊಂದು ಸೈನ್ಯವನ್ನು ಸಿದ್ಧಪಡಿಸುತ್ತಿದ್ದನು. ಅಲ್ಲದೆ ಇನ್ನಿತರ ಮಾಂಡಲೇಶ್ವರನ್ನು ಪುಲಿಕೇಶಿಯ ಪಕ್ಷಕ್ಕೆ ಒಲಿಸುವ ಕಾರ್ಯದಲ್ಲಿ ತೊಡಗಿದ್ದನು. ಪುಲಿಕೇಶಿಯಿಂದ ದೊರೆತ ತನ್ನ ಪುನರ್ಜನ್ಮವನ್ನು ಹೀಗೆ ಸಾರ್ಥಕಪಡಿಸಿಕೊಳ್ಳುತ್ತಿದ್ದನು.

ಪುಲಿಕೇಶಿಯು ವಿಷ್ಣುವರ್ಧನನ ಸಲುವಾಗಿ ಸಿಂಹಾಸನವನ್ನು ತ್ಯಾಗ ಮಾಡಲಿರುವ ಸುದ್ದಿ ಚಾರರ ಮೂಲಕ ತಿಳಿದು ಗಾಬರಿಗೊಂಡು ವೇಶಾಂತರದಲ್ಲಿ ರಾಜಧಾನಿಗೆ ಬಂದಿದ್ದನು. ಸಾಧ್ಯವಾದರೆ ಪುಲಿಕೇಶಿಯು ಸಿಂಹಾಸನತ್ಯಾಗ ಮಾಡುವುದನ್ನು ತಪ್ಪಿಸಬೇಕೆಂದೇ ಅವನ ಅಭೀಷ್ಟವಾಗಿತ್ತು. ಅವನು ಬರುವುದರೊಳಗಾಗಿ ಇಷ್ಟೆಲ್ಲ ಹತ್ಯಾಕಾಂಡ ನಡೆದುಹೋಗಿತ್ತು.

ಅವನು ರಾಜಧಾನಿಗೆ ಬಂದಕೂಡಲೇ ಅಮಾತ್ಯ ಸಮಂತಭದ್ರನನ್ನು ಏಕಾಂತದಲ್ಲಿ ಕಂಡು,

"ಅಮಾತ್ಯರೇ, ನೀವೆಲ್ಲಾ ಇದ್ದುಕೊಂಡೂ ಪುಲಿಕೇಶಿಯು ಸಿಂಹಾಸನ ತ್ಯಾಗಮಾಡುವುದನ್ನು ತಪ್ಪಿಸಲಾಗದೆಹೋಯಿತೆ?" ಎಂದು ಆತಂಕದಲ್ಲಿ ಕೇಳಿದ.

"ಅಷ್ಟೇ ಆಗಿದ್ದರೆ ನಮ್ಮ ಸುದೈವ, ಬುದ್ಧರಾಜರೇ. ಆದರೆ ನಮ್ಮ ದೌರ್ಭಾಗ್ಯಕ್ಕೆ ಪುಲಿಕೇಶಿಯು ದೇಶತ್ಯಾಗಮಾಡಲೂ ನಿಶ್ಚಯಿಸಿದ್ದಾನೆ!"

"ನೀವು ಅವನಿಗೆ ಬುದ್ಧಿ ಹೇಳಿ ಹಿಮ್ಮೆಟ್ಟಿಸಲಿಲ್ಲವೆ?"

"ನಮ್ಮ ಪ್ರಯತ್ನಗಳೆಲ್ಲವೂ ವಿಫಲವಾಯಿತು, ಬುದ್ಧರಾಜರೇ."

"ಪುಲಿಕೇಶಿಯು ಈ ನಿರ್ಧಾರ ಕೈಗೊಳ್ಳುವ ಮುನ್ನ ನಮ್ಮನ್ನು ಒಂದು ಮಾತು ಕೇಳಿದ್ದರೆ ಚೆನ್ನಾಗಿತ್ತು. ಅವರ ದುಡುಕು ನಿರ್ಧಾರವನ್ನು ಕೇಳಿ ಸಾಮ್ರಾಜ್ಯನಿಷ್ಠ ಸೇವಕರು ಬಹಳ ಮನನೊಂದಿದ್ದಾರೆ!"

"ಅದು ನನಗೂ ತಿಳಿದಿದೆ ಬುದ್ಧರಾಜರೇ. ಆದರೆ, ನಾವು ಅನ್ಯಾಯವನ್ನು ನೋಡಿಯೂ ಹೇಡಿಗಳಂತೆ ಕೈ ಕಟ್ಟಿಕೊಂಡು ಸುಮ್ಮನಿರಬೇಕಾಗಿದೆ. ಪುಲಿಕೇಶಿಯು ನಮ್ಮ ಬಾಯಿಕಟ್ಟಿರುವಂತೆ, ಕೈಯನ್ನೂ ಕಟ್ಟಿದ್ದಾನೆ! ಸಿಂಹಾಸನದ ಸಲುವಾಗಿ ರಕ್ತಪಾತ ನಡೆದರೆ, ಅದಕ್ಕಾಗಿ ತಾನು ಪ್ರಾಯಶ್ಚಿತ್ತ ಅನುಭವಿಸುವುದಾಗಿ ಹೇಳಿದ್ದಾನೆ."

"ದ್ರೋಹಿಗಳ ಸಂಚನ್ನು ತಿಳಿದೂ, ಅನ್ಯಾಯ ಅಧರ್ಮಗಳನ್ನು ಕಂಡು ಕೇಳಿಯೂ, ನಾವು ಹೇಡಿಗಳಂತೆ ಸುಮ್ಮನಿರಬೇಕೆ? ಧರ್ಮರಕ್ಷಣೆಗಾಗಿ ಹೋರಾಡಿ ಮಡಿಯುವುದಕ್ಕೂ ಕುಮಾರರು ತಡೆಯೊಡ್ಡಿದ್ದಾರೆಯೆ?"

"ಹೌದು ಬುದ್ಧರಾಜರೇ! ಸದ್ಯದ ಸ್ಥಿತಿಯಲ್ಲಿ ನಾವು ಎಲ್ಲವನ್ನೂ ಹೃದಯ ಶೂನ್ಯ ವಿಗ್ರಹಗಳಂತೆ ನೋಡಿಕೊಂಡಿರಬೇಕಾಗಿದೆ. ಆದರೆ ನಾವು ಕಾರ್ಯೋನ್ಮುಖರಾಗುವ ದಿನ ದೂರವಿಲ್ಲವೆಂದು ಅನಿಸುತ್ತಿದೆ. ಮಂಗಳೇಶನ ಪಾಪದ ಬಟ್ಟಲು ತುಂಬುತ್ತಾ ಬಂದಿದೆ. ಅವನು ತನ್ನ ಪಾಪಕ್ಕಾಗಿ ಪಶ್ಚಾತ್ತಾಪ ಪಡುವ ದಿನ ಹತ್ತಿರ ಬರುತ್ತಿದೆ."

ಎಂದು ಹೇಳಿ ಬುದ್ಧರಾಜನನ್ನು ಸಮಾಧಾನಗೊಳಿಸಿದನು. ಆದರೂ ಬುದ್ಧರಾಜನಿಗೆ ಸಮಾಧಾನವಾಗಲಿಲ್ಲ.

"ಆಗಲಿ ಅಮಾತ್ಯರೆ, ನಾನು ಪುಲಿಕೇಶಿಯ ಜೊತೆಯಲ್ಲಿ ಒಮ್ಮೆ ಮಾತನಾಡಿ ಬರುತ್ತೇನೆ. ಅವರು ತಮ್ಮ ನಿರ್ಧಾರ ಬದಲಿಸದಿದ್ದರೆ ನಾವು

ಕಾರ್ಯಾಚರಣೆಗೆ ತೊಡಗಬೇಕಾಗುತ್ತದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಿಬರುತ್ತೇನೆ!" ಎಂದು ಹೇಳಿ ಸಮಂತಭದ್ರನನ್ನು ಬೀಳ್ಕೊಂಡು ಹೊರಟನು.

ಪುಲಿಕೇಶಿಯು ಈಗ ಯಾರೊಡನೆಯೂ ಹೆಚ್ಚಾಗಿ ಬೆರೆಯುತ್ತಿರಲಿಲ್ಲ. ಅವನಿಗೆ ಏಕಾಂತ ಹೆಚ್ಚು ಪ್ರಿಯವಾಗಿತ್ತು. ಅದರ ಸಲುವಾಗಿ ಅವನು ಕೆಳಗಿನ ಅರಮನೆಯಲ್ಲಿ ಒಂಟಿಯಾಗಿ ತನ್ನ ಅಧ್ಯಯನದಲ್ಲಿ ತೊಡಗಿದ್ದನು. ಬುದ್ಧರಾಜನು ಪುಲಿಕೇಶಿಯನ್ನು ನೋಡಲು ಬಂದಾಗ ಪುಲಿಕೇಶಿಯು ಯಾವುದೋ ಓಲೆಗ್ರಂಥವನ್ನು ಓದುತ್ತಾ ಕುಳಿತಿದ್ದನು. ಸಂಜೆ ಮಬ್ಬುಗತ್ತಲಿನಲ್ಲಿ ತಟಕ್ಕನೆ ಬುದ್ಧರಾಜನ ಗುರುತು ಹತ್ತಲಿಲ್ಲ. ಕೊಂಚಕಾಲ ದಿಟ್ಟಿಸಿ ನೋಡಿದ ಮೇಲೆ,

"ಯಾರು, ಬುದ್ಧರಾಜರೇ? ಯಾವಾಗ ಬಂದಿರಿ! ಊರಿನಲ್ಲಿ ಎಲ್ಲರೂ ಕ್ಷೇಮವಷ್ಟೇ!" ಎಂದನು.

"ತಮ್ಮ ಆಶೀರ್ವಾದದಿಂದ ಎಲ್ಲರೂ ನೆಮ್ಮದಿಯಾಗಿದ್ದಾರೆ, ಪ್ರಭು."

"ನಾನು ಪ್ರಭುತ್ವವನ್ನು ಬಿಟ್ಟುಕೊಟ್ಟುದು ನಿಮಗೆ ತಿಳಿದಿಲ್ಲವೆಂದು ಕಾಣುತ್ತದೆ!" ಪುಲಿಕೇಶಿಯು ಬುದ್ಧರಾಜನು ಪ್ರಭು ಎಂಬುದನ್ನು ಕೇಳಿ ವಿವರಣೆ ಕೊಡುವಂತೆ ಹೇಳಿದನು.

"ಅದನ್ನು ಕೇಳಿಯೇ ನಾನು ಒಂದೇ ಉಸಿರಿನಲ್ಲಿ ಓಡಿ ಬಂದೆ, ಪ್ರಭು."

"ಮತ್ತೆ ನನ್ನನ್ನು ಪ್ರಭುವೆನ್ನುತ್ತೀರಾ?"

"ನೀವು ರಾಜ್ಯಕೋಶಗಳನ್ನು ತೊರೆದರೂ, ನನ್ನ ಭಾಗಕ್ಕೆ–ನನ್ನಂತಹ ಸಹಸ್ರಾರು ಸಾಮ್ರಾಜ್ಯನಿಷ್ಠ ಸೇವಕರಿಗೆ-ನೀವು ಇನ್ನೂ ಪ್ರಭುಗಳೇ ಆಗಿದ್ದೀರಿ! ನಮ್ಮ ಹೃದಯ ಸಿಂಹಾಸನದಲ್ಲಿ ಸಾಮ್ರಾಟರಾಗಿರುವ ನಿಮ್ಮನ್ನು ಯಾರೂ ಕೆಳಗಿಳಿಸಲಾರರು."

"ನಿಮ್ಮ ಅಭಿಮಾನಕ್ಕೆ ನಾನು ಹೇಗೆ ಋಣಿಯಾಗಿರಬೇಕೊ, ತಿಳಿಯದಾಗಿದೆ."

"ನೀವು ಮನಸ್ಸು ಮಾಡಿದರೆ, ಅದನ್ನು ತೀರಿಸಬಹುದು ಪ್ರಭು."

"ಹೇಗೆ?"

"ನಿಜವಾದ ಸಾಮ್ರಾಟರಾಗಿ."

"ಆ ಕನಸು ಎಂದೋ ಮರೆತುಬಿಟ್ಟದ್ದೇನೆ ಬುದ್ಧರಾಜರೇ."

"ಏಕೆ ಪ್ರಭು?"

"ನಿಮಗಿನ್ನೂ ರಾಜಧಾನಿಯ ವಿಷಯ ತಿಳಿದಿಲ್ಲವೆಂದು ಕಾಣಿಸುತ್ತದೆ."

"ಯಾವ ವಿಷಯ ಪ್ರಭು ?"

"ನಾನು ಸಹೋದರ ವಿಷ್ಣುವರ್ಧನನ ಸಲುವಾಗಿ ಸಿಂಹಾಸನವನ್ನು ಬಿಟ್ಟುಕೊಟ್ಟದ್ದೇನೆ."

"ಜೊತೆಗೆ ದೇಶತ್ಯಾಗಮಾಡಲೂ ನಿರ್ಧರಿಸಿರುವಿರೆಂದು ಕೇಳಿ ತುಂಬ ವ್ಯಥೆಯಾಯಿತು. ಸಮಂತಭದ್ರರು ಈ ಸಂಗತಿ ಹೇಳದಿದ್ದರೆ ನಾನು ನಂಬುತ್ತಿರಲಿಲ್ಲ!"

"ಪರಿಸ್ಥಿತಿ ಹಾಗೆ ಬಂತು, ಬುದ್ಧರಾಜರೇ !"

"ಪರಿಸ್ಥಿತಿ ಹಾಗೆ ಬರಲಿಲ್ಲ ಪ್ರಭು, ಎಲ್ಲ ನೀವು ಮಾಡಿಕೊಂಡದ್ದು."

"ನಾನೇನು ತಾನೇ ಮಾಡಬಲ್ಲೆ?"

"ಮನಸ್ಸುಮಾಡಿದ್ದರೆ, ದ್ರೋಹಿಯಾದ ಮಂಗಳೇಶನನ್ನು ಸಿಂಹಾಸನದಿಂದ ಉರುಳಿಸಿ, ನೀವೇ ಸಾಮ್ರಾಟರಾಗಿ ಮೆರೆಯಬಹುದಿತ್ತು. ಆದರೆ ನೀವು ಕಾರ್ಯಶೀಲರಾಗುವ ಗಳಿಗೆಯಲ್ಲಿ ನಿಷ್ಕ್ರಿಯರಾದಿರಿ ! ಪ್ರಜೆಗಳು ನಿಮ್ಮ ವಿಷಯದಲ್ಲಿ ಇಟ್ಟಿದ್ದ ಆಶೋತ್ತರಗಳನ್ನು ನಿರರ್ಥಕಗೊಳಿಸಿದಿರಿ. ಕೇವಲ ವೈಯಕ್ತಿಕ ಅಭೀಷ್ಟಸಾಧನೆಗಾಗಿ, ದೇಶದ ಹಿತವನ್ನು ಬಲಿಕೊಟ್ಟಿರಿ. ದೇಶದ ಜನತೆಗಿಂತಲೂ, ಯಃಕಶ್ಚಿತ ಸೋದರನ ಹಿತ ನಿಮಗೆ ಹೆಚ್ಚಾಯಿತೆ ? ಅವನ ಪ್ರೀತಿ ವಿಶ್ವಾಸ, ನಂಬಿಕೆಗಳನ್ನು ಉಳಿಸಿಕೊಳ್ಳಲು ಮಹಾಜನತೆಯನ್ನು ಬಲಿಕೊಡಬೇಕಾಯಿತೆ ? ಜನ ನಿಮ್ಮ ಬಗ್ಗೆ ತುಂಬಾ ನಿರಾಶರಾಗಿದ್ದಾರೆ ಪ್ರಭು ! ನೀವು ಮನಸ್ಸು ಮಾಡಿದರೆ ಈಗಲೂ ಜನತೆಯ ಆಶೋತ್ತರಗಳನ್ನು ಈಡೇರಿಸಬಹುದು....ಇದು ದುಡುಕುವ ವಿಷಯವಲ್ಲ, ಪ್ರಭು !"

"ಬುದ್ಧರಾಜರೆ, ನಾನು ಬಹು ದೀರ್ಘವಾಗಿ ಯೋಚಿಸಿ, ಈ ದೃಢ ನಿರ್ಧಾರ ಕೈಗೊಂಡಿದ್ದೇನೆ. ನಾನು ಕೇವಲ ವಿಷ್ಣುವರ್ಧನನ ನಂಬಿಕೆಯನ್ನು ಉಳಿಸಿಕೊಳ್ಳುವ ಸಲುವಾಗಿ ಸಿಂಹಾಸನವನ್ನು ತ್ಯಾಗಮಾಡಲಿಲ್ಲ. ದೇಶಕಲ್ಯಾಣ ದೃಷ್ಟಿಯಿಂದ, ಸಿಂಹಾಸನದ ಸಲುವಾಗಿ ಹೋರಾಟವನ್ನು ತಪ್ಪಿಸಲು ಸಿಂಹಾಸನವನ್ನು ತ್ಯಾಗಮಾಡಿದ್ದೇನೆ. ಎರಡು ಸ್ವತಂತ್ರ ರಾಷ್ಟ್ರಗಳಾಗಿ ಸಾಮ್ರಾಜ್ಯ ಛಿದ್ರವಾಗಿ ಹರಿದು ಹಂಚಿಹೋಗುವುದನ್ನು ತಪ್ಪಿಸಲು ರಾಜ್ಯತ್ಯಾಗ ಮಾಡಿದ್ದೇನೆ."

"ದೇಶತ್ಯಾಗ ಮಾಡಬೇಕಾದ ಪ್ರಮೇಯವಾದರೂ ಏನಿತ್ತು ?"

"ನಾನು ದೇಶದಲ್ಲಿ ಇದ್ದರೆ, ಸಿಂಹಾಸನ ತನಗೆ ಭದ್ರವಲ್ಲವೆಂದು ವಿಷ್ಣು ಹೆದರಿದ್ದಾನೆ."

"ನೀವು ಹೊರಟುಹೋದರೆ ಸಿಂಹಾಸನ ಅವರಿಗೆ ಭದ್ರವಾಗುವುದೆಂದು ಅವರ ಕಲ್ಪನೆಯೋ ?"

ಈ ಮಾತಿಗೆ ಪುಲಿಕೇಶಿ ಉತ್ತರಕೊಡಲಿಲ್ಲ.

"ಒಂದು ವೇಳೆ ಅಂತಹ ಕಲ್ಪನೆಹೊಂದಿದ್ದರೆ, ಅದು ತಿಳಿಗೇಡಿತನ ಅಷ್ಟೆ. ನನ್ನಂತಹ ಸಹಸ್ರಾರು ಸ್ವಾಮಿಭಕ್ತರು ಬದುಕಿರುವವರೆಗೆ, ಈ ಸಿಂಹಾಸನದಲ್ಲಿ ನಿಮ್ಮ ಹೊರತು ಅನ್ಯರು ಸಾಮ್ರಾಟರಾಗಿ ಮೆರೆಯುವುದನ್ನು ನಾವು ಸಹಿಸಲಾರೆವು."

"ನೀವು ನನ್ನಲ್ಲಿಟ್ಟಿರುವ ನಿಷ್ಠೆಗೆ ನಾನು ಕೃತಜ್ಞನಾಗಿದ್ದೇನೆ. ಇನ್ನು ಮುಂದೆ ಇದೇ ನಿಷ್ಠೆಯನ್ನು ವಿಷ್ಣುವರ್ಧನನಲ್ಲಿಯೂ ಇಡಬೇಕಾಗಿ ಕೋರುತ್ತೇನೆ."

"ಪ್ರಭು, ನಮ್ಮ ನಿಷ್ಠೆಯನ್ನು ಕಂಡವರಿಗೆಲ್ಲಾ ಊಳಿಗ ಮಾಡುವ ದಾಸಿ ಎಂದು ತಿಳಿದಿರಾ ? ಈ ಬಾಳಕರವಾಳ ಒಬ್ಬರ ಸೇವೆಗೆ ಮೀಸಲು! ಬದುಕಿದರೂ ಅಷ್ಟೇ, ಸತ್ತರೂ ಅಷ್ಟೇ. ಅದು ಇನ್ನೊಬ್ಬ ದಣಿಯ ಸೇವೆ ಮಾಡಲಾರದು ! ಇನ್ನು ನಿಷ್ಠೆಯಿಂದ ಇರುವ ಮಾತು ದೂರವೇ ಉಳಿಯಿತು."

"ನಿಮ್ಮಂತಹ ಸ್ವಾಮಿನಿಷ್ಠರ ಪ್ರಭುವಾಗಿ ಸೇವೆಸಲ್ಲಿಸಿಕೊಳ್ಳುವ ಭಾಗ್ಯ ನನಗಿಲ್ಲ." ಯಾಕೋ ಪುಲಿಕೇಶಿಯ ಕಣ್ಣಿನಲ್ಲಿ ಈ ಮಾತು ಹೇಳುತ್ತಿದ್ದಂತೆ ನೀರೂರಿತು.

"ನೀವು ಈ ಮಾತು ಹೇಳಬಾರದು ಪ್ರಭು! ನೀವೇ ನಮ್ಮ ಸಾಮ್ರಾಟರು. ಇಲ್ಲಿರಲಿ, ಎಲ್ಲೇ ಇರಲಿ, ನಾವು ನಿಮಗೆ ಮಾತ್ರ ಸೇವೆ ಸಲ್ಲಿಸುವವರು."

"ನೀವು ಹಠ ಮಾಡುತ್ತಿದ್ದೀರಿ ಬುದ್ಧರಾಜರೇ. ನೀವೆಷ್ಟು ಹೇಳಿದರೂ ಅಬ್ಬೆಗೆ, ಮಂಗಳೇಶರಿಗೆ ನಾನು ಸೂರ್ಯ ಚಂದ್ರರಾಣೆಗೂ ಕೊಟ್ಟ ವಚನವನ್ನು ಮುರಿಯಲಾರೆ. ಸತ್ಯಪ್ರತಿಜ್ಞೆಯನ್ನು ಮರೆಯಲಾರೆ."

"ನಿಮ್ಮ ಪ್ರತಿಜ್ಞೆ ಬಿಟ್ಟುಕೊಡಲು ಬೇರೆ ದಾರಿಯೇ ಇಲ್ಲವೆ? ಜಗದೀಶ್ವರನು ನಿಮ್ಮಲ್ಲಿ ಇಷ್ಟೆಲ್ಲ ಸದ್ಗುಣಗಳನ್ನು ಕೊಟ್ಟಿರುವುದು ನೀವು ಪರಿವ್ರಾಜಕ

ಸಂನ್ಯಾಸಿಯಾಗಲೆಂದೆ ? ನೀವು ಈ ಜನ್ಮದಲ್ಲಿ ಸಾಮ್ರಾಟರಾಗುವುದನ್ನು ನಾವು ನೋಡಲಾರವೆ ? ಆ ಪುಣ್ಯ ಹತಭಾಗ್ಯರಾದ ನಮಗೆ ದೇವರು ಕರುಣಿಸಿಲ್ಲವೆ?"

"ಸದ್ಯದ ಪರಿಸ್ಥಿತಿಯಲ್ಲಿ ಇದು ಅಸಾಧ್ಯ."

"ವಿಶೇಷ ಪರಿಸ್ಥಿತಿಯಲ್ಲಿ ಸಾಧ್ಯವೆ ?"

"ಅಂದರೆ...."

"ವಿಷ್ಣುವರ್ಧನನಿಗೆ ವಿವೇಕೋದಯವಾಗಿ ಅವನು ಬಂದು ನಿಮ್ಮ ಕಾಲಿಗೆ ಬಿದ್ದು ಸಿಂಹಾಸನವನ್ನು ನಿಮಗೆ ಒಪ್ಪಿಸಿದರೆ ನೀವು ಸಾಮ್ರಾಟರಾಗಲು ಒಪ್ಪುವಿರಾ ?"

"ಆ ಕಾಲ ಬಂದಾಗ ನೋಡಿಕೊಳ್ಳೋಣ."

"ಅಂತಹ ಕಾಲ ಏಕೆ ಬರಬಾರದು ಪ್ರಭು ?"

"ಬರುವುದಾಗಿದ್ದರೆ ಈ ವೇಳೆಗೆ ಬರಬೇಕಾಗಿತ್ತು ! ಈಗ ವಿಷ್ಣುವರ್ಧನನು ನನ್ನಲ್ಲಿ ಕ್ಷಮೆ ಯಾಚಿಸುವುದು ಹಾಗಿರಲಿ, ನಾನು ಇಲ್ಲಿದ್ದರೆ, ನನ್ನಿಂದ ಅಪಾಯವೆಂದು ದೇಶತ್ಯಾಗವನ್ನೂ ಬಯಸಿದ್ದಾನೆ. ಹೀಗಿರುವಲ್ಲಿ ಅವನಿಗೆ ವಿವೇಕೋದಯವಾಗಿ, ತನ್ನ ಹಠಬಿಟ್ಟುಕೊಟ್ಟು, ನನ್ನಲ್ಲಿ ಬಂದು ಕ್ಷಮೆ ಯಾಚಿಸುವನೆ?— ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ ! ನೀವು ಅಂತಹ ಆಸೆ ಇಟ್ಟುಕೊಳ್ಳಬೇಡಿ, ಬುದ್ಧರಾಜರೆ !"

"ಒಂದು ವೇಳೆ ಧರ್ಮಕರ್ಮ ಸಂಯೋಗದಿಂದ ವಿಷ್ಣು ಪಶ್ಚಾತ್ತಾಪಪಟ್ಟು ಸಿಂಹಾಸನವನ್ನು ನಿಮಗೆ ಒಪ್ಪಿಸಿದರೆ, ಅದನ್ನು ಸ್ವೀಕರಿಸುತ್ತೀರಾ ಪ್ರಭು ?"

ಈ ಮಾತಿಗೆ ಪುಲಿಕೇಶಿ ಉತ್ತರ ಕೊಡಲಿಲ್ಲ.

"ದೇಶದ ಮಹಾಜನತೆಯು ಮೊರೆಯನ್ನು ಲಾಲಿಸಿ, ವಿಷ್ಣುವರ್ಧನನು ತಮಗೆ ಸಿಂಹಾಸನವನ್ನು ಮತ್ತೆ ಹಿಂದಿರುಗಿಸಿದರೆ, ಅದನ್ನು ತಿರಸ್ಕರಿಸುವಿರಾ?"

"ದೇಶದ ಜನತೆಯ ಪಾದಸೇವಕ ನಾನು, ಬುದ್ಧರಾಜರೇ ! ಅವರು ಕೊಟ್ಟ ಆದೇಶವನ್ನು ಶಿರದಲ್ಲಿ ಹೊತ್ತು ನಡೆಯುವುದು ನನ್ನ ಕರ್ತವ್ಯ. ಆದರೆ ವಿಷ್ಣು ದೇಶದ ಜನತೆಯ ಆಶೋತ್ತರ ಮನಗಂಡು ಸಿಂಹಾಸನವನ್ನು ನನಗೆ ಒಪ್ಪಿಸುವನೆಂದು ತಿಳಿಯುವಷ್ಟು ತಿಳಿಗೇಡಿ ನಾನಲ್ಲ. ನಾನು ನಾಳೆ ದೇಶತ್ಯಾಗ

ಮಾಡಲು ಸಿದ್ಧನಾಗುತ್ತಿದ್ದೇನೆ. ಇನ್ನು ಕೆಲವು ಗಳಿಗೆಗಳ ನಂತರ, ವಿಷ್ಣು ಹಾಗೂ ಸಾಮ್ರಾಜ್ಯದ ಜನತೆಯ ಸಂಬಂಧ ಕಡಿದುಕೊಂಡು ಹೋಗುತ್ತೇನೆ.... ದೂರ ಬಹುದೂರ ಹೋಗಿರುತ್ತೇನೆ ! ಇನ್ನು ಜನತೆಯ ಸೇವೆಮಾಡುವುದಾದರೆ ಮುಂದಿನ ಜನ್ಮದಲ್ಲಿಯೇ" ಎಂದು ಹೇಳುತ್ತಿದ್ದಂತೆ ಅವನ ಧ್ವನಿ ಗದ್ಗದಿತ ವಾಯಿತು. ಏಕೋ ಅವನು ಪುತ್ತೆ ಕಣ್ಣೀರು ಮಿಡಿದ.

"ನೀವು ಏಕೆ ಹಾಗೆ ತಿಳಿಯುತ್ತೀರಿ ಪ್ರಭು ?"

"ಮತ್ತೆ ಹೇಗೆ ತಿಳಿಯಲಿ ?"

"ಯಾವುದೋ ಪವಾಡ ನಡೆದು ವಿಷ್ಣುವರ್ಧನನ ಮನಃಪರಿವರ್ತನೆ ಯಾಗಿ, ನಿಮಗೆ ಅವನು ಸಿಂಹಾಸನವನ್ನು ಒಪ್ಪಿಸಬಹುದು !"

"ಇದು ತ್ರೇತಾಯುಗವಲ್ಲ ಬುದ್ಧರಾಜರೆ !"

"ಏಕೆ ಪ್ರಭು ?"

"ಭರತನು ಶ್ರೀರಾಮನಿಗೆ ರಾಜ್ಯವನ್ನು ಒಪ್ಪಿಸಿದಂತೆ, ವಿಷ್ಣು ನನಗೆ ಒಪ್ಪಿಸಲು."

"ರಾಮನಂತಹ ಧರ್ಮಾತ್ಮರೂ, ಸತ್ಯಶೀಲರೂ, ಲಕ್ಷ್ಮಣನಂತಹ ಸ್ವಾಮಿನಿಷ್ಠ ಸೇವಕರೂ, ಕೌಸಲ್ಯೆಯಂತಹ ತಾಯಂದಿರೂ ಇರುವಾಗ ಕಲಿ ಯುಗದಲ್ಲಿಯೂ ಇಂತಹ ಪವಾಡ ಏಕೆ ನಡೆಯಬಾರದು ಪ್ರಭು ?"

"ಬುದ್ಧರಾಜರೇ, ನಿಮ್ಮ ಭರವಸೆ ನನಗಿಲ್ಲ."

"ಭವಿಷ್ಯದ ಗರ್ಭದಲ್ಲಿ ಏನು ಅಡಗಿರುವುದೋ ಕಂಡವರು ಯಾರು ಪ್ರಭು ? ನಾಳೆ ನಡೆಯುವುದನ್ನು ಯಾರೂ ಹೇಳಲಾರರು" ಎಂದು ಹೇಳಿದ.

ಬುದ್ಧರಾಜನು ಪುಲಿಕೇಶಿಯನ್ನು ಬೀಳ್ಕೊಂಡು ಹೊರಟ ಮೇಲೆ ಪುಲಿ ಕೇಶಿ ತನಗೆ ತಾನೇ ಅಂದುಕೊಂಡ:

"ಪುಲಿಕೇಶಿಯ ಭವಿಷ್ಯವೇನೆಂದು ಸ್ಪಷ್ಟವಾಗಿದೆ. ನಿಲ್ಲಲು ನೆಲೆಯಿಲ್ಲದೆ. ದೇಸಿಗನಂತೆ ಅಲೆಯುವುದು !" ಇದನ್ನು ನೆನೆದಂತೆ ವಿಷಣ್ಣ ನಗೆಯೊಂದು, ಅವನ ತುಟಿಗಳಲ್ಲಿ ಮಿನುಗಿತು.

೧೨

ಪುಲಿಕೇಶಿಯು ತನ್ನ ಪ್ರಯಾಣ ಸಿದ್ಧತೆಗಳನ್ನು ಪೂರೈಸಿಕೊಂಡು ಮಹಾರಾಣಿ ದುರ್ಲಭದೇವಿಯವರ ಆಶೀರ್ವಾದ ಪಡೆದು ಬೀಳ್ಕೊಳ್ಳಲು ಅವರ ಅಂತಃಪುರಕ್ಕೆ ಬಂದನು. ತಾನು ದೇಶತ್ಯಾಗ ಮಾಡಲಿರುವ ಸಂಗತಿಯನ್ನು ಕೇಳಿದಲಾಗಾಯಿತು, ಅವರ ಸ್ಥಿತಿ ಸೂಕ್ಷ್ಮವಾಗುತ್ತಾ ನಡೆದಿರುವುದು ಅವನಿಗೂ ತಿಳಿದಿತ್ತು. ಆದರೆ ಅವನು ಏನೂ ಮಾಡುವ ಸ್ಥಿತಿಯಲ್ಲೂ ಇರಲಿಲ್ಲ. ತಾನು ಈ ಸ್ಥಿತಿಗೆ ಬರಲು ಕಾರಣರಾದ ದುರ್ಲಭದೇವಿಯನ್ನು ಬಿಟ್ಟು ಅಗಲಲಾರದೆ ಅವನ ಎದೆ ದುಃಖದಿಂದ ಬಿರಿಯುತ್ತಿದ್ದರೂ, ಅದನ್ನು ಅತಿ ಸಂಯಮದಿಂದ ಸಹಿಸಿಕೊಂಡು, ಶೋಕವೇ ಮೂರ್ತಿವೆತ್ತಂತೆ ನಿಂತನು. ಅವನ ಬಾಯಲ್ಲಿ ಒಂದು ಶಬ್ದ ಹೊರಡದಿದ್ದರೂ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು. ಅವನು ಬಂದಾಗ ಮಹಾರಾಣಿ ದುರ್ಲಭದೇವಿಯವರು ಹಂಸತೂಲಿಕಾತಲ್ಪದಲ್ಲಿ ಮಲಗಿದ್ದರು. ಮೈಯಲ್ಲಿ ಜ್ವರ ಸುಡುತ್ತಿತ್ತು. ವೈದ್ಯರು ಜ್ವರದ ಬಾಧೆ ಕಡಿಮೆ ಮಾಡಲು ತಲೆಗೆ ಮಂಜಿನ ತುಂಡನ್ನು ಇಟ್ಟಿದ್ದರು. ತಂಪಾದ ಮಜ್ಜಿಗೆಯನ್ನು ಕುಡಿಯಲು ಕೊಡುತ್ತಿದ್ದರು. ಆದರೂ ಜ್ವರದ ಬಾಧೆ ಹಾಗೂ ತಲೆಯ ಸಿಡಿತದಿಂದ ಅವರು ಕಂಗಾಲರಾಗಿದ್ದರು. ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ಅವರು ಮಲಗಿರಬಹುದೆಂದು ಅವರನ್ನು ಎಚ್ಚರಿಸಲ ಪುಲಿಕೇಶಿ ಹಿಂಜರಿದ. ಅಲ್ಲಿದ್ದ ರಾಜವೈದ್ಯರು ಹಾಗೂ ಸಮಂತಭದ್ರನ ಕಡೆಗೆ ತಿರುಗಿ,

"ಅಮಾತ್ಯರೇ, ಅಬ್ಬೆಯನ್ನು ಈ ಮರಣೋತ್ಕ್ರಮಣ ಸ್ಥಿತಿಯಲ್ಲಿ ಬಿಟ್ಟು ಹೋಗಲು ನನಗೆ ತುಂಬಾ ಸಂಕಟವಾಗುತ್ತಿದೆ. ಆದರೆ ಕರ್ತವ್ಯ ನಾನು ಇಲ್ಲೇ ಉಳಿಯಲು ಅಡ್ಡಿಬರುತ್ತಿದೆ. ನಾನು ಇಲ್ಲಿ ಉಳಿದರೆ, ವಚನಭ್ರಷ್ಟನಾಗುತ್ತೇನೆ. ಪವಿತ್ರವಾದ ಚಾಲುಕ್ಯ ವಂಶದಲ್ಲಿ ಹುಟ್ಟಿದ ನಾನು ಪ್ರಾಣಹೋದರೂ ವಚನ ಭ್ರಷ್ಟನಾಗಲಾರೆ! ನಾನು ಕರ್ತವ್ಯಪಾಲನೆಯ ಸಲುವಾಗಿ ಇಲ್ಲಿಂದ ಹೊರಟಿದ್ದೇನೆ. ಅಬ್ಬೆಯವರ ಆಶಯ ಈಡೇರಿಸಲು, ಚಾಲುಕ್ಯ ಸಾಮ್ರಾಜ್ಯ ಅಖಂಡವಾಗಿ ಉಳಿಯಲು, ಸಿಂಹಾಸನಕ್ಕಾಗಿ ಹೋರಾಟವನ್ನೂ, ರಕ್ತಪಾತವನ್ನೂ ತಪ್ಪಿಸಲು ನಾನು ಇಲ್ಲಿಂದ ನಿರ್ಗಮಿಸುತ್ತಿದ್ದೇನೆ. ಪವಿತ್ರ ಉದ್ದಿಶ್ಯ ಸಾಧನೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಿಹೋಗುತ್ತಿರುವ ನನಗೆ ನಿಮ್ಮೆಲ್ಲರ ಹಾರೈ

ಕೆಯೇ ನನ್ನನ್ನು ಕಾಯುವ ರಕ್ಷಾಕವಚ ! ನೀವು ನನ್ನನ್ನು ಆಶೀರ್ವದಿಸಿ, ಸಂತೋಷದಿಂದ ಬೀಳ್ಕೊಡಿ. ಈ ಜನ್ಮದಲ್ಲಿ ಸಾಧ್ಯವಾಗದಿದ್ದರೂ ಮುಂದಿನ ಜನ್ಮದಲ್ಲಾದರೂ ನಿಮ್ಮ ಸೇವೆಮಾಡುವ ಅವಕಾಶವನ್ನು ಭಗವಂತನು ಕರು ಣಿಸಲೆಂದು ಪ್ರಾರ್ಥಿಸುತ್ತೇನೆ" ಎಂದು ಹೇಳಿ ಎಲ್ಲರಿಗೂ ಕೈಮುಗಿದ.

ಅನಂತರ ಸಮಂತಭದ್ರರನ್ನು ನೋಡಿ,

"ಅಮಾತ್ಯರೇ, ನೀವು ನನ್ನನ್ನು ತಂದೆಯಂತೆ ಪೋಷಿಸಿದ್ದೀರಿ. ನಿಮ್ಮ ಋಣವನ್ನು ಈ ಜನ್ಮದಲ್ಲಿ ತೀರಿಸಲಾಗಲಿಲ್ಲ. ಇನ್ನೊಂದು ಜನ್ಮದಲ್ಲಿ ತೀರಿಸು ತ್ತೇನೆ. ನಿಮ್ಮಿಂದ ಮೇಲಿಂದ ಮೇಲೆ ಉಪಕೃತನಾಗಿದ್ದರೂ ಇನ್ನೊಂದು ಉಪ ಕಾರವನ್ನು—ಕಡೆಯ ಉಪಕಾರವನ್ನು—ನಿಮ್ಮಿಂದ ಯಾಚಿಸುತ್ತಿದ್ದೇನೆ. ಮಹಾ ರಾಣಿಯವರು ನನ್ನಲ್ಲಿ ಎಷ್ಟು ಪ್ರೀತಿ ಇಟ್ಟಿದ್ದಾರೆಂಬುದು ನಿಮಗೆ ತಿಳಿದಿದೆ. ನಾನು ಅವರ ಪ್ರೀತಿಯನ್ನು ಹಿಂದಕ್ಕೆ ಕೊಡಲಾರದ ಸ್ವಾರ್ಥಿಯಾಗಿದ್ದೇನೆ. ಅವರನ್ನು ನೋಡಿಕೊಳ್ಳುವ ಭಾರ ನಿಮ್ಮದು. ಅವರಿಗೆ ನನ್ನ ನಮಸ್ಕಾರ ಗಳನ್ನು ತಿಳಿಸಿರಿ, ಅವರ ಆಶೀರ್ವಾದ ನನ್ನ ರಕ್ಷಾಕವಚವಾಗಲಿ ಅಂತೆಯೇ ನೀವು ವಿಷ್ಣುವರ್ಧನನನ್ನು ಪ್ರೀತಿಯಿಂದ ನಡೆಸಿಕೊಳ್ಳಿ. ನನ್ನನ್ನು ನಿಷ್ಠೆ ಯಿಂದ ಸೇವಿಸಿದಂತೆ ಅವನನ್ನೂ ನಿಷ್ಠೆಯಿಂದ ಸೇವಿಸಿರಿ. ಅವನು ಅಡ್ಡದಾರಿಗೆ ಬಿದ್ದಾಗ, ತಿದ್ದಿರಿ. ಅವನ ಬೆಂಗಾವಲಿಗೆ ನಿಂತು, ಸ್ವಾರ್ಥಿಗಳ ಹಾಗೂ ದ್ರೋಹಿ ಗಳ ಕೈಯಿಂದ ಅವನನ್ನು ಪಾರುಮಾಡಿ, ಅವನನ್ನು ಪ್ರಜಾವತ್ಸಲ ಸಾಮ್ರಾಟ ನನ್ನಾಗಿಮಾಡಿ, ಚಾಲುಕ್ಯ ಸಿಂಹಾಸನದ ಧವಳಕೀರ್ತಿಗೆ ಕಳಂಕಬಾರದಂತೆ ನೋಡಿಕೊಳ್ಳಿ !" ಎಂದು ಹೇಳಿ, ಅಶ್ರುಬಾಷ್ಪಗಳ ಶ್ರದ್ಧಾಂಜಲಿಯನ್ನು ಅಬ್ಬೆ ಹಾಗೂ ಸಮಂತಭದ್ರರಿಗೆ ಅರ್ಪಿಸಿ, ಅವರಿಂದ ಬೀಳ್ಕೊಂಡು ಹೊರಟನು.

ಈ ವೇಳೆಗೆ ಮಧ್ಯರಾತ್ರಿ ಮೀರುತ್ತಾ ಬಂದಿತ್ತು. ಇನ್ನೆಲ್ಲಿಯ ನಿದ್ರೆ ಎಂದುಕೊಂಡು, ಯಾವುದೋ ತಾತ್ವಿಕಗ್ರಂಥವನ್ನು ತೆರೆದು ಓದುತ್ತಾ ಕುಳಿತು ಕೊಂಡನು. ಅಷ್ಟರಲ್ಲಿ ಬೆಳಗಿನ ಜಾವವಾಯಿತು. ಕೋಳಿಗಳು ಕೂಗಿದವು, ಪೂರ್ವದಿಗಂತದಲ್ಲಿ ಬೆಳ್ಳಿ ಮೂಡಿತ್ತು. ಅರುಣರಾಗದ ಛಾಯೆ ನಸುಗೆಂಪಾಗಿ ಪೂರ್ವದಿಗಂತವನ್ನೆಲ್ಲಾ ವ್ಯಾಪಿಸಿತ್ತು. ಎಲ್ಲೆಲ್ಲೂ ಪ್ರಕೃತಿ ಸಚೇತನವಾಗಿತ್ತು. ಆದರೆ ಪುಲಿಕೇಶಿಯ ಹೃದಯ ಮಾತ್ರ ಜಡವಾಗಿತ್ತು. ತಾನು ಸೂರ್ಯೋ ದಯವಾದ ಮೇಲೆ ನಗರದಿಂದ ಹೊರಟರೆ, ಹೆಚ್ಚು ಜನ ತನ್ನನ್ನು ಹಿಂಬಾಲಿಸಿ

ಬರಬಹುದೆಂದು ಹೆದರಿ, ಮುಂಜಾನೆಯಲ್ಲೇ ಮಿತಪರಿವಾರದೊಡನೆ ನಗರವನ್ನು ತೊರೆಯಲು ನಿರ್ಧರಿಸಿದ್ದನು. ಸಮಂತಭದ್ರನು ಪ್ರಯಾಣಕ್ಕೆ ಕುದುರೆಗಳನ್ನು ಸಿದ್ಧಪಡಿಸಿಕೊಟ್ಟನು. ಕೇವಲ ನಾಲ್ಕು ಮಂದಿ ಅನುಚರರು ಪ್ರಯಾಣಕ್ಕೆ ತೀರ ಅವಶ್ಯಕವಾದಷ್ಟು ವಸ್ತುಗಳನ್ನು ಮಾತ್ರವೇ ತೆಗೆದುಕೊಂಡು ಅವನನ್ನು ಹಿಂಬಾಲಿಸಿದರು. ಸಮಂತಭದ್ರನು ಪುಲಿಕೇಶಿಯನ್ನು ಬೀಳ್ಕೊಡಲು ಹೊರಟವನು ಮಹಾಕೂಟ ಸಮೀಪಿಸಿದರೂ ಹಿಂದಿರುಗಲಿಲ್ಲ. ಅವನು ಪುಲಿಕೇಶಿಯೊಡನೆಯೇ ತೀರ್ಥಯಾತ್ರೆಗೆ ಹೊರಡಲು ನಿಶ್ಚಯಿಸಿರುವಂತೆ ಕಂಡಿತು.

"ಅಮಾತ್ಯರೇ, ನೀವಿನ್ನು ಹೊರಡಿ. ಎಲ್ಲಿದ್ದರೂ ನಾನು ನಿಮ್ಮನ್ನು ತ್ರಿಕಾಲದಲ್ಲೂ ಸ್ಮರಿಸುತ್ತಿರುತ್ತೇನೆ. ಈಗ ನಿಮಗೆ ಹಿರಿದಾದ ಹೊರೆ ಹೊರಿಸಿದ್ದೇನೆ. ಮಕ್ಕಳಂತೆ ಇರುವ ಸಾಮ್ರಾಜ್ಯದ ಜನತೆಯು ಹೊರೆ ಅದು. ಅವರನ್ನು ಕೈಬಿಡಬೇಡಿ!" ಎಂದು ಹೇಳಿ ಅವರನ್ನು ಬಹು ಕಷ್ಟದಿಂದ ಬೀಳ್ಕೊಂಡು ಹೊರಟನು. ಆದರೂ, ಪುಲಿಕೇಶಿಯು ನಗರ ತ್ಯಾಗದ ಸುದ್ದಿಯನ್ನು ಕೇಳಿ, ಅವನೊಂದಿಗೆ ಹೊರಡಲು ಜನ ಸಾಲುಗಟ್ಟಿಕೊಂಡು ಅವನನ್ನು ಹಿಂಬಾಲಿಸಿ ಬರುತ್ತಿದ್ದರು. ಕೆಲವರು ಮಂಗಳೇಶನನ್ನೂ, ವಿಷ್ಣುವನ್ನೂ ಬೈಯುತ್ತಾ ಬರುತ್ತಿದ್ದರೆ, ಮತ್ತೆ ಕೆಲವರು ಪುಲಿಕೇಶಿಯಂತಹ ಧರ್ಮಾತ್ಮನಿಗೆ ಉಳಿಗಾಲವಿಲ್ಲವಾಯಿತೇ ಎಂದು ಹಂಬಲಿಸಿ, ಕಣ್ಣೀರು ಸುರಿಸುತ್ತಿದ್ದರು. ಮತ್ತೆ ಕೆಲವರು, ಪ್ರತಿಭಟನೆಯ ಮಾತು ಹೇಳುತ್ತಿದ್ದರೆ, ಇನ್ನು ಕೆಲವರು ಪುಲಿಕೇಶಿಯನ್ನು ಹಿಂದಿರುಗುವಂತೆ, ಆರ್ತರಾಗಿ ಬೇಡುತ್ತಿದ್ದರು. ಪುಲಿಕೇಶಿಗೆ ಅವರನ್ನೆಲ್ಲಾ ಸಮಾಧಾನಗೊಳಿಸಿ ಹಿಂದಿರುಗಿಸುವುದು ಹೇಗೆಂದು ತಿಳಿಯದಾಯಿತು. ಕಡೆಗೆ ಅವರಿಗೆಲ್ಲಾ ಉಚಿತ ಹಿತವಚನಗಳನ್ನಾಡಿ, ಬಹಳ ಕಷ್ಟದಿಂದ ಬೀಳ್ಕೊಂಡು ಹೊರಟನು.

ಸಮಂತಭದ್ರನು ಪುಲಿಕೇಶಿಯನ್ನು ಬಿಡಲಾಗದ ಹೃದಯದಿಂದ ಬೀಳ್ಕೊಂಡು ಅರಮನೆಗೆ ಬಂದಾಗ, ಅಲ್ಲಿ ಅವನಿಗೆ ಭಯಂಕರ ವಾರ್ತೆ ಕಾದಿತ್ತು.

ಮಹಾರಾಣಿ ದುರ್ಲಭದೇವಿಯವರು ಬೆಳಗಿನ ಜಾವದ ವೇಳೆಗೆ ಕೊಂಚ ತಿಳಿವುಗೊಂಡಿದ್ದರು. ರಾಜವೈದ್ಯರು ದುರ್ಲಭದೇವಿಯ ದೇಹಸ್ಥಿತಿಯ ಬಗ್ಗೆ ಕಾತರರಾಗಿದ್ದವರು ಈಗ ಸಮಾಧಾನದ ಉಸಿರು ಬಿಟ್ಟರು. ದೇಹದಲ್ಲಿ ಜ್ವರದ ಬಾಧೆ ಕಡಿಮೆಯಾಗಿತ್ತು. ತಲೆ ಸಿಡಿತವೂ ತಗ್ಗಿತ್ತು. ಅವರು ಮೆಲ್ಲನೆ ಕಣ್ಣು

ಬಿಟ್ಟು ಸುತ್ತಲೂ ನೋಡಿ,

"ಮಗು ಪುಲಿಕೇಶಿ.........ಮಗು ಪುಲಿಕೇಶಿ ಬರಲಿಲ್ಲವೆ?" ಎಂದು ಮೆಲ್ಲನೆ ಅಸ್ಪಷ್ಟ ಧ್ವನಿಯಲ್ಲಿ ಕೇಳಿದರು.

ರಾಜವೈದ್ಯರು ಮಹಾರಾಣಿಯವರ ದೈನ್ಯಮುಖವನ್ನು ನೋಡಿ,

"ತಾಯಿ, ಪುಲಿಕೇಶಿಯವರು ನಿನ್ನೆ ರಾತ್ರಿ ನಿಮ್ಮನ್ನು ನೋಡಲು ಬಂದಿದ್ದರು" ಎಂದರು.

"ನನ್ನನ್ನೇಕೆ ಮಾತನಾಡಿಸಲಿಲ್ಲ?"

"ನೀವು ನಿದ್ರಿಸುತ್ತಿದ್ದಿರಿ, ಎಚ್ಚರಿಸಲಿಲ್ಲ."

"ಈಗ ಹೋಗಿ ಅವನನ್ನು ಕೂಡಲೇ ಕರೆತನ್ನಿ. ಮಗುವನ್ನು ನೋಡಿ ಎಷ್ಟೋ ಯುಗವಾದಂತೆ ಆಗಿದೆ...."ಎಂದರು.

ರಾಜವೈದ್ಯರು ಮೌನವಾಗಿ ನಿಂತುದನ್ನು ಕಂಡು,

"ಯಾಕೆ? ಪುಲಿಕೇಶಿ ಕರೆದರೆ ಬರುವುದಿಲ್ಲವೆ?"

ಎಂದು ಪ್ರಶ್ನಿಸಿದರು.

"ತಾಯಿ, ಪುಲಿಕೇಶಿ...."

"ಹೂಂ, ಮಗುವಿಗೆ ಏನಾಯಿತು ಹೇಳಿ? ಕ್ಷೇಮದಿಂದಿರುವನು ತಾನೆ?"

"ಕುಮಾರರು ಕ್ಷೇಮದಿಂದ ಇದ್ದಾರೆ ತಾಯಿ. ಆದರೆ...."

"ಏನಾಯಿತು?"

"ವಿಷ್ಣುವರ್ಧನನ ಕೋರಿಕೆಯಂತೆ, ಇಂದು ಮುಂಜಾನೆ ದೇಶತ್ಯಾಗ ಮಾಡಿದರು."

"ಏನು, ಪುಲೀಕೇಶಿ ದೇಶತ್ಯಾಗ ಮಾಡಿದನೆ? ನನ್ನ ಕಂದಮ್ಮ ನನ್ನನ್ನು ತೊರೆದುಹೋದನೆ? ಅಯ್ಯೋ, ಮಗು ಪುಲಿಕೇಶಿ! ನನ್ನನ್ನು ನೋಡದೆ, ಒಮ್ಮೆ ಒಂದೇ ಒಂದು ಬಾರಿ ನೋಡದೆ ದೇಶತ್ಯಾಗ ಮಾಡಿದೆಯಾ? ನಾನು ಇದನ್ನು ನೋಡುವ ಸಲುವಾಗಿ ಇಷ್ಟು ದಿನ ಬದುಕಿರಬೇಕಾಯಿತೆ? ಅಯ್ಯೋ ದೈವವೇ! ಪುಲಿಕೇಶಿಯನ್ನು ಅಗಲಿ ನಾನು ಹೇಗೆ ಬದುಕಿರಲಿ? ಆ ಕಂದಮ್ಮ ನನ್ನು ಬಿಟ್ಟು ಹೇಗೆ ಬದುಕಿರಲಿ?" ಎಂದು ಎದೆ ಎದೆ ಬಡಿದುಕೊಂಡು ಅತ್ತರು. ಅವರ ಕಣ್ಣೀರು ಬತ್ತಿಹೋಗಿದ್ದರೂ ದುಃಖ ಮಾತಿಗೆ ನಿಲುಕದಾಗಿತ್ತು. ಅವರು ದೀರ್ಘಕಾಲದವರೆಗೆ ಅಳುತ್ತಿದ್ದು ಕಡೆಗೆ "ಹಾ! ಪುಲಿಕೇಶಿ!" ಎಂದು ಚೀತ್ಕ

ರಿಸಿ, ಹಾಗೆಯೇ ನೆಲಕ್ಕೆ ಉರುಳಿನರು. ಉರುಳಿದವರು ಮೇಲೇಳಲಿಲ್ಲ. ಪುಲಿಕೇಶಿ ತಮ್ಮನ್ನು ಬಿಟ್ಟು ಹೋದ ಸುದ್ದಿ ಕೇಳಿ, ಎದೆಯೊಡೆದು ಹಾಗೆಯೇ ಕಡೆಯುಸಿರನ್ನು ಎಳೆದಿದ್ದರು.

ಈ ಸುದ್ದಿಯನ್ನು ಕೇಳಿ ಸಮಂತಭದ್ರನು ಗರಬಡಿದಂತೆ ನಿಂತನು. ಕೂಡಲೇ ಈ ಸುದ್ದಿಯನ್ನು ಪುಲಿಕೇಶಿಗೆ ತಿಳಿಸಿ ಸಾಧ್ಯವಾದರೆ ಕರೆತರಲು ದೂತರನ್ನು ಅಟ್ಟಿದನು. ಮಹಾರಾಣಿಯವರ ಅಂತ್ಯಕ್ರಿಯೆಗಳಿಗೆ ಗಮನ ಕೊಡಲು ವಿಷ್ಣುವನ್ನು ಕರೆತರಲು ತಾನೇ ಮಂಗಳೇಶನ ಅರಮನೆಗೆ ಹೋಗಿ, ಮಂಗಳೇಶನಿಗೆ ಎಲ್ಲವನ್ನೂ ವರದಿಮಾಡಿದನು.

ಮಹಾರಾಣಿ ದುರ್ಲಭದೇವಿ ಸತ್ತ ಸುದ್ದಿ ಒಂದು ಕಡೆ, ತನ್ನ ಹಿತ ಶತ್ರುವಾದ ಪುಲಿಕೇಶಿಯು ನಗರವನ್ನು ಬಿಟ್ಟುಹೋದ ಸುದ್ದಿ ಇನ್ನೊಂದು ಕಡೆ, ಮಂಗಳೇಶನಿಗೆ ಈಗ ಸ್ವರ್ಗ ಒಂದು ಗೇಣು ಉಳಿಯಿತು. ಅವನು ಮಹಾರಾಣಿಯವರ ಸಾವಿಗೆ ಮರುಗುವ ಬದಲು, ವಿಜಯೋನ್ಮಾದದಲ್ಲಿ ಪೈಶಾಚಿಕ ನಗೆ ನಕ್ಕನು.

"ಕಡೆಗೂ ಆ ಪಿಶಾಚಿ ತೀರಿಕೊಂಡಿತು. ಈ ಸುದಿನಕ್ಕಾಗಿ ನಾನು ಎಷ್ಟು ದಿನಗಳಿಂದ ಹಂಬಲಿಸುತ್ತಿದ್ದೆ ? ಶ್ರೀಮಕುಟೇಶ್ವರನು ಇಂದು ನಮ್ಮ ಮೇಲೆ ಕಣ್ತೆರದು ನೋಡಿದ. ಈ ಗಳಿಗೆಯಿಂದ ಸಿಂಹಾಸನ ನಮ್ಮದು—ಅಲ್ಲ ನನ್ನದು ? ಈ ಗಳಿಗೆಯಿಂದ ನಾನೇ ಸಾಮ್ರಾಟ–ಅಹ್ಹಾಹ್ಹಾ! ಅ ಹ್ಹ ಹ್ಹ!!" ಎಂದು ನಕ್ಕನು.

ಇದನ್ನು ನೋಡಿ ಸಮಂತಭದ್ರನ ರಕ್ತ ಕುದಿಯಿತು. ಆದರೂ ಸಹನೆ ಮೀರಬಾರದೆಂದು ಹೇಳಿದ :

"ಪ್ರಭು, ಮಹಾರಾಣಿ ದುರ್ಲಭದೇವಿಯವರು ತೀರಿಕೊಂಡಿದ್ದಾರೆ. ರಾಜಕುಮಾರ ವಿಷ್ಣುವರ್ಧನರನ್ನು ಅಂತ್ಯಕ್ರಿಯೆಗಳಿಗಾಗಿ ಕಳುಹಿಸಿಕೊಡಬೇಕು."

"ಆ ಮುದುಕಿಯ ಶವವನ್ನು ತೆಗೆದುಕೊಂಡು ಹೋಗಿ ನಾಯಿ ನರಿಗಳ ಪಾಲುಮಾಡಿ."

"ಪ್ರಭು ! ನೀವು ಯಾರೊಂದಿಗೆ ಯಾವ ವಿಷಯ ಮಾತನಾಡುತ್ತಿರುವಿರೆಂದು ತಿಳಿದಿರಲಿ !" ಸಿಟ್ಟು ತಡೆಯದೆ ಸಮಂತಭದ್ರನೆಂದ.

"ನಾನು ಆ ದ್ರೋಹಿ ಮದೋನ್ಮತ್ತ ಅಮಾತ್ಯನೊಂದಿಗೆ ಮಾತನಾಡು ತ್ತಿರುವುದು ತಿಳಿದಿದೆ! ಈಗ ನಿಮ್ಮ ದ್ರೋಹ ನಡೆಯುವುದಿಲ್ಲ."

"ನನ್ನ ದ್ರೋಹಚಿಂತನೆಯನ್ನು ಬೇಕಿದ್ದರೆ, ನಿಧಾನವಾಗಿ ವಿಚಾರಣೆ ನಡೆಸಿ, ಬೇಡವೆನ್ನುವುದಿಲ್ಲ. ಆದರೆ ಈಗ ಮಹಾರಾಣಿಯವರ ಅಂತ್ಯಕ್ರಿಯೆಗೆ ದಯೆಯಿಟ್ಟು ರಾಜಕುಮಾರನನ್ನು ಕಳುಹಿಸಿಕೊಡಿ."

"ರಾಜಕುಮಾರರು, ಆ ಪಿಶಾಚಿಯ ದರ್ಶನ ಮಾಡುವುದೇ? ಅವಳನ್ನು ತೆಗೆದುಕೊಂಡು ಹೋಗಿ..."

"ಇನ್ನೊಮ್ಮೆ ಇಂತಹ ಹೇಯನುಡಿ ಬಂದರೆ, ನಿಮ್ಮ ನಾಲಿಗೆ ಕತ್ತರಿಸಿ ಬಿದ್ದೀತು ಜೋಕೆ" ಎಂದು ಸಮಂತಭದ್ರನು ಕತ್ತಿ ಹಿರಿದು ಮಂಗಳೇಶನ ಮೇಲೆ ಬಿದ್ದನು. ಮಂಗಳೇಶನು ಅವನ ಕೈಯಿಂದ ಪಾರಾಗಿ,

"ಏನು ನೋಡುತ್ತಿದ್ದೀರಿ? ಈ ದ್ರೋಹಿಯನ್ನು ಹಿಡಿದು ಸೆರೆಮನೆಗೆ ದೂಡಿ" ಎಂದು ಗರ್ಜಿಸಿದ. ರಾಹಪ್ಪಯ್ಯನು ನಾಲ್ವರು ಸೈನಿಕರೊಡನೆ ಬಂದು ಸಮಂತಭದ್ರನ ಮೇಲೆ ಹಠಾತ್ತನೆ ಬಿದ್ದನು. ಅವರೊಡನೆ ಸಮಂತಭದ್ರ ಎಷ್ಟು ಕಾಲ ಹೋರಾಡಬಲ್ಲ? ಕಡೆಗೆ ನಿರ್ವಾಹವಿಲ್ಲದೆ ಅವರಿಗೆ ಸೆರೆ ಸಿಕ್ಕಿದ್ದ ಸೈನಿಕರು ಸಮಂತಭದ್ರನನ್ನು ತೆಗೆದುಕೊಂಡು ಹೋಗಿ, ಅರಮನೆಯ ಕೋಣೆ ಯೊಂದರಲ್ಲಿ ಬಂಧಿಸಿ ಸೆರೆಯಲ್ಲಿ ಇಟ್ಟರು.

ಮೇಲಿಂದಮೇಲೆ ಒಂದೇ ದಿನ ಮಂಗಳೇಶನಿಗೆ ಮೂರು ವಿಜಯಗಳು ದೊರೆತಿದ್ದುವು.

ಸಿಂಹಾಸನಕ್ಕೆ ನಿಜವಾದ ಹಕ್ಕುದಾರನಾಗಿದ್ದ ಪುಲಿಕೇಶಿ ದೇಶಾಂತರ ಹೋಗಿದ್ದ.

ಸಿಂಹಾಸನವನ್ನು ಸರ್ಪಕಾವಲು ಕಾಯುತ್ತಿದ್ದ ಮಹಾರಾಣಿ ದುರ್ಲಭ ದೇವಿ ತೀರಿಕೊಂಡಿದ್ದರು.

ಈಗ ಸಿಂಹಾಸನದ ಅತ್ಯಂತ ಸ್ವಾಮಿನಿಷ್ಠ ಸೇವಕನೂ ತನ್ನ ಪ್ರಬಲ ಶತ್ರುವೂ ಆಗಿದ್ದ ಸಮಂತಭದ್ರನು ಸುಲಭವಾಗಿ ಸೆರೆಸಿಕ್ಕಿದ್ದನು.

ತನಗೆ ದೊರೆತ ಜಯದಿಂದ ಹಿಗ್ಗಿ, ನಗರದಲ್ಲಿ ಇದ್ದ ಪುಲಿಕೇಶಿಯ ಕಡೆಯವರನ್ನೆಲ್ಲಾ ಹಿಡಿದು ಸೆರೆಮನೆಗೆ ದೂಡಲು, ರಾಹಪ್ಪಯ್ಯನಿಗೆ ಆಜ್ಞೆ ಮಾಡಿ, ತನಗೆ ದೊರೆತ ವಿಜಯದ ಸಲುವಾಗಿ, ರಾತ್ರಿ ಅರಮನೆಯಲ್ಲಿ ತನ್ನ

ಮಿತ್ರರಿಗೆಲ್ಲಾ ಒಂದು ಔತಣಕೂಟವನ್ನು ಏರ್ಪಡಿಸಿದನು. ನಿಜಕ್ಕೂ ಮಂಗಳೇಶನಿಗೆ ತಾನು ಬಯಸಿದ್ದ ಸ್ವರ್ಗ ಕೈಗೆ ಸಿಕ್ಕಿತ್ತು. ಈಗ ಅವನು ವಿಜಯೋನ್ಮಾದದಲ್ಲಿ ಸಪ್ತಮಸ್ವರ್ಗದಲ್ಲಿ ಇದ್ದನು.

ಮಂಗಳೇಶನ ಆಜ್ಞೆಯಂತೆ, ಮಹಾರಾಣಿಯ ಅಂತಃಪುರದಲ್ಲಿ ಇದ್ದವರನ್ನೆಲ್ಲಾ ಸೆರೆಮನೆಯಲ್ಲಿ ಇಡಲಾಯಿತು. ಸಮಂತಭದ್ರನು ಕೈಸೆರೆಯಾದ ಸುದ್ದಿಯನ್ನು ಹೇಗೋ ತಿಳಿದ ರಾಜವೈದ್ಯರು ಮಹಾರಾಣಿಯ ದೇಹವನ್ನು ಗೋಪ್ಯವಾದ ಕಡೆಗೆ ಸಾಗಿಸಿ, ಅವರ ದೇಹಕ್ಕೆ ಶಾಸ್ತ್ರವಿಧಿಗಳಿಗೆ ಅನುಗುಣವಾಗಿ ಅಂತಿಮ ಕಾರ್ಯ ನೆರವೇರಿಸಿ, ತಾವು ಹೊತ್ತಿದ್ದ ರಾಜಋಣವನ್ನು ಯಥೋಚಿತ ರೀತಿಯಲ್ಲಿ ತೀರಿಸಿದರು. ನಗರದಲ್ಲಿ ಪುಲಿಕೇಶಿಯ ಪಕ್ಷ, ಮಹಾರಾಣಿಯವರ ಅಭಿಮಾನಿಗಳು ಎಂದು ಕಂಡ ಪ್ರತಿಯೊಬ್ಬನನ್ನೂ ಬಿಡದೆ ಶೋಧಿಸಿ, ಸೆರೆಮನೆಗಳಿಗೆ ತುಂಬಿದರು. ಆದರೆ ಅವರ ಕೈಗೆ ಸಮಂತಭದ್ರನ ಬಲಗೈಯ ಭಟನಾಗಿದ್ದ ಎರಪ್ಪದಂಡನಾಯಕನಾಗಲೀ, ಬುದ್ಧರಾಜನಾಗಲೀ ಸಿಕ್ಕದೆ, ತಲೆತಪ್ಪಿಸಿಕೊಂಡಿದ್ದರು. ಅವರಿಬ್ಬರೂ ಶತ್ರುದಾಳಿಯನ್ನು ನಿರೀಕ್ಷಿಸಿ ಸಕಾಲದಲ್ಲಿ ಪಾರಾಗಿದ್ದರು. ಅವರಿಗಾಗಿ ಎಷ್ಟು ಹುಡುಕಿದರೂ ಸಿಕ್ಕಲಿಲ್ಲ.

ಅವರಿಬ್ಬರೂ ವಾತಾಪಿಯ ಬೆಟ್ಟಗುಡ್ಡಗಳಲ್ಲಿ ಸೇರಿ ದೀರ್ಘವಾಗಿ ಆಲೋಚಿಸಿ, ಒಂದು ಸಂಚು ಸಿದ್ಧಪಡಿಸಿದರು. ಈಗ ಒಂದೊಂದು ಕ್ಷಣವೂ ಅಮೂಲ್ಯವಾಗಿತ್ತು.

ಪುಲಿಕೇಶಿ ನಿರ್ಗಮನದಿಂದ ರಾಜಧಾನಿಯ ಉತ್ಸಾಹ ಕುಗ್ಗಿತ್ತು. ಇನ್ನು ಮಂಗಳೇಶ–ವಿಷ್ಣುವರ್ಧನರ ಪ್ರಭುತ್ವದಲ್ಲಿ ಎಂತೋ ಏನೋ ಎಂದು ಜನರು ಹೆದರಿ ಕುಳಿತಿರುವಾಗಲೇ, ಮಹಾರಾಣಿ ದುರ್ಲಭದೇವಿಯವರ ಮರಣ, ಅಮಾತ್ಯ ಸಮಂತಭದ್ರನ ಬಂಧನಗಳು ಕಾಳ್ಗಿಚ್ಚಿನಂತೆ ಬಂದು ಅವರನ್ನು ಇನ್ನಷ್ಟು ಕಂಗೆಡಿಸಿದವು. ಇದರ ಪೆಟ್ಟಿನಿಂದ ಚೇತರಿಸಿಕೊಳ್ಳುವುದರೊಳಗಾಗಿ ಮಂಗಳೇಶನ ಕಡೆಯ ಸೈನಿಕರು ರಾಹಪ್ಪಯ್ಯನ ನೇತೃತ್ವದಲ್ಲಿ ಹೊರಟು ಪುಲಿಕೇಶಿಯ ಅಭಿಮಾನಿಗಳನ್ನೂ ಅವನ ಪಕ್ಷಪಾತಿಗಳನ್ನೂ ಬೇಟೆಯಾಡುತ್ತಾ ಬಂದರು. ತಮಗೆ ಸಂದೇಹ ಬಂದವರನ್ನೆಲ್ಲಾ ಸೆರೆಹಿಡಿದು, ಸೆರೆಮನೆಯನ್ನು ತುಂಬಿದರು. ಪ್ರತಿಭಟಿಸಿದವರನ್ನು ನಿಷ್ಕರುಣೆಯಿಂದ ಕೊಂದರು; ಇಲ್ಲವೇ ಅಂಗವಿಚ್ಛೇದನ ಮಾಡಿದರು. ಅನೇಕ ಸ್ತ್ರೀಯರ ಮೇಲೆ ಅತ್ಯಾಚಾರ ನಡೆಯಿತು.

ಅನೇಕರ ಮನೆಮಠಗಳನ್ನು ದೋಚಿದರು, ನೆಲಸಮ ಮಾಡಿದರು. ಮನೆಗಳಿಗೆ ಬೆಂಕಿ ಇಟ್ಟರು. ಎಲ್ಲೆಲ್ಲೂ ಮಂಗಳೇಶನ ಪ್ರಭುತ್ವದ ಪ್ರಥಮ ದಿನವಾದ ಇಂದು ಪೈಶಾಚಿಕ ಪ್ರಭುತ್ವವೇ ನಡೆಯಿತು. ರಾಜಧಾನಿಯ ನಾಗರಿಕ ಜೀವನ ಒಂದು ನಿಲುಗಡೆಗೆ ಬಂದಿತ್ತು. ಜನರು ಹೆದರಿ ಕಂಗಾಲರಾಗಿ, ಮುಂದೇನು ಎಂದು ತಲೆಯಮೇಲೆ ಕೈಹೊತ್ತು ಕುಳಿತರು. ಯಾವ ಗಳಿಗೆಯಲ್ಲಿ ತಮಗೆ ವಿಪತ್ತು ಕಾದಿದೆಯೋ ಎಂದು ಅವರು ಜೀವನವನ್ನು ಮುಷ್ಠಿಯಲ್ಲಿ ಹಿಡಿದುಕೊಂಡು ಕುಳಿತಿದ್ದರು.

ರಾಜಧಾನಿಯ ಪರಿಸ್ಥಿತಿ ಹೀಗೆ ಹದಗೆಟ್ಟಿರುವಾಗ, ಅತ್ತ ಪುಲಿಕೇಶಿಯು ಇದಾವುದರ ಅರಿವೇ ಇಲ್ಲದೆ ತನ್ನ ಪ್ರಯಾಣವನ್ನು ಮುಂದುವರಿಸಿದ್ದನು. ಅವನು ರಾಜಧಾನಿಯಿಂದ ಹೊರಟವನು ಮೊದಲು ಮಹಾಕೂಟಕ್ಕೆ ಹೋಗಿ ಶ್ರೀ ಮಹಾಕೂಟೇಶ್ವರನನ್ನು ಭಕ್ತಿಯಿಂದ ಆರಾಧಿಸಿ, ನಾಸಿಕದ ಮಾರ್ಗವಾಗಿ ವಾರಣಾಸಿಯನ್ನು ತಲುಪಲು ಹೊರಟನು. ಅವನು ದಿನವೆಲ್ಲಾ ಪ್ರಯಾಣ ಮಾಡಿ, ಸಂಜೆಯ ವೇಳೆಗೆ ಮಲಪ್ರಭೆಯ ದಂಡೆಯಲ್ಲಿದ್ದ ಒಂದು ಹಳ್ಳಿಗೆ ಬಂದನು. ಅವರು ಆ ರಾತ್ರಿ ಅಲ್ಲಿ ತಂಗಿದ್ದು ಮರುದಿನ ಪ್ರಯಾಣವನ್ನು ಮುಂದುವರಿಸಲು ನಿಶ್ಚಯಿಸಿ, ಕುದುರೆಗಳಿಗೆ ನೀರು ಕುಡಿಸಿ, ತಾವೂ ಕೊಂಚ ಆಹಾರ ಸೇವಿಸಿ, ದಿನವೆಲ್ಲಾ ದಣಿದಿದ್ದುದರಿಂದ ಊರಿನ ಚಾವಡಿಯಲ್ಲಿ ಬಟ್ಟೆಗಳನ್ನು ಹಾಸಿ ಮಲಗಿದರು. ಬೆಳಗಾದ ಮೇಲೆ ಅವರಿಗೆ ಎಚ್ಚರ.

ಇಷ್ಟು ದಿನಗಳಾದ ಮೇಲೆ ಪುಲಿಕೇಶಿಗೆ ಇಂದು ಗಾಢವಾದ ನಿದ್ರೆ ಬಂದಿತ್ತು. ರಾಜ್ಯಕ್ಕೆ ತಲೆಕೊಟ್ಟ ಅರಸನಿಗಿಂತಲೂ, ಶ್ರಮಜೀವಿಯು ಏಕೆ ಸುಖಿ ಎಂಬುದು ಆ ದಿನ ಅವನಿಗೆ ಚೆನ್ನಾಗಿ ಮನವರಿಕೆಯಾಯಿತು. ಅವನು ತೀರ ಸರಳವಾಗಿ ಉಡುಪು ಧರಿಸಿದ್ದನು. ಆ ಉಡುಪಿನಲ್ಲಿ ಅವನನ್ನು ಒಬ್ಬ ಶ್ರೀಮಂತ ದಾರಿ ಹೋಕನೆಂದು ಹೇಳಬಹುದಿತ್ತು. ಅವನ ಅನುಚರರಲ್ಲೂ ಯಾವುದೇ ಆಡಂಬರವಿರಲಿಲ್ಲ. ಯಾರಿಗೂ ಅವರು ರಾಜಕುಟುಂಬದವರೆಂಬ ಅನುಮಾನ ಬಾರದ ರೀತಿಯಲ್ಲಿ ಅವರ ಉಡುಗೆತೊಡಿಗೆ, ರೀತಿನೀತಿಗಳು ಇದ್ದವು. ಇನ್ನು ಮೇಲೆ ಸಾಮಾನ್ಯರೊಡನೆ ಬೆರೆಯಬೇಕಾದ ತಾನು ಸಾಮಾನ್ಯರಂತೆ ಇರುವುದನ್ನು ಕಲಿಯಲು, ಬೇಕೆಂದೇ ಸರಳಜೀವನ ನಡೆಸಿದ್ದನು. ಇದರಿಂದ ನೋಡಿದವರು ಯಾರೂ ಅವನು ಪುಲಿಕೇಶಿ ಎಂಬ ಸಂಗತಿ ಹಾಗಿರಲಿ, ರಾಜಧಾನಿ

ಯಿಂದ ಬಂದವನೆಂದು ಯಾರೂ ಹೇಳುವಂತೆ ಇರಲಿಲ್ಲ.

ಮಾರನೆಯ ದಿನ ಪುಲಿಕೇಶಿಯು ಮುಂಜಾನೆಗೇ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಆ ಹಳ್ಳಿಯನ್ನು ಬಿಡಲು ಸಿದ್ಧತೆಮಾಡಿಕೊಳ್ಳುತ್ತಿದ್ದಾಗ, ಈ ದಾರಿಹೋಕರನ್ನು ನೋಡಿ ಕುತೂಹಲಗೊಂಡ ಆ ಹಳ್ಳಿಯ ವೃದ್ಧನೊಬ್ಬನು ಅವರಾರೆಂದು ವಿಚಾರಿಸಲು ಅಲ್ಲಿಗೆ ಕೋಲೂರಿಕೊಂಡು ಬಂದನು.

"ಅಜ್ಜಯ್ಯಾ! ಬಾ ಕುಳಿತುಕೋ!" ಎಂದು ಪುಲಿಕೇಶಿಯೇ ಅವನನ್ನು ಮಾತನಾಡಿಸಿ, ಅವನ ಅಂಜಿಕೆಯನ್ನು ಕಳೆದು, ಕುಳಿತುಕೊಳ್ಳಲು ಹೇಳಿದನು.

"ಸ್ವಾಮಿ, ನಿಮ್ಮದು ಯಾವ ಊರು? ಎಲ್ಲಿಂದ ಬಂದಿರಿ? ಎಲ್ಲಿಗೆ ಹೊರಟಿದ್ದೀರಿ! ನೋಡಿದರೆ ಶ್ರೀಮಂತರಂತೆ ಕಾಣುತ್ತಿದ್ದೀರಿ!" ಎಂದು ಒಮ್ಮೆಲೇ ನಾಲ್ಕಾರು ಪ್ರಶ್ನೆಗಳನ್ನು ಕೇಳಿದನು.

"ನಮ್ಮದು ದಕ್ಷಿಣದೇಶದ ಮಹಿಷಮಂಡಲದಲ್ಲಿ ಒಂದು ಊರು. ಕ್ಷೇತ್ರಯಾತ್ರೆಗೆಂದು ಹೊರಟು, ಇಲ್ಲಿಯ ಮಹಾಕೂಟಕ್ಕೆ ಬಂದೆವು. ಈಗ ನಾವು ಕಿಸುವೊಳಲು, ಆರ್ಯಪುರಗಳ ಮೇಲೆ ನಾಸಿಕ, ಪಂಚವಟಿಗಳಿಗೆ ಹೋಗಬೇಕೆಂದಿದ್ದೇವೆ. ಅಲ್ಲಿಂದ ಮುಂದಕ್ಕೆ ವಾರಣಾಸಿ ತಲುಪಬೇಕೆಂದಿದ್ದೇವೆ."

"ನಿಮಗೆ ಇನ್ನೂ ಇಷ್ಟು ಸಣ್ಣವಯಸ್ಸು! ಆದರೆ ಈ ವಯಸ್ಸಿಗೇ ನಿಮಗೆ ದೇವರ ಮೇಲೆ ಎಷ್ಟು ಭಕ್ತಿ?" ಎಂದು ಆಶ್ಚರ್ಯ ವ್ಯಕ್ತಪಡಿಸಿದ.

"ನಾನು ಇದೀಗತಾನೆ ಶಿಕ್ಷಣಮುಗಿಸಿ ಊರಿಗೆ ಹಿಂತಿರುಗಿ ತಂದೆಯ ವ್ಯಾಪಾರದಲ್ಲಿ ತೊಡಗಲು ಯೋಚಿಸಿದ್ದೆ. ಆದರೆ ತಂದೆಯವರು, ವ್ಯಾಪಾರಕ್ಕೆ ತೊಡಗುವ ಮುನ್ನ ದೇಶಾಟನೆ ಮಾಡಿಕೊಂಡು ಲೋಕಶಿಕ್ಷಣ ಪಡೆದು, ಅನಂತರ ವಹಿವಾಟು ಆರಂಭಿಸು ಎಂದು ಉಪದೇಶಿಸಿದರು.ನಾನು ಯಾತ್ರೆಯ ನೆಪದಲ್ಲಿ ದೊಡ್ಡ ದೊಡ್ಡ ಊರುಗಳನ್ನೂ, ಪುಣ್ಯಕ್ಷೇತ್ರಗಳನ್ನೂ ಹೊರಟು ಇಲ್ಲಿಗೆ ಬಂದಿದ್ದೇನೆ."

"ಹಾಗಾದರೆ ನೀವು ವಾತಾಪಿಯ ಮೇಲೆ ಬಂದಿರಬೇಕಲ್ಲವೆ?"

"ಓ! ಮಹಾಕೂಟಕ್ಕೆ ಬರುವ ಮೊದಲು, ರಾಜಧಾನಿಯಲ್ಲಿ ಮೂರು ದಿನ ತಂಗಿದ್ದವು."

"ಹಾಗಾದರೆ ಅಲ್ಲಿನ ವಿಶೇಷ ಸಂಗತಿ ಏನು ಸ್ವಾಮಿ?"

"ಅಂಪರೆ ?"

"ಧರ್ಮಪ್ರಭುಗಳಾದ ಪುಲಿಕೇಶಿಯ ವಿರುದ್ಧ ಮಂಗಳೇಶರು ಪಿತೂರಿ ಮಾಡಿ ರಾಜ್ಯ ಕಸುಗೊಂಡಿದ್ದಾರೆ ಅಂತ ವರ್ತಮಾನ ಹುಟ್ಟಿದೆ ಏನು ವಿಷಯ? ನೀವು ಹೇಗೂ ರಾಜಧಾನಿಯಿಂದ ಬಂದಿದ್ದೀರಿ."

"ನಾವೂ ಈ ಸುದ್ದಿ ಅವರಿವರ ಬಾಯಲ್ಲಿ ಕೇಳಿದೆವು. ಆದರೆ ಈ ಬಗ್ಗೆ ನಮಗೆ ಕುತೂಹಲವಿಲ್ಲದುದರಿಂದ ಈ ವಿಷಯವನ್ನು ಅಷ್ಟಾಗಿ ತಿಳಿದುಕೊಳ್ಳ ಲಿಲ್ಲ."

"ಹೋಗಲಿ ಪುಲಿಕೇಶಿಯು ತಮ್ಮ ವಿಷ್ಣುವರ್ಧನ ಪಟ್ಟಕ್ಕೆ ಬರುತ್ತಾನೆ ಅಂತ ಷುದ್ದಿ ಹುಟ್ಟಿದೆ, ನಿಜವೆ ?"

"ಈ ಸುದ್ದಿ ನಿಜ."

"ಹಾಗಿದ್ದರೆ ತುಂಬಾ ಅನ್ಯಾಯವಾಯಿತು !"

"ಯಾಕೆ ಅಜ್ಜಯ್ಯ? ಯಾರಿಗೆ ಅನ್ಯಾಯವಾಯಿತು ?"

ಕುತೂಹಲದಿಂದ ಪುಲಿಕೇಶಿ ಕೇಳಿದ.

"ಇನ್ಯಾರಿಗೆ ? ಪುಲಿಕೇಶಿಗೆ ಅನ್ಯಾಯವಾಯಿತು. ನಾವೆಲ್ಲಾ ಅವರೇ ದೊರೆಗಳಾಗುತ್ತಾರೆ ಅಂತ ತುಂಬಾ ಆಸೆ ಇಟ್ಟುಕೊಂಡಿದ್ದೆವು. ಅವರು ಧರ್ಮ ರಾಯರಂತಹವರೆಂದು ನೋಡಿದ ಜನ ಹೇಳುತ್ತಾರೆ. ಆದರೆ ನಾನು ಕಾಣೆ. ಕಿವಿಯ ಮೇಲೆ ಬೀಳುತ್ತಿರುವ ಮಾತು ಕೇಳಿದರೆ . ಪುಲಿಕೇಶಿ ದೊರೆಯಾದರೆ, ದೇಶ ಸುಭಿಕ್ಷವಾಗುತ್ತದೆ, ಜನ ನೆಮ್ಮದಿಯಾಗಿರುತ್ತಾರೆ, ದೇಶದಲ್ಲಿ ಶತ್ರುಗಳ ಕಾಟವಿಲ್ಲದೆ ಹಾಲು ಜೇನು ಹರಿಯುತ್ತದೆ ಹೀಗೆ ಏನೇನೋ ಕನಸು ಕಾಣ್ತಾ ಇದ್ದಾರೆ ಜನ. ಅಂತಲೇ ಕೇಳಿದೆ, ಯಾರು ದೊರೆಗಳಾಗ್ತಾರೆ ಅಂತ."

"ವಿಷ್ಣುವರ್ಧನ ದೊರೆಯಾದರೆ, ನಿಮಗೇನು ತೊಂದರೆ ?" ಪುಲಿಕೇಶಿ ಕುತೂಹಲದಿಂದ ಕೇಳಿದ.

"ಅವರು ಅಷ್ಟು ಬುದ್ಧಿವಂತರಲ್ಲ–ಅಷ್ಟು ಒಳ್ಳೆಯವರೂ ಅಲ್ಲ ಅಂತ ಜನ ಹೇಳುತ್ತಾರೆ. ಅವರು ಮಂಗಳೇಶರ ಮಾತು ಮೀರೊಲ್ಲವಂತೆ. ಸ್ವಂತ ಬುದ್ಧಿ ಇಲ್ಲದ ದೊರೆ ಎಷ್ಟು ಚೆನ್ನಾಗಿ ರಾಜ್ಯವಾಳಿಯಾನು ?"

"ಹೋಗಲಿ, ಬಿಡು ಅಜ್ಜಯ್ಯ, ಯಾವ ದೊರೆಗೆ ರಾಜ್ಯ ಬಂದರೆ ನಿನ ಗೇನು ಜೋಳ ಬೀಸೋದು ತಪ್ಪುತ್ಯೇ ?"

"ಆದ ಮಾತ್ರಕ್ಕೆ ನ್ಯಾಯವಾಗಿ ಹಕ್ಕುದಾರನಾದ ಪುಲಿಕೇಶಿಯನ್ನು ಬಿಟ್ಟುಬಿಟ್ಟು, ಆ ದ್ರೋಹಿ ಮಂಗಳೇಶ ವಿಷ್ಣುವರ್ಧನನನ್ನು ಸಿಂಹಾಸನದ ಮೇಲೆ ಕೂಡಿಸಿದರೆ ದೇವರು ಮೆಚ್ಚುತ್ತಾನೆಯೆ? ಜನ ಮೆಚ್ಚುತ್ತಾರೆಯೆ? ಈಗಾಗಲೆ, ಈ ಸುದ್ದಿ ಅವರಿವರ ಬಾಯಲ್ಲಿ ಕೇಳಿ ಕೆರಳಿದ್ದಾರೆ. ರಾಜ್ಯಕ್ಕೆ ಏನೋ ಕೇಡುಗಾಲ ಇರಬೇಕು. ಇಲ್ಲದಿದ್ದರೆ, ಧರ್ಮಾತ್ಮನಾದ ಪುಲಿಕೇಶಿಯನ್ನು ಬಿಟ್ಟು ವಿಷ್ಣುವರ್ಧನನಿಗೆ ರಾಜ್ಯ ಕೊಡೋಣ ಎಂದರೇನು?"

ಎಂದು ತನ್ನದೇ ಜಿಜ್ಞಾಸೆಯಲ್ಲಿ ತೊಡಗಿದ ಆ ವೃದ್ಧ. ಅವನು ಆ ಊರಿನ ಕರಣಿಕನಾಗಿದ್ದುದರಿಂದ ಓದುಬರಹ ಬಲ್ಲವನಾಗಿದ್ದು ರಾಜಧಾನಿಯ ವಿದ್ಯಮಾನವನ್ನೆಲ್ಲ ಅವರಿವರ ಬಾಯಲ್ಲಿ ಕೇಳಿ ತಿಳಿದುಕೊಂಡಿದ್ದ. ಈಗ ಪುಲಿಕೇಶಿಯನ್ನು ಒಬ್ಬ ಪ್ರಯಾಣಿಕನೆಂದು ಭಾವಿಸಿ ಅವನೊಡನೆ ಮನಬಿಚ್ಚಿ ಚರ್ಚಿಸಿದ್ದ.

ಆ ವೃದ್ಧನೊಡನೆ ಮಾತನಾಡುತ್ತಿದ್ದಂತೆ ಪುಲಿಕೇಶಿಗೆ ಹೃದಯ ತುಂಬಿ ಬಂತು. ಸಾಮಾನ್ಯ ಜನತೆಗೂ ರಾಜಧಾನಿಯಲ್ಲಿ ನಡೆದ ಅನ್ಯಾಯ ತಿಳಿದಿದೆ ಅವರು ಅನ್ಯಾಯವನ್ನು ವಿರೋಧಿಸುತ್ತಿದ್ದಾರೆ. ತಾನು ದೊರೆಯಾಗಲು ನಿರಾಕರಿಸಿ ಅವರ ಹೊಂಗನಸಿಗೆ ತಿಲಾಂಜಲಿ ಕೊಡುವಂತೆ ಮಾಡಿದ್ದೇನೆ. ತನ್ನ ಸಿಂಹಾಸನತ್ಯಾಗ ದುಡುಕು ನಿರ್ಧಾರವಾಯಿತೆ? ಎಂದು ಅನಿಸಹತ್ತಿತು. ಅವನು ಹಾಗೇ ಏನನ್ನೋ ಯೋಚಿಸುತ್ತಾ ಅನ್ಯಮನಸ್ಕನಾಗಿ ಕುಳಿತಿರುವಾಗ, ಒಬ್ಬ ಕುದುರೆ ಸವಾರ, ತನ್ನ ಕಡೆಗೇ ಲಬುಬಗೆಯಿಂದ ಬರುತ್ತಿರುವುದು ಕಾಣಿಸಿತು.

ಅವನು ದೂರದಿಂದಲೇ ಪುಲಿಕೇಶಿಯನ್ನು ಗುರುತಿಸಿ, ಕೂಡಲೇ ಕುದುರೆಯನ್ನು ಓಡಿಸಿಕೊಂಡು ಬಂದು, ಕುದುರೆಯಿಂದ ಇಳಿದು ಪುಲಿಕೇಶಿಗೆ ನಮಸ್ಕಾರ ಮಾಡಿ ಮೌನವಾಗಿ ನಿಂತು ಅನಂತರ,

"ಪ್ರಭು, ತಮಗೆ ಸಮಂತಭದ್ರರು ಈ ಪತ್ರ ಕಳುಹಿಸಿಕೊಟ್ಟಿದ್ದಾರೆ" ಎಂದು ಹೇಳಿ ಕಿಸೆಯಿಂದ ಪತ್ರವೊಂದನ್ನು ತೆಗೆದು ಪುಲಿಕೇಶಿಗೆ ಇತ್ತ. ಅದನ್ನು ಸ್ವೀಕರಿಸುತ್ತಾ,

"ನೀನು ರಾಜಧಾನಿಯನ್ನು ಯಾವಾಗ ಬಿಟ್ಟೆ?" ಎಂದು ಪ್ರಶ್ನಿಸಿದ.

"ನಿನ್ನೆ ಮಧ್ಯಾಹ್ನ ಪ್ರಭು! ಆದರೆ, ನಿಮ್ಮನ್ನು ಹುಡುಕಿಕೊಂಡು ಅಲೆಯುವುದರಲ್ಲಿ ಕತ್ತಲಾಯಿತು. ಬೆಳಿಗ್ಗೆ ನೀವು ಇಲ್ಲಿರುವ ವಿಷಯ ಕೇಳಿ ಓಡಿ

ಬಂದೆ!" ಎಂದು ಕುದುರೆ ಸವಾರನು ಹೇಳಿದನು.

ಪುಲಿಕೇಶಿಯು ಸಮಂತಭದ್ರನು ಇಷ್ಟು ಅಲ್ಪಕಾಲದಲ್ಲಿ ಪತ್ರ ಬರೆಯಲು ಯಾವುದೋ ಮಹತ್ವದ ಸಂಗತಿ ಇರಬೇಕೆಂದುಕೊಂಡು, ಅದನ್ನು ಬಿಚ್ಚಿ ಓದಿ ಕೊಂಡನು. ಕೂಡಲೇ ಅವನ ಮುಖ ವಿವರ್ಣವಾಯಿತು.

ಪತ್ರದಲ್ಲಿ ಸಮಂತಭದ್ರನು ಮಹಾರಾಣಿ ದುರ್ಲಭದೇವಿಯು ನಿಧನರಾದ ವಾರ್ತೆಯನ್ನು ತಿಳಿಸಿ, ಕೂಡಲೇ ಅವರ ಅಂತ್ಯಕ್ರಿಯೆಗಳಿಗಾಗಿ ರಾಜಧಾನಿಗೆ ಹೊರಟುಬರಲು ಕೋರಿದ್ದ. ಅಲ್ಲದೆ ದುರ್ಲಭದೇವಿ ಮರಣಹೊಂದಿದ ಸಂದರ್ಭ ವನ್ನೂ, ಅವರು ತಮ್ಮ ಕಡೆಗಾಲದಲ್ಲಿ ಪುಲಿಕೇಶಿಗಾಗಿ ಹಂಬಲಿಸಿದ ರೀತಿಯನ್ನೂ ಮನಕರಗುವಂತೆ ತಿಳಿಸಿ ಬರೆದಿದ್ದ.

ಅದನ್ನು ಓದಿಕೊಂಡು ಪುಲಿಕೇಶಿಯು ಚಣಕಾಲ ಗರಬಡಿದವನಂತೆ ಕುಳಿತ. ಅವನಿಗೆ ತಿಳಿಯದಂತೆ ಮುಖ ನಿಸ್ತೇಜವಾಯಿತು. ಕಣ್ಣಾಲಿಗಳಲ್ಲಿ ಅಶ್ರುಪ್ರವಾಹ ಹರಿಯುತ್ತಿತ್ತು. ಅವನು ಅಬ್ಬೆಯನ್ನು ನೆನೆಸಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾ, ಆ ಪತ್ರವನ್ನು ಕಣ್ಣೀರಿನಲ್ಲಿ ತೊಯ್ಸಿದನು.

"ಅಬ್ಬೆ, ನಿಮಗೆ ನಾನು ಅನ್ಯಾಯಮಾಡಿದೆ. ನಿಮ್ಮ ಸಾವಿಗೆ ನಾನೇ ಕಾರಣನಾದೆ. ನಿಮ್ಮನ್ನು ಇನ್ನು ಜೀವಂತವಾಗಿ ನೋಡುವ ಭಾಗ್ಯ ನನಗಿಲ್ಲದೆ ಹೋಯಿತಲ್ಲಾ! ನಿಮ್ಮ ಪ್ರೀತಿಯ ನುಡಿಗಳನ್ನು ಕೇಳುವ ಪುಣ್ಯ ಕಿವಿಗಳಿಗೆ ಇಲ್ಲವಾಯಿತಲ್ಲಾ! ಅಯ್ಯೋ! ಅಬ್ಬೆಯನ್ನು ಆಹುತಿ ತೆಗೆದುಕೊಂಡ ನಾನು ಎಂತಹ ನಿರ್ಭಾಗ್ಯ? ನನ್ನಂತಹವನು ಬದುಕಿರಬಾರದು."

ಎಂದು ದುಃಖದ ಉದ್ವೇಗದ ಬಡಬಡಿಸಿದನು.

ಈ ವೇಳೆಗೆ ಆ ವೃದ್ಧನಿಗೆ ಪುಲಿಕೇಶಿಯ ನಿಜವಾದ ಸಂಗತಿ ತಿಳಿದಿದ್ದುದ ರಿಂದ, ಅವನು ಪುಲಿಕೇಶಿಯನ್ನು ಮಗುವೆಂಬಂತೆ, ಸಾಂತ್ವನವಚನಗಳಿಂದ ಸಮಾಧಾನ ಪಡಿಸಿದನು.

ಈಗ ಪುಲಿಕೇಶಿಯ ಮುಂದೆ ಒಂದು ಪ್ರಶ್ನೆ ನಿಂತಿತ್ತು. ಈಗ ತಾನು ಸಮಂತಭದ್ರನ ಕೋರಿಕೆಯಂತೆ ಅಬ್ಬೆಯವರ ಅಂತ್ಯಕ್ರಿಯೆಗೆ ರಾಜಧಾನಿಗೆ ತೆರಳುವುದೆ? ಬಿಡುವುದೆ?

ರಾಜಧಾನಿಗೆ ತೆರಳಿದರೆ, ಇಷ್ಟು ಬೇಗ ಹಿಂದಕ್ಕೆ ಬಂದ ತನ್ನನ್ನು ಜನ ವಚನಭ್ರಷ್ಟ, ಸ್ವಾರ್ಥಿ ಎಂದೆನ್ನುವರು. ಸ್ವಯಂ ವಿಷ್ಣುವರ್ಧನನ್ನೂ ತನ್ನನ್ನು

ಸಂದೇಹಿಸುವನು. ಇಷ್ಟೆಲ್ಲ ಅಪಕೀರ್ತಿಗೆ ಒಳಗಾಗಿ, ತಾನು ಹೋದರೂ ಅಬ್ಬೆಯನ್ನು ಜೀವಂತವಾಗಿ ನೋಡಲು ಸಾಧ್ಯವಿಲ್ಲ. ಇಷ್ಟು ದೀರ್ಘಕಾಲ ಅವರನ್ನು ಮಂಗಳೇಶ—ವಿಷ್ಣುವರ್ಧನರು ತನ್ನ ಸಲುವಾಗಿ ಕಾಯ್ದಿರಿಸಿರುವುದೂ ಇಲ್ಲ. ಹೇಗೂ ರಾಜಧಾನಿಯಿಂದ ಹೊರಟು ಬಂದುದಾಗಿದೆ. ಮೋಹ ಮಮತೆಗಳನ್ನು ಕಡಿದುಕೊಂಡು ಬಂದುದಾಗಿದೆ. ಈಗ ತಾನು ರಾಜಧಾನಿಗೆ ಹಿಂದಿರುಗಬಾರದು ಎಂದು ಹೇಳಿಕೊಂಡು, ಮನಸ್ಸನ್ನು ಗಟ್ಟಿಮಾಡಿ ಪ್ರಯಾಣವನ್ನು ಮುಂದುವರಿಸಲು ನಿಶ್ಚಯಿಸಿದನು. ಆದರೆ, ಹೃದಯದ ಸೆಳೆತ ಹೆಚ್ಚಾಗಿತ್ತು ಸಮಂತಭದ್ರನ ಕೋರಿಕೆಯ ಆಕರ್ಷಣೆ ಬಲವಾಗಿತ್ತು. ಅಲ್ಲಿಂದ ಮುಂದಕ್ಕೆ ಕಾಲಿಡಲು ಮನಸ್ಸು ಒಪ್ಪಲಿಲ್ಲ. ಅವನು ಏನು ಮಾಡಬೇಕೆಂದು ತಿಳಿಯದೆ, ಡೋಲಾಯಮಾನ ಸ್ಥಿತಿಯಲ್ಲಿರುವಾಗ, ದೂರದಲ್ಲಿ ಇನ್ನೊಬ್ಬ ಚಾರನು ಕುದುರೆಯನ್ನು ನಾಗಲೋಟದಲ್ಲಿ ಓಡಿಸಿಕೊಂಡು ತನ್ನ ಕಡೆಗೆ ಬರುವುದು ಕಾಣಿಸಿತು. ಅವನ ಬೆವರಿದ ಮುಖ ಅವನ ಆತುರತೆಯನ್ನು ತಿಳಿಸುತ್ತಿತ್ತು. ನಿಜಕ್ಕೂ ಅವನು ಇದಕ್ಕೂ ಭಯಂಕರವಾದ ವಾರ್ತೆಯನ್ನು ತಂದಿದ್ದನು.

ಅವನು ಕುದುರೆಯಿಂದ ಧುಮುಕಿ, ಪುಲಿಕೇಶಿಯ ಬಳಿಗೆ ಓಡಿಬಂದು,

"ಪ್ರಭು ! ನಿನ್ನೆ ರಾತ್ರಿ ಮಂಗಳೇಶರನ್ನು ಯಾರೋ ಕೊಲೆಮಾಡಿದ್ದಾರೆ. ಕಡೆಗೂ ದ್ರೋಹಿಗಳಿಗೆ ತಕ್ಕ ಶಿಕ್ಷೆಯಾಯಿತು. ಅವರ ದ್ರೋಹವೇ ಅವರನ್ನು ನುಂಗಿತು !" ಎಂದು ಹೇಳಿ ಏದುತ್ತಾ ನಿಂತನು.

"ಏನು, ಮಂಗಳೇಶರನ್ನು ಕೊಲೆ ಮಾಡಿದರೆ ? ಯಾರು ಕೊಲೆ ಮಾಡಿದರು ? ಯಾವಾಗ ಕೊಲೆ ಮಾಡಿದರು ?" ಎಂದು ಪುಲಿಕೇಶಿ ಆಶ್ಚರ್ಯದಿಂದ ಕೇಳಿದನು. ಆ ಮಾತಿಗೆ ಉತ್ತರ ರೂಪವಾಗಿ, ದೂತನು ತನ್ನ ಬಳಿ ಇಟ್ಟುಕೊಂಡಿದ್ದ ಎರಡು ಪತ್ರಗಳನ್ನು ತೆಗೆದು ಪುಲಿಕೇಶಿಗೆ ಕೊಟ್ಟನು.

ಪುಲಿಕೇಶಿಯು ಲಗುಬಗೆಯಿಂದ ಆ ಪತ್ರಗಳನ್ನು ಬಿಚ್ಚಿ ಓದಿಕೊಂಡನು.

ಒಂದು ಪ್ರಧಾನ ಅಮಾತ್ಯ ಸಮಂತಭದ್ರನು ಬರೆದಿದ್ದ ಪತ್ರ.

ಇನ್ನೊಂದು ವಿಷ್ಣುವರ್ಧನನು ಬರೆದಿದ್ದ ಪತ್ರ.

ಪ್ರಧಾನ ಅಮಾತ್ಯ ಸಮಂತಭದ್ರನು ತನ್ನ ಪತ್ರದಲ್ಲಿ ಮಂಗಳೇಶನ ಕೊಲೆ ನಡೆದ ಸಂಗತಿಯನ್ನು ಸವಿಸ್ತಾರವಾಗಿ ಬರೆದಿದ್ದ. ಅದನ್ನು ಓದಿಕೊಂಡಂತೆ ಪುಲಿಕೇಶಿಯ ಕೂದಲು ನಿಮಿರಿತು, ಮೈಯಲ್ಲಿ ವಿದ್ಯುತ್ ಸಂಚಾರವಾದಂತೆ ಆಯಿತು.

ಆ ಪತ್ರದ ಸಾರಾಂಶ ಹೀಗಿತ್ತು :

ಪುಲಿಕೇಶಿಯು ಸಿಂಹಾಸನ ತ್ಯಾಗಮಾಡಿ ರಾಜಧಾನಿಯಿಂದ ಹೊರಟು ಹೋದ ಮೇಲೆ ಮಂಗಳೇಶನನ್ನು ಹಿಡಿಯುವವರೇ ಇರಲಿಲ್ಲ. ಅವನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನ ಬಹುಕಾಲದ ಕನಸು ನನಸಾಗಿತ್ತು. ಅವನ ಪ್ರಬಲ ಶತ್ರುಗಳಾಗಿದ್ದ, ಮಹಾರಾಣಿ ದುರ್ಲಭದೇವಿ, ಪುಲಿಕೇಶಿ, ಅಮಾತ್ಯ ಸಮಂತಭದ್ರರು ಅವನ ಮಾರ್ಗದಿಂದ ನಿರ್ಗಮಿಸಿ ಅವನ ದಾರಿಯನ್ನು ನಿಷ್ಕಂಟಕವಾಗಿ ಮಾಡಿದ್ದರು. ಅವನು ಬಹುಕಾಲದಿಂದ ಹಾರೈಸುತ್ತಾ ಹಾರೈಸುತ್ತಾ ಬಂದಿದ್ದ ಸಾಮ್ರಾಟಪದವಿ ಅನಾಯಾಸವಾಗಿ ಅವನಿಗೆ ದೊರೆತಿತ್ತು. ಈಗ ತತ್ಕಾಲಕ್ಕೆ ವಿಷ್ಣುವರ್ಧನನನ್ನು ಸಿಂಹಾಸನದ ಮೇಲೆ ಕೂಡಿಸಿ, ತನ್ನ ಅಧಿಕಾರ ಭದ್ರವಾದ ಮೇಲೆ ಅವನನ್ನು ಮೂಲೆಗೆ ತಳ್ಳಿ ತಾನೇ ಸಾಮ್ರಾಟನಾಗಿ ಮೆರೆಯಬಹುದು, ಇಲ್ಲವೇ ವಿಷ್ಣುವರ್ಧನನನ್ನು ಪದಚ್ಯುತನನ್ನಾಗಿ ಮಾಡಿ ತಾನೇ ಸಿಂಹಾಸನವನ್ನು ಆಕ್ರಮಿಸಿ, ವಂಶಪಾರಂಪರ್ಯವಾಗಿ ಅನುಭವಿಸಬಹುದು ಎಂದು ಕಟ್ಟಿದ್ದ ಕನಸು ಬಹುಮಟ್ಟಿಗೆ ನನಸಾಗಿತ್ತು. ಈಗ ಅವನ ಅಧಿಕಾರವನ್ನು ವಿರೋಧಿಸುವವರು ರಾಜಧಾನಿಯಲ್ಲಿ ಯಾರೂ ಇರಲಿಲ್ಲ. ಅವನ ದ್ರೋಹವನ್ನು ಅರಿತಿದ್ದ ಸ್ವಾಮಿನಿಷ್ಠ ಸೇವಕರೆಲ್ಲರೂ ಒಂದಲ್ಲ ಒಂದು ಕಾರಣಕ್ಕಾಗಿ ಸೆರೆಮನೆ ಸೇರಿದ್ದರು. ಮಂಗಳೇಶನಿಗೆ ಸ್ವರ್ಗ ತನ್ನದಾಯಿತೆಂಬ ಹಿಗ್ಗಾಗಿದ್ದರೆ, ಅಚ್ಚರಿ ಏನು ?

ಅವನು ತನ್ನ ಕನಸು ನನಸಾದ ಹಿಗ್ಗಿನಲ್ಲಿ ತನ್ನ ಗೆಳೆಯರನ್ನೆಲ್ಲಾ ಅರಮನೆಗೆ ಆಹ್ವಾನಿಸಿ, ಸೊಗಸಾದ ಔತಣಕೂಟ ಕೊಟ್ಟನು. ಅದಕ್ಕೆ ಮಂಗಳೇಶನ ಆಪ್ತಮಿತ್ರರೆಲ್ಲರೂ ಬಂದಿದ್ದರು. ಔತಣಕೂಟದ ಜೊತೆಗೆ ಪಾನಕೂಟವೂ, ನೃತ್ಯಸಂಗೀತಗಳೂ, ಚಂದ್ರಿಕಾವಿಹಾರಗಳೂ ಸೇರಿದ್ದವು. ಬಗೆಬಗೆಯ ಭಕ್ಷಭೋಜ್ಯಗಳು ಅವರ ಸಲುವಾಗಿ ಸಿದ್ಧವಾದವು. ಸೊಗಸಾದ ಮದ್ಯವು ಸುವರ್ಣ ಪಾತ್ರೆಗಳಲ್ಲಿ ಕಾದು ಕುಳಿತಿತ್ತು. ರಾಜಧಾನಿಯ ವೇಶ್ಯಾವಾಟದಿಂದ ಆರಿಸಿ ತಂದ ಸುರಸುಂದರಿಯರಾದ ವೇಶ್ಯೆಯರು ಅವರ ಪರಿಚಾರಕ್ಕೆ ನಿಂತರು. ಒಂದು ಕಡೆ ಸಂಗೀತ ; ಇನ್ನೊಂದು ಕಡೆ ನೃತ್ಯ ; ಮತ್ತೊಂದು ಕಡೆ ಚಂದ್ರಿಕಾವಿಹಾರ ಹೀಗೆ ಎಲ್ಲೆಲ್ಲಿ ನೋಡಿದರೂ ಸಂತೋಷದ ಹೂ ಅರಳಿತ್ತು.

ಸ್ವಚ್ಛಂದವಾಗಿ ಬೀಳುತ್ತಿದ್ದ ತಿಂಗಳ ಬೆಳಕು ಆಹ್ಲಾದಕರವಾಗಿತ್ತು. ಅರಮನೆಯ ಉದ್ಯಾನದಲ್ಲಿ ಯಥೇಚ್ಛವಾಗಿ ಭಕ್ಷಭೋಜ್ಯಗಳನ್ನು ತಿಂದು, ಮದ್ಯವನ್ನು ಕಂಠಪೂರ್ತಿಯಾಗಿ ಸೇವಿಸಿ, ವೇಶ್ಯೆಯರ ತೋಳ್ತೆಕ್ಕೆಯಲ್ಲಿ ಸ್ವರ್ಗ ಸುಖ ಅನುಭವಿಸುತ್ತಾ, ಮಂಗಳೇಶನ ಮಿತ್ರರು ಮೈಮೇಲೆ ಎಚ್ಚರವಿಲ್ಲದೆ ಬಿದ್ದಿದ್ದರು. ಗೆಳೆಯರ ಆತಿಥ್ಯಕ್ಕೆ ಒಂದು ಕಡೆ ಮಂಗಳೇಶ, ಇನ್ನೊಂದು ಕಡೆ ರಾಹಪ್ಪಯ್ಯ ಇವರುಗಳೇ ನಿಂತುಕೊಂಡು, ಎಲ್ಲರನ್ನೂ ವಿಚಾರಿಸಿಕೊಳ್ಳುತ್ತಿದ್ದರು. ಸುಮಾರು ಸಂಜೆಗೆ ಆರಂಭವಾದ ಈ ಉತ್ಸವ ಮಧ್ಯರಾತ್ರಿಯ ವೇಳೆಗೆ ಪೂರ್ಣರಂಗು ಪಡೆದಿತ್ತು. ಉದ್ಯಾನವನದ ಲತಾಮಂಟಪಗಳಲ್ಲಿ ಪ್ರಣಯಿಗಳು ಪ್ರಣಯ ಕೇಳಿಯಲ್ಲೂ, ಶೃಂಗಾರಚೇಷ್ಟೆಗಳಲ್ಲೂ, ಸರಸಗೋಷ್ಠಿಗಳಲ್ಲೂ ಸುಂದರಿಯರ ತೋಳ್ತೆಕ್ಕೆಯಲ್ಲಿ ಮೈಮರೆತು ಮಲಗಿದ್ದರು. ಇದಕ್ಕೆ ಮಂಗಳೇಶನೂ ಹೊರತಾಗಿರಲಿಲ್ಲ. ಇದ್ದಕ್ಕಿದ್ದಂತೆ ಮಂಗಳೇಶನು ವಿಶ್ರಮಿಸಿಕೊಳ್ಳುತ್ತಿದ್ದ ಲತಾ ಮಂಟಪದಲ್ಲಿ ಯಾರೋ ಚೀರಿದಂತೆ ಆಯಿತು. ರಾಹಪ್ಪಯ್ಯ ಮುಂತಾದ ಸಂಗಡಿಗರು ಗಾಬರಿಗೊಂಡು ಅಲ್ಲಿಗೆ ಬಂದರು. ಅಷ್ಟರಲ್ಲಿ ಹತ್ಯಾಕಾಂಡ ನಡೆದು ಹೋಗಿತ್ತು.

ಮಂಗಳೇಶನು ಅಲ್ಲಿ ರಕ್ತದ ಮಡುವಿನಲ್ಲಿ ಚೀರುತ್ತಾ ಬಿದ್ದಿದ್ದನು. ಅವನ ಎದೆಯಲ್ಲಿ ವಿಷಪೂರಿತವಾದ ಕಠಾರಿ ನೆಟ್ಟಿತ್ತು. ಅವನ ಪ್ರೇಯಸಿ ಗಾಬರಿಯಿಂದ ಸಹಾಯಕ್ಕಾಗಿ ಕೂಗಿಕೊಳ್ಳುತ್ತಿದ್ದಳು: "ಹಿಡಿಯಿರಿ ! ಆ ನೀಚನನ್ನು ಹಿಡಿಯಿರಿ ! ಆ ದ್ರೋಹಿಯನ್ನು ಹಿಡಿಯಿರಿ !" ಎಂದು ಅಬ್ಬರಿಸುತ್ತಿದ್ದಳು ಮಂಗಳೇಶನನ್ನು ನೋಡುತ್ತಲೇ ನಡೆದಿರುವ ವಿದ್ಯಮಾನವೇನೆಂದು ರಾಹಪ್ಪಯ್ಯ ಮುಂತಾದವರಿಗೆ ತಿಳಿಯಿತು. ಯಾವನೊ ಕೊಲೆಪಾತಕಿ ಸಮಯ ಸಾಧಿಸುತ್ತಿದ್ದು, ಮಂಗಳೇಶನ ಎದೆಗೆ ಚಾಕುವನ್ನು ನೆಟ್ಟು ಓಡಿಹೋಗಿರಬೇಕೆಂದು ಅವನು ಊಹಿಸಿದನು.

ರಾಹಪ್ಪಯ್ಯನು ಕೊಲೆಪಾತಕನನ್ನು ಬೆನ್ನಟ್ಟಿ ಅವನ ಮೇಲೆ ಬಿರುಗಾಳಿಯಂತೆ ಬಿದ್ದನು. ಕೊಲೆಪಾತಕನು ಲತಾಮಂಟಪದ ಹಿಂದೆ ಅಡಗಿದ್ದು, ಮಂಗಳೇಶನು ಮದ್ಯದ ಅಮಲಿನಲ್ಲಿ ಮೈಮರೆತಿದ್ದ ಸಮಯ ಸಾಧಿಸಿ, ಅವನನ್ನು ತಿವಿದಿದ್ದನು. ತನ್ನ ಕಾರ್ಯ ಮುಗಿಯುತ್ತಲೂ ಮಿಂಚಿನವೇಗದಲ್ಲಿ ಅಲ್ಲಿಂದ ತಪ್ಪಿಸಿಕೊಂಡಿದ್ದನು. ಆದರೆ ಉದ್ಯಾನವನವನ್ನು ಶಸ್ತ್ರಸಜ್ಜಿತ ಸೈನಿಕರು

ಕಾಯುತ್ತಿದ್ದುದರಿಂದ ಅವನು ಅಲ್ಲಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಅವನು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ, ರಾಹಪ್ಪಯ್ಯನ ಸೈನಿಕರು ಓಡಿಬಂದು ಅವನ ಮೇಲೆಬಿದ್ದರು. ಅವನು ಒಬ್ಬನು ಹತ್ತು ಜನರ ಕೈಗೆ ಸಿಕ್ಕಿ ಪಾರಾಗ ಲಾರದೆ, ವೀರಾವೇಶದಲ್ಲಿ ಯುದ್ಧ ಮಾಡಿ, ಅನೇಕರನ್ನು ತುಂಡರಿಸಿ, ತಾನೂ ವೀರನಂತೆ ಮರಣಹೊಂದಿದನು. ಅವನು ನೆಲಕ್ಕೆ ಉರುಳಿದ ಮೇಲೆ, ರಾಹ ಪ್ಪಯ್ಯನಿಗೆ ಗೊತ್ತಾದುದು : ಕೊಲೆಪಾತಕಿ ಬೇರಾರೂ ಅಲ್ಲ. ಮಂಗಳೇಶನ ಮೇಲೆ ಬುದ್ಧ ದ್ವೇಷಹೊಂದಿದ್ದ ಬುದ್ಧರಾಜನೆಂಬುದು. ಬುದ್ಧರಾಜನು ರಾಜ ಧಾನಿಗೆ ಯಾವಾಗ ಬಂದ ? ಅವನು ಅರಮನೆಯ ಔತಣಕೂಟಕ್ಕೆ ಹೇಗೆ ಪ್ರವೇಶ ದೊರಕಿಸಿಕೊಂಡ ? ಹೇಗೆ ಮಂಗಳೇಶನನ್ನು ತಿವಿದು ಪಾರಾಗಲೆತ್ನಿಸಿ ದನೆಂಬುದು ಎಷ್ಟು ಯೋಚಿಸಿದರೂ ಅವನಿಗೆ ಬಗೆಹರಿಯುಲಿಲ್ಲ.

ಅವನು ಬುದ್ಧರಾಜನನ್ನು ತುಂಡರಿಸಿ ಚೆಲ್ಲಿದಮೇಲೆ, ನೇರ ಮಂಗಳೇಶನ ಬಳಿಗೆ ಓಡಿಬಂದನು. ಆದರೆ ಈ ವೇಳೆಗೆ ಮಂಗಳೇಶನು ಮರಣೋತ್ಕ್ರಮಣ ಸ್ಥಿತಿಯಲ್ಲಿ ಇದ್ದನು. ದೇಹವನ್ನು ಭೇದಿಸಿದ್ದ ಕಠಾರಿ ತನ್ನ ಕೆಲಸ ಮಾಡಿತ್ತು– ಅದರ ಕೊನೆಗೆ ಲೇಪಿಸಿದ್ದ ಭಯಂಕರವಾದ ವಿಷ ರಕ್ತದೊಡನೆ ಸೇರಿ ಮೈ ಯೆಲ್ಲಾ ವ್ಯಾಪಿಸಿ, ದೇಹವನ್ನು ಗೌರವರ್ಣಕ್ಕೆ ತಿರುಗಿಸಿತ್ತು. ಮಂಗಳೇಶನು ಗಾಯದಿಂದ ಉಂಟಾಗಿದ್ದ ರಕ್ತಸ್ರಾವದಿಂದ ತುಂಬಾ ನಿಶ್ಯಕ್ತನಾಗಿದ್ದನು. ಅವನು ಕ್ಷಣಕ್ಷಣಕ್ಕೂ ಶಕ್ತಿಗುಂದುತ್ತಾ ನಡೆದಿದ್ದನು. ಮುಖದಲ್ಲಿ ಕಳೆ ಇರ ಲಿಲ್ಲ. ನಾಲಗೆಯಲ್ಲಿ ತೇವವಿರಲಿಲ್ಲ. ಬಹಳ ಕಷ್ಟದಿಂದ ಉಸಿರಾಡುತ್ತಿದ್ದನು. ರಾಹಪ್ಪಯ್ಯನು ಬುದ್ಧರಾಜನ ಕೊಲೆಯ ವಿಷಯ ತಿಳಿಸಿದಾಗ ಮಂಗಳೇಶನು ಸಮಾಧಾನದ ನಿಟ್ಟುಸಿರು ಬಿಟ್ಟ, ತನ್ನ ಹತ್ಯಾಕಾರಿ ಕೊನೆಗೂ ಶಿಕ್ಷೆಯಿಂದ ಪಾರಾಗಲಿಲ್ಲವೆಂದು. ಆದರೆ ಬುದ್ಧರಾಜನು ತಾನು ಪುಲಿಕೇಶಿಯಿಂದ ಪಡೆ ದಿದ್ದ ಪುನರ್ಜನ್ಮವನ್ನು ಅವನಂತಹ ಸ್ವಾಮಿನಿಷ್ಠ ಸೇವಕನಿಗೆ ತಕ್ಕ ರೀತಿಯಲ್ಲಿ ಸಾರ್ಥಕಪಡಿಸಿಕೊಂಡಿದ್ದನು. ದ್ರೋಹಿಯಾದ ಮಂಗಳೇಶನನ್ನು ತಿವಿದು, ಸಾಮ್ರಾಜ್ಯಕ್ಕೆ ಬಂದಿದ್ದ ಗಂಡಾಂತರವನ್ನು ಪಾರುಮಾಡಿದ್ದನು. ಈ ಪವಿತ್ರ ಕಾರ್ಯದಲ್ಲಿ ತನ್ನನ್ನೇ ಬಲಿ ಕೊಟ್ಟಿದ್ದನು. ಧನ್ಯ ! ಬುದ್ಧರಾಜ !

ಮಂಗಳೇಶನು ತಾನು ಇನ್ನು ಬದುಕುವುದಿಲ್ಲವೆಂದು ತಿಳಿದಾಗ, ರಾಹ ಪ್ಪಯ್ಯನನ್ನು ಹತ್ತಿರ ಕರೆದು ಅವನ ಕಿವಿಯಲ್ಲಿ ಮೆಲ್ಲಗೆ ಉಸಿರಿದನು: "ದ್ರೋಹಿ

ಗಳು....ಮೋಸ ಮಾಡಿದರು. ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊ.... ವಿಷ್ಣುವರ್ಧನ....ಒಳ್ಳೆಯ ಹುಡುಗ...ಕೈಬಿಡಬೇಡ!" ಎಂದು ಹೇಳಿ, ಅವನ ಕೈಯಿಂದ ವಚನ ಸ್ವೀಕರಿಸಿ, ಸಮಾಧಾನದ ನಿಟ್ಟುಸಿರು ಬಿಟ್ಟು ಹಾಗೆಯೇ ಕಣ್ಮುಚ್ಚಿದ; ಕಣ್ಮುಚ್ಚಿದವನು ಮತ್ತೆ ಕಣ್ತೆರೆಯಲಿಲ್ಲ. ಅವನ ದ್ರೋಹ ಅವನನ್ನೇ ನುಂಗಿತ್ತು. ಅವನು ಮಾಡಿದ ವಿಶ್ವಾಸದ್ರೋಹ ಅವನನ್ನೇ ಬಲಿ ತೆಗೆದುಕೊಂಡಿತ್ತು.

ಮಂಗಳೇಶನ ಸಂಗಡಿಗರು ತಮ್ಮ ಒಡೆಯನಿಗೆ ಬಂದ ದಾರುಣಮರಣ ದಿಂದ ದಿಗ್ಭ್ರಾಂತರಾಗಿ ಕುಳಿತಿರುವಾಗಲೇ ಅರಮನೆಯಲ್ಲಿ ಗದ್ದಲವಾಯಿತು. ಉದ್ಯಾನವನ್ನು ಕಾಯುತ್ತಿದ್ದ ಸೈನಿಕರು ಗಾಬರಿಯಿಂದ ಅರಮನೆಯ ಕಡೆ ಓಡುತ್ತಿದ್ದರು. ಇಷ್ಟೆಲ್ಲ ಗದ್ದಲ, ಗಡಿಬಿಡಿಗಳಿಗೆ ಕಾರಣವೇನೆಂದು ತಿಳಿಯಲು ರಾಹಪ್ಪಯ್ಯ ಅತ್ತ ಹೊರಟನು. ಅಷ್ಟರಲ್ಲಿ ಅಲ್ಲಿಗೆ ಓಡುತ್ತಾ ಬಂದ ಸೈನಿಕ ಮುಖಂಡನೊಬ್ಬನು,

"ಪ್ರಭು, ಅರಮನೆಯನ್ನು ಶತ್ರುಗಳು ಮುತ್ತಿಗೆ ಹಾಕಿ, ಪಹರೆಯ ಸೈನಿಕ ರನ್ನೆಲ್ಲಾ ಕೊಂದು, ಸೆರೆಯಲ್ಲಿದ್ದ ಸಮಂತಭದ್ರರನ್ನೂ ಅಂತಃಪುರದಲ್ಲಿ ಇದ್ದ ವಿಷ್ಣುವರ್ಧನರನ್ನೂ ಬಿಡಿಸಿಕೊಂಡು ಹೋಗಿದ್ದಾರೆ. ಅವರು ನಿಮ್ಮನ್ನು ಕೈಸೆರೆಹಿಡಿಯಲು ಇತ್ತಕಡೆಯೇ ದಾಳಿ ಇಡುತ್ತಿದ್ದಾರೆ. ಶತ್ರುಸೈನ್ಯ ಇಲ್ಲಿಯ ವರೆಗೆ ಹೇಗೆ ಪ್ರವೇಶ ದೊರಕಿಸಿಕೊಂಡಿತೋ ಯಾರಿಗೂ ತಿಳಿಯದು. ಎಲ್ಲವೂ ಸಿದ್ಧಪಡಿಸಿಕೊಂಡ ಸಂಚೆಂದು ತೋರುತ್ತದೆ. ಒಟ್ಟಿನಲ್ಲಿ ಅಧಿಕ ಸಂಖ್ಯೆಯ ಲ್ಲಿರುವ ಶತ್ರುಸೈನಿಕರನ್ನು ಎದುರಿಸಿ ನಾವು ಬದುಕುವುದು ಕಷ್ಟ. ಇಷ್ಟರಮೇಲೆ ಧಣಿಯ ಚಿತ್ತ" ಎಂದನು.

ಅವನು ನುರಿತ ದಳಪತಿಯಾಗಿದ್ದುದರಿಂದ ಅವನ ಮಾತನ್ನು ರಾಹ ಪ್ಪಯ್ಯ ಉಪೇಕ್ಷೆ ಮಾಡುವಂತೆ ಇರಲಿಲ್ಲ.

"ಶತ್ರುಗಳ ಸಂಖ್ಯೆ ಎಷ್ಟಿರಬಹುದು ?"

"ಸುಮಾರು ಸಾವಿರ ಮಂದಿ ಇರಬಹುದು ?"

"ಈ ಸಮಯದಲ್ಲಿ ಅವರು ಇಲ್ಲಿಗೆ ಹೇಗೆ ಬಂದರು ?"

"ಅದೇ ರಹಸ್ಯವಾಗಿದೆ ಪ್ರಭು ! ಬಹುಶಃ ನಮ್ಮವರೇ ಕೆಲವರು ಅವರ ಪಿತೂರಿಗೆ ಸೇರಿರಬೇಕು. ಇಲ್ಲದಿದ್ದರೆ ಅರಮನೆ ಇಷ್ಟು ಸುಲಭವಾಗಿ ಅವರ ವಶವಾಗುತ್ತಿರಲಿಲ್ಲ !"

"ಅವರ ಮುಖಂಡರು ಯಾರು ?"

"ಎರಪ್ಪ ದಂಡನಾಯಕ."

ಅಂದ ಮೇಲೆ ಬುದ್ಧರಾಜ, ಎರಪ್ಪದಂಡನಾಯಕರು ಸೇರಿ ಮಾಡಿರುವ ಪಿತೂರಿಯೇ ಇದು. ಅವರು ತಮ್ಮ ಕೈಯಿಂದ ಪಾರಾಗಿ ತಾವು ನಿರ್ಲಕ್ಷ್ಯ ದಿಂದ ಇದ್ದ ಸಮಯ ಸಾಧಿಸಿ, ತಮ್ಮಮೇಲೆ ಸೇಡು ತೀರಿಸಿಕೊಂಡಿದ್ದಾರೆ ಎಂದು ಅವನಿಗೆ ತಿಳಿಯಲು ಹೆಚ್ಚು ಕಾಲ ಬೇಕಾಗಲಿಲ್ಲ. ಇನ್ನು ಅಲ್ಲಿ ಉಳಿದರೆ ತಾನೂ ಅವರ ಕೈಗೆ ಸಿಕ್ಕುವುದು ಖಂಡಿತವೆಂದು ತಿಳಿದನು. ಈಗ ಪುಲಿಕೇಶಿಯ ಕಡೆಯ ಸೈನಿಕರದು ಮೇಲ್ಗೈಯಾಗಿತ್ತು. ಅಲ್ಲದೆ ವಿಷ್ಣುವರ್ಧನನು ಶತ್ರುಗಳ ಕೈಗೆ ಸಿಕ್ಕಿ ಬಿದ್ದಿದ್ದನು. ಇಂತಹ ಸಮಯದಲ್ಲಿ ತಾನು ಶತ್ರುಗಳೊಡನೆ ಸೆಣಸಿ ಪ್ರಯೋಜನವಿಲ್ಲ. ಈಗ ತಲೆತಪ್ಪಿಸಿಕೊಂಡು, ಸಮಯ ಸಾಧಿಸಿ ಶತ್ರುಗಳ ಮೇಲೆ ಬಿದ್ದು ತನ್ನ ಸೇಡು ತೀರಿಸಿಕೊಳ್ಳಬೇಕು. ತಾನು ಮಂಗಳೇಶನ ಉಪ್ಪು ತಿಂದುದಕ್ಕೆ ಅವನಿಗೆ ಇತ್ತ ವಚನವನ್ನು ಪಾಲಿಸಲು ದೇಹವನ್ನು ಮುಡುಪಿಡಬೇಕು ಎಂದು ರಾಹಪ್ಪಯ್ಯ ಸಂಕಲ್ಪಿಸಿ, ಅನುಚರರೊಡನೆ ಅಲ್ಲಿಂದ ಓಡಿಹೋದನು.

ಅವನು ಅಲ್ಲಿಂದ ಓಡಿಹೋಗಿ ತಲೆತಪ್ಪಿಸಿಕೊಳ್ಳುವುದಕ್ಕೂ ಶತ್ರುಸೈನಿಕರು ಅಲ್ಲಿಗೆ ಬರುವುದಕ್ಕೂ ಸರಿಹೋಯಿತು. ಅವರಿಗೆ ರಾಹಪ್ಪಯ್ಯನು ದೊರೆಯದಿದ್ದರೂ ಮಂಗಳೇಶನ ದೇಹ ದೊರಕಿತು. ಅದನ್ನು ತುಂಡರಿಸಿ, ನಾಯಿಗಳ ಪಾಲು ಮಾಡಿ, ಮಂಗಳೇಶನು ಮಹಾರಾಣಿ ದುರ್ಲಭದೇವಿಯವರ ದೇಹಕ್ಕೆ ಮಾಡಿದ ಅಪಮಾನಕ್ಕೆ ಸೇಡು ತೀರಿಸಿಕೊಳ್ಳಬೇಕೆಂದು ಸಮಂತಭದ್ರನಿಗೆ ಅನಿಸಿದರೂ ಕಡೆಗಳಿಗೆಯಲ್ಲಿ ತನ್ನ ಸೇಡಿನ ನಿರ್ಧಾರವನ್ನು ಬಿಟ್ಟುಕೊಟ್ಟು ಅವನಿಗೆ ರಾಜೋಚಿತ ರೀತಿಯಲ್ಲೇ ಅಂತ್ಯಸಂಸ್ಕಾರವೇರ್ಪಡಿಸಿದನು. ಆದರೆ ಹಾಗೆ ಮಾಡುವ ಮೊದಲು, ದ್ರೋಹಿಗಳಿಗೆ ಬರುವ ದುರ್ಗತಿಯಿಂದ ಇತರ ದ್ರೋಹಿಗಳು ಪಾಠಕಲಿಯಲೆಂದು ಅವನನ್ನು ನಗರದಲ್ಲೆಲ್ಲಾ ಮೆರವಣಿಗೆ ಮಾಡುವುದನ್ನು ಮರೆಯಲಿಲ್ಲ.

ಮಂಗಳೇಶನ ಅರಮನೆ ತಮ್ಮ ವಶವಾದ ಮೇಲೆ, ಅವನ ಪತ್ನೀ ಪುತ್ರರನ್ನೂ, ವಿಷ್ಣುವರ್ಧನನನ್ನೂ ಸೆರೆಯಲ್ಲಿಟ್ಟರು. ಮಂಗಳೇಶನ ಪಕ್ಷಕಟ್ಟಿದ ಎಲ್ಲ ದ್ರೋಹಿಗಳನ್ನೂ ಸೆರೆಯಲ್ಲಿಡಲಾಯಿತು. ದ್ರೋಹಿಗಳನ್ನು ಬಹಿರಂಗ ವಿಚಾ

ರಣೆಗೆ ಗುರಿಪಡಿಸಿ, ಶಿಕ್ಷಿಸಬೇಕೆಂಬುದೇ ಸಮಂತಭದ್ರನ ಆಶಯವಾಗಿತ್ತು. ಬಹಿರಂಗ ವಿಚಾರಣೆ ನಡೆದರೆ ತನಗೆ ಮರಣದಂಡನೆ ಖಂಡಿತವೆಂದು ತಿಳಿದ ವಿಷ್ಣುವರ್ಧನನು ಅಂಜಿದ. ಪುಲಿಕೇಶಿಯ ಕೈಯಲ್ಲಿ ಮರಣದಂಡನೆ ಅಪ್ಪುವುದಕ್ಕಿಂತ ಸಾಯುವುದು ಸುಖಕರವೆಂದು ಅವನು ಆತ್ಮಹತ್ಯೆಯ ಪ್ರಯತ್ನದಲ್ಲಿರುವಾಗ, ಅವನನ್ನು ಸಮಂತಭದ್ರನು ಉಳಿಸಿದ್ದನು. ತನ್ನ ತಪ್ಪುಗಳೆಲ್ಲವೂ ಒಂದೊಂದಾಗಿ ತಿಳಿದ ಮೇಲೆ ಅವನಿಗೆ ಪಶ್ಚಾತ್ತಾಪ ಉಂಟಾಗಿತ್ತು. ಈಗ ಅವನಿಗೆ ದ್ರೋಹಿ ಮಂಗಳೇಶನ ಮಾತು ಕೇಳಿಕೊಂಡು ತನ್ನ ಅಣ್ಣ ಹಾಗೂ ಅಬ್ಬೆಯವರಿಗೆ ತಾನು ಬಗೆದ ದ್ರೋಹದ ಕಲ್ಪನೆಯುಂಟಾಗಿ, ಜೀವನ ಬೇಸರವಾಗಿ ಸಾವು ಸುಖಕರವಾಗಿ ಕಂಡಿತ್ತು. ಸಮಂತಭದ್ರನು ಪಶ್ಚಾತಾಪದಿಂದ ದಗ್ಧನಾದ ವಿಷ್ಣುವನ್ನು ಸಮಾಧಾನಪಡಿಸಿ, ಪುಲಿಕೇಶಿಯ ಬಳಿ ಕ್ಷಮೆಯಾಚಿಸುವ ಒಂದು ಪತ್ರವನ್ನು ಬರೆಸಿ ಕಳುಹಿಸಿ ಕೊಟ್ಟಿದ್ದನು.

ಆ ಪತ್ರದಲ್ಲಿ ವಿಷ್ಣುವರ್ಧನನು ಹೀಗೆ ಬರೆದಿದ್ದನು :

"ಪ್ರಿಯ ಅಣ್ಣಾಜಿ,

ನಿಮ್ಮನ್ನು ಅಣ್ಣಾಜಿ ಎಂದು ಕರೆಯಲು ನಾನು ಅರ್ಹತೆಯನ್ನು ಪಡೆದಿಲ್ಲವೆಂಬುದು ನನಗೂ ತಿಳಿದಿದೆ. ಆದರೆ ತಿಳಿಯದೆ, ದ್ರೋಹಿಗಳ ಮಾತು ಕೇಳಿಕೊಂಡು ನಿಮಗೆ ಮಾತ್ರವಲ್ಲ, ಅಬ್ಬೆಗೆ ಮಾತ್ರವಲ್ಲ—ಇಡೀ ದೇಶಕ್ಕೆ ದ್ರೋಹ ಬಗೆದೆ. ನನ್ನ ಪಾಪಕ್ಕೆ ಯಾವ ಶಿಕ್ಷೆಯನ್ನು ವಿಧಿಸಿದರೂ ಸಾಲದು. ನನ್ನಿಂದ ನೀವು ಸಿಂಹಾಸನವನ್ನು ತೊರೆಯಬೇಕಾಯಿತು. ದೇಶತ್ಯಾಗ ಮಾಡಬೇಕಾಯಿತು. ನನ್ನನ್ನು ಪ್ರಾಣದಂತೆ ನೋಡಿಕೊಂಡಿದ್ದ ಅಬ್ಬೆಯವರ ಮರಣಕ್ಕೂ ನಾನೇ ಕಾರಣನಾದೆ. ಹೀಗೆ ಎಲ್ಲರಿಗೂ ದ್ರೋಹ ಬಗೆದು ನಾನೂ ಆತ್ಮವಂಚನೆ ಮಾಡಿಕೊಂಡೆ. ಈಗ ನನಗೆ ನನ್ನ ದ್ರೋಹಕ್ಕಾಗಿ ಪಶ್ಚಾತ್ತಾಪವಾಗಿದೆ. ನೀವು ನನ್ನನ್ನು ಕ್ಷಮಿಸಿ, ಕಾಪಾಡಬೇಕು. ಈ ಪತ್ರವನ್ನು ಕಂಡ ಕೂಡಲೇ, ನೀವು ಎಲ್ಲಿದ್ದರೂ ತಡಮಾಡದೆ ರಾಜಧಾನಿಗೆ ಹಿಂತಿರುಗಿ, ನಿಮ್ಮದಾಗಿರುವ ಸಿಂಹಾಸನವನ್ನು ಸ್ವೀಕರಿಸಬೇಕು.

ಇಂತು ನಿಮ್ಮಲ್ಲಿ ಕ್ಷಮೆ ಯಾಚಿಸುವ,
ವಿಷ್ಣುವರ್ಧನ."

ಈ ಪತ್ರವನ್ನು ಓದಿಕೊಂಡು ತನಗೆ ತಿಳಿಯದಂತೆ, ಪುಲಿಕೇಶಿಯ ಕಣ್ಣು ಹನಿಗೂಡಿತು. ಅವನು ಈ ಪತ್ರವನ್ನೇ ನೋಡುತ್ತ ಚಣಕಾಲ ಹಾಗೇ ಕುಳಿತನು.

"ಈಗ ನನಗೆ ನನ್ನ ದ್ರೋಹಕ್ಕಾಗಿ ಪಶ್ಚಾತ್ತಾಪವಾಗಿದೆ....ನೀವು ತಡ ಮಾಡದೆ ರಾಜಧಾನಿಗೆ ಹಿಂತಿರುಗಿ ನಿಮ್ಮದಾಗಿರುವ ಸಿಂಹಾಸನವನ್ನು ಸ್ವೀಕರಿಸಬೇಕು !" ಎಂದು ತನಗೆ ತಿಳಿಯದಂತೆ ಹೇಳಿಕೊಂಡನು. "ಇಂತು ನಿಮ್ಮಲ್ಲಿ ಕ್ಷಮೆಯಾಚಿಸುವ, ವಿಷ್ಣುವರ್ಧನ" ಎಂದು ಉದ್ಗಾರ ತೆಗೆದನು. ಕಡೆಯ ಮಾತನ್ನು ಹೇಳುತ್ತಿದ್ದಂತೆ ಧ್ವನಿ ಗದ್ಗದಿತವಾಗಿ, ಕಣ್ಣೀರು ಮುತ್ತಿನಂತೆ ಬಿದ್ದು, ಅಕ್ಷರಗಳನ್ನು ಚಿತ್ತು ಮಾಡಿದವು.

ಈಗ ಪುಲಿಕೇಶಿಯು ರಾಜಧಾನಿಗೆ ಹಿಂತಿರುಗಲು ಯಾವ ಪ್ರತಿಬಂಧಕ ವಿರಲಿಲ್ಲ; ಸಿಂಹಾಸನವನ್ನೇರಲು ಯಾವ ತಡೆಯಿರಲಿಲ್ಲ. ರಾಜಧಾನಿಯಲ್ಲಿ ವಿಷ್ಣುವರ್ಧನನು ಮೊದಲುಗೊಂಡು ಎಲ್ಲರೂ ಪುಲಿಕೇಶಿಯನ್ನು ಎದುರು ನೋಡುತ್ತಿದ್ದರು. ಅವನಿಗೆ ಸಂಭ್ರಮದ ಸ್ವಾಗತನೀಡಲು ಸಿದ್ಧತೆ ಮಾಡಿ ಕೊಳ್ಳುತ್ತಿದ್ದರು.

ಪುಲಿಕೇಶಿಯು ತಡಮಾಡದೆ ರಾಜಧಾನಿಗೆ ಹೊರಟು ಬಂದನು. ರಾಜಧಾನಿಯ ಹೊರವಲಯದಲ್ಲಿ ಪ್ರಧಾನ ಅಮಾತ್ಯ ಸಮಂತಭದ್ರ, ವಿಷ್ಣುವರ್ಧನ, ಎರಪ್ಪದಂಡನಾಯಕ ಮತ್ತಿತರ ಸ್ವಾಮಿನಿಷ್ಠಸೇವಕರು ವೈಭವದ ಸ್ವಾಗತ ನೀಡಲು ನಿಂತಿದ್ದರು.

ಅಲ್ಲಿಗೆ ಬರುತ್ತಲೇ ಪುಲಿಕೇಶಿಯು ಕುದುರೆಯಿಂದಿಳಿದು ಎಲ್ಲರನ್ನೂ ಚಣಕಾಲ ದಿಟ್ಟಿಸಿ ನೋಡಿದನು. ಅವನ ದೃಷ್ಟಿಪಥಕ್ಕೆ ವಿಷ್ಣುವರ್ಧನನು ಬಿದ್ದುದೆ ತಡ, ವಿಷ್ಣುವರ್ಧನ ಓಡಿಬಂದು ಪುಲಿಕೇಶಿಯ ಕಾಲುಗಳ ಮೇಲೆ ಬಿದ್ದು "ಅಣ್ಣಾಜಿ ನನ್ನ ಸರ್ವಾಪರಾಧವನ್ನು ಮನ್ನಿಸಬೇಕು !" ಎಂದು ಪ್ರಾರ್ಥಿಸಿ, ಕಣ್ಣೀರಿನ ಬಾಷ್ಪಾಂಜಲಿಯನ್ನು ಅರ್ಪಿಸಿದನು. ಅವನನ್ನು ಪ್ರೀತಿಯಿಂದ ಮೇಲಕ್ಕೆತ್ತಿ, ಅವನ ತಲೆಯನ್ನು ನೇವರಿಸುತ್ತಾ, ದಿಗಂತದ ಕಡೆ ಕೈ ತೋರಿ,

"ಅಬ್ಬೆಯವರಲ್ಲಿ ಕ್ಷಮೆ ಬೇಡು ಮಗು. ಕ್ಷಮಿಸಬೇಕಾಗಿರುವವರು ಅವರು !" ಎಂದು ಮೆಲ್ಲನೆ ಉಸಿರಿದ ಪುಲಿಕೇಶಿ.

ಆ ಕ್ಷಣಕ್ಕೆ ಸ್ವರ್ಗವಾಸಿಯಾಗಿದ್ದ ದುರ್ಲಭದೇವಿಯ ಕ್ಷಮೆ ದೊರಕಿ

ತೆಂಬಂತೆ ಎಲ್ಲಿಂದಲೋ ಗಾಳಿಯಲ್ಲಿ ತೇಲಿ ಬಂದ, ಮಲ್ಲಿಗೆಯ ಹೂವೊಂದು ವಿಷ್ಣುವರ್ಧನನ ತಲೆಯ ಮೇಲೆ ಬಿತ್ತು. ಮಹಾರಾಣಿ ದುರ್ಲಭದೇವಿಯ ಆತ್ಮ ಸುಪ್ರೀತವಾಯಿತೆಂದು ಆ ಗಳಿಗೆಯಲ್ಲಿ ಎಲ್ಲರೂ ತಿಳಿದರು. ಕಡೆಗೂ ಮಹಾರಾಣಿ ದುರ್ಲಭದೇವಿಯು ಮಾಡಿದ್ದ ಬಲಿದಾನ ವ್ಯರ್ಥವಾಗಲಿಲ್ಲ. ಪುಲಿಕೇಶಿ ವಿಷ್ಣುವರ್ಧನರ ನಡುವೆ ಉಂಟಾಗಿದ್ದ ಹಾಲಾಹಲವನ್ನು ತಾವು ಕುಡಿದು, ಅವರಿಬ್ಬರ ಪಾಲಿಗೆ ಅಮೃತವನ್ನೇ ಅರ್ಪಿಸಿದ್ದರು.

## ೧೩

ರಾಜಕುಮಾರ ಪುಲಿಕೇಶಿಯು ಮಂಗಳೇಶನ ಮರಣದಿಂದ ತೆರವಾಗಿದ್ದ ಚಾಲುಕ್ಯ ಸಿಂಹಾಸನವನ್ನು ಹತ್ತುವನೆಂಬ ಸುದ್ದಿ ಮಿಂಚಿನ ವೇಗದಲ್ಲಿ ಹರಡಿತು.. ಬಹುಕಾಲದಿಂದ ಇಂತಹ ಘಟನೆಯನ್ನು ನಿರೀಕ್ಷಿಸುತ್ತಾ ಕುಳಿತಿದ್ದ ವಾತಾಪಿ ನಗರದ ಜನ ಸಂತೋಷದಿಂದ ಕುಣಿದರು. ಸಾಮ್ರಾಜ್ಯದ ಜನತೆ ಈ ಸುದ್ದಿಯನ್ನು ಕೇಳಿ ತಮ್ಮ ಬಹುಕಾಲದ ಕನಸು ನನಸಾಯಿತೆಂದು ಹಿಗ್ಗಿತು. ಎಲ್ಲೆಲ್ಲಿ ನೋಡಿದರೂ ಸಂತೋಷ—ಎಲ್ಲೆಲ್ಲಿ ನೋಡಿದರೂ ಸಂಭ್ರಮ. ಜನತೆಯ ಉತ್ಸಾಹ ಸಡಗರಗಳು ಹುಚ್ಚುಹೊಳೆಯಾಗಿ ಹರಿದಿದ್ದವು.

ಪುಲಿಕೇಶಿಯ ಪಟ್ಟಾಭಿಷೇಕದ ಆಮಂತ್ರಣವನ್ನು ಹೊತ್ತು ರಾಜದೂತರು, ಒಂಟೆಗಳ ಮೇಲೆ, ಕುದುರೆಗಳ ಮೇಲೆ, ಗಾಡಿಗಳಲ್ಲಿ, ಮೇನೆಗಳಲ್ಲಿ ಹೊರಟು ಸಾಮ್ರಾಜ್ಯದ ಮೂಲೆಮೂಲೆಯಲ್ಲಿದ್ದ ಸಾಮಂತರಿಗೂ, ಮಾಂಡಲೇಶ್ವರರಿಗೂ ತಲುಪಿಸಿ, ಸಂತಸದ ಸುದ್ದಿಯನ್ನು ಹೊಸಬಾಳಿನ ದೂತರಂತೆ ಸಾರಿದರು. ಮಂಗಳೇಶನ ದಬ್ಬಾಳಿಕೆಯಿಂದ ಬೇಸತ್ತಿದ್ದ ಜನತೆ. ಧರ್ಮಸಿಂಹಾಸನ ಮತ್ತೆ ಚಾಲುಕ್ಯ ಕುಲತಿಲಕ, ಸತ್ಯಾಶ್ರಯ ಪುಲಿಕೇಶಿ ಸಾರ್ವಭೌಮರ ಮೊಮ್ಮಗನಿಗೆ ದೊರೆಯುವುದನ್ನು ಸಂತೋಷದಿಂದ ಸ್ವಾಗತಿಸಿತು.

ಜನ ಪಟ್ಟಾಭಿಷೇಕವನ್ನು ನೋಡುವ ಸಲುವಾಗಿ ತಂಡೋಪತಂಡವಾಗಿ ವಾತಾಪಿಗೆ ಹೊರಟರು. ತಮ್ಮ ಅಭಿಮಾನದ ಪುತ್ಥಳಿಯಾಗಿದ್ದ, ಪ್ರಜಾವತ್ಸಲ ದೊರೆಯ ಪಟ್ಟಬಂಧ ಮಹೋತ್ಸವವನ್ನು ಕಣ್ಣಾರೆ ಕಂಡು ಕೃತಾರ್ಥರಾಗಲು, ಉತ್ಸವದ ಮನೋರಂಜನೆಗಳಲ್ಲೂ, ಭೂರಿಭೋಜನ, ದಾನಧರ್ಮಗಳಲ್ಲೂ ಪಾಲುಗೊಳ್ಳಲು ತಮಗೆ ದೊರೆತ ವಾಹನಗಳನ್ನು ಉಪಯೋಗಿಸಿಕೊಂಡು ವಾತಾಪಿಯ ದಾರಿ ಹಿಡಿದರು. ಈ ಸಮಯದಲ್ಲಿ ನೂತನ ಸಾಮ್ರಾಟನಿಂದ ಮನ್ನಣೆ, ರಾಜಾಶ್ರಯಗಳನ್ನು ಅರಸಿ ಕಲಾವಿದರು ಹೊರಟರು. ಉತ್ಸವದ ಸಮಯದಲ್ಲಿ ನಡೆಯುವ ಯಜ್ಞಯಾಗಾದಿಗಳಲ್ಲಿ ಪಾಲುಗೊಳ್ಳಲು ಕರ್ಮ ನಿಷ್ಠರಾದ ಬ್ರಾಹ್ಮಣರೂ, ಭೋಜನಪ್ರಿಯರಾದ ಭೂಸುರರೂ, ಹಿರಣ್ಯಪ್ರಿಯ ರಾದ ಆಸೆಬುರುಕ ವಿಪ್ರರೂ ತಂಡೋಪತಂಡವಾಗಿ ರಾಜಧಾನಿಯಲ್ಲಿ ನೆರೆದರು. ಇವರಿಗೆಲ್ಲ ಪ್ರಧಾನ ಅಮಾತ್ಯನಾದ ಸಮಂತಭದ್ರನು ತಕ್ಕ ವ್ಯವಸ್ಥೆ ಮಾಡಿದ್ದನು.

ಈ ಉತ್ಸವಕ್ಕೆ ಅಂಗ, ವಂಗ, ಕಳಿಂಗ, ಪಾಂಚಾಲ, ಗುರ್ಜರ ಮುಂತಾದ ದೇಶಗಳ ಅರಸರೂ, ದಕ್ಷಿಣಾಪಥದ ಪಾಂಡ್ಯ, ಚೋಳ, ಕದಂಬ, ಗಂಗರೂ ಆಗಮಿಸಿದ್ದರೂ. ಕೆಲವರು ಸ್ನೇಹಭಾವದಿಂದ ಆಗಮಿಸಿದ್ದರೆ, ಮತ್ತೆ ಕೆಲವರು ಸಾಮ್ರಾಟನ ಬಲಾಬಲಗಳನ್ನು ತಿಳಿಯುವ ಸಲುವಾಗಿ ರಾಜಧಾನಿಗೆ ಬಂದಿದ್ದರು. ಅವರೆಲ್ಲರಿಗೂ ರಾಜೋಚಿತವಾದ ಬಿಡಾರಗಳನ್ನು ಏರ್ಪಡಿಸ ಲಾಗಿತ್ತು. ಯಾರು ಏನು ಬಯಸಿದರೂ, ಆ ವಸ್ತುಗಳು ಅಲ್ಲೇ ದೊರಕುವಷ್ಟು ವ್ಯವಸ್ಥೆ ಮಾಡಲಾಗಿತ್ತು. ದೊರೆಗಳ ಮಾತು ಹಾಗಿರಲಿ, ಅವರ ಹಿಂದೆ ಬಂದ ದಾಸದಾಸಿ ಪರಿಜನರಿಗೂ ಮೈಗಾವಲ ಪಡೆಗೂ, ಆನೆ ಕುದುರೆಗಳಿಗೂ ತಕ್ಕ ವ್ಯವಸ್ಥೆ ಮಾಡಲಾಗಿತ್ತು. ವಾತಾಪಿ ನಗರವು ದೇವೇಂದ್ರನ ಅಮರಾವತಿ ಯಂತೆ ಕಂಗೊಳಿಸುತ್ತಿತ್ತು.

ಸಾಮ್ರಾಜ್ಯದ ನಾನಾ ಭಾಗಗಳಿಂದ ಬಂದ ಚತುರ ಶಿಲ್ಪಿಗಳೂ ರೂವಾರಿ ಗಳೂ, ಸ್ಥಪತಿಗಳೂ ಸಭಾಮಂದಿರವನ್ನು ಭವ್ಯವಾಗಿ ನಿರ್ಮಿಸಿದ್ದರು. ದೇಶದ ಕಲಾಭಂಡಾರವನ್ನೆಲ್ಲಾ, ಸಂಪತ್ತನ್ನೆಲ್ಲಾ ಈ ಮಂದಿರದ ನಿರ್ಮಾಣಕ್ಕೆ ವಿನಿಯೋಗವಾಗಿತ್ತೆಂದರೂ ಸರಿ. ಶಿಲ್ಪಿಗಳು ಹಗಲೂ ರಾತ್ರಿ ದುಡಿದು, ರನ್ನ ಮಂದಿರವಂತೆ ಕಂಗೊಳಿಸುತ್ತಿದ್ದ ಸಭಾಮಂದಿರವನ್ನು ನಿರ್ಮಿಸಿದ್ದರು. ನಾಲ್ಕು

ದಿಕ್ಕಿನಲ್ಲೂ ನಾಲ್ಕು ಪ್ರಮುಖ ದ್ವಾರಗಳು. ಅವುಗಳ ಮೇಲೆಲ್ಲಾ ಅಗರು, ಚಂದನ, ಮೇಣ, ಬೆಣ್ಣೆಗಲ್ಲು, ಮರಗಳಿಂದ ನಿರ್ಮಿಸಿದ ಕಲಾಕೃತಿಗಳು. ಪ್ರತಿಯೊಂದು ಕಂಬಗಳಿಗೂ ಚಿನ್ನದ ಪಟ್ಟಿಗಳನ್ನು ಬಿಗಿದು, ಅವುಗಳ ಮೇಲೆ ಕಲಾಕೃತಿಗಳನ್ನು ಎರಕ ಹೊಯ್ದಿದ್ದರು. ಎಲ್ಲೆಲ್ಲಿ ನೋಡಿದರೂ ಬಣ್ಣಬಣ್ಣದ ತೆರೆಗಳು, ರೇಶ್ಮೆಯ ನಿಡುಹಾಸು, ನೆಲಕ್ಕೆಲ್ಲಾ ರತ್ನಕಂಬಳಿಗಳು. ಎಲ್ಲೆಡೆಯಲ್ಲೂ ಕೈಕಟ್ಟಿ ಅತಿಥಿಗಳನ್ನು ಸೌಜನ್ಯತೆಯಿಂದ ಸ್ವಾಗತಿಸಲು ನಿಂತ ರಾಜನಿಷ್ಠ ಸೇವಕರು. ಎಲ್ಲೆಲ್ಲಿ ನೋಡಿದರೂ ಅತ್ತರಿನ ಪರಿಮಳ, ಹೂಗಳ ನರುಗಂಪು, ಝುಗಝುಗಿಸುವ ತೂಗು ದೀಪಗಳು. ನೋಡಿದರೆ ತಾವು ಯಾವುದೋ ಕನಸಿನ ಲೋಕಕ್ಕೆ ಬಂದಂತೆ ಭಾಸವಾಗುತ್ತಿತ್ತು.

ಪಟ್ಟಾಭಿಷೇಕ ಮಹೋತ್ಸವದ ದಿನ ಸಮೀಪಿಸಿದಂತೆ, ಸಿಂಧು, ಗಂಗಾ, ಯಮುನೆ, ಗೋದಾವರಿ, ಕೃಷ್ಣೆ, ಕಾವೇರಿ ಮೊದಲಾದ ಪುಣ್ಯನದಿಗಳಿಂದ ತೀರ್ಥೋದಕವನ್ನು ಬ್ರಾಹ್ಮಣರು ಹೊನ್ನಕಲಶಗಳಲ್ಲಿ ತಂದರು. ಶುಭಮಹೋತ್ಸವದಲ್ಲಿ ನಡೆಯಬೇಕಾದ ಮಂಗಳಕಾರ್ಯಗಳೂ, ಹವನ ಹೋಮಗಳೂ ಆರಂಭವಾದವು.

ಕುಮಾರ ಪುಲಿಕೇಶಿಗೆ ಸುಮಂಗಲಿಯರು ಶಾಸ್ತ್ರೋಕ್ತವಾಗಿ ತಲೆಗೆ ಎಣ್ಣೆ ಇಟ್ಟು ಎಣ್ಣೆಮಜ್ಜನಮಾಡಿಸಿದರು. ಅನಂತರ ಚಂದನ, ಅತ್ತರು ಪರಿಮಳಗಳ ಸುಖೋಷ್ಣ ನೀರಿನಲ್ಲಿ ಸ್ನಾನವಾಯಿತು, ಅದಾದಮೇಲೆ ಪುಣ್ಯನದಿಗಳ ತೀರ್ಥದಿಂದ ಮಂತ್ರೋಕದಿಂದ ಅಭಿಷೇಕಮಾಡಲಾಯಿತು. ಅನಂತರ ಶುಭ್ರವಾದ ಮಂಜಿನ ಬಿಳುಪನ್ನು ನಾಚಿಸುವ ದಿವ್ಯದುಕೂಲವನ್ನುಟ್ಟು, ರತ್ನಾಭರಣಗಳಿಂದ ಅಲಂಕೃತನಾಗಿ, ವೇದಮಂತ್ರಗಳೊಡನೆ, ಮಕರ ತೋರಣ, ಪಂಚಮಹಾಶಬ್ದ, ಬಿರುದುಬಾವಲಿಗಳೊಡನೆ, ಕುಮಾರನು ಸಭಾವೇದಿಕೆಗೆ ಆಗಮಿಸಿದನು. ಸಭಾಸದರು ಎದ್ದು ನಿಂತು 'ಉಘೇ' ಎಂದು ಜಯಘೋಷಮಾಡಿದರು. ತಮ್ಮ ಸಂತೋಷವನ್ನು ವ್ಯಕ್ತಪಡಿಸಲು ಸಾಮ್ರಾಟರ ಕೀರ್ತಿಯನ್ನು ಹಾಡಿ ಹೊಗಳಿದರು.

ಪುಲಿಕೇಶಿಯು ಮದ್ದಾನೆಯ ಪರಿಯಂತೆ, ಮೆಲ್ಲನೆ ಅಡಿ ಇಡುತ್ತಾ, ಗಂಭೀರವಾಗಿ ಸುತ್ತಲಿನ ಜನಸಮುದ್ರವನ್ನು ನೋಡುತ್ತಾ, ಅವರ ಸಂತೋಷೋದ್ಗಾರಗಳನ್ನು ಕೇಳಿ ಅಭಿಮಾನ, ಕೃತಜ್ಞತೆಗಳಿಂದ ತಲೆಬಾಗಿಸುತ್ತಾ,

ಬಾರಿಬಾರಿಗೂ ಅವರನ್ನು ನಮ್ರನಾಗಿ ವಂದಿಸುತ್ತಾ ಸಿಂಹಾಸನದ ಬಳಿಗೆ ಬಂದನು. ಅವನ ಬಲಗೈಯನ್ನು ಹಿಡಿದುಕೊಂಡು ಪ್ರಧಾನ ಅಮಾತ್ಯ ಸಮಂತ ಭದ್ರನೂ, ಕುಲಗುರುಗಳಾದ ಬೆಣ್ಣಮಸೋಮಯಾಜಿಗಳೂ, ಮುಂದೆ ನಡೆದಿದ್ದರು. ಅವರಿಗೆ ವಂದಿಸಿ, ಸಿಂಹಾಸನ ಪೀಠಕ್ಕೆ ತಲೆಬಾಗಿ, ದೃಢವಾದ ಹೆಜ್ಜೆಯಿಂದ ಸಿಂಹಾಸನವನ್ನೇರಿ ಕುಳಿತಾಗ, ಸಭೆಯಲ್ಲಿದ್ದ ಜನ, ಬಾನು ಬಿರಿಯುವಂತೆ ಕರತಾಡನಮಾಡಿ, ಹರ್ಷೋದ್ಗಾರಗಳ ನಡುವೆ, ನೂತನ ಸಾಮ್ರಾಟನನ್ನು ಸ್ವಾಗತಿಸಿದರು.

ಮಂಗಳವಾದ ಪಂಚಮಹಾವಾದ್ಯಗಳು ಭೋರ್ಗರೆದವು. ಕೋಟೆಯ ಬತೇರಿಗಳಿಂದ ಕುಶಾಲು ತೋಪುಗಳು ಹಾರಿದವು. ಸಾಮ್ರಾಜ್ಯದ ಜನತೆ ಆನಂದ ತುಂದಿಲರಾಗಿ ಹಾಡಿ ಕುಣಿದರು.

ಪುಲಿಕೇಶಿಯು ಸಾಮ್ರಾಜ್ಯದ ಮಹಾಜನತೆಯ ಆಶಯದಂತೆ, ಮಹಾರಾಣಿ ದುರ್ಲಭದೇವಿಯವರ ಹಾರೈಕೆಯಂತೆ, ಸಹೋದರ ಕುಬ್ಜವಿಷ್ಣುವರ್ಧನನ ಕೋರಿಕೆಯಂತೆ ಸ್ವಾಮಿನಿಷ್ಠ ಸೇವಕರೆಲ್ಲರ ಆದೇಶದಂತೆ ಕ್ರಿ. ಶ. ೬೧೯ ಸಂವತ್ಸರದ ಶುಭದಿನದಂದು, ಚಾಲುಕ್ಯ ಸಿಂಹಾಸನವನ್ನೇರಿದನು.

ಇತರರ ಪಾಲಿಗೆ ಸುಖಸುಪ್ಪತ್ತಿಗೆಯಾಗಬಹುದಾಗಿದ್ದ ಅರಸೊತ್ತಿಗೆ ಪುಲಿಕೇಶಿಯ ಪಾಲಿಗೆ ಮುಳ್ಳಿನ ಹಾಸಿಗೆಯೇ ಆಯಿತು. ಅವನೆಂದೂ ಸುಖವನ್ನು ಬಯಸಿ, ಸಿಂಹಾಸನವನ್ನು ಆರಿಸಿರಲಿಲ್ಲ. ಅವನು ಅರಸನಾದುದಾದರೂ ಜನತೆಯನ್ನು ಸೇವಿಸಲು; ತನ್ನ ಪ್ರಜೆಗಳನ್ನು ಮಕ್ಕಳಂತೆ ಪೊರೆದು ಪೋಷಿಸಲು, ಈ ಬಗ್ಗೆ ಇದ್ದ ಕರ್ತವ್ಯದ ನಿಷ್ಠೆ. ಅವನಿಗೆ ಸಿಂಹಾಸನದ ಘನತೆ ಗೌರವಗಳನ್ನು ಎತ್ತಿ ಹಿಡಿದು, ಅರಿನೃಪರ ಮಕುಟ ಮಣಿಗಳಿಂದ ಓಲೈಸಿಕೊಂಡು, ಆಸೇತು ನರ್ಮದೆಯ ಪರ್ಯಂತ, ಪೂರ್ವ ಪಶ್ಚಿಮ ಸಾಗರಾದ್ಯಂತ ಚಾಲುಕ್ಯ ಸಾಮ್ರಾಜ್ಯದ ಕೀರ್ತಿಪತಾಕೆಯನ್ನು ಮೆರೆಸಿ, ದಕ್ಷಿಣಾಪಥೇಶ್ವರನಾಗಿ ಮೆರೆಯಬೇಕೆಂಬ ಮಹತ್ವಾಕಾಂಕ್ಷೆ ಇಲ್ಲದೆ ಇರಲಿಲ್ಲ.

ಅವನು ಪವಿತ್ರವಾದ ಹಾರತೀ ವಂಶದಲ್ಲಿ ಹುಟ್ಟಿದ ಮಾನವ್ಯ ಗೋತ್ರೋದ್ಭವನೂ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರ್ಯಾದಿ ಸಪ್ತಮಾತೃಕಾ ಕೃಪಾಲಬ್ಧ ರಾಜ್ಯವೈಭವ ಶ್ರೀಸಂಪನ್ನನೂ ಆಗಿದ್ದನು. ರಣವಿಕ್ರಮ, ವಲ್ಲಭೇಶ್ವರ, ಸತ್ಯಾಶ್ರಯ ಇತ್ಯಾದಿ ಬಿರುದಾಂಕಿತನೂ, ಅಗ್ನಿಸ್ತೋಮ, ಅಗ್ನಿಚಯನ,

ವಾಜಪೇಯ, ಪೌಂಡರೀಕ, ಬಹುಸುವರ್ಣ, ಅಶ್ವಮೇಧಾದಿ ಮಹಾಕ್ರತು ಗಳನ್ನು ಮಾಡಿ, ಪುಲಿಕೇಶಿ ವಲ್ಲಭನೆಂಬ ಉಗ್ಗಡನೆಯನ್ನು ಪಡೆದ ಪಿತಾಮಹ ಪುಲಿಕೇಶಿಯ ದಿವ್ಯ ಆದರ್ಶವನ್ನು ಸದಾ ಕಣ್ಣಮುಂದೆ ಇಟ್ಟುಕೊಂಡಿದ್ದನು. ತನ್ನ ತಾತನಂತೆ ತಾನು ಕೀರ್ತಿಶಾಲಿಯಾಗಬೇಕು, ಸಾಮ್ರಾಜ್ಯವೈಭವವನ್ನು ದಶದಿಕ್ಕುಗಳಲ್ಲಿ ಮೆರೆಸಬೇಕು ಎಂಬ ಮಹೋನ್ನತಸಂಕಲ್ಪ ಅರಸೊತ್ತಿಗೆಯನ್ನು ಒಪ್ಪಿಕೊಳ್ಳುವಂತೆ ಮಾಡಿತ್ತು. ಇದಕ್ಕೆ ಪ್ರಜೆಗಳು ತನ್ನಲ್ಲಿ ಇಟ್ಟಿದ್ದ ಪ್ರೀತಿ ವಿಶ್ವಾಸಗಳು ಕಾರಣವಾಗಿದ್ದವು. ಶತ್ರುಗಳಿಂದ, ಕ್ಷಾಮ ಡಾಮರಗಳಿಂದ ಆಬಾಧಿತರನ್ನಾಗಿ ಮಾಡುವ ಅವರ ನಿರೀಕ್ಷೆಯನ್ನು ವ್ಯರ್ಥಗೊಳಿಸಬಾರದೆಂದು ಪುಲಿಕೇಶಿಯು ಸಿಂಹಾಸನವನ್ನು ಏರಿದ್ದನು.

ಪುಲಿಕೇಶಿಯು ತನ್ನ ತಂದೆ ತಾತಂದಿರ ಸಿಂಹಾಸನವನ್ನು ಔರಸಪುತ್ರ ನಾಗಿ ನಿಜವಾದ ಹಕ್ಕುದಾರನಾಗಿ ಏರಿದ್ದರೂ, ಜನತೆಯ ಕಣ್ಣಿನಲ್ಲಿ ನ್ಯಾಯ ಬದ್ಧಪ್ರಭುವಾಗಿದ್ದರೂ, ಅವನನ್ನು ಮೋಸಗಾರನೆಂದೂ, ವಂಚಕನೆಂದೂ, ಸಿಂಹಾಸನವನ್ನು ಕೊಲೆ, ರಕ್ತಪಾತಗಳಿಂದ ದುರಾಕ್ರಮಿಸಿಕೊಂಡ ವಿದ್ರೋಹಿ ಎಂದೂ ತಿಳಿಯುವ ಜನಕ್ಕೇನೂ ಕೊರತೆ ಇರಲಿಲ್ಲ.

ಮಂಗಳೇಶನು ತಾನು ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿಕೊಂಡು ಪುತ್ರಪೌತ್ರರಿಗೆ ಬಿಟ್ಟುಹೋಗಲು ಬಯಸಿ, ನಿಜವಾದ ಹಕ್ಕುದಾರರಾದ ಪುಲಿಕೇಶಿ, ಕುಬ್ಜವಿಷ್ಣುವರ್ಧನರನ್ನು ಪರಸ್ಪರ ಎತ್ತಿಕಟ್ಟಿ, ಸ್ವಯುದ್ಧ ಕಲಹದ ಬೀಜಬಿತ್ತಿ, ಸಿಂಹಾಸನವನ್ನು ದಕ್ಕಿಸಿಕೊಳ್ಳಲು ಚಾಣಕ್ಯರಿಯಿಂದ ನೆಯ್ದಿದ್ದ ಬಲೆ ವ್ಯರ್ಥವಾಗಿರಲಿಲ್ಲ. ಅವನ ಹಿಂಬಾಲಕರು ಅನೇಕರು ಸಾಮ್ರಾಜ್ಯದಲ್ಲಿ ಮಾತ್ರ ವಲ್ಲ ರಾಜಧಾನಿಯಲ್ಲೂ ಇದ್ದರು. ಅವರು ಪುಲಿಕೇಶಿಯನ್ನು ದ್ವೇಷಿಸುತ್ತಿದ್ದರು. ಅಲ್ಲದೆ ಕುಬ್ಜವಿಷ್ಣುವರ್ಧನನ ಹಿತೈಷಿಗಳು, ತಮ್ಮ ಸ್ವಾರ್ಥಸಾಧನೆಗಾಗಿ, ಚಾಲುಕ್ಯ ಸಿಂಹಾಸನವನ್ನು ವಿಷ್ಣುವರ್ಧನನಿಗೆ ದೊರಕಿಸಿಕೊಡಲು ಪ್ರಯತ್ನಿಸಿ ವಿಫಲರಾಗಿದ್ದರು. ಅವರು ಸಹೋದರರಲ್ಲಿ ಒಡಕುಂಟುಮಾಡಿ ಮತ್ತೆ ಅವರಲ್ಲಿ ವೈಮನಸ್ಸಿನ ಬೀಜಬಿತ್ತಲು ಸಮಯ ಕಾಯುತ್ತಿದ್ದರು. ಇವರೆಲ್ಲರಿಗೆ ಹಿರಿಯನಂತೆ ಮಂಗಳೇಶನ ಬಲಗೈಯಂತಿದ್ದ ರಾಹಪ್ಪಯ್ಯನು ತಲೆತಪ್ಪಿಸಿ ಕೊಂಡಿದ್ದನು. ಅವನು ಜೀವಂತನಾಗಿ ಇರುವತನಕ ಪುಲಿಕೇಶಿಯ ಜೀವಕ್ಕೆ ಭದ್ರತೆ ಇರಲಿಲ್ಲ. ಇವುಗಳಿಗೆ ಕಿರೀಟವಿಟ್ಟಂತೆ, ಮಂಗಳೇಶನ ಅಭಿಮಾನಿಗಳೂ,

ಮಿತ್ರರೂ ಆಗಿದ್ದ ಅನೇಕ ಅರಸರು, ಪುಲಿಕೇಶಿಯ ಮೇಲೆ ಅಕಾರಣವಾಗಿ ಕತ್ತಿ ಮಸೆಯುತ್ತಿದ್ದರು.

ಅವರಲ್ಲಿ ಭೀಮಾನದಿಯ ತೀರದಲ್ಲಿದ್ದ ರಾಜ್ಯಗಳಿಗೆ ಅಧಿಪತಿಗಳಾಗಿದ್ದ ಆಪ್ಯಾಯಿಕ ಮತ್ತು ಗೋವಿಂದರೆಂಬುವರು ಮುಖ್ಯರಾಗಿದ್ದರು. ಅವರು ಮಂಗಳೇಶನ ಆಪ್ತಮಿತ್ರರೂ ದೂರದ ಸಂಬಂಧಿಗಳೂ ಆಗಿದ್ದರು. ಅವರಿಗೆ ಪುಲಿಕೇಶಿಯು ಸಿಂಹಾಸನಕ್ಕೆ ಬಂದುದು ಮಹಾಪರಾಧವಾಗಿ ಕಂಡಿತ್ತು. ತಮ್ಮ ಗೆಳೆಯನಾದ ಮಂಗಳೇಶನನ್ನು ಮೋಸದಿಂದ ಕೊಲ್ಲಿಸಿ, ಸಿಂಹಾಸನವನ್ನು ಆಕ್ರಮಿಸಿಕೊಂಡ ಧೂರ್ತನು ಪುಲಿಕೇಶಿ ಎಂದು ಅವರು ತಿಳಿದಿದ್ದರು. ಪುಲಿಕೇಶಿಯನ್ನು ಸಾಮಾನ್ಯ ಬಾಲಕನೆಂದು ತಿಳಿದು ಗೆಳೆಯನಿಗಾಗಿದ್ದ ಅನ್ಯಾಯಕ್ಕೆ ಸೇಡು ಬಗೆಯಲು ನೋಡುತ್ತಿದ್ದರು. ಅವರಿಗೆ ಬೆಂಬಲಿಗರಾಗಿ ಗಂಗ, ಕದಂಬ, ಪಲ್ಲವ ಮನೆತನಗಳು ಚಾಲುಕ್ಯ ಸಾಮ್ರಾಜ್ಯವನ್ನು ತಮ್ಮಲ್ಲೇ ಹಂಚಿಕೊಳ್ಳಲು ಸಮಯ ಕಾಯುತ್ತಿದ್ದರು. ಹೀಗೆ ಒಳಗಿನ, ಹೊರಗಿನ ಶತ್ರುಪರಂಪರೆಯ ಪ್ರಕ್ಷುಬ್ಧ ವಾತಾವರಣದಲ್ಲಿ, ಸಾಮ್ರಾಜ್ಯವನ್ನು ಹದಗೆಡಿಸಿದ್ದ ಅರಾಜಕತೆ, ದುರಾಡಳಿತಗಳ ಭೀಕರ ಅಲೆಗಳಿಗೆ ಸಿಕ್ಕಿ ತತ್ತರಿಸುತ್ತಿದ್ದ ಸಾಮ್ರಾಜ್ಯ ನೌಕೆಯನ್ನು ಒಂದು ದಡಕ್ಕೆ ತಂದು ಮುಟ್ಟಿಸುವ ಮಹತ್ವದ, ಗುರುತರವಾದ ಹೊಣೆಗಾರಿಕೆ ಬಾಲಕನಾದ ಪುಲಿಕೇಶಿಯ ಹೆಗಲಮೇಲೆ ಬಿದ್ದಿತ್ತು.

ಆದರೆ ಅವನು ಈ ಹೊಣೆಗಾರಿಕೆಯಿಂದ ಜಾರಿಕೊಳ್ಳುವ ಪ್ರಯತ್ನ ಮಾಡಲಿಲ್ಲ.ತನ್ನ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಕಂಡು ಅಂಜಲಿಲ್ಲ, ಅಳುಕಲಿಲ್ಲ. ಧೀರನಂತೆ ಅದನ್ನು ಎದುರಿಸಲು ನಿಶ್ಚಯಿಸಿದ್ದನು. ಒಂದು ನಿಮಿಷಕಾಲವಾದರೂ ತಾನು ಪೃಥ್ವೀವಲ್ಲಭ ಸತ್ಯಾಶ್ರಯ ಪುಲಿಕೇಶಿಯ ಮೊಮ್ಮಗ–ರಣವಿಕ್ರಮ ಪುಲಿಕೇಶಿ–ಎಂಬುದನ್ನು ಮರೆಯಲಿಲ್ಲ. ಹುಲಿಯಹಾಲು ಕುಡಿದು ಬೆಳೆದ ತನ್ನ ಪಿತಾಮಹ ಪುಲಿಕೇಶಿ ಕುಳಿತ ಈ ಸಿಂಹಾಸನವನ್ನೂ ಧರೆಯನ್ನೂ ತಾನು ಪಡೆದಿರುವೆನೆಂಬುದನ್ನು ಚಣಕಾಲ ಮರೆಯಲಿಲ್ಲ.

ಆ ಘಟನೆ–ಪುಲಿಕೇಶಿಗೆ ಆ ಹೆಸರು ಬಂದ ಕಥೆ–ದಂತಕಥೆ ಎನ್ನುವಷ್ಟು ವಿಚಿತ್ರವಾಗಿತ್ತು. ಉತ್ಪ್ರೇಕ್ಷೆಯಂತೆ ತೋರಿದರೂ ಅದು ನಡೆದ ಸತ್ಯ ಕಥೆಯಾಗಿತ್ತು. ಇದನ್ನು ತನ್ನ ಅಬ್ಬೆ ದುರ್ಲಭದೇವಿಯ ಬಾಯಲ್ಲಿ ಹತ್ತಾರು

ಬಾರಿ ಬಾಲಕ ಪುಲಿಕೇಶಿ ಕೇಳಿದ್ದನು. ಅದು ಇನ್ನೂ ಅವನ ಸ್ಮೃತಿಪಥದಲ್ಲಿ ಅಚ್ಚರಿಯದೆ ಉಳಿದಿತ್ತು.

ಪುಲಿಕೇಶಿಯ ತಂದೆ ವಲ್ಲಭೇಂದ್ರರಣಾಗಾರನು ರಾಜ್ಯತೃಷ್ಣೆಯಿಂದ ತಮ್ಮಲ್ಲೇ ಒದ್ದಾಡುತ್ತಿದ್ದ ಕದಂಬ, ಗಂಗ, ಪಲ್ಲವರನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ನಾಲ್ದೆಸೆಯಲ್ಲೂ ವಿಸ್ತರಿಸಿದ್ದನು. ಇದು ಪಲ್ಲವರಿಗೆ ನುಂಗ ಲಾರದ ತುತ್ತಾಗಿತ್ತು. ರಣಾಗಾರನ ಏಳಿಗೆ ಅವರಿಗೆ ಸಹಿಸಲಾಗದ ಸಂಗತಿ ಯಾಗಿತ್ತು. ಅವರು ಮೇಲಿಂದಮೇಲೆ ಚಾಲುಕ್ಯರ ಮೇಲೆ ದಂಡೆತ್ತಿ ಬಂದು ಕಿರುಕುಳಕೊಡುತ್ತಿದ್ದರು. ಒಮ್ಮೆ ಪಲ್ಲವರೊಡನೆ ನಡೆದ ಹೋರಾಟದಲ್ಲಿ ಸಹೋದರ ಜಯಸಿಂಹನು ಮಡಿಯಲು, ರಣಾಗಾರನು ಈ ಎರಡು ರಾಜ್ಯಗಳ ನಾಶವನ್ನು ತಪ್ಪಿಸಲು, ಪಲ್ಲವರೊಡನೆ ಸಂಧಿಮಾಡಿಕೊಂಡನು. ಈ ಸ್ನೇಹ ಒಪ್ಪಂದ ದೀರ್ಘ ಕಾಲ ಉಳಿಯಲು ಪಲ್ಲವ ರಾಜಪುತ್ರಿಯೊಬ್ಬಳನ್ನು ವಿವಾಹ ವಾಗಿ, ರಾಜಧಾನಿಯಾದ ವಾತಾಪಿಗೆ ಹಿಂದಿರುಗಿದನು.

ಮಾರ್ಗಮಧ್ಯೆ ಅವನ ಕೈಯಲ್ಲಿ ಸೋತಿದ್ದ ಶತ್ರುಗಳು ಹಠಾತ್ತನೆ ರಣಾ ಗಾರನ ಮೇಲೆ ಬಿದ್ದರು. ಈ ಸಮಯದಲ್ಲಿ ಬೇರೇನು ಮಾಡಲೂ ತೋಚದೆ, ರಣಾಗಾರನು ಗರ್ಭಿಣಿಯಾದ ಪತ್ನಿಯನ್ನು ಆ ಕಾನನದಲ್ಲಿ ಬಿಟ್ಟು, ಶತ್ರುಗಳ ಮೇಲೆ ಕಾಲಯಮನಂತೆ ಬಿದ್ದು, ಅವರನ್ನು ಸೋಲಿಸಿ ಓಡಿಸಿದನು. ಶತ್ರು ಗಳನ್ನು ಹಿಮ್ಮೆಟ್ಟಿಸಿ, ಅನಂತರ ಪತ್ನಿಯನ್ನು ಅಡಗಿಸಿದ್ದ ಕಡೆಗೆ ಬಂದಾಗ ಅಲ್ಲಿ ಪತ್ನಿ ಇರಲಿಲ್ಲ. ಅವಳಿಗಾಗಿ ಕಾನನವನ್ನೆಲ್ಲಾ ಶೋಧಿಸಿದರೂ ಅವಳು ಪತ್ತೆ ಯಾಗಲಿಲ್ಲ. ಅವಳ ಇತಿಗತಿಯ ಬಗ್ಗೆ ಯಾರೂ ಯಾವ ಸುದ್ದಿಯನ್ನೂ ಹೇಳದಾದರು.

ಹೀಗೆ ಅನೇಕ ವರ್ಷಗಳು ನಿರರ್ಥಕ ಶೋಧನೆಯಲ್ಲಿ ಕಳೆದವು. ತನ್ನ ಪತ್ನಿ ಕಾಡಿನ ದುಷ್ಟ ಮೃಗಗಳಿಗೆ ಸಿಕ್ಕಿ ಮಡಿದಿರಬೇಕೆಂದೂ, ಇಲ್ಲವೇ ಹಸಿವು ನೀರಡಿಕೆಗಳಿಂದ ಕಂಗೆಟ್ಟು ಸತ್ತಿರಬೇಕೆಂದೂ ರಣಾಗಾರನು ಊಹಿಸಿ, ಪತ್ನಿಯ ಆಸೆಯನ್ನು ಸಂಪೂರ್ಣವಾಗಿ ತೊರೆದನು. ಆದರೆ ಅವನ ಸುದೈವಕ್ಕೆ ಅವನ ಪತ್ನಿ ಹಾಗೆ ಮಡಿದಿರಲಿಲ್ಲ. ಆ ಪಲ್ಲವ ರಾಜಪುತ್ರಿ ಬಂದ ವಿಪತ್ತುಗಳನ್ನು ಧೈರ್ಯವಾಗಿ ಎದುರಿಸಿದಳು. ಅವಳು ಕಾಡಿನಲ್ಲಿ ತಲೆಮರೆಸಿಕೊಂಡು ದಿನ ಗಳನ್ನು ಕಳೆಯುತ್ತಿರುವಾಗ, ನವಮಾಸ ತುಂಬಿದವು. ಒಂದು ಶುಭ ದಿನದಲ್ಲಿ

ಅವಳು ಸುಂದರ ಗಂಡುಮಗುವಿಗೆ ಜನ್ಮವಿತ್ತು, ಪ್ರಸವವೇದನೆಯಿಂದ ತೀರಿ ಕೊಂಡಳು.

ಈ ಸಮಯದಲ್ಲಿ ಒಂದು ಪವಾಡ ನಡೆಯಿತು. ಮಗು ಮಡಿದ ತಾಯಿಯ ಮೊಲೆಗೆ ಬಾಯಿಟ್ಟು ಹಸಿವಿನಿಂದಲೂ, ಚಳಿಗಾಳಿಗಳಿಂದಲೂ ಚೀರುತ್ತಾ ಮಲ ಗಿರುವಾಗ, ಅಲ್ಲಿಗೆ ಒಂದು ಹೆಣ್ಣುಹುಲಿ ತನ್ನ ಮರಿಗಳೊಡನೆ ಬಂದಿತು. ಅದು ಸತ್ತ ತಾಯಿಯ ಬಳಿ ಅಳುತ್ತಾ ಬಿದ್ದಿದ್ದ ಕಂದನನ್ನು ನೋಡಿತು. ಆ ದೃಶ್ಯ ಆ ಕ್ಷುದ್ರಜಂತುವಿನ ಎದೆಯಲ್ಲೂ ಕರುಣೆಯನ್ನು ಹುಟ್ಟಿಸಿರಬೇಕು ! ಆ ಹುಲಿಯು ಆ ಮಗುವಿನ ಮೇಲೆ ಕನಿಕರಿಸಿ, ಆ ಮಗುವನ್ನು ಸಮೀಪಿಸಿ, ಅದರ ಬಾಯಿಗೆ ತನ್ನ ಮೊಲೆ ಇಟ್ಟು ಹಾಲುಣಿಸಿತು. ಮಗು ಅದರ ಹಾಲನ್ನು ಹೀರಿತು— ತಾಯಿಯ ಹಾಲನ್ನು ಹೀರುವಂತೆ.

ಹೀಗೆ ಆರಂಭವಾದ ಹುಲಿ–ಮಗುವಿನ ಸ್ನೇಹ ಸಂಬಂಧ ಅನೇಕ ವರ್ಷಗಳ ವರೆಗೆ ಬೆಳೆಯಿತು. ಆ ಮಗುವು ಹುಲಿಯ ಹಾಲನ್ನು ಕುಡಿದು, ಬೆಳೆದು ನಾಲ್ಕೈದು ವರ್ಷಗಳ ಬಾಲಕನಾದನು. ಒಂದು ದಿನ ಬೇಟೆಗಾರರು ಬೇಟೆ ಗೆಂದು ಆ ಕಾನನಕ್ಕೆ ಬಂದಾಗ, ಅವರು ಒಂದು ವಿಚಿತ್ರವಾದ ದೃಶ್ಯವನ್ನು— ಸುಮಾರು ನಾಲ್ಕೈದು ವರ್ಷದ ಬಾಲಕನು ಒಂದು ಹೆಬ್ಬುಲಿಯ ಜೊತೆಯಲ್ಲಿ, ನಿರ್ಭಯವಾಗಿ ಕುಳಿತು ಸರಸವಾಡುವುದನ್ನು–ಕಂಡರು. ಅವರಿಗೆ ಆಶ್ಚರ್ಯ, ಕುತೂಹಲಗಳು ಏಕಕಾಲದಲ್ಲಿ ಉಂಟಾದುವು.

ಅವರು ಉಪಾಯಾಂತರದಿಂದ ಆ ಬಾಲಕನನ್ನು ಹುಲಿಯಿಂದ ಬೇರ್ಪ ಡಿಸಿ, ಅವನನ್ನು ತಮ್ಮ ದೊರೆಯಾದ ರಣಾಗಾರನಿಗೆ ಒಪ್ಪಿಸಿನರು. ಆ ಮಗು ವಿನ ಮುಖಚರ್ಯೆ ಹಾಗೂ ಹೋಲಿಕೆಗಳಿಂದ, ಅವನು ತನ್ನ ಮಗನಂತೆ ಭಾಸ ವಾಯಿತು. ಈ ರಹಸ್ಯವನ್ನು ಭೇದಿಸಲು ಸ್ವಯಂ ರಣಾಗಾರನೇ ಆ ಬಾಲಕನು ದೊರೆತ ಕಾಡಿನಲ್ಲಿ ಪತ್ನಿಗಾಗಿ ಶೋಧಿಸಿದಾಗ, ಒಂದೆಡೆ ಅವಳ ಅಸ್ಥಿಪಂಜರ ಸಿಕ್ಕಿತು. ಅಲ್ಲಿ ಬಿದ್ದಿದ್ದ ಒಡವೆಗಳಿಂದ ಅವಳು ತನ್ನ ಅಗಲಿದ ಪತ್ನಿ–ಪಲ್ಲವ ರಾಜಕುಮಾರಿ–ಎಂಬುದು ಸ್ಪಷ್ಟವಾಯಿತು. ಈ ಬಾಲಕ ತನ್ನ ಮಗನೆಂಬುದರ ಬಗ್ಗೆ ಸಂಶಯ ಬರಲಿಲ್ಲ. ಹುಲಿಯಿಂದ ಸುರಕ್ಷಿಸಲ್ಪಟ್ಟ ಆ ಮಗುವಿಗೆ 'ಪುಲಿಕೇಶಿ' ಎಂದು ಹೆಸರನ್ನು ಇಟ್ಟನು.

ಅವನಿಗೆ ಕ್ಷತ್ರಿಯೋಚಿತ ವಿದ್ಯೆಗಳನ್ನು ಕಲಿಸಿಕೊಟ್ಟು, ತನ್ನ ನಂತರ

ಸಿಂಹಾಸನಕ್ಕೆ ಅಧಿಪತಿಯಾಗಿ ಮಾಡಿದನು. ಮುಂದೆ ಅವನು ಕದಂಬ ಪಲ್ಲವರನ್ನು ಗೆದ್ದು, ಅಶ್ವಮೇಧಯಾಗಮಾಡಿ, ಚಾಲುಕ್ಯ ಸಿಂಹಾಸನದ ಧವಳಕೀರ್ತಿಯನ್ನು ದಶದಿಕ್ಕುಗಳಲ್ಲಿ ಮೆರೆಸಿದ್ದನು. ಅವನಂತೆ ತಾನಾಗಬೇಕೆಂಬುದೇ ಪುಲಿಕೇಶಿಯ ಹೃದಯಾಂತರಾಳದ ಅಭೀಪ್ಸೆಯಾಗಿತ್ತು.

ಇದು ನಿರರ್ಥಕವಾದ ಅಭೀಪ್ಸೆಯಲ್ಲವೆಂಬುದನ್ನು ತೋರಿಸುವ ಸದವಕಾಶ ಪುಲಿಕೇಶಿಯು ಸಿಂಹಾಸನವನ್ನೇರಿದ ಅಲ್ಪ ಕಾಲದಲ್ಲೇ ಒದಗಿತ್ತು– ಆಪ್ಯಾಯಿಕ ಮತ್ತು ಗೋವಿಂದರ ರೂಪದಲ್ಲಿ.

ಮಂಗಳೇಶನ ಕೊಲೆಯಾದ ಮೇಲೆ, ರಾಹಪ್ಪಯ್ಯನು ಅವನಿಗೆ ತಾನು ಅಂತ್ಯಕಾಲದಲ್ಲಿ ಕೊಟ್ಟಿದ್ದ ವಾಗ್ದಾನವನ್ನು ಉಳಿಸಿಕೊಳ್ಳುವ ಸಲುವಾಗಿ ಬದುಕಿದ್ದನು. ಅವನು ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಲು ಪೆಟ್ಟು ತಿಂದ ಸರ್ಪದಂತೆ ಬುಸುಗುಟ್ಟುತ್ತಿದ್ದನು. ಅವನಿಗೆ ಸಿಂಹಾಸನ ಪುಲಿಕೇಶಿಯದಾದ ಮೇಲೆ, ಕುಬ್ಜ ವಿಷ್ಣುವರ್ಧನನು ಪುಲಿಕೇಶಿಯ ಕಡೆಗೆ ಒಲಿದ ಮೇಲೆ ಅವನನ್ನು ಪ್ರತಿಭಟಿಸಿ, ಹೋರಾಡುವುದರಲ್ಲಿ ಅರ್ಥವಿಲ್ಲವೆಂದು ಅನಿಸಿತ್ತು.

ಈಗ ತನ್ನನ್ನೂ ತಮ್ಮವರನ್ನೂ ಜನತೆ ಹಾಗೂ ಪುಲಿಕೇಶಿಯ ಕಡೆಯವರು ಸ್ವಾಮಿದ್ರೋಹಿಗಳೆಂದು ತಿಳಿದ ಮೇಲೆ, ಚಾಲುಕ್ಯ ಸಾಮ್ರಾಜ್ಯದಲ್ಲಿ ಉಳಿದರೆ, ಜೀವಕ್ಕೆ ಅಪಾಯ ಬರಬಹುದೆಂದು ಅವನು ತನ್ನ ಸಂಗಡಿಗರೊಡನೆ ಮಂಗಳೇಶನ ಆಪ್ತ ಮಿತ್ರನಾಗಿದ್ದ ಆಪ್ಯಾಯಿಕನ ಬಳಿಗೆ ಬಂದಿದ್ದನು. ಅವನು ನಡೆದ ಸಂಗತಿಯನ್ನು ಬಣ್ಣಕಟ್ಟಿ ಹೇಳಿ, "ನೀವು ಮಂಗಳೇಶರ ನಿಜವಾದ ಸ್ನೇಹಿತರು ಆಗಿದ್ದುದು ನಿಜವಾದರೆ, ಅವರಿಗಾದ ಅನ್ಯಾಯಕ್ಕೆ ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಬೇಕು. ನೀವು ಪುರುಷರಾದರೆ, ಇಂತಹ ಅನ್ಯಾಯವನ್ನೂ, ದುರಾಕ್ರಮಣವನ್ನೂ ಎಂದಿಗೂ ಸಹಿಸಲಾರಿರಿ ! ಗೆಳೆಯರಿಗಾದ ಅಪಮಾನವನ್ನೂ— ಅತ್ಯಾಚಾರವನ್ನೂ ಎಂದಿಗೂ ಸಹಿಸಲಾರಿರಿ !" ಎಂದು ಹೇಳಿ ಪುಲಿಕೇಶಿಯ ಮೇಲೆ ಆಪ್ಯಾಯಿಕನನ್ನು ಎತ್ತಿಕಟ್ಟಿದ್ದನು.

## ೧೪

ಆಪ್ಯಾಯಿಕನು ತನ್ನ ಗೆಳೆಯನಾದ ಗೋವಿಂದನೊಡನೆ ಸೇರಿಕೊಂಡು

ಪುಲಿಕೇಶಿಯ ಮೇಲೆ ಯುದ್ಧ ಘೋಷಿಸಿದ ಸಂಗತಿ ಮಿಂಚಿನ ವೇಗದಲ್ಲಿ ವಾತಾಪಿಯನ್ನು ತಲುಪಿತು. ಈ ಸುದ್ದಿಯನ್ನು ಕೇಳಿ ರಾಜಧಾನಿಯ ಜನತೆ ತಲ್ಲಣಗೊಂಡಿತು. ನೂತನ ದೊರೆ ಪಟ್ಟಕ್ಕೆಬಂದ ತರುಣದಲ್ಲಿಯೇ ಸಾಮ್ರಾಜ್ಯಕ್ಕೆ ಇಂತಹ ವಿಪತ್ತು ಬರಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ.

ಸ್ವಯಂ ಪುಲಿಕೇಶಿಯೂ ಶತ್ರುಗಳ ದಾಳಿ ಇಷ್ಟು ಅನಿರೀಕ್ಷಿತವಾಗಿ ನಡೆಯಬಹುದೆಂದು ತಿಳಿದಿರಲಿಲ್ಲ. ಅವನು ಹಠಾತ್ತನೆ ತಲೆದೋರಿದ್ದ ಈ ವಿಪತ್ತಿಗೆ ಹೆದರದೆ, ಪಟ್ಟಾಭಿಷೇಕದ ಕಂಕಣದ ಕೈಗೇ ಸಮರದೀಕ್ಷೆಯನ್ನು ತೊಡಿಸಿದನು. ಸಾಮಂತರಿಗೂ, ಮಂಡಲೇಶ್ವರರಿಗೂ ಪಟ್ಟಾಭಿಷೇಕದ ಉತ್ಸವದ ಉಡುಗೊರೆಗಳ ಜೊತೆಯಲ್ಲೇ ಯುದ್ಧದ ವೀಳ್ಯವನ್ನು ಕೊಟ್ಟನು. ಸಾಮ್ರಾಜ್ಯದ ಅಭಿಮಾನಿಗಳಾದ ಸಾಮಂತರೂ ದಂಡನಾಯಕರೂ ಸಮರೋತ್ಸಾಹದಿಂದ ಹಿಗ್ಗಿದರು. ಅವರು ಶತ್ರುಮರ್ದನ ಕಾರ್ಯಕ್ಕೆ ಮದುವಣಿಗರಂತೆ ಹೊರಡಲು ಸಿದ್ಧರಾದರು.

ಆದರೂ ಪುಲಿಕೇಶಿ ಮುಡುಕಲಿಲ್ಲ. ಶಾಂತಿ ಸುಭಿಕ್ಷಗಳನ್ನು ನೀಡಬೇಕಾದ ಕೈಯಲ್ಲಿ ರಣಮಾರಿಗೆ ಔತಣವಿತ್ತು, ತಾನಾಗಿ ದುಃಖ, ದಾರಿದ್ರ್ಯ, ಸಾವು ನೋವು, ಪ್ರಜಾಕ್ಷೋಭೆಯನ್ನುಂಟುಮಾಡುವ ಯುದ್ಧವನ್ನು ಆಹ್ವಾನಿಸಲು ಇಷ್ಟವಿರಲಿಲ್ಲ. ಅವನು ಶತ್ರುಗಳ ಮೇಲೆ ದಂಡೆತ್ತಿ ಹೋಗುವ ಮುನ್ನ ಈ ಎಲ್ಲ ಸಂಗತಿಯನ್ನು ತನ್ನ ಹಿತೈಷಿಗಳೂ, ಸಾಮ್ರಾಜ್ಯನಿಷ್ಠಸೇವಕರೂ ಆಗಿದ್ದ ಸಮಂತಭದ್ರ, ಬೆಣ್ಣಮಸೋಮಯಾಜಿ ಮುಂತಾದವರೊಡನೆ ಚರ್ಚಿಸಿ, ಸಂಧಾನದ ಮೂಲಕ ಬಂದಿರುವ ವಿಪತ್ತನ್ನು ನಿವಾರಿಸಿಕೊಳ್ಳಲು ನಿಶ್ಚಯಿಸಿದನು. ಸಂಧಾನ ವಿಫಲವಾದರೆ ಮಾತ್ರ ತಾನು ಶಸ್ತ್ರಕ್ಕೆ ಶರಣುಬರಬೇಕೆಂದು ತೀರ್ಮಾನಿಸಿದನು.

ಅದರಂತೆ ಪುಲಿಕೇಶಿಯು ಆಪ್ಯಾಯಿಕನ ಬಳಿಗೆ ರಾಯಭಾರಿಯಾಗಿ ಯಾರನ್ನು ಕಳುಹಿಸಬೇಕೆಂದು ಯೋಚಿಸುತ್ತಿರುವಾಗ ಅವನಿಗೆ ತಟ್ಟನೆ ರವಿಕೀರ್ತಿಯ ನೆನಪಾಯಿತು.

ರವಿಕೀರ್ತಿಯು ಭಾರವಿಗೆ ಸರಿಸಾಟಿಯಾಗಿದ್ದ ಕವಿ ಎಂಬ ಕೀರ್ತಿಗೆ ಪಾತ್ರನಾಗಿದ್ದನು.ಅವನು ರಾಜತಂತ್ರನಿಪುಣನೂ, ಸಾಮ್ರಾಜ್ಯಾಭಿಮಾನಿಯೂ ಸ್ವಾಮಿನಿಷ್ಠಸೇವಕನೂ ಆಗಿದ್ದನು. ಅವನು ಆರ್ಯಪುರ (ಐಹೊಳೆ)ದ ಗುರು

ಕುಲದಲ್ಲಿ ಪುಲಿಕೇಶಿಯ ಗುರುವೂ, ಸಂಗಡಿಗನೂ, ಹಿತೈಷಿಯೂ ಆಗಿದ್ದನು. ಅವನು ಜಾತಿಯಲ್ಲಿ ಜೈನನಾದರೂ, ವೃತ್ತಿಯಿಂದ ಶಿಕ್ಷಕನಾದರೂ, ಅಭಿರುಚಿಯಿಂದ ಕವಿಯಾದರೂ, ಪುಲಿಕೇಶಿಯ ಅಭಿಮಾನಿಯೂ, ಚಾಲುಕ್ಯ ಸಿಂಹಾಸನದ ನೆಚ್ಚಿನ ಸ್ವಾಮಿನಿಷ್ಠಸೇವಕನೂ ಆಗಿದ್ದನು. ಅವನು ಪಂಡಿತಕವಿಯಾಗಿದ್ದಂತೆ ರಣಪಂಡಿತನೂ ಆಗಿದ್ದನು. ಕಾವ್ಯ ಬರೆಯಲು ಲೇಖಣಿಯನ್ನು ಹಿಡಿಯುವಷ್ಟೇ ಸಹಜವಾಗಿ ಖಡ್ಗ ಹಿಡಿಯುತ್ತಿದ್ದನು. ಖಂಡ ಕಾವ್ಯಗಳನ್ನು ಲೀಲಾಜಾಲವಾಗಿ ಬರೆಯುವಂತೆ, ಅರಿನೃಪರ ರುಂಡವನ್ನು ಮುಂಡದಿಂದ ಬೇರ್ಪಡಿಸುವ ರಣವಿದ್ಯೆಯನ್ನೂ ಹಸ್ತಗತಮಾಡಿಕೊಂಡಿದ್ದನು. ಅವನು ಚತುರನಾದ ಕವಿಯಾಗಿದ್ದಂತೆ ಸುಸಂಸ್ಕೃತನಾದ ರಸಿಕನಾಗಿದ್ದಂತೆ, ರಾಜಕಾರಣದಲ್ಲಿ ಮುತ್ಸದ್ದಿಯೂ, ಸಮರಾಂಗಣದಲ್ಲಿ ಕಲಿಯೂ ಆಗಿದ್ದನು. ಅವನಿಗೆ ಸಂಸ್ಕೃತ ಕನ್ನಡಗಳಲ್ಲಿ ಅಸಾಧಾರಣ ಪಾಂಡಿತ್ಯವಿತ್ತು. ಅವನ ಜ್ಞಾನಪ್ರವಾಹ ಸಾಹಿತ್ಯಕ್ಕೆ ಮಾತ್ರ ಮೀಸಲಾಗಿರಲಿಲ್ಲ, ಅವನು ತರ್ಕ, ವ್ಯಾಕರಣ, ವೈದ್ಯ, ಜ್ಯೋತಿಷ್ಯ, ಚಿತ್ರಕಲೆ, ಸಂಗೀತ, ನಾಟ್ಯ, ಅರ್ಥಶಾಸ್ತ್ರ ರಣಶಾಸ್ತ್ರಗಳಲ್ಲೆಲ್ಲಾ ಪರಿಣತನಾಗಿದ್ದನು. ತನ್ನ ಧರ್ಮವಾದ ಜಿನಸಮಯದಲ್ಲಿ ಇದ್ದಷ್ಟೇ ಆಸಕ್ತಿ, ಪಾಂಡಿತ್ಯಗಳು ವೈದಿಕಮತ ಬೌದ್ಧಧರ್ಮಗಳ ಬಗೆಗೂ ಇದ್ದುವು. ಅವನ ಅನ್ಯಮತ ಸಹಿಷ್ಣುತೆ, ಶಿಷ್ಯವಾತ್ಸಲ್ಯ, ಸ್ವಾಮಿನಿಷ್ಠೆಗಳು ಪುಲಿಕೇಶಿಯ ಮನಸ್ಸನ್ನು ಅಪಹರಿಸಿದ್ದುವು.

ಅವನ ಸಹವಾಸದಲ್ಲಿ ಪುಲಿಕೇಶಿ ಅನೇಕ ವಿಷಯಗಳನ್ನು ತಿಳಿದುಕೊಂಡಿದ್ದನು. ರಾಜಕಾರಣದಲ್ಲಿ ಅವನನ್ನೇ ತನ್ನ ಗುರುವನ್ನಾಗಿ ಮಾಡಿಕೊಂಡಿದ್ದನು. ಪಟ್ಟಾಭಿಷೇಕದ ನಿಮಿತ್ತದಲ್ಲಿ ರಾಜಧಾನಿಗೆ ಆಗಮಿಸಿದ್ದ ರವಿಕೀರ್ತಿಯನ್ನು ಅವನು ಒತ್ತಾಯದಿಂದ ಇನ್ನೂ ಕೆಲವು ಕಾಲ ರಾಜಧಾನಿಯಲ್ಲಿ ಉಳಿಸಿಕೊಂಡಿದ್ದನು. ಶಿಷ್ಯನ ಮಾತನ್ನು ಮೀರಲಾರದೆ ರವಿಕೀರ್ತಿಯು ಅವನ ಅತಿಥಿಯಾಗಿ ಕೆಲವು ಕಾಲ ವಾತಾಪಿಯಲ್ಲಿ ನಿಂತಿದ್ದನು. ಈ ಸಮಯದಲ್ಲಿ ಸಾಮ್ರಾಜ್ಯದ ದಿಗಂತದಲ್ಲಿ ಹಠಾತ್ತನೆ ಯುದ್ಧದ ಕಾರ್ಮೋಡ ಕಾಣಿಸಿಕೊಂಡಿತ್ತು—ಅಪ್ಪಾಯಿಕನ ರೂಪದಲ್ಲಿ.

ರವಿಕೀರ್ತಿಯು ಪುಲಿಕೇಶಿಯಂತೆಯೇ ಶಾಂತಿಪ್ರಿಯನಾಗಿದ್ದನು. ಅವನಿಗೆ ಸಾಮ್ರಾಟರು ಪಟ್ಟಕ್ಕೆ ಬಂದ ತರುಣದಲ್ಲಿಯೇ ಯುದ್ಧ ಅಪ್ರಿಯವಾಗಿತ್ತು.

ಇದನ್ನು ಸಂಧಾನದಿಂದ ಪರಿಹರಿಸಬಹುದಾದರೆ, ಶಸ್ತ್ರಪರೀಕ್ಷೆ ಏಕೆಂದು ಅವನು ಸಂತೋಷದಿಂದಲೇ ಆಪ್ಯಾಯಿಕನ ಬಳಿಗೆ ರಾಯಭಾರಿಯಾಗಿ ಹೋಗಲು ಒಪ್ಪಿಕೊಂಡನು. ಸಾಧ್ಯವಾದರೆ ಶತ್ರುವಾಗಿದ್ದ ಅವನನ್ನು ಮಿತ್ರನನ್ನಾಗಿ ಮಾಡಿಕೊಳ್ಳಬೇಕೆಂಬುದೇ ಅವನ ಅಭೀಷ್ಟವಾಗಿತ್ತು. ಅವನು ಸೂಕ್ತ ಪರಿವಾರ ದೊಡನೆ ಹೊರಟು ಆಪ್ಯಾಯಿಕನ ಶಿಬಿರವನ್ನು ತಲುಪಿ, ಆಪ್ಯಾಯಿಕನಿಗೆ ಪುಲಿ ಕೇಶಿಯ ಪತ್ರವನ್ನು ಒಪ್ಪಿಸಿದನು.

ಆಪ್ಯಾಯಿಕನು ಸಂಧಾನಾಪೇಕ್ಷಿಯಾದ ಪುಲಿಕೇಶಿಯ ರಾಯಭಾರಿ ಯನ್ನು ಕಂಡೇ ಪುಲಿಕೇಶಿಯು ತನಗೆ ಹೆದರಿರುವನೆಂದು ಊಹಿಸಿದನು. ತಾನು ಯುದ್ಧ ಘೋಷಿಸಿದುದನ್ನು ಕೇಳಿಯೇ ಅವನು ಹೆದರಿ ತನ್ನ ಬಳಿಗೆ ಶಾಂತಿಭಿಕ್ಷೆ ಗಾಗಿ ದೂತರನ್ನು ಅಟ್ಟಿರುವನೆಂದೂ, ರವಿಕೀರ್ತಿಯನ್ನು ನಿರ್ಲಕ್ಷ್ಯದಿಂದ ಕಂಡನು. ಇದರಿಂದ ರವಿಕೀರ್ತಿಯು ಸಿಟ್ಟಾಗಲಿಲ್ಲ. ಮುದುಕಿದರೆ ಕಾರ್ಯ ಹಾನಿಯಾಗುವುದೆಂದು ಅರಿತು, ಅಪಮಾನವನ್ನು ನುಂಗಿಕೊಂಡನು.

"ಸ್ವಸ್ತಿ॥ ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಸತ್ಯಾಶ್ರಯ, ಶ್ರೀಪೃಥ್ವೀವಲ್ಲಭ, ಶ್ರೀಮಚ್ಚಾಲುಕ್ಯರತ್ನ ಸಿಂಹಾಸನಾರೂಢರಾದ ಪುಲಿಕೇಶಿ ಸಾರ್ವಭೌಮರು ಸಾಮಂತಶ್ರೇಷ್ಠರಾದ ಆಪ್ಯಾಯಿಕರಿಗೆ ಬರೆಸಿದ ನಿರೂಪ ವೇನೆಂದರೆ,

ಇದುವರೆಗೆ ನೀವು ಚಾಲುಕ್ಯಸಾಮ್ರಾಜ್ಯದ ಅವಿಚ್ಛಿನ್ನ ಸ್ವಾಮಿನಿಷ್ಠ ಸೇವಕರಾಗಿ, ಅಮೋಘವಾದ ಸೇವೆಯನ್ನು ಸಲ್ಲಿಸಿದ್ದೀರಿ. ತೀರ್ಥರೂಪರು ನಿಮ್ಮನ್ನೂ, ಗೋವಿಂದರನ್ನೂ ಸಾಮ್ರಾಜ್ಯದ ಎರಡು ಕಂಬಗಳೆಂದು ತಿಳಿದಿ ದ್ದರು. ನಿಮ್ಮ ಸ್ವಾಮಿನಿಷ್ಠೆ ಶೌರ್ಯಪ್ರತಾಪಗಳು ಸಾಮ್ರಾಜ್ಯದ ರಕ್ಷಾಕವಚ ವಾಗಿದ್ದವು. ಆದರೆ ನೀವು ದ್ರೋಹಿಗಳ, ಸ್ವಾರ್ಥಸಾಧಕರ ಮಾತು ಕೇಳಿ ಕೊಂಡು ಸಾಮ್ರಾಜ್ಯದ ಮೇಲೆ ತಿರುಗಿ ಬಿದ್ದಿದ್ದೀರಿ; ನಮ್ಮ ನಿಮ್ಮ ಸ್ನೇಹ ವೃಕ್ಷಕ್ಕೆ ಕೊಡಲಿ ಪೆಟ್ಟು ಹಾಕಲು ನಿಶ್ಚಯಿಸಿದ್ದೀರಿ. ನಿಮ್ಮ ಈ ಆಕ್ರೋಶಕ್ಕೆ ನಾವು ಮಾಡಿದ ಅಪರಾಧವಾದರೂ ಏನು ? ನಾವು ಯಾವ ಅಪರಾಧ ಮಾಡಿದೆ ವೆಂದು ನಮ್ಮ ಮೇಲೆ ಶಸ್ತ್ರ ಹಿಡಿದಿದ್ದೀರೋ ತಿಳಿಯದಾಗಿದೆ ! ಈ ದಂಡನೆಗೆ ನಾವು ಸರ್ವಥಾ ಅರ್ಹರಲ್ಲ. ನಮಗೆ ಬೇಕಾಗಿರುವುದು ನಿಮ್ಮಂಥ ಸ್ವಾಮಿನಿಷ್ಠ ಸೇವಕರ ಮೈತ್ರಿಯೇ ಹೊರತು ವಿರೋಧವಲ್ಲ. ನೀವು ವಿವೇಕಿಗಳೂ, ವಿಚಾರ

ಪರರೂ ಆಗಿದ್ದೀರಿ. ಎಲ್ಲವನ್ನೂ ತಿಳಿದ ನೀವು ಸಾಮ್ರಾಜ್ಯದ ಮೇಲೆ ಕತ್ತಿ ಹಿರಿಯುವ ಮುನ್ನ ಈ ಸಂಧಿ ವಿಗ್ರಹಗಳನ್ನು ಮತ್ತೊಮ್ಮೆ ಪರಿಶೀಲಿಸಿ, ಯಾವ ನಿರ್ಧಾರವನ್ನೂ ಕೈಗೊಳ್ಳಬೇಕೆಂದು ಕೋರುತ್ತೇನೆ.

ಇಂತು ನಿಮ್ಮ ಸ್ನೇಹಾಕಾಂಕ್ಷಿ,
ಪುಲಿಕೇಶಿ."

ಆಪ್ಯಾಯಿಕನು ಈ ಪತ್ರವನ್ನು ಓದಿಕೊಂಡು ತಿರಸ್ಕಾರದ ನಗೆ ನಕ್ಕು, "ರಾಯಭಾರಿಗಳೇ, ನಿಮ್ಮ ಸಾಮ್ರಾಟರು, ಇತರರ ಕಣ್ಣಿಗೆ ಮಣ್ಣೆರಚಿದಂತೆ ನನ್ನ ಕಣ್ಣಿಗೆ ಮಣ್ಣೆರಚಲಾರರು! ಅವರು ಕಣ್ಣುಮುಚ್ಚಿಕೊಂಡು ಹಾಲು ಕುಡಿಯುವ ಬೆಕ್ಕಿನಂತೆ, ನಮ್ಮನ್ನು ಮೋಸಗೊಳಿಸಲು ಪ್ರಯತ್ನಿಸಿದ್ದಾರೆ. ಈ ಸವಿಮಾತುಗಳಿಗೆಲ್ಲಾ ನಾವು ಬೆರಗಾಗುವುದಿಲ್ಲ!" ಎಂದನು.

"ಸಾಮ್ರಾಟರು, ತಾವು ತ್ರಿಕರಣಪೂರ್ವಕವಾಗಿ ನಂಬದ ಯಾವ ಮಾತನ್ನೂ ಈ ಪತ್ರದಲ್ಲಿ ಬರೆದಿಲ್ಲ, ಪ್ರಭು! ಅವರಿಗೆ ಯಾರನ್ನೇ ಆಗಲಿ, ಮೋಸಪಡಿಸುವ ಇಚ್ಛೆ ಇಲ್ಲ!" ಎಂದ ರವಿಕೀರ್ತಿ ಗಂಭೀರವಾಗಿ.

"ಹಾಗಾದರೆ, ನನ್ನ ಬಗ್ಗೆ ಬರೆದಿರುವ ಈ ಎಲ್ಲ ಬಣ್ಣದ ಮಾತೇಕೆ? ಇವುಗಳಿಂದ ಮಂಗಳೇಶರ ಕೊಲೆಯ ಅಪರಾಧವನ್ನು ಮುಚ್ಚಿಡಲು ಪ್ರಯತ್ನಿಸಿದ್ದರೆ, ಅವರು ನನ್ನನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ, ಅಷ್ಟೇ!"

"ಅವರು ನಿಮ್ಮಿಂದ ಯಾವುದೇ ಸಂಗತಿಯನ್ನು ಮರೆಮಾಚಲು ಪ್ರಯತ್ನಿಸಿಲ್ಲ ಪ್ರಭು!"

"ಹಾಗಿದ್ದರೆ, ಎಲ್ಲ ಸಂಗತಿಯನ್ನೂ ಇದ್ದಂತೆ ಬರೆಯಬಾರದೇಕೆ? ಈ ಎಲ್ಲ ಸಂಗತಿಯನ್ನೂ ಇದ್ದುದು ಇದ್ದಂತೆ, ತಿಳಿಸಬಾರದೇಕೆ? ಮಂಗಳೇಶರ ಕೊಲೆಯಲ್ಲಿ ಅವರ ಪಾತ್ರವಿಲ್ಲದಿದ್ದರೆ ಆ ಸಂಗತಿಯನ್ನು ನನ್ನಿಂದ ಏಕೆ ಮುಚ್ಚಿಡುತ್ತಿದ್ದರು? ಈ ಅಪರಾಧವನ್ನು—ಒಂದು ದ್ರೋಹವನ್ನು—ಏಕೆ ಮುಕ್ತ ಕಂಠದಿಂದ ಒಪ್ಪಿಕೊಳ್ಳದೆ, ನಿರಪರಾಧದ ಸೋಗು ಹಾಕುತ್ತಿದ್ದರು? ಈ ಎಲ್ಲ ಕಪಟಾಚರಣೆಯಿಂದ ಅವರು ನಮ್ಮನ್ನು ಒಲಿಸಿಕೊಳ್ಳಲಾಶಿಸಿದ್ದರೆ, ಅದು ಅವರ ಮೂರ್ಖತನ, ಅಷ್ಟೆ!"

"ಮಂಗಳೇಶರ ಕೊಲೆಯಲ್ಲಿ ಸಾಮ್ರಾಟರ ಯಾವುದೇ ಪಾತ್ರವಿಲ್ಲ, ಶ್ರೀ[illegible] ಮಾತು ಸತ್ಯ. ಅವರು ನಿಮ್ಮಷ್ಟೇ

ನಿರಪರಾಧಿಯಾಗಿದ್ದಾರೆ !"

"ಏನು ? ಈ ಕಗ್ಗೊಲೆಯಲ್ಲಿ ಪುಲಿಕೇಶಿಯ ಪಾತ್ರವಿಲ್ಲವೆ ? ಆಶ್ಚರ್ಯ. ನಾನು ಕೇಳಿದಂತೆ, ಬಂಧುದ್ರೋಹಿಯಾದ ಪುಲಿಕೇಶಿಯೇ ಈ ಕೊಲೆಗೆ ಪ್ರೇರಕ ವ್ಯಕ್ತಿಯಂತೆ. ಅವರು ಸಿಂಹಾಸನ ತೊರೆದು, ಸಂನ್ಯಾಸಿಯಾಗಿ ಕ್ಷೇತ್ರಯಾತ್ರೆ ಕೈಗೊಳ್ಳುವ ಸೋಗಿನಲ್ಲಿ, ಮಂಗಳೇಶ ಹಾಗೂ ಕುಬ್ಜವಿಷ್ಣುವರ್ಧನರನ್ನು ವಂಚಿಸಿ, ಅವರು ಮಲಗಿರುವಾಗ, ಹೇಡಿಯಂತೆ ಕೊಲೆ ಮಾಡಿಸಿ, ಪವಿತ್ರವಾದ ಚಾಲುಕ್ಯ ಸಿಂಹಾಸನವನ್ನು ದುರಾಕ್ರಮಿಸಿಕೊಂಡಿದ್ದಾರೆಂದೇ ನಮ್ಮ ಭಾವನೆ. ನನ್ನಂತೆ ಇದೇ ಭಾವನೆ ತಳೆದಿರುವ ಸಾಮ್ರಾಜ್ಯನಿಷ್ಠ ಸೇವಕರಿಗೆ ರಾಜ್ಯದಲ್ಲಿ ಕೊರತೆ ಇಲ್ಲ."

"ನಿಮ್ಮ ಸ್ಪಷ್ಟ ಅಭಿಪ್ರಾಯಕ್ಕೆ ನಾನು ಋಣಿಯಾಗಿದ್ದೇನೆ. ಆದರೆ ನೀವು ತಿಳಿದಿರುವಂತೆ, ಅವರು ಬಂಧುದ್ರೋಹಿಯಲ್ಲ, ಸಿಂಹಾಸನದ ಸಲುವಾಗಿ ಆಸೆಪಟ್ಟವರೂ ಅಲ್ಲ."

"ಹಾಗಾದರೆ ಮಂಗಳೇಶರನ್ನು ಕೊಲೆ ಮಾಡಿದವರು ಯಾರು ?"

"ಬುದ್ಧರಾಜ !"

"ಏಕೆ ಕೊಲೆ ಮಾಡಿದರು ?"

"ಅದು ಇಂದಿಗೂ ಸಮಸ್ಯೆಯಾಗಿದೆ. ಮೊದಲಿನಿಂದಲೂ ಬುದ್ಧರಾಜರಿಗೂ ಮಂಗಳೇಶರಿಗೂ ಬದ್ಧವೈರವಿತ್ತು. ರೇವತೀ ದ್ವೀಪದ ಮೇಲೆ ದಂಡೆತ್ತಿ ಹೋಗಿ ಅವನ ಸಮಸ್ತವನ್ನೂ ಸೂರೆಮಾಡಿದುದಲ್ಲದೆ, ಅವನನ್ನು ರಾಜದ್ರೋಹಿ ಎಂದು ಶಿಕ್ಷಿಸಲು ನೋಡಿದರು. ಆದರೆ ಪುಲಿಕೇಶಿಯು ಆಸ್ಥಾನಿಕರ ಅಭೀಷ್ಟದಂತೆ, ಅವನಿಗೆ ಪ್ರಾಣದಾನ ಮಾಡಿದರು. ಅಲ್ಲಿಂದಾಚೆಗೆ ಅವರಿಬ್ಬರಲ್ಲಿ ಇದ್ದ ವೈರ, ಮತ್ತಷ್ಟು ಪ್ರಜ್ವಲಿಸಿ, ಕಡೆಗೆ ಮಂಗಳೇಶರ ಕೊಲೆಯಲ್ಲಿ ಪರ್ಯವಸಾನವಾಯಿತು. ಮಂಗಳೇಶರು ನ್ಯಾಯವಾಗಿ ಸಲ್ಲಬೇಕಾಗಿದ್ದ ಪುಲಿಕೇಶಿ ಸಾರ್ವಭೌಮರಿಗೆ ಸಿಂಹಾಸನವನ್ನು ಬಿಟ್ಟುಕೊಡದೆ ತಾವೇ ಆಕ್ರಮಿಸಿಕೊಳ್ಳಲು ಯತ್ನಿಸಿದಾಗ ಇದನ್ನು ನೋಡಿ ಸಹಿಸಲಾಗದೆ, ಅವರನ್ನು ಬುದ್ಧರಾಜ ಕೊಲೆ ಮಾಡಿದನು, ಎಂದ ಜನ ಹೇಳುತ್ತಿದ್ದಾರೆ."

"ಇದು ಕೇವಲ ನಿಮ್ಮ ಊಹೆಯಲ್ಲವಷ್ಟೇ ?"

"ಏಕೆ ?"

"ನಮಗೆ ಬುದ್ಧರಾಜನು ಮಂಗಳೇಶರನ್ನು ಏಕೆ ಕೊಲೆ ಮಾಡಿದನೆಂಬುದು ಮಂಗಳೇಶರ ನಿಕಟವರ್ತಿಗಳಿಂದ ತಿಳಿದಿದೆ ! ಇದರಲ್ಲಿ ಪುಲಿಕೇಶಿಯ ಕೈವಾಡವಿಲ್ಲದಿದ್ದರೆ, ಸಾಮಾನ್ಯ ವ್ಯಕ್ತಿಯೊಬ್ಬನು ಸಾಮ್ರಾಟರನ್ನು ಕೊಲೆ ಮಾಡಿದನೆಂದರೆ ಯಾರು ನಂಬಲು ಸಾಧ್ಯ ? ಪುಲಿಕೇಶಿಯೇ ಈ ಕೊಲೆಯ ಹತ್ಯಾಕಾರಿ. ಅವರ ಪ್ರೋತ್ಸಾಹ, ಪ್ರೇರಣೆಗಳಿಲ್ಲದಿದ್ದರೆ, ಬುದ್ಧರಾಜನಿಗೆ ಇಷ್ಟು ಧೈರ್ಯ ಹೇಗೆ ಬರುತ್ತಿತ್ತು ? ಈ ಮಾತಿಗೆ ಉತ್ತರ ಹೇಳಿ ?"

"ಆಪ್ಯಾಯಿಕರೇ, ನಿಮಗೆ ರಾಜಧಾನಿಯಲ್ಲಿ ನಡೆದ ಸಂಗತಿಗಳನ್ನು ಯಾರೋ ತಪ್ಪಾಗಿ ವರದಿಮಾಡಿದ್ದಾರೆ. ಈ ಕೊಲೆಯಲ್ಲಿ ಸಾಮ್ರಾಟರ ಯಾವುದೇ ಪಾತ್ರವಿಲ್ಲ !" ಎಂದು ಹೇಳಿ ನಡೆದ ಸಂಗತಿಯನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿದನು. ಎಲ್ಲವನ್ನೂ ಕೇಳಿಕೊಂಡ ಮೇಲೆ ಆಪ್ಯಾಯಿಕ,

"ರವಿಕೀರ್ತಿಗಳೇ, ನಾವು ರಾಜಧಾನಿಯಿಂದ ದೂರವಿದ್ದ ಮಾತ್ರಕ್ಕೆ ನಮಗೆ ಯಥಾರ್ಥ ಸಂಗತಿ ತಿಳಿಯದೆಂದು ತಿಳಿಯಬಾರದು ! ನಮ್ಮವರೇ ಆದ ನಂಬಿಕೆಯ ವ್ಯಕ್ತಿಗಳಿಂದ ನಮಗೆ ಎಲ್ಲವೂ ವರದಿಯಾಗಿದೆ. ಆದರೆ ಆ ಸಂಗತಿಗೂ, ನೀವು ಹೇಳುವ ಸಂಗತಿಗೂ ಬಹಳ ವ್ಯತ್ಯಾಸವಿದೆ ಎಂದು ನಾನು ವಿಷಾದದಿಂದಹೇಳಬೇಕಾಗಿದೆ !"

"ನೀವು ಹೇಳುವುದಾದರೂ ಏನು ?"

"ಈ ಕೊಲೆಗೆ ಕಾರಣರು ಪುಲಿಕೇಶಿಯೇ ಹೊರತು. ಬುದ್ಧರಾಜನಲ್ಲ."

"ಪುಲಿಕೇಶಿಯ ಮೇಲೆ ಕೊಲೆಯ ಆರೋಪ ಹೊರಿಸುವ ಮೊದಲು, ಮಂಗಳೇಶರ ಗೋಮುಖವ್ಯಾಘ್ರತನ ನಿಮಗೆ ತಿಳಿದಿರಬೇಕಷ್ಟೆ ?"

"ಮಂಗಳೇಶರೆಂದಿಗೂ ಗೋಮುಖವ್ಯಾಘ್ರರಾಗಿರಲಿಲ್ಲ. ಉಂಡ ಮನೆಗೆ ದ್ರೋಹ ಬಗೆಯಲಿಲ್ಲ. ಅವರು ಸಾಮ್ರಾಜ್ಯನಿಷ್ಠಸೇವಕರಾಗಿದ್ದರು. ಅವರು ಚಾಲುಕ್ಯಸಿಂಹಾಸನ ಅನ್ಯರ ಪಾಲಾಗದಂತೆ ರಕ್ಷಿಸಿದರು; ಅವರಿಲ್ಲದಿದ್ದರೆ ಚಾಲುಕ್ಯ ಸಾಮ್ರಾಜ್ಯ ಎಂದೋ ನಾಮಾವಶೇಷವಾಗುತ್ತಿತ್ತು ! ಎಂತಹ ಸ್ವಾಮಿನಿಷ್ಠ ಸೇವಕರಿಗೆ ಎಂತಹ ಶಿಕ್ಷೆ ?" ವಿಷಾದದಿಂದ ಹೇಳಿದ ಆಪ್ಯಾಯಿಕ.

"ನಿಮ್ಮ ಮಾತು ಕೇಳಿದರೆ ತುಂಬಾ ವ್ಯಥೆಯಾಗುತ್ತದೆ. ನೀವು ಇಷ್ಟು ವಿವೇಕಶಾಲಿಗಳಾಗಿದ್ದರೂ, ಸಾಮ್ರಾಜ್ಯದ ನಿಜವಾದ ಸೇವಕರು ಯಾರು ?

ದ್ರೋಹಿಗಳು ಯಾರು ಎಂಬುದನ್ನು ತಿಳಿಯದೆಹೋದಿರಲ್ಲಾ ಎಂದು. ನಿಮಗೆ ಮಂಗಳೇಶರ ನಿಜವಾದ ದ್ರೋಹಚಿಂತನೆ ತಿಳಿದಿದ್ದರೆ, ನೀವು ಎಂದಿಗೂ ಈ ಮಾತು ಹೇಳುತ್ತಿರಲಿಲ್ಲ."

ಅಷ್ಟೇ ವಿಷಾದದಿಂದ ರವಿಕೀರ್ತಿ ಹೇಳಿದ.

"ಮಂಗಳೇಶರು ಸಾಮ್ರಾಜ್ಯಕ್ಕೆ ಬಗೆದ ದ್ರೋಹವಾದರೂ ಏನು ?"

"ಪವಿತ್ರವಾದ ಚಾಲುಕ್ಯ ಸಿಂಹಾಸನವನ್ನು ನ್ಯಾಯವಾದ ಹಕ್ಕುದಾರರಿಂದ ವಂಚಿಸಲು ಯತ್ನಿಸಿದರು."

"ಇಲ್ಲ, ಚಾಲುಕ್ಯ ಸಿಂಹಾಸನ ಪುಲಿಕೇಶಿ ಕುಬ್ಜ ವಿಷ್ಣುವರ್ಧನರ ಸ್ವಯೂಥ ಕಲಹದ ಬೇಗೆಯಲ್ಲಿ ಬೆಂದು ಹೋಗುವುದನ್ನು ತಪ್ಪಿಸಿದರು; ಸಾಮ್ರಾಜ್ಯ ಕ್ಷೋಭೆಯನ್ನು ತಪ್ಪಿಸಿದರು."

"ಮಂಗಳೇಶರು ಇತರರ ಕಣ್ಣಿಗೆ ಮಣ್ಣೆರಚಿದಂತೆ, ನಿಮ್ಮ ಕಣ್ಣಿಗೂ ಸರಿಯಾದ ಮಂಕುಬೂದಿ ಎರಚಿದ್ದಾರೆ ! ಅವರು ಸಾಮ್ರಾಜ್ಯನಿಷ್ಠ ಸೇವಕರಾಗಿದ್ದರೆ,ತಮ್ಮದಲ್ಲದ ಸಿಂಹಾಸನವನ್ನು ಪುಲಿಕೇಶಿ ದೊರೆಗಳು ಪ್ರಾಪ್ತವಯಸ್ಕರಾಗುತ್ತಲೇ ಒಪ್ಪಿಸದೆ, ತಾವೇ ರಾಜಪ್ರತಿನಿಧಿಗಳಾಗಿ ಮುಂದುವರೆಯಲು ಏಕೆ ಇಚ್ಛಿಸಿದರು ? ಅವರಿಗೆ ಬೇಕಾಗಿದ್ದುದು—ಸೋದರರ ನಡುವೆ ಉಂಟಾದ ಅಂತಃಕಲಹವನ್ನು ತಪ್ಪಿಸುವುದಲ್ಲ; ಅದಕ್ಕೆ ಆಜ್ಯ ಹೊಯ್ದು ಇನ್ನಷ್ಟು ಪ್ರಜ್ವಲಿಸುವಂತೆ ಮಾಡಿ, ಸಿಂಹಾಸನವನ್ನು ತಾವೇ ದಕ್ಕಿಸಿಕೊಳ್ಳುವುದು. ಇಲ್ಲದಿದ್ದರೆ ಅವರು ಅನ್ಯೋನ್ಯವಾಗಿದ್ದ ಸಹೋದರರ ನಡುವೆ ಭೇದವನ್ನು ಕಲ್ಪಿಸುತ್ತಿರಲಿಲ್ಲ. ಅವರ ದ್ರೋಹವೇ ಅವರಿಗೆ ಮೃತ್ಯುವಾಯಿತು."

"ನೀವು ಹೇಳುವ ಸಂಗತಿ, ಹೊರಿಸುತ್ತಿಸುವ ಅಪರಾಧ ಕೇವಲ ನಿಮ್ಮ ಸ್ವಕಲ್ಪನೆ ; ಊಹೆಯ ಶಿಶು. ನನಗೆ ಮಂಗಳೇಶರ ಪರಿಚಯವಿದೆ. ಅವರು ಎಂತಹ ಧರ್ಮಿಷ್ಠರೆಂಬುದೂ ತಿಳಿದಿದೆ. ಅವರು ಧರ್ಮಿಷ್ಠರಲ್ಲದಿದ್ದರೆ—ಆ ಶೇಷನಾರಾಯಣನ ದೇಗುಲದ ನಿರ್ಮಾಣಕ್ಕೆ ತೊಡಗುತ್ತಿರಲಿಲ್ಲ. ಸ್ವಾಮಿನಿಷ್ಠ ಸೇವಕರಲ್ಲದಿದ್ದರೆ, ಶ್ರೀ ಮಕುಟೇಶ್ವರನಿಗೆ ಉಂಬಳಿಹಾಕಲು ತನ್ನ ಮಲತಾಯಿಯ ಅಪ್ಪಣೆ ತೆಗೆದುಕೊಳ್ಳುತ್ತಿರಲಿಲ್ಲ. ನೀವು ಮಾಡುವ ಆರೋಪ ಅರ್ಥಶೂನ್ಯವೆನ್ನಲು ಇವುಗಳಿಗಿಂತ ಬೇರೆ ಸಾಕ್ಷಿ ಬೇಕೆ ?"

"ಆಪ್ಯಾಯಿಕರೇ, ಮಂಗಳೇಶರು ಮಹತ್ವಾಕಾಂಕ್ಷಿಗಳಾದ, ರಾಜತಂತ್ರ

ನಿಪುಣರು. ಅವರಿಗೆ ಯಾರನ್ನು ಹೇಗೆ ವಂಚಿಸಬೇಕೆಂಬುದು ತಿಳಿದಿತ್ತು. ಅಂತಲೇ ನಿಮ್ಮಂಥವರನ್ನು ಅವರು ಮರಳುಮಾಡಿದ್ದಾರೆ. ವಾಸ್ತವವಾಗಿ ಅವರಲ್ಲಿ ಧರ್ಮಶ್ರದ್ಧೆಯಾಗಲೀ, ಸಾಮ್ರಾಜ್ಯನಿಷ್ಠೆಯಾಗಲೀ ಎಳ್ಳಷ್ಟೂ ಇರಲಿಲ್ಲ. ಇದೆಲ್ಲ ತೋರಿಕೆಗಾಗಿ. ಅವನ್ನೇ ನೀವು ನಿಜವೆಂದು ಭ್ರಮಿಸಿದ್ದೀರಿ. ಆದರೆ ನಮಗೆ ಅವರ ನಿಜವಾದ ಸ್ವರೂಪ ತಿಳಿದಿದೆ. ಅವರು ಕ್ರೂರಿ, ಧರ್ಮಭ್ರಷ್ಟ, ಭಾಷ್ಪದ್ರೋಹಿ; ಎಲ್ಲಕ್ಕಿಂತ ಹೆಚ್ಚಾಗಿ ಸಾಮ್ರಾಜ್ಯದ್ರೋಹಿ, ಉಂಡ ಮನೆಗೆ ಎರಡೆಣಿಸುವ ಕೃತಘ್ನರಾಗಿದ್ದರು. ಅವರ ದ್ರೋಹಚಿಂತನೆಗೆ ಬುದ್ಧರಾಜನ ಕೈಲಿ ಅನುಭವಿಸಿದ ಶಿಕ್ಷೆಯೇ ಸಾಕು."

"ರಾಯಭಾರಿಗಳೇ, ನೀವು ನನ್ನ ಸಮ್ಮುಖದಲ್ಲೇ ನನ್ನ ಮಿತ್ರನ ದೂಷಣೆ ಮಾಡುತ್ತಿದ್ದೀರಿ. ಇದನ್ನು ನಾನು ಕೇಳಲಾರೆ. ಈ ಎಲ್ಲ ಕಟ್ಟುಕಥೆಯನ್ನು ಸಾಕುಮಾಡಿ. ನೀವು ಈ ಬಗೆಯ ಮಾತುಗಳಿಂದ ಇತರರನ್ನು ವಂಚಿಸಿದಂತೆ ನಮ್ಮನ್ನು ವಂಚಿಸಲಾರಿರಿ." ಕೆರಳಿ ಹೇಳಿದ ಆಪ್ಯಾಯಿಕ.

"ಪ್ರಭು, ಕಟ್ಟುಕಥೆಯನ್ನು ಹೇಳಿ ನಾವು ಯಾರನ್ನೂ ವಂಚಿಸಬೇಕಾಗಿಲ್ಲ. ಇದ್ದ ಸಂಗತಿಯನ್ನಷ್ಟೇ ವರದಿಮಾಡಿದ್ದೇನೆ. ಸತ್ಯ ನಮಗಿಂತಲೂ ನಿಮಗಿಂತಲೂ ದೊಡ್ಡದು. ನಾವು ಮರೆಮಾಚಲೆತ್ನಿಸಿದರೂ, ಸತ್ಯಸೂರ್ಯನ ಪ್ರಭೆಯನ್ನು ಲೋಕದಿಂದ ಮುಚ್ಚಿಡಲಾರೆವು ! ಇಂದಲ್ಲ ನಾಳೆ ನಿಮಗೆ ನಡೆದ ಸಂಗತಿ ತಿಳಿದು ಪಶ್ಚಾತ್ತಾಪವಾಗಬಹುದು. ಈಗ ನೀವು ವೃಥಾಕಾರಣಕ್ಕಾಗಿ ಸಾಮ್ರಾಟರ ಮೇಲೆ ಕತ್ತಿ ಎತ್ತಿದ್ದೀರಿ. ಇದು ಸರಿಯೇ ತಪ್ಪೇ ಎನ್ನುವ ಚರ್ಚೆಗಾಗಿ ನಾನು ಇಲ್ಲಿಗೆ ಬರಲಿಲ್ಲ. ನೀವು ನಮ್ಮಂತೆಯೇ ಸಾಮ್ರಾಜ್ಯದ ಹಿತೈಷಿಗಳು, ಶ್ರೇಯಾಕಾಂಕ್ಷಿಗಳು ಎಂಬ ಕಾರಣದಿಂದ ಇಲ್ಲಿಗೆ ಬಂದಿದ್ದೇವೆ. ಇಷ್ಟೆಲ್ಲಾ ಮಾತುಕತೆಯಾದ ಮೇಲೂ ನೀವು ನಮ್ಮ ಸಾಮ್ರಾಟರ ನಿಷ್ಠೆಯನ್ನೂ, ಸ್ನೇಹವನ್ನೂ ಸಂದೇಹಿಸುವುದಾದರೆ ನಾವೇನೂ ಮಾಡಲಾರೆವು. ವೃಥಾ ನಿರಪರಾಧಿಗಳ ರಕ್ತ ಹರಿಸುವುದನ್ನು ತಪ್ಪಿಸಲು ನಾವು ಸಂಧಾನಾಕಾಂಕ್ಷಿಗಳಾಗಿದ್ದೇವೆಯೇ ಹೊರತು, ನಿಮಗೆ ಹೆದರಿಯಲ್ಲ. ಈ ಮಾತನ್ನು ನಾನು ತಮಗೆ ಸ್ಪಷ್ಟಪಡಿಸಲೇಬೇಕು. ಇಷ್ಟರ ಮೇಲೆ ನಿಮ್ಮ ಇಷ್ಟದಂತೆ ನಡೆಯಲಿ."

"ರವಿಕೀರ್ತಿಗಳೇ, ನಿಮ್ಮ ಸರಳೋಕ್ತಿ ನಮ್ಮನ್ನು ಚಕಿತಗೊಳಿಸಿದೆ. ನೀವು

ಹೇಳುವಂತೆ ನಮಗೂ ಈ ಯುದ್ಧ ಪ್ರಿಯವಲ್ಲ. ಆದರೆ ನಾವು ಈ ಯುದ್ಧ ಘೋಷಿಸಿರುವುದು ಮಂಗಳೇಶರ ಕೊಲೆಪಾತಕರ ಮೇಲೆ ಸೇಡು ಬಗೆಯಲು; ಅವರನ್ನು ಅನ್ಯಾಯದಿಂದ ಕೊಂದ ಕೊಲೆಪಾತಕರು ಯಾರೇ ಇರಲಿ ಶಿಕ್ಷಿಸಲು. ನೀವು ಈ ಆರೋಪದಲ್ಲಿ ಪುಲಿಕೇಶಿಯ ಪಾತ್ರವಿಲ್ಲವೆಂದು ಹೇಳುತ್ತಿರುವಿರಿ. ಹಾಗಾದರೆ ನಮಗೆ ಬಂದ ವರದಿಯು ಸುಳ್ಳೆ ?"

"ಪ್ರಭು, ಪುಲಿಕೇಶಿಗಾಗದ ಯಾರೋ ತಮಗೆ ಸುಳ್ಳುವರದಿ ಕೊಟ್ಟಿದ್ದಾರೆ. ಆ ಸ್ವಾರ್ಥಸಾಧಕರ ಮಾತನ್ನು ತಾವು ನಂಬಬಾರದು."

ಈ ಮಾತನ್ನು ಕೂಲಂಕಷವಾಗಿ ವಿಚಾರಮಾಡುವವನಂತೆ ಆಪ್ಪಾಯಿಕನು ವಿಚಾರಮಗ್ನನಾಗಿ ಕುಳಿತನು. ಚಣಕಾಲ ಮೌನ ಆವರಿಸಿತು. ಮೌನವನ್ನು ಮುರಿಯುತ್ತಾ ರವಿಕೀರ್ತಿಯೇ ಹೇಳಿದನು :

"ಪ್ರಭು, ಇಷ್ಟೆಲ್ಲ ಸಂಗತಿಯನ್ನು ಮನಬಿಚ್ಚಿ ಚರ್ಚಿಸಿದ ನಾವು ಈ ಒಂದು ವಿಷಯವನ್ನು ಏಕೆ ಗೋಪ್ಯವಾಗಿ ಇರಿಸಬೇಕು. ಈ ಎಲ್ಲ ಸುಳ್ಳು ವರದಿಯನ್ನು ತಮಗೆ ಕೊಟ್ಟು ಸಾಮ್ರಾಟರ ಬಗ್ಗೆ ಮನಸ್ಸನ್ನು ಕೆಡಿಸಿದ ಆ ದ್ರೋಹಿ ಯಾರೆಂದು ತಿಳಿಯಬಹುದೆ ?"

"ಅದನ್ನು ಹೇಳಲು ನನ್ನ ಅಭ್ಯಂತರವಿಲ್ಲ. ಅವರು ಬೇರಾರೂ ಅಲ್ಲ, ಮಂಗಳೇಶರ ವಿಶ್ವಾಸಕ್ಕೆ ಪಾತ್ರರಾಗಿದ್ದ ರಾಹಪ್ಪಯ್ಯ."

"ನಾನೂ ಇದನ್ನೇ ಊಹಿಸಿದ್ದೆ ಪ್ರಭು. ರಾಹಪ್ಪಯ್ಯನಂತಹ ಚತುರ ವ್ಯಕ್ತಿಗಳಿಲ್ಲದಿದ್ದರೆ, ತಮ್ಮಂತಹವರನ್ನು ಮೋಸಗೊಳಿಸಲು ಸಾಧ್ಯವೇ ಇಲ್ಲ. ಆ ದುರುಳನ ಮಾತನ್ನು ತಾವು ನಂಬಬಾರದು; ಅವನು ಮಂಗಳೇಶರ ಪ್ರತಿಯೊಂದು ದ್ರೋಹಕಾರ್ಯಗಳಲ್ಲೂ, ಕಪಟಾಚರಣೆಯಲ್ಲೂ ಸಂಗಡಿಗನಾಗಿದ್ದನು. ಇಂದು ತನ್ನ ಒಡೆಯನಿಲ್ಲದ ಮೇಲೆ, ನಮ್ಮ ಮೇಲೆ ಸೇಡು ಬಗೆಯಲು ನಿಮ್ಮಂತಹ ಸ್ವಾಮಿನಿಷ್ಠಸೇವಕರನ್ನು ಎತ್ತಿಕಟ್ಟುವ ಸನ್ನಾಹದಲ್ಲಿದ್ದಾನೆ—ಆ ದ್ರೋಹಿಯ ಮಾತನ್ನು ನೀವು ನಂಬಬಾರದು."

"ರಾಹಪ್ಪಯ್ಯನ ನಿಷ್ಠೆಯ ಬಗ್ಗೆ ಸಂಶಯವಿದ್ದರೂ, ಅವನಿಗೆ ಮಂಗಳೇಶನಲ್ಲಿದ್ದ ನಿಷ್ಠೆ ಲೋಕೋತ್ತರವಾದುದೆಂದು ಎಲ್ಲರೂ ಒಪ್ಪಲೇಬೇಕು. ಮಂಗಳೇಶರು ಸಾಯುವಾಗ ತಮ್ಮನ್ನು ಕೊಲೆ ಮಾಡಿದ ಹತ್ಯಾಕಾರಿ ಯಾರೆಂದು ಸ್ಪಷ್ಟವಾಗಿ ತಿಳಿಸಿದರಂತೆ. ಅವರ ಮಾತನ್ನು ಸುಳ್ಳೆಂದು ಹೇಳಲು ಬರುವುದೆ ?"

"ನಿಮಗೆ ಇಷ್ಟು ಹೇಳಿದಮೇಲೂ ನಮ್ಮ ಮಾತಿನಲ್ಲಿ ನಂಬಿಕೆ ಇಲ್ಲವಾದರೆ ಅದು ನಮ್ಮ ದುರ್ದೈವ. ಇದಕ್ಕಿಂತಲೂ ಹೆಚ್ಚಿಗೆ ನಾನು ಏನೂ ಹೇಳಲಾರೆ. ಸಾಮ್ರಾಜ್ಯದ ಭವಿಷ್ಯದಲ್ಲಿ ಹೇಗಿದೆಯೋ ಅಂತಾಗಲಿ, ಅದನ್ನು ಯಾರೂ ತಪ್ಪಿಸಲಾರರು."

"ರವಿಕೀರ್ತಿಗಳೇ, ನೀವು ನಿಮ್ಮ ಕಡೆಯ ಮಾತನ್ನು ಹೇಳಿದ ಮೇಲೆ ನಾವೂ ನಮ್ಮ ಕಡೆಯ ಮಾತನ್ನು ಹೇಳಲೇ ಬೇಕು. ಅದನ್ನು ಹೇಳುವ ಮುನ್ನ ಒಂದು ಸಂದೇಹ ಉಳಿದಿದೆ : ಹಿಂದೆ ಸಾಮ್ರಾಜ್ಯದ ಮೇಲೆ ಸ್ವಾಮಿ ರಾಜ ಬುದ್ಧರಾಜರು ದಂಗೆ ಎದ್ದ ಮಾತ್ರಕ್ಕೆ ಅವರನ್ನು ಶಿಕ್ಷಿಸಲು ಮಂಗಳೇಶರೂ, ಪುಲಿಕೇಶಿಗಳೂ ಉತ್ಸುಕರಾದರು. ಅವರ ಮೇಲೆ ಸೈನ್ಯ ಸಮೇತ ಹೊರಟು ದಾಳಿ ಇಟ್ಟರು. ಆದರೆ ನಾನು ದಂಗೆ ಎದ್ದರೂ ನನ್ನನ್ನು ಶಿಕ್ಷಿಸಲು ಅವರು ದಂಡೆತ್ತಿ ಬರದೆ, ಈ ಸಂಧಾನದ ಪ್ರಯತ್ನವೇಕೆ? ಇದರಲ್ಲಿ ಯಾವುದೋ ಮೋಸವಿರುವಂತೆ ಭಾಸವಾಗುತ್ತದೆ."

"ಇದರಲ್ಲಿ ಯಾವ ಮೋಸವೂ ಇಲ್ಲ ಪ್ರಭು ; ಎಲ್ಲವೂ ಸುಸ್ಪಷ್ಟವಾಗಿಯೇ ಇದೆ. ನಿಮ್ಮ ಮೇಲೆ ನಮ್ಮ ಸಾಮ್ರಾಟರಿಗೆ ಯುದ್ಧಕ್ಕೆ ಬರಲು ಇಷ್ಟವಿಲ್ಲ. ಇದಕ್ಕೆ ಕಾರಣಗಳು ಹಲವಾರು ; ಮುಖ್ಯಕಾರಣ ನೀವು ಸಾಮ್ರಾಜ್ಯದ ಹಿರಿಯ ಸ್ವಾಮಿನಿಷ್ಠ ಸೇವಕರಾಗಿದ್ದೀರಿ. ಸಾಮ್ರಾಜ್ಯಕ್ಕೆ ನಿಮ್ಮಂತಹವರ ಸೇವೆ ಅಮೂಲ್ಯವಾಗಿದೆ. ಇನ್ನೊಂದು ಕಾರಣವೆಂದರೆ ನೀವು ತಪ್ಪುಕಲ್ಪನೆಯಿಂದ ಸಾಮ್ರಾಟರಮೇಲೆ ದಂಗೆ ಎದ್ದಿದ್ದೀರಿ. ಇದು ಕ್ಷಮಾರ್ಹವಾದ ಸಂಗತಿ. ಮೂರನೆಯ ಕಾರಣ : ತಾವು ಸಿಂಹಾಸನವನ್ನೇರಿದ ತರುಣದಲ್ಲೇ ವೃಥಾ ಕಾರಣವಾಗಿ ನಿರಪರಾಧಿಗಳ ರಕ್ತಪಾತವಾಗುವುದು ಸಾಮ್ರಾಟರಿಗೆ ಇಷ್ಟವಿಲ್ಲ. ಇಲ್ಲದಿದ್ದರೆ, ಅವರು ಎಂದೂ ಸಂಧಾನಾಪೇಕ್ಷಿಯಾಗುತ್ತಿರಲಿಲ್ಲ. ಕತ್ತಿಯಲ್ಲಿ ಹೇಳಬೇಕಾದ ಉತ್ತರವನ್ನು ಬಾಯಿಮಾತಿನಿಂದ ಹೇಳುತ್ತಿರಲಿಲ್ಲ."

"ಹಾಗಿದ್ದರೆ, ಬಾಯಿಮಾತಿನಲ್ಲಿ ಉತ್ತರ ಹೇಳಲು ನಾವು ಅಳ್ಳೆದೆಯವರಲ್ಲ; ಶಕ್ತಿ ಇದ್ದರೆ, ಧರ್ಮದ ರಕ್ಷೆ ಇದ್ದರೆ, ಕತ್ತಿಹಿಡಿದು ಯುದ್ಧಕ್ಕೆ ಬರಲು ನಾನು ಹೇಳುತ್ತೇನೆ."

"ಇದೇ ನಿಮ್ಮ ಕೊನೆಯ ತೀರ್ಮಾನವೇ ?"

"ಹೌದು" ಎಂದು ಹೇಳಿ ಗರ್ವಿಷ್ಠನಾದ ಆಪ್ಯಾಯಿಕ ಸಮರಾಹ್ವನವನ್ನೇ ಕೊಟ್ಟನು.

ರವಿಕೀರ್ತಿಗೆ ತನ್ನ ರಾಯಭಾರ ನಿರರ್ಥಕವಾದುದಕ್ಕೆ ಅಸಮಾಧಾನವಾದರೂ, ಆಪ್ಯಾಯಿಕನು ಹೇಳಿದ್ದ ಮಾತು ಅವನ ಮನಸ್ಸಿನಮೇಲೆ ಪರಿಣಾಮ ಉಂಟುಮಾಡಿತು. ಸಾಮ್ರಾಟರಿಗೆ ಧರ್ಮದ ರಕ್ಷೆ ಇದ್ದರೆ, ಅವರು ಸತ್ಯಾಶ್ರಯರಾಗಿದ್ದರೆ ಅದೇ ಅವರನ್ನು ಕಾಪಾಡುತ್ತದೆ. ಸಾಮ್ರಾಜ್ಯವನ್ನು ಉಳಿಸುತ್ತದೆ ಎಂದುಕೊಂಡು ಅಲ್ಲಿಂದ ಬೀಳ್ಕೊಂಡು ಹೊರಟನು.

ಆದರೆ ರವಿಕೀರ್ತಿಗೆ ರಾಜಧಾನಿಯಿಂದ ಹೊರಡುವಾಗ ಒಂದು ವಿಚಾರ ಮಿಂಚಿನಂತೆ ಹೊಳೆಯಿತು. ಹೇಗೂ ರಾಯಭಾರಿಯಾಗಿ ಬಂದುದ್ದಾಗಿದೆ. ಆಪ್ಯಾಯಿಕನು ಯುದ್ಧದ ಆಹ್ವಾನ ಕೊಟ್ಟಿದ್ದಾನೆ. ಸತ್ಯಸಂಗತಿಯನ್ನು ಗೋವಿಂದನಿಗೆ ತಿಳಿಸಿದರೆ, ಅವನಾದರೂ ವಿವೇಕದಿಂದ ವರ್ತಿಸಬಹುದು. ಗೆಳೆಯ ಆಪ್ಯಾಯಿಕನಿಗೆ ಬುದ್ಧಿ ಹೇಳಿ ಈ ಯುದ್ಧವನ್ನು ತಪ್ಪಿಸಬಹುದೆಂದು ಆಲೋಚಿಸಿ, ಗೋವಿಂದನ ಬಳಿಗೆ ಹೊರಟನು.

ಮಾಂಡಲೇಶ್ವರ ಗೋವಿಂದನು ರವಿಕೀರ್ತಿಯನ್ನು ಹೆಚ್ಚು ಗೌರವದಿಂದ ಸ್ವಾಗತಿಸಿ, ಕ್ಷೇಮಸಮಾಚಾರ ವಿಚಾರಿಸಿದನು. ಅನಂತರ ನೇರವಿಷಯ ಪ್ರಸ್ತಾಪಕ್ಕೆ ಬಂದನು.

"ರಾಯಭಾರಿಗಳೇ, ನೀವು ಈಗ ಆಪ್ಯಾಯಿಕನ ಕಡೆಯಿಂದ ಬಂದಂತಿದೆ" ಎಂದನು.

"ಹೌದು. ನಿಮಗೆ ಹೇಗೆ ತಿಳಿಯಿತು ?" ಆಶ್ಚರ್ಯದಿಂದ ರವಿಕೀರ್ತಿ ಕೇಳಿದ.

"ನಮಗೆ ದೂತರ ಮೂಲಕ ಆಪ್ಯಾಯಿಕರು ಎಲ್ಲ ಸಂಗತಿಯನ್ನು ತಿಳಿಸಿದ್ದಾರೆ."

ರವಿಕೀರ್ತಿಯು ನಡೆದ ಎಲ್ಲಾ ಸಂಗತಿಯನ್ನು ತಿಳಿಸುತ್ತಾ,

"ಹೌದು ಪ್ರಭು, ನಾವು ಸ್ನೇಹಾಕಾಂಕ್ಷಿಗಳಾಗಿ ಬಂದರೆ, ಆಪ್ಯಾಯಿಕರು ಅದನ್ನು ತಿರಸ್ಕರಿಸಿ, ಯುದ್ಧದ ಆಹ್ವಾನವನ್ನೇ ಇತ್ತಿದ್ದಾರೆ. ಈ ಬಗ್ಗೆ ನಮಗೆ ತುಂಬಾ ನಿರಾಶೆಯುಂಟಾಯಿತು. ಈ ಎಲ್ಲಾ ಸಂಗತಿಯನ್ನು ಸಾಮ್ರಾಜ್ಯನಿಷ್ಠ

ಸೇವಕರಾದ ನಿಮ್ಮೊಡನೆ ಹೇಳಿಕೊಳ್ಳಲು ಬಂದೆ ; ನಿಮ್ಮ ಪ್ರಯತ್ನದಿಂದಲಾದರೂ ಈ ಯುದ್ಧ ನಿಲ್ಲಲೆಂದು ನಮ್ಮ ಆಶಯ."

"ನಿಮ್ಮ ಸ್ಪಷ್ಟೋಕ್ತಿಗಳಿಗೆ ನಾನು ಋಣಿಯಾಗಿದ್ದೇನೆ. ನಾನೂ ಅಷ್ಟೇ ಸ್ಪಷ್ಟವಾಗಿ ಮಾತನಾಡುತ್ತೇನೆ. ನನಗೆ ಸಾಮ್ರಾಟ ಪುಲಿಕೇಶಿಯ ಬಗ್ಗೆ ಯಾವುದೇ ಹಗೆತನವಿಲ್ಲ. ಆದರೆ ನಾನೂ ಅಪ್ಪಾಯಿಕನೂ ಆಪ್ತಮಿತ್ರರಾಗಿದ್ದೇವೆ. ನಮ್ಮನ್ನು ಎರಡು ದೇಹ ಒಂದು ಮನಸ್ಸೆಂದು ಕರೆದರೂ ಸರಿ. ನನ್ನ ಗೆಳೆಯನೂ, ಹಿತೈಷಿಯೂ, ನನ್ನಷ್ಟೇ ಸಾಮ್ರಾಜ್ಯನಿಷ್ಠಸೇವಕನೂ, ಆಗಿರುವ ಅಪ್ಪಾಯಿಕನಿಗೆ ನಾನು ಯಾವುದೇ ಕಾರಣಕ್ಕೆ ದ್ರೋಹ ಬಗೆಯಲಾರೆ. ಒಬ್ಬರ ಸಲುವಾಗಿ ಮತ್ತೊಬ್ಬರು ಯಾವ ತ್ಯಾಗಕ್ಕೂ ಸಿದ್ಧವಿದ್ದೇವೆ. ಈಗ ತಿಳಿದೋ ತಿಳಿಯದೆಯೋ, ಅಪ್ಪಾಯಿಕನು ಪುಲಿಕೇಶಿಯ ಮೇಲೆ ದಂಗೆ ಎದ್ದು, ದಂಡೆತ್ತಿ ಹೊರಟಿದ್ದಾನೆ. ಈ ಸಮಯದಲ್ಲಿ ಗೆಳೆಯನಾಗಿ ನಾನು ಅವನಿಗೆ ನೆರವಾಗುತ್ತಿದ್ದೇನೆ. ಇಲ್ಲಿ ನಾನು ಧರ್ಮಾಧರ್ಮದ ಪ್ರಶ್ನೆಗಿಂತಲೂ, ಸ್ನೇಹ ಧರ್ಮವನ್ನು ಮಾತ್ರ ನೆನೆಯುತ್ತಿದ್ದೇನೆ. ಅಂದಮೇಲೆ ಮೊದಲು ಗೆಳೆಯನಿಗೆ ನೆರವಾಗುವ ಆಶ್ವಾಸನವಿತ್ತು ಈಗ ಆಪತ್ತಿನಲ್ಲಿ ಕೈಬಿಡುವುದು ಸ್ನೇಹಧರ್ಮವಲ್ಲ. ನನ್ನ ಗೆಳೆಯನಿಗೆ ಬಂದ ಸ್ಥಿತಿಯನ್ನು ನಾನು ಸ್ವಾಗತಿಸುತ್ತೇನೆ. ಯುದ್ಧವಾದರೆ ಯುದ್ಧ; ಸಂಧಾನವಾದರೆ ಸಂಧಾನ. ಇದರಲ್ಲಿ ನನ್ನ ಅಭಿಪ್ರಾಯಕ್ಕೆ ಎಳ್ಳಷ್ಟೂ ಬೆಲೆಯಿಲ್ಲ" ಎಂದನು.

"ನಿಮ್ಮಂಥ ಸ್ನೇಹಿತರನ್ನು ಪಡೆದ ಅಪ್ಪಾಯಿಕರು ಧನ್ಯರು ! ನಿಮ್ಮ ಸ್ನೇಹ, ನಿಷ್ಠೆಗಳು ಇಂದು ಸಾಮ್ರಾಜ್ಯಕ್ಕೂ ಸಾಮ್ರಾಟರಿಗೂ ಅಮೂಲ್ಯವಾಗಿವೆ ಎಂದೇ ನಾನು ನಿಮ್ಮ ಬಳಿ ಸಂಧಾನಾಪೇಕ್ಷೆಗಾಗಿ ಬಂದಿದ್ದೇನೆ. ನೀವು ಗೆಳೆಯನಾಗಿ ಹೇಳಿದ ಮಾತು ಮೆಚ್ಚಿದ್ದೇನೆ. ಆದರೆ ಸಾಮ್ರಾಜ್ಯದ ಹಿತೈಷಿಯಾಗಿ, ಸ್ವಾಮಿನಿಷ್ಠಸೇವಕರಾಗಿ ಹೇಳುವ ಮಾತನ್ನು ಕೇಳಲು ಅಷ್ಟೇ ಕಾತರನಾಗಿದ್ದೇನೆ. ನಿಮಗೆ ನಾನು ಕೇಳುವ ಪ್ರಶ್ನೆ : ನೀವು ಕಟ್ಟಿ ನಿಲ್ಲಿಸಿದ ಸಾಮ್ರಾಜ್ಯ ನಿಮ್ಮ ಕಣ್ಣೆದುರಿನಲ್ಲೇ ಮಣ್ಣಿನ ಮನೆಯಂತೆ ಕುಸಿಯುವುದನ್ನು ನೋಡಲೆಳಸುವಿರಾ ? ಅಥವಾ ಅದನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸಲೆತ್ನಿಸುವಿರಾ ?" ಈ ಮಾತನ್ನು ತೂಗಿ ತೂಗಿ ಹೇಳಿದ ರವಿಕೀರ್ತಿ.

"ನಾವಾರೂ ಸಾಮ್ರಾಜ್ಯನಾಶವನ್ನು ಹಾರೈಸುವುದಿಲ್ಲ. ನಮಗೆ ಬೇಕಾಗಿರುವುದು ಈಗ ಅಪರಾಧಿಗಳಿಗೆ ತಕ್ಕ ದಂಡನೆ. ಅನ್ಯಾಯದಿಂದ ಸಿಂಹಾಸನವನ್ನು ದುರಾಕ್ರಮಿಸಿದವರಿಗೆ ಶಿಕ್ಷೆ; ಪಾಪಿಗೆ ತಕ್ಕ ಪ್ರಾಯಶ್ಚಿತ್ತ."

"ನಿಮ್ಮ ಕಣ್ಣಿಗೆ ಧರ್ಮಾವತಾರರಾದ ಸಾಮ್ರಾಟ ಪುಲಿಕೇಶಿ ಸಾರ್ವಭೌಮರು ಪಾಪಿಗಳಾದರೆ ? ಕೊಲೆಪಾತಕರಾದರೆ ?"

"ಹಾಗಾದರೆ, ಅವರು ಮಂಗಳೇಶರನ್ನು ಮೋಸದಿಂದ ಕೊಂದು ಸಿಂಹಾಸನವನ್ನು ಆಕ್ರಮಿಸಿಕೊಂಡಿರುವುದು ಸುಳ್ಳೇ ?"

"ಸುಳ್ಳು ! ಸುಳ್ಳು !! ಸುಳ್ಳು !!!"

"ಇದನ್ನು ಸಿದ್ಧಪಡಿಸಿ ತೋರಿಸುವಿರಾ ?"

"ಸಾಮ್ರಾಟರಮೇಲೆ ಮಾಡಿರುವ ಕೊಲೆಯ ಆರೋಪವನ್ನು ನೀವು ಸಿದ್ಧಪಡಿಸಿಕೊಡಬಲ್ಲಿರಾ ?"

"ನಮಗೆ ರಾಹಪ್ಪಯ್ಯನ ಸಾಕ್ಷ್ಯವಿದೆ."

"ನಮಗೆ ಸಹಸ್ರಾರು ಸ್ವಾಮಿನಿಷ್ಠ ಜನರ ಸಾಕ್ಷ್ಯವಿದೆ. ಸ್ವಾಮಿ ಮಕುಟೇಶ್ವರನಾಥನ ಸಾಕ್ಷ್ಯವಿದೆ. ಪುಲಿಕೇಶಿ ದೊರೆಗಳು ಕಾಯೇನ ವಾಚಾ ಮನಸಾ ಸಿಂಹಾಸನವನ್ನು ಅಪೇಕ್ಷಿಸಿದ್ದರೆ ಅದನ್ನು ಅನಾಯಾಸವಾಗಿ ದೊರಕಿಸಿಕೊಳ್ಳಬಹುದಿತ್ತು. ಆದರೆ ಅವರು ಸ್ವಯೂಥ ಕಲಹವನ್ನು ತಪ್ಪಿಸಲು, ತಮ್ಮದಾದ ಸಿಂಹಾಸನವನ್ನು ಬಿಟ್ಟುಕೊಟ್ಟು ಸಂನ್ಯಾಸ ಸ್ವೀಕರಿಸಿ ರಾಜಧಾನಿಯನ್ನು ತೊರೆದರು. ಇದರಿಂದ ಸಿಟ್ಟಿಗೆದ್ದ ಜನ, ಇದೆಲ್ಲದಕ್ಕೂ ಮಂಗಳೇಶನ ರಾಜ್ಯತೃಷ್ಣೆಯೇ ಕಾರಣವೆಂದು, ಅವರನ್ನು ಕೊಲೆಮಾಡಿದರು. ಇಡೀ ರಾಜಧಾನಿಯ ಜನತೆ ಪುಲಿಕೇಶಿಯ ರಾಜ್ಯತ್ಯಾಗದಿಂದ ಕಣ್ಣೀರಿಡುತ್ತಿದ್ದರೆ, ಮಂಗಳೇಶರು ಔತಣವೇರ್ಪಡಿಸುತ್ತಿದ್ದರು. ಅವರ ದ್ರೋಹವೇ ಅವರಿಗೆ ಮುಳುವಾಯಿತು. ಇವರಿಬ್ಬರಲ್ಲಿ ಪಾಪಿ ಯಾರು, ದ್ರೋಹಿ ಯಾರು ಎಂಬುದನ್ನು ನೀವೇ ನಿರ್ಧರಿಸಬೇಕು !"

"ನೀವು ಹೇಳುವುದು ದಿಟವಾದರೆ, ಈ ಕೊಲೆಯಲ್ಲಿ ಪುಲಿಕೇಶಿಯ ಕೈವಾಡವಿದ್ದಂತೆ ಕಾಣುವುದಿಲ್ಲ. ಆದರೆ ರಾಹಪ್ಪಯ್ಯನ ಸಾಕ್ಷ್ಯ ಅದಕ್ಕೆ ವಿರೋಧವಾಗಿದೆ. ಇದಕ್ಕೇನೆನ್ನುವಿರಿ ?"

"ನೀವು ಆ ಧೂರ್ತ ರಾಹಪ್ಪಯ್ಯನ ಮಾತನ್ನು ನಂಬುತ್ತೀರಾ ?"

"ಅವನು ನಂಬಿಕೆಗೆ ಅರ್ಹನಾದ ವ್ಯಕ್ತಿಯಲ್ಲವೆಂಬುದೇನೋ ದಿಟ. ಆದರೂ ಮಂಗಳೇಶರು ಸಾಯುವ ಗಳಿಗೆಯಲ್ಲಿ ಅವನು ಅವರ ಬಳಿಯಲ್ಲಿದ್ದ. ಅವನಿಗೆ ಮಂಗಳೇಶರು ಅಂತಿಮ ಸಂದೇಶವನ್ನು ತಿಳಿಸಿದರಂತೆ. ಅವರು ತಮ್ಮ ಕೊಲೆಗೆ ಕಾರಣನಾದ ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಲು ರಾಹ ಪ್ಪಯ್ಯನಿಂದ ವಾಗ್ದಾನ ಪಡೆದರಂತೆ."

"ಸತ್ಯಸಂಗತಿ ಏನೋ ಪರಶಿವನೇ ಬಲ್ಲ. ನಾನು ತಿಳಿದ ಸತ್ಯ ಸಂಗತಿ ಯನ್ನು ಸನ್ನಿಧಾನದಲ್ಲಿ ನಿವೇದಿಸಿಕೊಂಡಿದ್ದೇನೆ. ಇದನ್ನು ನಂಬುವುದು ಬಿಡು ವುದು ತಮ್ಮ ಚಿತ್ತ."

"ಹಾಗಾದರೆ ನೀವು ಹೇಳುವುದಾದರೂ ಏನು ?"

ಸಾಮ್ರಾಟರು ನಿರಪರಾಧಿಗಳು. ಈ ಕೊಲೆಗೂ ಅವರಿಗೂ ಯಾವುದೇ ಸಂಬಂಧವಿಲ್ಲ. ಅವರು ಮಂಗಳೇಶರ ದುರ್ಮರಣಕ್ಕಾಗಿ ಎಲ್ಲರಿಗಿಂತ ಹೆಚ್ಚಾಗಿ ವ್ಯಥೆ ಪಡುತ್ತಿದ್ದಾರೆ. ನನ್ನ ಮಾತು ಮಕುಟೇಶ್ವರನಾಣೆಗೂ ಸತ್ಯ."

"ಹಾಗಾದರೆ ನಾನು ಈಗ ಧರ್ಮಸಂಕಟದಲ್ಲಿ ಸಿಕ್ಕಿದ್ದೇನೆ."

"ಏಕೆ ಪ್ರಭು ?"

"ನನಗೆ ಪುಲಿಕೇಶಿಯ ಬಗ್ಗೆ ದ್ವೇಷವಿಲ್ಲ. ಆದರೆ ಅವರ ಮೇಲೆ ದಂಡೆತ್ತಿ ಹೊರಟ ಗೆಳೆಯ ಆಪ್ಯಾಯಿಕನ ಮಾತನ್ನು ತಿರಸ್ಕರಿಸಲಾರೆ, ಅವನಿಗೆ ನೆರ ವಾಗಲು ಕೊಟ್ಟ ವಾಗ್ದಾನವನ್ನು ಮುರಿಯಲಾರೆ. ಗೆಳೆಯನಿಗೆ ದ್ರೋಹ ಬಗೆದು, ವಚನಭ್ರಷ್ಟನಾಗಲಾರೆ !"

"ಹಾಗಾದರೆ ಗೆಳೆಯನ ಸಲುವಾಗಿ ತಿಳಿದೂ ತಿಳಿದೂ ಸ್ವಾಮಿದ್ರೋಹಿ ಗಳಾಗುವಿರಾ? ದೇವತಾಸ್ವರೂಪರಾದ ಸಾಮ್ರಾಟರಿಗೆ ಎರಡು ಬಗೆಯುವಿರಾ?"

ಈ ಮಾತಿಗೆ ಗೋವಿಂದ ನೇರ ಉತ್ತರ ಕೊಡಲಿಲ್ಲ.

"ಇದು ಉತ್ತರ ಕೊಡಲು ಸುಲಭವಲ್ಲವೆಂಬುದು ನನಗೆ ತಿಳಿದಿದೆ ಪ್ರಭು. ಆದರೆ, ನಿಮ್ಮ ಭಾವೋದ್ವಿಗ್ನತೆಯಿಂದ ವಿವೇಕ ಮರೆಯಾಗದಿರಲಿ; ಗೆಳೆತನದ ಚಿಂತನೆಗಿಂತ ಸಾಮ್ರಾಜ್ಯದ ಹಿತ ಮೇಲ್ಗೈಯಾಗಲಿ; ಆತ್ಮ ಕಲ್ಯಾಣಕ್ಕಿಂತ ದೇಶದ ಕಲ್ಯಾಣ–ಜನತೆಯ ಕಲ್ಯಾಣ ಮಹೋನ್ನತವಾಗಲಿ. ದೇವರು ನಿಮಗೆ ಸದ್ಬುದ್ಧಿಯನ್ನು ದಯಪಾಲಿಸಲಿ, ಸಾಮ್ರಾಜ್ಯಕ್ಕೆ ನಿಮ್ಮಿಂದ ಶ್ರೇಷ್ಠ

ಸೇವೆಯನ್ನು ಕರುಣಿಸಲಿ ಎಂದಷ್ಟೇ ನಾನು ಪ್ರಾರ್ಥಿಸಬ

ಈ ಮಾತು ಗೋವಿಂದನ ಮೇಲೆ ಮಹತ್ತರ

ಮಾಡಿತು. ಅವನು ನಿರ್ವಿಕಾರ ಧ್ವನಿಯಲ್ಲಿ ಹೇಳಿದ :

"ರವಿಕೀರ್ತಿಗಳೇ, ನಾನೂ ನನ್ನ ಹೃದಯಾಂತರಾಳ

ಇದನ್ನೇ. ನನಗೆ ಯುದ್ಧ ಬೇಕಿಲ್ಲ. ನಿರಪರಾಧಿಗಳ

ಕೊಂಚವೂ ಇಷ್ಟವಿಲ್ಲ. ಇದನ್ನು ನಾನು ತಡೆಯಬಲ್ಲವನಾದರೆ....ತಡೆಯ ಬಲ್ಲವನಾದರೆ....ನನ್ನಂತಹ ಪುಣ್ಯಶಾಲಿ ಬೇರೆ ಇಲ್ಲ. ನಾನು ಗೆಳೆಯನ ಆತ್ಮ ಕಲ್ಯಾಣ ಬಯಸುವಷ್ಟೇ ದೇಶದ ಜನತೆಯ ಕಲ್ಯಾಣವನ್ನೂ ಹಾರೈಸುತ್ತೇನೆ. ಅದಕ್ಕೂ ಹೆಚ್ಚಾಗಿ ಸತ್ಯ ಧರ್ಮಗಳು ಅಸತ್ಯ ಅಧರ್ಮಗಳ ಮೇಲೆ ವಿರಾಜಿಸ ಲೆಂದು ಹಾರೈಸುತ್ತೇನೆ. ಅದರ ಸಲುವಾಗಿ ಈ ಯುದ್ಧವನ್ನೂ ನಿಲ್ಲಿಸುವ ಹೆಬ್ಬಯಕೆ ನನ್ನದು. ಇದನ್ನು ಹೇಗೆ ಸಾಧಿಸಬೇಕೆಂಬುದು ತಿಳಿಯದಾದರೂ ಈ ಬಗ್ಗೆ ಗೆಳೆಯ ಆಪ್ಯಾಯಿಕನೊಂದಿಗೆ ಮಾತನಾಡಿ, ಯಾವುದನ್ನೂ ನಿರ್ಧ ರಿಸುತ್ತೇನೆ. ಸದ್ಯಕ್ಕೆ ಇಷ್ಟುಮಾತ್ರ ಹೇಳಬಲ್ಲೆ: ನಾನಾಗಲಿ, ಆಪ್ಯಾಯಿಕನಾ ಗಲೀ, ವೃಥಾಕಾರಣವಾಗಿ ರಕ್ತಹರಿಸುವುದಿಲ್ಲ; ಎಂದಿಗೂ ಅನ್ಯಾಯ ಪ್ರವರ್ತಕ ರಾಗುವುದಿಲ್ಲ; ಅಧರ್ಮವನ್ನು ಎತ್ತಿ ಹಿಡಿಯುವುದಿಲ್ಲ ಈಗ ಯಾರು ಧರ್ಮ ರಕ್ಷೆ ಪಡೆದಿರುವರೋ ಅವರು ಗೆಲ್ಲುತ್ತಾರೆ. ಅಧರ್ಮ ಅಳಿಯುತ್ತದೆ. ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ. ನಿಮ್ಮದು ಧರ್ಮ ಪಕ್ಷವಾದರೆ ಖಂಡಿತ ವಾಗಿ ಈ ಯುದ್ಧದಲ್ಲಿ ಗೆಲ್ಲುತ್ತೀರಿ : ಅಧರ್ಮ ಪಕ್ಷವಾದರೆ ಸೋಲುತ್ತೀರಿ" ಎಂದು ಹೇಳಿದ.

ಇದಕ್ಕಿಂತ ಸ್ಪಷ್ಟ ಉತ್ತರವನ್ನು ರವಿಕೀರ್ತಿ ಗೋವಿಂದನಿಂದ ನಿರೀಕ್ಷಿಸಿರ ಲಿಲ್ಲ. ಅವನು ತನ್ನ ರಾಯಭಾರ ಯಶಸ್ವಿಯಾದ ಹಿಗ್ಗಿನಲ್ಲೇ ಅವನನ್ನು ಬೀಳ್ಕೊಂಡು ಹೊರಟಾಗ ಕೇಳಿದ :

"ನಿಮ್ಮ ಅಂತಿಮ ತೀರ್ಮಾನ ತಿಳಿಯುವ ಬಗೆ ಹೇಗೆ ?"

"ನಾವು ಅದನ್ನು ರಣರಂಗದಲ್ಲಿ ತಿಳಿಸುತ್ತೇವೆ. ತಮ್ಮ ಸಾಮ್ರಾಟರಿಗೆ ತಮ್ಮ ಸೈನ್ಯಸಮೇತ ರಣರಂಗಕ್ಕೆ ಬರಲು ತಿಳಿಸಿರಿ."

ಈ ಮಾತು ಕೇಳಿ ರವಿಕೀರ್ತಿ ತನ್ನಲ್ಲೇ ನಕ್ಕ.

ಗೋವಿಂದನ ಆದೇಶದಂತೆ ಪುಲಿಕೇಶಿಯು ತನ್ನ ಸರ್ವಸೇನಾಬಲದೊಡನೆ

"ನೀವು ಆ ಧೂರ್ತ ರಾಹಪ್ಪಯ್ಯನ ಮಾತನ್ನು ನಂಬುತ್ತೀರಾ ?"

"ಅವನು ನಂಬಿಕೆಗೆ ಅರ್ಹನಾದ ವ್ಯಕ್ತಿಯಲ್ಲವೆಂಬುದೇನೋ ದಿಟ. ಆದರೂ ಮಂಗಳೇಶರು ಸಾಯುವ ಗಳಿಗೆಯಲ್ಲಿ ಅವನು ಅವರ ಬಳಿಯಲ್ಲಿದ್ದ. ಅವನಿಗೆ ಮಂಗಳೇಶರು ಅಂತಿಮ ಸಂದೇಶವನ್ನು ತಿಳಿಸಿದರಂತೆ. ಅವರು ತಮ್ಮ ಕೊಲೆಗೆ ಕಾರಣನಾದ ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಲು ರಾಹಪ್ಪಯ್ಯನಿಂದ ವಾಗ್ದಾನ ಪಡೆದರಂತೆ."

"ಸತ್ಯಸಂಗತಿ ಏನೋ ಪರಶಿವನೇ ಬಲ್ಲ. ನಾನು ತಿಳಿದ ಸತ್ಯ ಸಂಗತಿಯನ್ನು ಸನ್ನಿಧಾನದಲ್ಲಿ ನಿವೇದಿಸಿಕೊಂಡಿದ್ದೇನೆ. ಇದನ್ನು ನಂಬುವುದು ಬಿಡುವುದು ತಮ್ಮ ಚಿತ್ತ."

"ಹಾಗಾದರೆ ನೀವು ಹೇಳುವುದಾದರೂ ಏನು ?"

ಸಾಮ್ರಾಟರು ನಿರಪರಾಧಿಗಳು. ಈ ಕೊಲೆಗೂ ಅವರಿಗೂ ಯಾವುದೇ ಸಂಬಂಧವಿಲ್ಲ. ಅವರು ಮಂಗಳೇಶರ ದುರ್ಮರಣಕ್ಕಾಗಿ ಎಲ್ಲರಿಗಿಂತ ಹೆಚ್ಚಾಗಿ ವ್ಯಥೆ ಪಡುತ್ತಿದ್ದಾರೆ. ನನ್ನ ಮಾತು ಮುಕುಟೇಶ್ವರನಾಣೆಗೂ ಸತ್ಯ."

"ಹಾಗಾದರೆ ನಾನು ಈಗ ಧರ್ಮಸಂಕಟದಲ್ಲಿ ಸಿಕ್ಕಿದ್ದೇನೆ."

"ಏಕೆ ಪ್ರಭು ?"

"ನನಗೆ ಪುಲಿಕೇಶಿಯ ಬಗ್ಗೆ ದ್ವೇಷವಿಲ್ಲ. ಆದರೆ ಅವರ ಮೇಲೆ ದಂಡೆತ್ತಿ ಹೊರಟ ಗೆಳೆಯ ಆಪ್ಪಾಯಿಕನ ಮಾತನ್ನು ತಿರಸ್ಕರಿಸಲಾರೆ, ಅವನಿಗೆ ನೆರವಾಗಲು ಕೊಟ್ಟ ವಾಗ್ದಾನವನ್ನು ಮುರಿಯಲಾರೆ. ಗೆಳೆಯನಿಗೆ ದ್ರೋಹ ಬಗೆದು, ವಚನಭ್ರಷ್ಟನಾಗಲಾರೆ !"

"ಹಾಗಾದರೆ ಗೆಳೆಯನ ಸಲುವಾಗಿ ತಿಳಿದೂ ತಿಳಿದೂ ಸ್ವಾಮಿದ್ರೋಹಿಗಳಾಗುವಿರಾ? ದೇವತಾಸ್ವರೂಪರಾದ ಸಾಮ್ರಾಟರಿಗೆ ಎರಡು ಬಗೆಯುವಿರಾ?"

ಈ ಮಾತಿಗೆ ಗೋವಿಂದ ನೇರ ಉತ್ತರ ಕೊಡಲಿಲ್ಲ.

"ಇದು ಉತ್ತರ ಕೊಡಲು ಸುಲಭವಲ್ಲವೆಂಬುದು ನನಗೆ ತಿಳಿದಿದೆ ಪ್ರಭು. ಆದರೆ, ನಿಮ್ಮ ಭಾವೋದ್ವಿಗ್ನತೆಯಿಂದ ವಿವೇಕ ಮರೆಯಾಗದಿರಲಿ; ಗೆಳೆತನದ ಚಿಂತನೆಗಿಂತ ಸಾಮ್ರಾಜ್ಯದ ಹಿತ ಮೇಲ್ಗೈಯಾಗಲಿ; ಆತ್ಮ ಕಲ್ಯಾಣಕ್ಕಿಂತ ದೇಶದ ಕಲ್ಯಾಣ—ಜನತೆಯ ಕಲ್ಯಾಣ ಮಹೋನ್ನತವಾಗಲಿ. ದೇವರು ನಿಮಗೆ ಸದ್ಬುದ್ಧಿಯನ್ನು ದಯಪಾಲಿಸಲಿ, ಸಾಮ್ರಾಜ್ಯಕ್ಕೆ ನಿಮ್ಮಿಂದ ಶ್ರೇಷ್ಠ

ಸೇವೆಯನ್ನು ಕರುಣಿಸಲಿ ಎಂದಷ್ಟೇ ನಾನು ಪ್ರಾರ್ಥಿಸಬಲ್ಲೆ ಪ್ರಭು."

ಈ ಮಾತು ಗೋವಿಂದನ ಮೇಲೆ ಮಹತ್ತರ ಪರಿಣಾಮ ಉಂಟು ಮಾಡಿತು. ಅವನು ನಿರ್ವಿಕಾರ ಧ್ವನಿಯಲ್ಲಿ ಹೇಳಿದ :

"ರವಿಕೀರ್ತಿಗಳೇ, ನಾನೂ ನನ್ನ ಹೃದಯಾಂತರಾಳದಿಂದ ಬಯಸುವುದು ಇದನ್ನೇ. ನನಗೆ ಯುದ್ಧ ಬೇಕಿಲ್ಲ. ನಿರಪರಾಧಿಗಳ ರಕ್ತ ಹರಿಯುವುದು ಕೊಂಚವೂ ಇಷ್ಟವಿಲ್ಲ. ಇವನ್ನು ನಾನು ತಡೆಯಬಲ್ಲವನಾದರೆ....ತಡೆಯ ಬಲ್ಲವನಾದರೆ....ನನ್ನಂತಹ ಪುಣ್ಯಶಾಲಿ ಬೇರೆ ಇಲ್ಲ. ನಾನು ಗೆಳೆಯನ ಆತ್ಮ ಕಲ್ಯಾಣ ಬಯಸುವಷ್ಟೇ ದೇಶದ ಜನತೆಯ ಕಲ್ಯಾಣವನ್ನೂ ಹಾರೈಸುತ್ತೇನೆ. ಅದಕ್ಕೂ ಹೆಚ್ಚಾಗಿ ಸತ್ಯ ಧರ್ಮಗಳು ಅಸತ್ಯ ಅಧರ್ಮಗಳ ಮೇಲೆ ವಿರಾಜಿಸ ಲೆಂದು ಹಾರೈಸುತ್ತೇನೆ. ಅದರ ಸಲುವಾಗಿ ಈ ಯುದ್ಧವನ್ನೂ ನಿಲ್ಲಿಸುವ ಹೆಬ್ಬಯಕೆ ನನ್ನದು. ಇದನ್ನು ಹೇಗೆ ಸಾಧಿಸಬೇಕೆಂಬುದು ತಿಳಿಯದಾದರೂ ಈ ಬಗ್ಗೆ ಗೆಳೆಯ ಅಪ್ಪಾಯಿಕನೊಂದಿಗೆ ಮಾತನಾಡಿ, ಯಾವುದನ್ನೂ ನಿರ್ಧ ರಿಸುತ್ತೇನೆ. ಸದ್ಯಕ್ಕೆ ಇಷ್ಟುಮಾತ್ರ ಹೇಳಬಲ್ಲೆ: ನಾನಾಗಲಿ, ಅಪ್ಪಾಯಿಕನಾ ಗಲೀ, ವೃಥಾಕಾರಣವಾಗಿ ರಕ್ತಹರಿಸುವುದಿಲ್ಲ; ಎಂದಿಗೂ ಅನ್ಯಾಯ ಪ್ರವರ್ತಕ ರಾಗುವುದಿಲ್ಲ; ಅಧರ್ಮವನ್ನು ಎತ್ತಿ ಹಿಡಿಯುವುದಿಲ್ಲ ಈಗ ಯಾರು ಧರ್ಮ ರಕ್ಷೆ ಪಡೆದಿರುವರೋ ಅವರು ಗೆಲ್ಲುತ್ತಾರೆ. ಅಧರ್ಮ ಅಳಿಯುತ್ತದೆ. ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ. ನಿಮ್ಮದು ಧರ್ಮ ಪಕ್ಷವಾದರೆ ಖಂಡಿತ ವಾಗಿ ಈ ಯುದ್ಧದಲ್ಲಿ ಗೆಲ್ಲುತ್ತೀರಿ : ಅಧರ್ಮ ಪಕ್ಷವಾದರೆ ಸೋಲುತ್ತೀರಿ" ಎಂದು ಹೇಳಿದ.

ಇದಕ್ಕಿಂತ ಸ್ಪಷ್ಟ ಉತ್ತರವನ್ನು ರವಿಕೀರ್ತಿ ಗೋವಿಂದನಿಂದ ನಿರೀಕ್ಷಿಸಿರ ಲಿಲ್ಲ. ಅವನು ತನ್ನ ರಾಯಭಾರ ಯಶಸ್ವಿಯಾದ ಹಿಗ್ಗಿನಲ್ಲೇ ಅವನನ್ನು ಬೀಳ್ಕೊಂಡು ಹೊರಟಾಗ ಕೇಳಿದ :

"ನಿಮ್ಮ ಅಂತಿಮ ತೀರ್ಮಾನ ತಿಳಿಯುವ ಬಗೆ ಹೇಗೆ ?"

"ನಾವು ಅದನ್ನು ರಣರಂಗದಲ್ಲಿ ತಿಳಿಸುತ್ತೇವೆ. ತಮ್ಮ ಸಾಮ್ರಾಟರಿಗೆ ತಮ್ಮ ಸೈನ್ಯಸಮೇತ ರಣರಂಗಕ್ಕೆ ಬರಲು ತಿಳಿಸಿರಿ."

ಈ ಮಾತು ಕೇಳಿ ರವಿಕೀರ್ತಿ ತನ್ನಲ್ಲೇ ನಕ್ಕ.

ಗೋವಿಂದನ ಆದೇಶದಂತೆ ಪುಲಿಕೇಶಿಯು ತನ್ನ ಸರ್ವಸೇನಾಬಲದೊಡನೆ

ಹೊರಟು ಗೋವಿಂದ, ಆಪ್ಯಾಯಿಕರು ಬೀಡು ಬಿಟ್ಟಿದ್ದ ಶಿಬಿರದ ಬಳಿ ಬಂದು ಶಿಬಿರ ಹಾಕಿದನು. ಎರಡು ಕಡೆಯ ಸೈನಿಕರು ಮುಂದೇನಾಗುವುದೋ ಎಂದು ಕಾಯುತ್ತಾ ಕುಳಿತರು. ಯುದ್ಧವಾದರೆ ಯುದ್ಧ : ಶಾಂತಿಯಾದರೆ ಶಾಂತಿ; ಎರಡಕ್ಕೂ ಅವರು ಸಿದ್ಧರಾಗಿ ಕುಳಿತಿದ್ದರು.

ಈ ಸಮಯದಲ್ಲಿ ಆಪ್ಯಾಯಿಕನು ಗೋವಿಂದನ ಸಲಹೆಯಂತೆ ಪುಲಿಕೇಶಿಗೆ ಹೀಗೆ ಹೇಳಿ ಕಳುಹಿಸಿದ : "ನಾವಿಬ್ಬರೂ ನಮ್ಮ ಸೈನ್ಯಗಳೊಡನೆ ಬಂದು ರಣ ರಂಗದಲ್ಲಿ ಸೇರಿದ್ದೇವೆ. ಯುದ್ಧವಾದರೆ ಅಸಂಖ್ಯಾತ ನಿರಪರಾಧಿಗಳ ರಕ್ತ ಹರಿಯುತ್ತದೆ. ನಾವು ಈ ಯುದ್ಧದಿಂದ ಸಾಧಿಸಬೇಕೆಂದಿರುವುದು ಯಾರದು ಧರ್ಮಪಕ್ಷ ಎಂಬುದೇ ಹೊರತು ಒಬ್ಬರ ಮೇಲೆ ಒಬ್ಬರು ವಿಜೇತರಾಗಬೇಕೆಂ ದಲ್ಲ. ಎರಡು ಕಡೆಯ ಸೈನ್ಯದಲ್ಲಿ ಆರಿಸಿದ ಇಬ್ಬರು ಮಲ್ಲರು ಇದನ್ನು ನಿರ್ಣ ಯಿಸಲಿ. ಈ ದ್ವಂದ್ವ ಯುದ್ಧದಲ್ಲಿ ಆಗುವ ಜಯಾಪಜಯಗಳ ಮೇಲೆ ಧರ್ಮಾಧರ್ಮ ಪಕ್ಷವನ್ನು ನಿರ್ಧರಿಸೋಣ. ಇದಕ್ಕೆ ನೀವು ಸಮ್ಮತಿಸುವುದಾ ದರೆ ಯುದ್ಧದ ಕಾರಣದಿಂದ ಉಂಟಾಗುವ ರಕ್ತಪಾತ, ಸಾವು ನೋವುಗಳನ್ನು ನಿಲ್ಲಿಸಬಹುದು."

ಇದಕ್ಕೆ ಪುಲಿಕೇಶಿಯು ಸಿದ್ಧವಾಗಿರುವದಾಗಿ ಮಾರುತ್ತರ ಕೊಟ್ಟನು.

ಅದರಂತೆ ಎರಡು ಕಡೆಯ ಸೈನಿಕರಲ್ಲಿ ಆರಿಸಿದ, ಇಬ್ಬರು ಮಲ್ಲಯೋಧ ರನ್ನು ರಣಾಂಗಣಕ್ಕೆ ಬಿಡಲಾಯಿತು. ಅವರ ಜಯಾಪಜಯಗಳ ಮೇಲಿಂದ ತಮ್ಮ ಸೋಲು ಗೆಲವುಗಳು ನಿರ್ಧರವಾಗುವುದಿತ್ತು. ಎಲ್ಲರೂ ಈ ಮಲ್ಲಯುದ್ಧದ ಪರಿಣಾಮಕ್ಕಾಗಿ ಕಾದು ಕುಳಿತಿದ್ದರು. ನಿರರ್ಥಕ ಹೋರಾಟದ ಕ್ಷೇತ್ರವಾಗ ಬೇಕಾಗಿದ್ದ ರಣರಂಗ, ಕ್ರೀಡಾಕ್ಷೇತ್ರವಾಗಿ ಮಾರ್ಪಟ್ಟಿತ್ತು.

ಇಬ್ಬರೂ ಭೀಮಸದೃಶರಾಗಿದ್ದರು. ಮಲ್ಲಯುದ್ಧದಲ್ಲಿ ಸಮಾನ ಪರಿಣಿತ ರಾಗಿದ್ದರು. ಅವರು ಮದ್ದಾನೆಗಳಂತೆ ಕಾಳಗಕ್ಕೆ ತೊಡಗಿದರು.

ಎರಡು ಪಕ್ಷಗಳ ಸೈನಿಕರು ಜಯಘೋಷಗಳಿಂದ ಅವರನ್ನು ಹುರಿದುಂಬಿ ಸುತ್ತಾ ನಡೆದರು. ಮೊದಲು ಆಪ್ಯಾಯಿಕನ ಯೋಧನು ಮೇಲ್ಗೈಯಾದಂತೆ ಕಂಡನು. ಆದರೆ ಕಡೆಗೆ ಪುಲಿಕೇಶಿಯ ಕಡೆಯ ಯೋಧನೇ ಗೆದ್ದನು. ಆಪ್ಯಾಯಿಕನ ಸೈನಿಕನು ನೆಲಕ್ಕೆ ಬಿದ್ದನು. ವಿಜಯಿಯಾದ ಮಲ್ಲನು ಅವನನ್ನು ಕೊಲ್ಲದೆ ಅವನಿಗೆ ಉದಾರವಾಗಿ ಪ್ರಾಣದಾನ ಮಾಡಿ, ಮೇಲಕ್ಕೆತ್ತಿ ಗೆಳೆಯನಂತೆ

ಆಲಂಗಿಸಿದನು. ಸೈನಿಕರು 'ಉಘೇ' ಎಂದು ಜಯಕಾರ ಮಾಡಿದರು.

ಈ ದೃಶ್ಯವನ್ನು ನೋಡುತ್ತಿದ್ದ ಆಪ್ಯಾಯಿಕ, ಗೋವಿಂದರು ಓಡಿ ಬಂದು ಪುಲಿಕೇಶಿ, ಸಮಂತಭದ್ರರನ್ನು ತಬ್ಬಿದರು. ಆ ದೃಶ್ಯ ಹೃದಯಸ್ಪರ್ಶಿಯಾಗಿತ್ತು. ಸಮುದ್ರ ಸಮುದ್ರವನ್ನು ಸೇರುವಂತೆ, ಗಿರಿ ಗಿರಿಯನ್ನು ಕೂಡುವಂತೆ ಇತ್ತು.

ಪುಲಿಕೇಶಿಯು ತನ್ನ ನಿರ್ಮಲಾಂತಃಕರಣ, ಶೌರ್ಯಸಾಹಸ, ಸ್ನೇಹ, ಧರ್ಮಬುದ್ಧಿಗಳಿಂದ ಶತ್ರುಗಳನ್ನು ಮಿತ್ರರನ್ನಾಗಿ ಮಾಡಿಕೊಂಡನು. ಇದು ಅವನ ಪ್ರಥಮ ವಿಜಯ, ನಾಳಿನ ದಿಗ್ವಿಜಯದ ಮುಂಬೆಳಗಾಗಿತ್ತು.

## ೧೫

ಪುಲಿಕೇಶಿಯು ತನಗೆ ದೊರೆತ ವಿಜಯದಿಂದ ಹಿಗ್ಗಲಿಲ್ಲ. ಇದು ಮುಂಬರಲಿರುವ ದಿಗ್ವಿಜಯದ ಯಾತ್ರೆಯ ಪ್ರಥಮ ಸೋಪಾನವೆಂದು ಅರಿತನು. ಅವನು ದೇಶದ ಅಂತರಂಗದ ಶತ್ರುಗಳನ್ನು ಸಾಮದಾನಭೇದಗಳಿಂದ ನಿವಾರಿಸಿಕೊಂಡ ಮೇಲೆ ಆಡಳಿತವನ್ನು ಒಂದು ಸುವ್ಯವಸ್ಥಿತ ಅಸ್ತಿವಾರದ ಮೇಲೆ ನಿಲ್ಲಿಸಿ, ಸಮರ್ಥರಾದ ಅಧಿಕಾರಿಗಳನ್ನು ಆಡಳಿತ ಯಂತ್ರದ ನಿರ್ವಹಣೆಗೆ ನೇಮಿಸಿದನು. ರಾಜಕೀಯ, ಆರ್ಥಿಕ, ಸಾಮಾಜಿಕ ಉತ್ಕರ್ಷಕ್ಕೆ ಬೇಕಾಗುವ ಸುಭದ್ರತೆಯನ್ನು ಗಳಿಸಿಕೊಟ್ಟು, ಜನತೆಯ ಸುಖಶಾಂತಿ ನೆಮ್ಮದಿಗಳಿಗೆ ಅವಕಾಶ ಕಲ್ಪಿಸಿಕೊಟ್ಟನು. ಅನಂತರ ಸಾಮ್ರಾಜ್ಯದ ಘನತೆ ಗೌರವಗಳಿಗೆ ಕೀರ್ತಿ ಪತಾಕೆಯನ್ನು ಆಸೇತು ನರ್ಮದೆಯ ಪರ್ಯಂತ ಮೆರೆಸುವ ದಿಗ್ವಿಜಯ ಯಾತ್ರೆಯನ್ನು ಕೈಗೊಂಡನು. ದಕ್ಷಿಣಾಪಥದ ಸಣ್ಣಪುಟ್ಟ ರಾಜರನ್ನೆಲ್ಲಾ ಗೆದ್ದು ದಕ್ಷಿಣಾಪಥೇಶ್ವರನೆಂಬ ಬಿರುದಿಗೆ ಪಾತ್ರನಾಗಬೇಕೆಂಬುದೇ ಅವನ ಹೆಬ್ಬಯಕೆಯಾಗಿತ್ತು.

ಈ ಮಹತ್ಕಾರ್ಯಕ್ಕೆ ಬೇಕಾಗುವ ಸಾಧನ ಸಂಪತ್ತನ್ನು ಸಂಗ್ರಹಿಸಿಕೊಳ್ಳುವ ಕಾರ್ಯಕ್ಕೆ ಮನಸ್ಸುಕೊಟ್ಟನು. ದೇಶದ ಮೂಲೆ ಮೂಲೆಗಳಿಂದ ಸೈನಿಕರನ್ನು ಸಂಗ್ರಹಿಸಿ ಅವರಿಗೆ ಸಮರ ವಿದ್ಯೆಗಳಲ್ಲಿ ಯೋಗ್ಯ ಶಿಕ್ಷಣ ಕೊಟ್ಟನು.

ಶಸ್ತ್ರಾಸ್ತ್ರಗಳನ್ನು ತಯಾರಿಸಲು ಸಹಸ್ರಾರು ಕುಶಲ ಕಾರ್ಮಿಕರನ್ನು ನೇಮಿಸಿದನು. ದೇಶ ವಿದೇಶಗಳಿಂದ ಆನೆ ಕುದುರೆಗಳನ್ನು ತರಿಸಿಕೊಂಡು ಗಜಾಶ್ವ ಸೈನ್ಯಗಳನ್ನು ಹೆಚ್ಚಿಸಿದನು. ಅವುಗಳಿಗೆ ಸಮರ್ಥರಾದ ದಂಡನಾಯಕರನ್ನು ನೇಮಿಸಿ, ಸೈನಿಕರಲ್ಲಿ ಶಿಸ್ತು, ಸಂಘಟನೆಗಳಿಗೆ ಮಹತ್ವದ ಸ್ಥಾನ ಕಲ್ಪಿಸಿ ಕೊಟ್ಟನು.

ದೇಶದ ಮೂಲೆ-ಮೂಲೆಗಳಿಂದ ತರುಣರು ತಂಡೋಪತಂಡವಾಗಿ ಬಂದು ಸೈನಿಕರಾದರು. ದೇಶದ ಮೇಲಣ ಪ್ರೀತಿಯಿಂದ ಸಾಮ್ರಾಟರ ಮೇಲಿನ ಭಕ್ತಿ ಗೌರವಗಳಿಂದ ಚಾಲುಕ್ಯರ ದಂಡು ಯಾವ ಮಹತ್ಕಾರ್ಯಕ್ಕೂ ಸಿದ್ಧವಾಯಿತು.

ದಿಗ್ವಿಜಯಕ್ಕೆ ಬೇಕಾಗುವ ದಂಡು ಸಿದ್ಧವಾದಮೇಲೆ ಪುಲಿಕೇಶಿಯು ಒಂದು ಶುಭದಿನವನ್ನು ಕಟಕಾಚಾರ್ಯರಿಂದ ನಿಶ್ಚಯಿಸಿ, ಸೈನಿಕರಿಗೆ ಸಮರ ದೀಕ್ಷೆಯನ್ನು ಕೊಟ್ಟನು. ಅವರ ಕುಟುಂಬಗಳ ಹಾಗೂ ಸಾಮ್ರಾಜ್ಯದ ರಕ್ಷಣೆಗೆ ಯೋಗ್ಯ ವ್ಯವಸ್ಥೆಮಾಡಿ ತಾನೇ ಸರ್ವಸೇನೆಗಳಿಗೆ ಮಹಾದಂಡನಾಯಕನಾಗಿ ಮುನ್ನಡೆದನು.

ಚಾಲುಕ್ಯ ಸೇನೆ ಭೋರ್ಗರಿಸಿ ಹರಿಯುವ ಮಹಾಪೂರದಂತೆ ಮುನ್ನುಗ್ಗಿತು. ಅಶ್ವಗಜಸೈನ್ಯಗಳು ಒಂದೆಡೆ ಹೊರಟವು. ಅವನ್ನು ಹಿಂಬಾಲಿಸಿ ಒಂಟೆ, ಪದಾತಿ ಸೈನ್ಯಗಳು ಹೊರಟವು.ಅವುಗಳ ಹಿಂದೆ ರಥಗಳೂ ಯುದ್ಧೋಪಕರಣಗಳನ್ನು ಹೊತ್ತು ಎತ್ತಿನ ಗಾಡಿಗಳೂ ಹೊರಟವು. ಅವುಗಳನ್ನು ಅನುಸರಿಸಿ ಸಹಸ್ರಾರು ಕಮ್ಮಾರರೂ, ಬಡಗಿಯವರೂ, ಜೀನುಗಾರರೂ, ನೀರುಗಂಟಿಗಳೂ, ಗೂಢಚಾರರೂ, ವರ್ತಕರೂ ಹೊರಟರು. ಸೈನಿಕರಿಗೆ ಮನೋರಂಜನೆ ಒದಗಿಸಲು ತಾಪೆಯವರೂ,ಪಾತರದವರೂ, ಸಂಗೀತಗಾರರೂ, ದೊಂಬರೂ, ಹಗಲು ವೇಷದವರೂ ಹೊರಟರು. ಹೀಗೆ ಹೊರಟ ಸೈನ್ಯ ಚಲಿಸುವ ಒಂದು ಮಹಾ ನಗರದಂತೆ ಕಂಗೊಳಿಸುತ್ತಿತ್ತು. ಅದು ಬೀಡು ಬಿಟ್ಟಲ್ಲೀ ಮಹಾನಗರ ವೇರ್ಪಡುತ್ತಿತ್ತು.

ಮೊದಲು ಪುಲಿಕೇಶಿಯ ದೃಷ್ಟಿ ಕದಂಬರಮೇಲೆ ಬಿತ್ತು. ಬನವಾಸಿಯ ಕದಂಬರೂ, ಗಂಗವಾಡಿಯ ಗಂಗರೂ ಮೊದಲಿನಿಂದಲೂ ಚಾಲುಕ್ಯ ಸಾಮ್ರಾಜ್ಯಕ್ಕೆ ಕಂಟಕ ಸ್ವರೂಪರಾಗಿದ್ದರು. ಒಮ್ಮೆ ಅವರು ಚಾಲುಕ್ಯ ಸಾಮ್ರಾಟರಿಗೆ ಅಧೀನವಾಗಿಯೂ, ಇನ್ನೊಮ್ಮೆ ಸ್ವತಂತ್ರವಾಗಿಯೂ ಇದ್ದುಕೊಂಡು ಸಾಮ್ರಾ

ಜ್ಯಕ್ಕೆ ತೊಂದರೆ ಕೊಡುತ್ತಿದ್ದರು. ಅವರ ಉಪಟಳವನ್ನು ಸಹಿಸಲಾಗದೆ ಮಂಗಳೇಶನು ಅವರ ಸಾರ್ವಭೌಮ ಪದವಿಯನ್ನು ಒಪ್ಪಿಕೊಂಡು ಅವರ ಸ್ನೇಹ ಗಳಿಸಿದ್ದನು. ಅವನು ಮಡಿದ ಕೂಡಲೇ ಕದಂಬ, ಗಂಗರು ಚಾಲುಕ್ಯ ಸಾಮ್ರಾಜ್ಯದ ರಾಜ್ಯಸೂತ್ರ ಬಾಲಕನಾದ ಪುಲಿಕೇಶಿಯ ಕೈಗೆ ಬಂದಿರುವುದನ್ನು ಅರಿತು, ತಮ್ಮ ಹಿಂದಣ ವೈರವನ್ನು ನೆನೆದರು. ಸಾಮ್ರಾಜ್ಯವನ್ನು ತಮ್ಮಲ್ಲೇ ಹಂಚಿಕೊಳ್ಳಲು ಯೋಜಿಸಿ ಪುಲಿಕೇಶಿಯ ಮೇಲೆ ದಂಡೆತ್ತಿ ಬರಲು ಸಮರಸನ್ನಾಹ ಮಾಡಿಕೊಳ್ಳುತ್ತಿದ್ದರು. ಚಾಲುಕ್ಯರ ಮೂಲಪುರುಷನಾದ ಜಯಸಿಂಹನು ಮೊದಲು ಕದಂಬ–ಗಂಗರ ಮಾಂಡಲೇಶ್ವರನಾಗಿದ್ದು, ಅವರನ್ನು ಮೂಲೆಗೊತ್ತಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದುದನ್ನು ಅವರು ಮರೆತಿರಲಿಲ್ಲ. ಆದರೆ ರಣಾಗಾರ, ಪುಲಿಕೇಶಿಯರು ಬದುಕಿರುವವರೆಗೆ ಚಾಲುಕ್ಯರ ತಂಟೆಗೆ ಬರಲು ಅವರು ಹೆದರುತ್ತಿದ್ದರು. ಕೀರ್ತಿವರ್ಮನ ಕಾಲದಲ್ಲಿ ಅವನ ನಂತರ ಮಂಗಳೇಶನ ಕಾಲದಲ್ಲಿ ಅಂದರೆ ಕಳೆದ ಮೂವತ್ತೈದು ವರ್ಷದಲ್ಲಿ ಉಂಟಾಗಿದ್ದ ಸಾಮ್ರಾಜ್ಯದ ಅವ್ಯವಸ್ಥೆಯಿಂದ ಆಡಳಿತ ಯಂತ್ರ ಕುಸಿದು, ಮಾಂಡಲೇಶ್ವರರೂ, ಸಾಮಂತರೂ, ಸ್ವತಂತ್ರರಾಗಲೆತ್ನಿಸಿದರು. ಈ ಸುಸಂಧಿಯನ್ನು ಉಪಯೋಗಿಸಿಕೊಂಡು ಗಂಗರೂ, ಕದಂಬರೂ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಳ್ಳುವ ಸನ್ನಾಹದಲ್ಲಿದ್ದರು. ಅವರು ಶಕ್ತಿಸಂಪನ್ನರಾಗುವ ಮೊದಲೇ ಅವರನ್ನು ಬಗ್ಗುಬಡಿಯಲು ಪುಲಿಕೇಶಿಯು ನಿಶ್ಚಯಿಸಿದ್ದನು. ಅದರಂತೆ ರಣಕಹಳೆಯನ್ನು ಊದಿಸಿ, ಸೈನ್ಯಸಮೇತ ಹೊರಟು, ಬನವಾಸಿಯ ರಾಜಧಾನಿಯಾದ ವೈಜಯಂತಿಪುರದ ಮೇಲೆ ಬಿದ್ದನು.

ವೈಜಯಂತಿಪುರವು ಬನವಾಸಿ ಹನ್ನೆರಡು ಸಾವಿರ ಸೀಮೆಗೆ ಮೊದಲಿನಿಂದಲೂ ರಾಜಧಾನಿಯಾಗಿತ್ತು. ಅದು ಕದಂಬರ ವಾಣಿಜ್ಯ, ಸಂಸ್ಕೃತಿಗಳ ಕೇಂದ್ರವಾಗಿದ್ದಂತೆ, ಕದಂಬ ಸಾಮ್ರಾಜ್ಯದ ಕಣ್ಮಣಿಯಾಗಿತ್ತು. ಅದನ್ನು ದುರ್ಗಮಯವಾದ ದುರ್ಗವು ರಕ್ಷಿಸುತ್ತಿತ್ತು. ನಗರದಲ್ಲಿ ಯಥೇಚ್ಛವಾಗಿ ಶಸ್ತ್ರಾಸ್ತ್ರಗಳೂ, ಆಹಾರವಸ್ತುಗಳೂ ತುಂಬಿದ್ದವು. ದುರ್ಗರಕ್ಷಣೆಗೆ ಬೇಕಾದ ಸೈನಿಕರು ರಾಜಧಾನಿಯಲ್ಲಿ ಇದ್ದರು. ಕದಂಬ ಅರಸನು ಗಂಗ ದೊರೆಯ ಸಹಾಯವನ್ನು ನಿರೀಕ್ಷಿಸಿದ್ದರಿಂದ, ಅವನು ಪುಲಿಕೇಶಿಯ ನೇತೃತ್ವದಲ್ಲಿ ಬಂದ ಚಾಲುಕ್ಯ ದಂಡನ್ನು ಕಂಡು ಅಂಜಲಿಲ್ಲ. ಈ ಪೋರನು ತನ್ನನ್ನೇನು ಮಾಡ

ಬಲ್ಲನೆಂಬ ಉಪೇಕ್ಷೆಯಿಂದ ಅಪಾಯವನ್ನು ನಿರ್ಲಕ್ಷಿಸಿದ್ದನು.

ಕದಂಬ ದೊರೆಯ ನಿರೀಕ್ಷೆ ವ್ಯರ್ಥವಾಯಿತು. ಪುಲಿಕೇಶಿಯು ತನ್ನ ಸೈನ್ಯದೊಡನೆ ಹೊರಟು ವೈಜಯಂತಿಪುರವನ್ನು ಮುತ್ತಿ, ಅತ್ಯಲ್ಪಕಾಲದಲ್ಲಿ ಅದನ್ನು ವಶಪಡಿಸಿಕೊಂಡನು. ಕದಂಬರಿಗೆ ಗಂಗರು ನೆರವಾಗುವ ಮೊದಲೇ ಅದು ಪುಲಿಕೇಶಿಯ ವಶವಾಗಿತ್ತು. ಪುಲಿಕೇಶಿಯು ಸಂಪದ್ಭರಿತ ನಗರವಾದ ವೈಜಯಂತಿಪುರವನ್ನು ನಾಶಮಾಡಲಿಲ್ಲ. ಅದರ ಭವ್ಯ ಪ್ರಾಸಾದಗಳನ್ನೂ, ಉಪ್ಪರಿಗೆಗಳ ಅರಮನೆಗಳನ್ನೂ ಶ್ರೀಮಂತರ ವಿಲಾಸಭವನಗಳನ್ನೂ, ಉದ್ಯಾನ ವನಗಳನ್ನೂ, ದೇವಾಗಾರಗಳನ್ನೂ ಸೈನಿಕರು ನಾಶಮಾಡದಂತೆ, ಸೂರೆಹೊಡೆಯದಂತೆ, ಸೂಕ್ತಕ್ರಮಕೈಗೊಂಡು, ಸೆರೆಸಿಕ್ಕಿದ ಕದಂಬ ದೊರೆಯನ್ನು ಗೌರವದಿಂದ ನಡೆಸಿಕೊಂಡನು. ಇದರಿಂದ ಸುಪ್ರೀತನಾದ ಕದಂಬ ದೊರೆಯು ಪುಲಿಕೇಶಿಗೆ ತನ್ನ ಮಗಳಾದ ಉಮಾದೇವಿಯನ್ನು ಕೊಟ್ಟು ಮದುವೆಮಾಡಿದನು. ಪುಲಿಕೇಶಿಯು ನೂತನ ವಧುವಿನೊಡನೆ ಹೊರಟು ತನ್ನ ದೃಷ್ಟಿಯನ್ನು ಗಂಗವಾಡಿಯ ಕಡೆ ತಿರುಗಿಸಿದನು.

ಗಂಗವಾಡಿಯ ಗಂಗರು ಕರ್ನಾಟಕದ ಪ್ರಾಚೀನ ಅರಸುಮನೆತನದವರಾಗಿದ್ದರು. ಆರಂಭದಲ್ಲಿ ಕೋಲಾರ, ತಲಕಾಡುಗಳನ್ನು ರಾಜಧಾನಿಯಾಗಿ ಮಾಡಿಕೊಂಡ ಗಂಗಮನೆತನವು ಕಾಲಾಂತರದಲ್ಲಿ ಕಲಿಂಗದಲ್ಲೂ, ನೇಪಾಳದಲ್ಲೂ, ಅನಂತಪುರ ಜಿಲ್ಲೆಯ ಪರುಗಿಯಲ್ಲೂ ಗಂಗವಾಡಿಯಲ್ಲೂ ಆಳಿದರು. ತಾವು ಇಕ್ಷ್ವಾಕು ವಂಶದವರೆಂಬ ಅಭಿಮಾನ ತಳೆದ ಇವರು ಅನ್ಯರಿಗೆ ತಲೆಬಾಗುವುದು ಗೌರವಕ್ಕೆ ಕುಂದೆಂದು ತಿಳಿದಿದ್ದರು. ಅವರ ಅಹಂಕಾರವನ್ನು ಮುರಿಯಲು ಪುಲಿಕೇಶಿಯು ಅವರ ಮೇಲೆ ದಂಡೆತ್ತಿ ಹೊರಟಿದ್ದನು.

ಗಂಗ ದೊರೆಯು ಹಠಾತ್ತನೆ ದಾಳಿಯಿಟ್ಟ ಚಾಲುಕ್ಯ ಸೈನ್ಯವನ್ನು ತಡೆಯಲು ಸಾಧ್ಯವಾಗಲಿಲ್ಲ. ಅವನು ಸೋತು ಶರಣಾದನು. ಅವನನ್ನು ಪುಲಿಕೇಶಿಯು ಗೌರವದಿಂದಲೇ ಕಂಡು, ಅವನನ್ನು ತನ್ನ ಮಾಂಡಲೀಕನನ್ನಾಗಿ ಮಾಡಿಕೊಂಡನು. ಪುಲಿಕೇಶಿಯ ಸದ್ಗುಣಗಳಿಗೆ ಮಾರುಹೋದ ಗಂಗದೊರೆಯು ತನ್ನ ಮಗಳಾದ ಗಂಗಾದೇವಿಯನ್ನು ಪುಲಿಕೇಶಿಗೆ ವಿವಾಹಮಾಡಿಕೊಟ್ಟು, ಅವನೊಡನೆ ರಕ್ತಬಾಂಧವ್ಯವನ್ನು ಬೆಳೆಸಿದನು. ಪುಲಿಕೇಶಿಯು ಶ್ರೀದೇವಿ ಭೂದೇವಿಯರೊಡಗೂಡಿದ ಮಹಾವಿಷ್ಣುವಿನಂತೆ ಹೊರಟು ಈಶಾನ್ಯದಲ್ಲಿದ್ದ

ಇಡುವೊಳಲು ರಾಜ್ಯವನ್ನು ಆಳುತ್ತಿದ್ದ ನಾಗಜಾತಿಯ ಅಲುಪ ದೊರೆಯನ್ನು ಸೋಲಿಸಿ ಅವನಿಂದ ಕಪ್ಪ ಕಾಣಿಕೆಯನ್ನು ಪಡೆದು ಮುನ್ನಡೆದನು.

ಮುಂದೆ ಸಹ್ಯಾದ್ರಿಯ ಸಂಪದ್ಭರಿತವಾದ ನಾಡೆಲ್ಲವೂ ಅವನ ವಶವಾಯಿತು. ಕೊಂಕಣದ ಮೌರ್ಯರು ಸುಲಭವಾಗಿ ಪುಲಿಕೇಶಿಯ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಲಿಲ್ಲ. ಪುಲಿಕೇಶಿಯು ಅವರ ರಾಜಧಾನಿಯಾದ ಪುರಿಯನ್ನು ಸಾಧಿಸಲು ದೊಡ್ಡದೊಂದು ನೌಕಾಪಡೆಯನ್ನು ಸಿದ್ಧಗೊಳಿಸಬೇಕಾಯಿತು. ಪುರಿಯು ಚಾಲುಕ್ಯರ ದಾಳಿಯನ್ನು ಹೆಚ್ಚುಕಾಲ ಎದುರಿಸಲು ಸಾಧ್ಯವಾಗಲಿಲ್ಲ. ಅದು ಕೈವಶವಾದಮೇಲೆ ಕೊಂಕಣಕ್ಕೆ ತನ್ನ ನೆಚ್ಚಿನ ದಂಡನಾಯಕನನ್ನು ಪಾಂಡಲೇಶ್ವರನನ್ನಾಗಿ ನೇಮಿಸಿ, ಸೈನ್ಯಸಮೇತ ಹೊರಟು, ಲಾಟರನ್ನೂ, ಮಾಳವರನ್ನೂ, ಗುರ್ಜರನ್ನೂ, ಸೋಲಿಸಿ ತನ್ನ ಸಾಮಂತರನ್ನಾಗಿ ಮಾಡಿಕೊಂಡನು. ರೇವಾ, ನರ್ಮದಾ ನದಿಗಳ ದಕ್ಷಿಣ ಪ್ರದೇಶವೆಲ್ಲಾ ಪುಲಿಕೇಶಿಯ ಅಧೀನವಾಯಿತು. ಹೀಗೆ ಪುಲಿಕೇಶಿಯು ತನ್ನ ಸಾಮ್ರಾಜ್ಯವನ್ನು ಪಶ್ಚಿಮದಲ್ಲಿ ಕೊಂಕಣದವರೆಗೆ, ಉತ್ತರದಲ್ಲಿ ರೇವಾನದಿಯವರೆಗೆ ವಿಸ್ತರಿಸಿ, ತನ್ನ ನೂತನ ಪತ್ನಿಯರೊಡಗೂಡಿ ವೈಭವವಾಗಿ ರಾಜಧಾನಿಗೆ ಹಿಂತಿರುಗಿದನು.

ಪುಲಿಕೇಶಿಯು ವಾತಾಪಿಗೆ ಹಿಂತಿರುಗಿ ಬಂದಾಗ ಜನ ತಮ್ಮ ನೆಚ್ಚಿನ ದೊರೆಗೆ ಸಂಭ್ರಮದ ಸ್ವಾಗತವನ್ನು ನೀಡಿದರು. ಊರಿನ ಸುವಾಸಿನಿಯರು ಕಲಶ, ಕನ್ನಡಿ, ಪಂಚಮಹಾವಾದ್ಯಗಳೊಡನೆ ಬಂದು ರಾಜದಂಪತಿಗಳನ್ನು ಸ್ವಾಗತಿಸಿ, ಮುತ್ತಿನ ಆರತಿ ಎತ್ತಿದರು. ಪುರೋಹಿತರೂ, ವಂದಿಮಾಗಧರೂ ಸ್ತುತಿಪಾಠ ಹೇಳುತ್ತಿರುವಲ್ಲಿ, ನಗರದ ಜನತೆ ದಾರಿಯುದ್ದಕ್ಕೂ ಹೂಗಳನ್ನು ಚೆಲ್ಲಿ ತಮ್ಮ ಸಾಮ್ರಾಟನನ್ನು ವೈಭವದಲ್ಲಿ ಬರಮಾಡಿಕೊಂಡರು. ಜನ ಸಂತೋಷದಿಂದ ನಲಿಯುವ ಈ ಹೊತ್ತಿನಲ್ಲಿ ಪುಲಿಕೇಶಿಗೆ ಮಾತ್ರ ಸಂತೋಷವಿರಲಿಲ್ಲ. ಅವನ ಮನಸ್ಸು ದುಗುಡದಿಂದ ತುಂಬಿತ್ತು. ಯಾವುದೋ ಅವ್ಯಕ್ತ ನೋವು ಹೃದಯವನ್ನು ಹಿಂಡುತ್ತಿತ್ತು. ಬಹುಶಃ ಅವನ ಮನಸ್ಸು ತನ್ನ ಅಭ್ಯುದಯಕ್ಕೆ ಕಾರಣಳಾದ ಮಹಾರಾಣಿ ದುರ್ಲಭದೇವಿಯನ್ನು ನೆನೆಯುತ್ತಿತ್ತೋ ಏನೋ!

ಪುಲಿಕೇಶಿಯು ಉತ್ತರದ ಗಡಿಯಲ್ಲಿದ್ದ ಲಾಟ, ಮಾಳವ, ಗುರ್ಜರರನ್ನು

ಗೆದ್ದು ತನ್ನ ಮಾಂಡಲೀಶ್ವರರನ್ನಾಗಿ ಮಾಡಿಕೊಂಡದ್ದು ನಿದ್ರಿಸುತ್ತಿದ್ದ ಸಿಂಹ ವನ್ನು ಕೆರಳಿಸಿದಂತೆ ಆಗಿತ್ತು. ಪುಲಿಕೇಶಿಯು ಕನ್ಯಾಕುಬ್ಜದ ಅರಸನಾದ ಸಾಮ್ರಾಟ ಹರ್ಷವರ್ಧನನ ಆಗ್ರಹಕ್ಕೆ ಪಾತ್ರನಾಗಬೇಕಾಯಿತು. ಇದರ ಪರಿಣಾಮ ಎಷ್ಟು ಘೋರವಾಗಬಹುದೆಂದು ಪುಲಿಕೇಶಿಯಾಗಲೀ, ಹರ್ಷವರ್ಧನ ನಾಗಲೀ ಆಗ ತಿಳಿದಿರಲಿಲ್ಲ.

ಹಿಂದಿನಿಂದಲೂ ಲಾಟ, ಮಾಳವ, ಗುರ್ಜರ ಅರಸರು ಕನ್ಯಾಕುಬ್ಜದ ಸಾಮ್ರಾಟರಿಗೆ ಸಾಮಂತರಾಗಿದ್ದರು. ಪುಲಿಕೇಶಿಯು ಇವರನ್ನು ಗೆದ್ದು ತನ್ನ ಸಾಮಂತರನ್ನಾಗಿ ಮಾಡಿಕೊಂಡುದು ಮಾತ್ರವಲ್ಲ; ವಲ್ಲಭರಾಜನಾದ ಧೃವ ಸೇನನನ್ನು ಅಧಿಕಾರಚ್ಯುತನನ್ನಾಗಿ ಮಾಡಿದುದು ಉತ್ತರಾಪಥದ ಸಿಂಹವನ್ನು ಕೆರಳಿಸಿದಂತೆ ಆಗಿತ್ತು.

ಸಾಮ್ರಾಟ ಹರ್ಷವರ್ಧನನು ಸ್ಥಾನೇಶ್ವರದಲ್ಲಿ ಆಳುತ್ತಿದ್ದ ಪ್ರಭಾಕರ ವರ್ಧನನ ಕಿರಿಯಮಗ. ಅವನ ತಾಯಿ ಯಶೋಮತಿದೇವಿ. ಬಹುಕಾಲ ಈ ದಂಪತಿಗಳಿಗೆ ಪುತ್ರಸಂತಾನಭಾಗ್ಯವಿರಲಿಲ್ಲ. ಕಡೆಗೆ ಅವರು ಸೂರ್ಯ ನಾರಾಯಣನನ್ನು ಭಯಭಕ್ತಿಗಳಿಂದ ಸೇವಿಸಿದ ಮೇಲೆ, ದೈವಾನುಗ್ರಹದಿಂದ ಅವರಿಗೆ ರಾಜವರ್ಧನ, ಹರ್ಷವರ್ಧನ ಮತ್ತು ರಾಜ್ಯಶ್ರೀ ಎಂಬ ಮಕ್ಕಳು ಹುಟ್ಟಿದರು.

ಪ್ರಭಾಕರವರ್ಧನನು ರಾಜ್ಯಶ್ರೀದೇವಿಯನ್ನು ಮೌಖರಿ ವಂಶದ ಅವಂತಿವರ್ಮನ ಮಗ ಗ್ರಹವರ್ಮನಿಗೆ ಕೊಟ್ಟು ಮದುವೆಮಾಡಿದ್ದನು. ಈ ವಿವಾಹದ ಸಂತೋಷ ಸಂಭ್ರಮಗಳು ಮುಗಿಯುತ್ತಿರುವಾಗಲೇ, ಅತ್ತ ಭಯಂಕರ ವಾರ್ತೆಯೊಂದು ಬಂದಿತ್ತು.

ಪ್ರಭಾಕರವರ್ಧನನು ರಾಜ್ಯದ ಉತ್ತರದ ಗಡಿಯಮೇಲೆ ಹೂಣರು ದಂಡೆತ್ತಿ ಬಂದಿದ್ದರು. ತಂದೆಯ ಆಜ್ಞೆಯಂತೆ ಅವರನ್ನು ಸೋಲಿಸಿ, ಸದೆ ಬಡಿದು ಬರಲು ರಾಜವರ್ಧನನು ಸೈನ್ಯಸಮೇತ ಹೋದಾಗ, ಹರ್ಷವರ್ಧನನು ಮೃಗವಿಹಾರದ ಸಲುವಾಗಿ ಹಿಮವತ್ಪರ್ವತದ ಪ್ರಾಂತ್ಯಕ್ಕೆ ಹೋಗಿದ್ದನು. ಈ ಸಮಯದಲ್ಲಿ ಪ್ರಭಾಕರವರ್ಧನನು ಹಠಾತ್ತನೆ ಕಾಹಿಲೆ ಬಿದ್ದನು. ಅದನ್ನು ಪರಿಹರಿಸಲು ರಾಜ್ಯವೈದ್ಯರು ಮಾಡಿದ ಎಲ್ಲಾ ಪ್ರಯತ್ನಗಳು ವಿಫಲವಾಗಿ ಅವನು ತೀರಿಕೊಂಡನು. ಈ ಸುದ್ದಿಯನ್ನು ಕೇಳಿ ರಾಜವರ್ಧನನೂ, ಹರ್ಷ

ವರ್ಧನನೂ, ರಾಜಧಾನಿಗೆ ಓಡಿಬಂದರು. ಆದರೆ ತಂದೆಯ ಬಳಿ ಕಡೆಗಾಲ ದಲ್ಲಿ ಇರುವ ಭಾಗ್ಯ ಅವರಿಗಿರಲಿಲ್ಲ.

ಪ್ರಜೆಗಳ ಅಭೀಷ್ಟದಂತೆ ರಾಜವರ್ಧನನೇ ತಂದೆಯ ಸಿಂಹಾಸನವನ್ನೇರಿ ದನು. ತಂದೆಯ ಮರಣದ ಶೋಕದಿಂದ ಅವನು ಚೇತರಿಸಿಕೊಳ್ಳುತ್ತಿರು ವಾಗಲೇ ಇನ್ನೊಂದು ಭೀಕರವಾದ ಸುದ್ದಿ ಬಂದಿತು. ದುರುಳನಾದ ಮಾಳವ ರಾಜನು ತನ್ನ ವೈರಿಯಾದ ಗ್ರಹವರ್ಮನನ್ನು ಕೊಂದು ರಾಜ್ಯಶ್ರೀಯನ್ನು ಸೆರೆಯಲ್ಲಿಟ್ಟಿರುವನೆಂಬ ದಾರುಣವಾರ್ತೆ ಬಂದಿತು. ಇದನ್ನು ಕೇಳಿ ಸಹೋದರರ ರಕ್ತ ಕುದಿಯಿತು. ಆ ನೀಚ ಮಾಳವದರಸನನ್ನು ಶಿಕ್ಷಿಸಲು ರಾಜವರ್ಧನನು ಮಾಳವದ ಮೇಲೆ ದಂಡೆತ್ತಿ ಹೋದನು. ಮಾಳವದರಸನನ್ನು ಸೋಲಿಸಿ ದರೂ, ಗೌಡದೇಶದ ದೊರೆ ಶಶಾಂಕನ ದ್ರೋಹದಿಂದ ರಾಜವರ್ಧನನು ಕೊಲೆ ಯಾದನು. ಈ ಸುದ್ದಿ ಮಿಂಚಿನಂತೆ ಬಂದು ಹರ್ಷವರ್ಧನನನ್ನು ಬಡಿಯಿತು. ಅತ್ತ ತಂಗಿಗೆ ಬಂದ ವೈಧವ್ಯ—ಸೆರೆಮನೆಗಳು; ಇತ್ತ ಅಣ್ಣನ ಕೊಲೆ! ಇವು ಗಳಿಂದ ಕುದಿದು ನೀಚನಾದ ಗೌಡರಸನನ್ನು ಶಿಕ್ಷಿಸಲು ಹರ್ಷವರ್ಧನನು ತಾನೇ ಸೈನ್ಯಸಮೇತ ಹೊರಟನು. ಶಶಾಂಕನು ಸೋತು ಹರ್ಷವರ್ಧನನ ಕೈಯಲ್ಲಿ ತನ್ನ ದ್ರೋಹಕ್ಕೆ ಶಿಕ್ಷೆ ಅನುಭವಿಸಿದನು. ಆದರೆ ರಾಜ್ಯಶ್ರೀ ಮಾತ್ರ ಅವನಿಗೆ ದೊರೆಯದೆ ಹೋಗಿದ್ದಳು.

ಅವಳನ್ನು ಹುಡುಕಿಕೊಂಡು ಹರ್ಷವರ್ಧನನು, ಕಾಡುಮೇಡುಗಳನ್ನು ಅಲೆದನು. ವಿಂಧ್ಯಾಟವಿಯಲ್ಲಿ ದಿವಾಕರಮಿತ್ರನೆಂಬ ಬೌದ್ಧ ಸಂನ್ಯಾಸಿಯ ಸಹಾಯದಿಂದ ರಾಜ್ಯಶ್ರೀಯು ಹರ್ಷವರ್ಧನನಿಗೆ ಮತ್ತೆ ದೊರೆತಳು. ಸೋದರಿ ಯನ್ನು ಜೊತೆಯಲ್ಲಿ ಕರೆದುಕೊಂಡು ರಾಜಧಾನಿಗೆ ಹಿಂದಿರುಗಿ ಹರ್ಷವರ್ಧನನು ಪಟ್ಟಾಭಿಷಿಕ್ತನಾಗಿ, ಸಾಮ್ರಾಟನಾದನು. ಅವನು ತನ್ನ ಇಪ್ಪತ್ತೇಳನೆಯ ವಯಸ್ಸಿನವರೆಗೆ ಸಾಮ್ರಾಜ್ಯ ವಿಸ್ತರಣೆಯ ಕಾರ್ಯದಲ್ಲಿ ತೊಡಗಿದ್ದನು.

ಸಾಮ್ರಾಟ ಹರ್ಷವರ್ಧನನು ಪುಲಿಕೇಶಿಯಂತೆಯೇ ಮಹತ್ವಾಕಾಂಕ್ಷಿ ಯಾಗಿದ್ದನು. ಕ್ಷಾತ್ರತೇಜ, ಧಾರ್ಮಿಕ ಬುದ್ಧಿ, ಪ್ರಜಾನುರಾಗ, ಸ್ನೇಹಾಂತಃ ಕರಣ, ವಿದ್ಯಾಪಕ್ಷಪಾತಗಳಲ್ಲಿ ಅವನು ಪುಲಿಕೇಶಿಗೆ ಸರಿಸಾಟಿಯಾಗಿದ್ದನು. ಅವನೂ ಪುಲಿಕೇಶಿಯಂತೆ ಶಕಪುರುಷನೇ ಆಗಿದ್ದನು. ಅವನಿಗೆ ತಾನು ಸಮುದ್ರ ಗುಪ್ತನಂತೆ ಉತ್ತರಾಪಥ, ದಕ್ಷಿಣಾಪಥಗಳ ಅಖಂಡ ಸಾಮ್ರಾಟನಾಗುವ

ಮಹತ್ವಾಕಾಂಕ್ಷೆಯಿತ್ತು. ಇದನ್ನು ಕಾರ್ಯಗತಗೊಳಿಸಲು ಐದುಸಾವಿರ ಆನೆಗಳನ್ನೂ ಐವತ್ತುಸಾವಿರ ಪದಾತಿ ಸೈನ್ಯವನ್ನೂ, ಇಪ್ಪತ್ತುಸಾವಿರ ಅಶ್ವ ಸೈನ್ಯವನ್ನೂ ಅವುಗಳಿಗೆ ತಕ್ಕ ಶಸ್ತ್ರಾಸ್ತ್ರಗಳನ್ನೂ ಸಜ್ಜುಗೊಳಿಸಿ ದಂಡಯಾತ್ರೆ ಯನ್ನು ಕೈಗೊಂಡನು. ಐದುವರ್ಷಗಳ ಕಾಲ ಒಂದೆಡೆಯಲ್ಲಿ ನಿಲ್ಲದೆ ಸೈನಿಕ ರಿಗೆ ಒಂದು ಕ್ಷಣ ಬಿಡುವು ಕೊಡದೆ ವಾಯುವ್ಯಪ್ರಾಂತ್ಯ, ವಂಗರಾಜ್ಯದ ಬಹು ಭಾಗ, ಸಿಂಧೂದೇಶ, ಮಾಳವ, ಗುರ್ಜರಗಳನ್ನು ಗೆದ್ದು ಸ್ವಾಧೀನಪಡಿಸಿ ಕೊಂಡು, ಅವರಿಂದ ಕಪ್ಪಕಾಣಿಕೆಗಳನ್ನು ಪಡೆದನು. ನೇಪಾಳದ ಅರಸ, ಹೇಮಾದ್ರಿ ಪ್ರದೇಶದ ದೊರೆಯೂ ಆವನಿಗೆ ಮಾಂಡಲೇಶ್ವರರಾಗಿಲು ಒಪ್ಪಿ ಕೊಂಡರು. ಉತ್ಕಲವೂ ಆವನಿಗೆ ವಶವಾಗಿತ್ತು. ಈ ಸಮಯದಲ್ಲಿ ಹರ್ಷ ವರ್ಧನನ ಸೈನ್ಯದಲ್ಲಿ ಅರವತ್ತು ಸಾವಿರ ಸುಶಿಕ್ಷಿತ ಆನೆಗಳೂ, ಒಂದು ಲಕ್ಷ ಅಶ್ವಸೈನ್ಯ ಹಾಗೂ ಪದಾತಿ ಸೈನ್ಯ ಇದ್ದುವು. ಸಾಮಂತರು ಅವನಿಗೆ ಪರ ಮೇಶ್ವರನೆಂಬ ಬಿರುದನ್ನು ಕೊಟ್ಟು ಅವನ ಸಾರ್ವಭೌಮತ್ವವನ್ನು ಒಪ್ಪಿ ಕೊಂಡಿದ್ದರು.

ಉತ್ತರಾಪಥದ ಎಲ್ಲಾ ದೊರೆಗಳನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಮೇಲೆ ಹರ್ಷವರ್ಧನನು ವಲ್ಲಭರಾಜನಾದ ಧ್ರುವಸೇನನನ್ನು ಯುದ್ಧದಲ್ಲಿ ಸೋಲಿಸಿದನು. ಆ ವೀರಪುರುಷನ ಧೈರ್ಯ ಸಾಹಸಗಳಿಗೆ ಮೆಚ್ಚಿ ಅವನಿಗೆ ತನ್ನ ಸಾಕುಮಗಳಾಗಿದ್ದ ಜಯಶ್ರೀಯನ್ನು ಕೊಟ್ಟು ಮದುವೆಮಾಡಿ ದನು. ಇಂತಹ ಅಳಿಯನನ್ನು ಪುಲಿಕೇಶಿಯು ಸಿಂಹಾಸನದಿಂದ ತಳ್ಳಿ, ವಲ್ಲಭಿ ಯನ್ನು ಮಾತ್ರವಲ್ಲ ಮಾಳವ ಗುರ್ಜರಗಳನ್ನೂ ತನ್ನ ಸಾಮ್ರಾಜ್ಯಕ್ಕೆ ಸೇರಿಸಿ ಕೊಂಡುದು ಮಹಾಪರಾಧವಾಗಿತ್ತು. ಕುಪಿತನಾದ ಹರ್ಷವರ್ಧನನು ಪುಲಿ ಕೇಶಿಯನ್ನು ಶಿಕ್ಷಿಸಲು ತನ್ನ ಅಗಾಧ ಸೈನ್ಯದೊಡನೆ ಹೊರಟು ನರ್ಮದೆಯ ತೀರಕ್ಕೆ ಬಂದಿಳಿದನು.

ತಾನು ಸಿಂಹದೊಡನೆ ಸರಸವಾಡುತ್ತಿರುವೆನೆಂಬುದೂ ಪುಲಿಕೇಶಿಗೂ ತಿಳಿದಿತ್ತು. ಅವನು ಸಿಂಹವಿಕ್ರಮನಾಗಿದ್ದನೆಂದೇ ಈ ವಿನೋದ ಪ್ರಿಯವಾಗಿತ್ತು. ಅವನು ಹರ್ಷವರ್ಧನನ ಸೇನಾಬಲ, ಶೌರ್ಯ ಸಾಹಸಗಳನ್ನು ಕೇಳಿದ್ದರೂ ಅವನಿಗೆ ಹೆದರದೆ, ಅವನನ್ನು ನರ್ಮದೆಯ ತಡಿಯಲ್ಲಿ ತಡೆಯಲು ತನ್ನ ಸೈನ್ಯ ವನ್ನು ಸಜ್ಜುಗೊಳಿಸಿ ಸಮಂತಭದ್ರ, ರವಿಕೀರ್ತಿ ಮತ್ತು ಎರಪ್ಪದಂಡನಾಯ

ಕನ ಕೈಲಿಕೊಟ್ಟು, ಮಹಾದಂಡನಾಯಕನಾಗಿ ಹೊರಟು, ನರ್ಮದೆಯ ಇನ್ನೊಂದು ತೀರದಲ್ಲಿ ಶಿಬಿರ ಹೂಡಿದನು. ಯುದ್ಧಕ್ಕೆಂದೇ ಬಂದು, ನದಿಯ ಇಕ್ಕೆಲದಲ್ಲಿ ಶಿಬಿರ ಹೂಡಿದ ಇಬ್ಬರು ಸಮಪ್ರತಾಪಿಗಳಾದ ಸಾಮ್ರಾಟರಲ್ಲಿ ಯಾರು ಸೋಲುವರೋ, ಯಾರು ಗೆಲ್ಲುವರೋ ಹೇಳುವುದು ಕಷ್ಟವಾಗಿತ್ತು. ಎಲ್ಲರೂ ಯುದ್ಧದ ಬಗ್ಗೆ ಕುತೂಹಲಿಗಳಾಗಿದ್ದರು.

ಸಾಮ್ರಾಟ ಹರ್ಷವರ್ಧನನಿಗೆ ತನ್ನ ಅಧೀನದಲ್ಲಿದ್ದ ಮಾಳವ ಗುರ್ಜರ ಅರಸರನ್ನು ಸೋಲಿಸಿ ತನ್ನ ಸಾಮಂತರನ್ನಾಗಿ ಮಾಡಿಕೊಂಡು, ತನ್ನ ಅಳಿಯ ಧೃವಸೇನನನ್ನು ರಾಜ್ಯಚ್ಯುತನನ್ನಾಗಿ ಮಾಡಿದ ಪುಲಿಕೇಶಿಯ ಬಗ್ಗೆ ದ್ವೇಷ ಕ್ಕಿಂತಲೂ ಆಶ್ಚರ್ಯ, ಗೌರವಗಳು ಇದ್ದವು. ಹರ್ಷವರ್ಧನನು ಉತ್ತರಾ ಪಥೇಶ್ವರ, ಪರಮೇಶ್ವರನಾದ ತನ್ನಂಥವರನ್ನು ಎದುರಿಸಿ ನಿಂತ ಪುಲಿಕೇಶಿಯು ಸಾಮಾನ್ಯನಲ್ಲವೆಂದೂ, ವೀರಾಗ್ರಣಿಯೆಂದೂ ಊಹಿಸಿ ತಿಳಿದನು. ಅವನು ಪುಲಿಕೇಶಿಯ ಬಗ್ಗೆ ಸಾಕಷ್ಟು ವರ್ಣನೆಗಳನ್ನು ಕೇಳಿದ್ದನು.

ಅವನೂ ತನ್ನಂತೆಯೇ ಬಾಲ್ಯದಲ್ಲಿಯೇ ಸಿಂಹಾಸನವನ್ನೇರಿದ್ದನು. ತನ್ನಂತೆಯೇ ಅನೇಕ ವಿಯೋಗ, ದುಃಖಗಳಿಂದ ತಪ್ತನಾಗಿದ್ದನು. ತನ್ನಂತೆಯೇ ಮಹಾತ್ವಾಕಾಂಕ್ಷೆ ಹೊಂದಿದ್ದನು. ತನ್ನಂತೆಯೇ ಭಾರತವರ್ಷದ ಅಖಂಡ ಸಾಮ್ರಾಟನಾಗಿ ಮೆರೆಯುವ ಕನಸು ಕಟ್ಟಿದ್ದನು.

ಅವನ ವಿಷಯದಲ್ಲಿ ದ್ವೇಷ ಹಗೆತನಗಳಿಂತಲೂ ಅಭಿಮಾನ ಗೌರವಗಳೇ ಹೆಚ್ಚಾಗಿದ್ದವು. ಇಂತಹ ವೀರಪುರುಷನನ್ನು ಎದುರು ಹಾಕಿಕೊಳ್ಳುವುದು ಅವ ನಿಗೆ ಇಷ್ಟವಿರಲಿಲ್ಲ. ಪುಲಿಕೇಶಿಯ ಮೇಲೆ ಯುದ್ಧಕ್ಕೆಂದು ಬಂದಿದ್ದರು, ಸಾಧ್ಯ ವಾದರೆ ಯುದ್ಧವನ್ನು ತಪ್ಪಿಸಿ, ಪುಲಿಕೇಶಿಯ ಸ್ನೇಹವನ್ನು ಪಡೆಯಬೇಕೆಂಬ ಆಸೆ ಇತ್ತು. ಆದರೆ ಯುದ್ಧಕ್ಕೆಂದು ಬಂದ ತಾನು, ತನ್ನವರಿಗೆ ಆದ ಅನ್ಯಾಯ ಅಪಮಾನಗಳನ್ನು ಮರೆತು ತಾನಾಗಿ ಸಂಧಿಮಾಡಿಕೊಂಡರೆ ಪುಲಿಕೇಶಿಯ ದೃಷ್ಟಿಯಲ್ಲಿ ತಾನು ಸಣ್ಣವನಾಗುವೆನೆಂದೂ, ತನ್ನ ಸೈನ್ಯದ ಬಗ್ಗೆ ಶತ್ರುಸೈನಿ ಕರು ತೀರಾ ಹಗುರಾಗಿ ಕಾಣುವರೆಂದೂ ಭಾವಿಸಿ, ಈ ಬಗ್ಗೆ ಯಾವ ದುಡುಕು ಕಾರ್ಯವನ್ನೂ ಕೈಗೊಳ್ಳಲಿಲ್ಲ.

ಆದರೆ ಸೈನ್ಯವು ನರ್ಮದೆಯ ದಂಡೆಯಲ್ಲಿ ಬೀಡುಬಿಟ್ಟು ಒಂದೆರಡು ವಾರಗಳಾದರೂ, ಶತ್ರುಗಳು ತಮ್ಮ ಮೇಲೆ ಬೀಳುವ ಸೂಚನೆಯಾಗಲೀ, ಹೆದರಿ ಹಿಮ್ಮೆಟ್ಟಿನ ಸುಳಿವಾಗಲೀ ಕಾಣಲಿಲ್ಲ. ಪುಲಿಕೇಶಿಯು ತನ್ನ ಅಪಾರ

ಸೈನ್ಯಕ್ಕೆ ಹೆದರದೆ ಯುದ್ಧ ಕೊಡಲು ನಿಶ್ಚಯಿಸಿರುವನೆಂದು ಅವನ ವರ್ತನೆ ಯಿಂದ ಹರ್ಷವರ್ಧನನು ಊಹಿಸಿ ತಿಳಿದನು. ಆದರೆ ಯುದ್ಧದಿಂದ ಉಂಟಾ ಗುವ ರಕ್ತಪಾತವನ್ನು ಸಂಧಾನದಿಂದ ತಪ್ಪಿಸಬಹುದಾದರೆ, ಅದಕ್ಕೆ ಏಕೆ ಪ್ರಯತ್ನಿಸಬಾರದೆಂದು ಅವನ ಅಂತರಂಗದಲ್ಲಿ ಅಸ್ಪಷ್ಟವಾಣಿಯೊಂದು ಮೊರೆ ಯುತ್ತಿತ್ತು. ಸತ್ಯ, ಪ್ರೇಮ, ಅಹಿಂಸೆಗಳ ವ್ರತ ತೊಟ್ಟ ಭಗವಾನ್ ಶಾಕ್ಯ ಮುನಿಯ ದಿವ್ಯ ಸಂದೇಶವನ್ನು ಜಗತ್ತಿಗೆ ಸಾರಲು ಹೊರಟಿದ್ದ ಹರ್ಷವರ್ಧನ ನಿಗೆ ಹಿಂಸಾಮಯವಾದ ಯುದ್ಧಕ್ಕಿಂತಲೂ ಶಾಂತಿಪ್ರಿಯವಾದ ಸಂಧಾನವೇ ಪ್ರಿಯವಾಗಿತ್ತು. ಅವನು ತನ್ನ ಹೃದ್ಗತವನ್ನು ತನ್ನ ಆಪ್ತಮಿತ್ರರೂ, ನುರಿತ ಸೇನಾನಿಗಳೂ ಆದ ಭಂಡಿಕುಮಾರ, ಭಾನಿಕುಮಾರ, ಸಿಂಹನಾದ, ಸ್ಕಾಂದ ಗುಪ್ತರಲ್ಲಿ ತೋಡಿಕೊಂಡಾಗ, ಅವರು ಸಂಧಾನದ ಮೂಲಕ ಕಾರ್ಯ ಸಾಧಿಸಿ ಕೊಳ್ಳುವ ಮಾತನ್ನೇ ಎತ್ತಿ ಹಿಡಿದರು.

ಅದರಂತೆ ಹರ್ಷವರ್ಧನನು ಪುಲಿಕೇಶಿಯ ಶಿಬಿರಕ್ಕೆ ರಾಯಭಾರಿಯಾಗಿ ಭಂಡಿಕುಮಾರನನ್ನು ಕಳುಹಿಸಿದನು.

ಭಂಡಿಕುಮಾರನು ನುರಿತ ದಂಡನಾಯಕನು ಎಂತೋ ಒಳ್ಳೇ ರಾಜ ಕಾರಣ ಮುತ್ಸದ್ದಿಯೂ ಆಗಿದ್ದನು. ಅವನು ಸಾಮ್ರಾಟ್ ಹರ್ಷವರ್ಧನನ ಆಪ್ತ ಗೆಳೆಯನೂ, ಸೇವಕನೂ, ಸಾಮ್ರಾಜ್ಯದ ಹಿತೈಷಿಯೂ ಆಗಿದ್ದನು. ಅವನ ಕೂದಲು ಸಾಮ್ರಾಜ್ಯದ ಸೇವೆಯಲ್ಲಿಯೇ ಹಣ್ಣಾಗಿತ್ತು. ಹರ್ಷವರ್ಧನನ ದಂಡ ಯಾತ್ರೆಗಳಲ್ಲಿ ಅವನು ಮಹತ್ವದ ಪಾತ್ರವಹಿಸಿದ್ದನು.

## ೧೬

ಪುಲಿಕೇಶಿಯು ಶತ್ರುಪಕ್ಷದಿಂದ ರಾಯಭಾರಿಯಾಗಿ ಬಂದಿದ್ದ ಭಂಡಿ ಕುಮಾರನನ್ನು ವಿಶ್ವಾಸದಿಂದ ಬರಮಾಡಿಕೊಂಡು, ಉಚಿತ ಆಸನವನ್ನು ಇತ್ತು ಕುಶಲಪ್ರಶ್ನೆ ಮಾಡಿದನು. ಔಪಚಾರಿಕ ಮಾತುಕತೆಗಳೆಲ್ಲ ಮುಗಿದ ಮೇಲೆ, ಭಂಡಿಕುಮಾರನು ನಮ್ರತೆಯಿಂದ ಮೇಲೆದ್ದು ಪುಲಿಕೇಶಿಗೆ ಹೀಗೆ ಅರಿಕೆ ಮಾಡಿ ಕೊಂಡನು :

"ಪ್ರಭು, ಮಹಾರಾಜಾಧಿರಾಜ, ರಾಜಪರಮೇಶ್ವರ ಇತ್ಯಾದಿ ಬಿರುದಾಂಕಿತರಾದ ಸಾಮ್ರಾಟ್ ಹರ್ಷವರ್ಧನ ಮಹಾರಾಜರು ತಮಗೆ ಈ ನಿರೂಪವನ್ನು ಕೊಟ್ಟಿದ್ದಾರೆ" ಎಂದು ಹೇಳಿ ಸುವರ್ಣದ ಕೊಳವಿಯಲ್ಲಿದ್ದ ಪತ್ರವನ್ನು ಹೊರ ತೆಗೆದು, ಪುಲಿಕೇಶಿಯ ಕೈಗೆ ಇತ್ತನು.

ಅದನ್ನು ಪುಲಿಕೇಶಿಯು ಆದರದಿಂದ ಸ್ವೀಕರಿಸಿ, ಓದಿಕೊಂಡು, ಅದನ್ನು ಬಳಿಯಿದ್ದ ಸಮಂತಭದ್ರನ ಕೈಗೆ ಕೊಟ್ಟನು. ಅವನು, ಅವನು ಅದನ್ನೊಮ್ಮೆ ಓದಿಕೊಂಡು ಅಲ್ಲೇ ಇದ್ದ ರವಿಕೀರ್ತಿಯ ಕಡೆಗೆ ಕೊಟ್ಟನು. ಅದನ್ನು ರವಿಕೀರ್ತಿಯು ಓದಿ ಮುಗುಳುನಗೆ ನಕ್ಕನು.

ಅದರಲ್ಲಿ ಹೀಗೆ ಬರೆದಿತ್ತು :

"ಸ್ವಸ್ತಿ ॥ ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಕನ್ಯಾಕುಬ್ಜ ಸಿಂಹಾಸನಾಧೀಶ್ವರ ಸಾಮ್ರಾಟ್ ಹರ್ಷವರ್ಧನರು, ವಾತಾಪಿಪುರವರೇಶ್ವರರಾದ ಪುಲಿಕೇಶಿ ದೊರೆಗಳಿಗೆ ವಿಶ್ವಾಸಪೂರ್ವಕವಾಗಿ ಬರೆಸಿ ಕಳುಹಿಸಿರುವ ನಿರೂಪವೇನೆಂದರೆ,

ತಾವು ವೀರಾಗ್ರಣಿಗಳೂ, ರಾಜನೀತಿ ನಿಪುಣರೂ, ಪ್ರಜಾವತ್ಸಲರೂ ಆದ ದೊರೆಗಳೆಂದು ಕೇಳಿದ್ದೇವೆ. ತಮ್ಮ ದಂಡಯಾತ್ರೆಗಳ ಕತೆಯನ್ನು ಅರಿತಿದ್ದೇವೆ. ತಮ್ಮಂತಹ ವೀರಪುರುಷರನ್ನು ಸಂದರ್ಶಿಸುವ ಭಾಗ್ಯ ನಮಗೆ ಇದುವರೆಗೆ ದೊರೆತಿರಲಿಲ್ಲ. ಈಗ ರಣರಂಗದಲ್ಲಿ ತಮ್ಮನ್ನು ನೋಡುವ ಸದವಕಾಶ ದೊರೆತಿದೆ. ಇದಕ್ಕಾಗಿ ನಾವು ಸಂತೋಷಿಸಿದರೂ ಇದರಿಂದ ನಮಗೆ ಮಾತ್ರ ಆಗಬೇಕಾದ ಸಂತೋಷ ಆಗುತ್ತಿಲ್ಲ. ಇದಕ್ಕೆ ಕಾರಣ ನಮಗೆ ಬೇಕಾಗಿರುವುದು ನಿಮ್ಮಂತಹ ಘನತೆವೆತ್ತ ವ್ಯಕ್ತಿಗಳ ಸ್ನೇಹ, ಸೌಹಾರ್ದಗಳೇ ಹೊರತು, ದ್ವೇಷ ಹಗೆತನಗಳಲ್ಲ.

ಪ್ರಸ್ತುತ, ನಾವಿಬ್ಬರೂ ನಮ್ಮ ಸೈನ್ಯಗಳೊಡನೆ ಬಂದು ಕಾಳಗದ ಕರೆಯನ್ನು ಎದುರು ನೋಡುತ್ತಿದ್ದೇವೆ. ಈ ಸಂದರ್ಭದಲ್ಲಿ ಸಂಧಾನದ ಮಾತು ಉಚಿತವೆನಿಸಲಾರದೆಂಬುದನ್ನು ನಾವು ಬಲ್ಲೆವು. ಆದರೆ, ಭಗವಾನ್ ಶಾಕ್ಯಮುನಿಯ ಪಾದಪದ್ಮಾರಾಧಕರಾದ ನಾವು ಹಿಂಸೆಗಿಂತಲೂ ಅಹಿಂಸೆಯನ್ನು ಎತ್ತಿಹಿಡಿಯುತ್ತೇವೆ. ಯುದ್ಧಕ್ಕಿಂತಲೂ ನಾವು ಸಂಧಾನವನ್ನೂ ಪುರಸ್ಕರಿಸುತ್ತೇವೆ. ತಾವು ಅನ್ಯಥಾ ಭಾವಿಸದೆ ಈ ಬಗ್ಗೆ ಬಿಚ್ಚುಮನಸ್ಸಿನಿಂದ ವಿಚಾರ ಮಾಡಬೇಕು.

ಈಗ ನಮ್ಮೆರಡು ರಾಷ್ಟ್ರಗಳಿಗೆ ಮಾಳವ, ಗುರ್ಜರಗಳ ಕಾರಣದಿಂದಲೂ, ವಲ್ಲಭರಾಜ ಧೃವಸೇನರ ಕಾರಣದಿಂದಲೂ ವೈಮನಸ್ಸುಂಟಾಗಿದೆ. ಇದನ್ನು ಶಾಂತಿಯುತವಾಗಿ ಬಗೆಹರಿಸಿಕೊಳ್ಳಬಹುದೆಂಬ ಧೈರ್ಯ ನಮಗೆ ಇದೆ. ಅಂತಲೇ ತಮ್ಮೆಡೆಗೆ ನಾವು ಸಂಧಾನಾಪೇಕ್ಷಿಯಾಗಿ ರಾಯಭಾರಿಗಳನ್ನು ಕಳುಹಿಸಿಕೊಟ್ಟಿದ್ದೇವೆ. ಅವರೊಡನೆ ತಾವು ಚರ್ಚಿಸಿ ಎರಡು ರಾಷ್ಟ್ರಗಳಿಗೆ ಗೌರವ ತರುವ ಯೋಗ್ಯ ಸಂಧಾನದ ಷರತ್ತುಗಳನ್ನು ರೂಪಿಸಿದರೆ, ನಮಗಿಂತ ಹೆಚ್ಚು ಸಂತೋಷಪಡುವವರು ಬೇರೆ ಇಲ್ಲ. ನಮಗೆ ಬೇಕಾಗಿರುವುದು ನಿಮ್ಮ ಮೈತ್ರಿಯೇ ಹೊರತು ದ್ವೇಷವಲ್ಲ. ಎರಡು ರಾಷ್ಟ್ರಗಳಿಗೆ ಶಾಂತಿ ಒಪ್ಪಂದ ಏರ್ಪಟ್ಟು ನಾವಿಬ್ಬರೂ ಗೆಳೆಯರಾದರೆ, ಇದು ನಮ್ಮೆರಡು ರಾಷ್ಟ್ರಗಳ ಇತಿಹಾಸದಲ್ಲಿ ಚಿರಸ್ಮರಣೀಯವಾದ ದಿನವಾಗುತ್ತದೆ. ನಾವು ತಮ್ಮಲ್ಲಿ ಬಿನ್ನವಿಸಿಕೊಳ್ಳುವುದು ಇಷ್ಟೆ : ನಮ್ಮೆರಡು ರಾಷ್ಟ್ರಗಳ ಕಲ್ಯಾಣಕ್ಕಾಗಿ, ಸ್ನೇಹ ಸೌಹಾರ್ದಗಳಿಗಾಗಿ, ತಾವು ನಮ್ಮಿಂದ ಬಲಾತ್ಕಾರವಾಗಿ ಕಿತ್ತುಕೊಂಡಿರುವ ಪ್ರದೇಶಗಳನ್ನು ನಮಗೆ ಹಿಂದಿರುಗಿಸಿ, ಹಿಂದಣದನ್ನು ಮರೆತು, ಇತಿಹಾಸದಲ್ಲಿ ಅಜರಾಮರವಾಗಿ ನಿಲ್ಲುವ ಸ್ನೇಹ ಒಪ್ಪಂದಕ್ಕೆ ಅಂಕಿತವಿಡುವ ಕೃಪೆಮಾಡಬೇಕು. ಈ ಬಗ್ಗೆ ಇದು ಸೂಚನೆಯೇ ಹೊರತು ಒತ್ತಾಯವಲ್ಲ. ನಾವು ಸಾಮ್ರಾಟರಾಗಿ ಈ ಮಾತನ್ನು ಬರೆಯುತ್ತಿಲ್ಲ. ಸಾಮ್ರಾಜ್ಯದ ಜನತೆಯ ಕಿಂಕರರಾಗಿ, ಧರ್ಮದಾನಿ ಬುದ್ಧಭಗವಾನರ ಪಾದ ಸೇವಕರಾಗಿ ಬರೆಯುತ್ತಿದ್ದೇವೆ. ಈ ಸಂಧಾನವನ್ನು ಪುರಸ್ಕರಿಸುವುದೂ, ತಿರಸ್ಕರಿಸುವುದೂ ತಮಗೆ ಸೇರಿದುದು.

ಇಂತು ತಮ್ಮ ಸ್ನೇಹಾಕಾಂಕ್ಷಿ."

ಎಂದು ಬರೆದು ಸಾಮ್ರಾಟ್ ಹರ್ಷವರ್ಧನನು "ಸ್ವಹಸ್ತೋಮಮ ರಾಜಾಧಿರಾಜ ಶ್ರೀಹರ್ಷಸ್ಯ" ಎಂದು ತನ್ನ ಅಂಕಿತವನ್ನು ಹಾಕಿದ್ದನು.

ಕೆಲವು ಕಾಲ ಯಾರೂ ಮಾತನಾಡಲಿಲ್ಲ. ಎಲ್ಲರೂ ಶಿಲಾವಿಗ್ರಹಗಳಂತೆ ಕುಳಿತಿದ್ದರು. ಕಡೆಗೆ ಮೌನವನ್ನು ಒಡೆದು ಪುಲಿಕೇಶಿಯೇ ಹೇಳಿದ :

"ಭಂಡಿಕುಮಾರರೇ, ಸಾಮ್ರಾಟ್ ಹರ್ಷವರ್ಧನ ಮಹಾರಾಜರು ನಮ್ಮ ಬಳಿಗೆ ತಮ್ಮನ್ನು ರಾಯಭಾರಿಗಳಾಗಿ ಕಳುಹಿಸಿ, ತುಂಬಾ ಗೌರವಿಸಿದ್ದಾರೆ. ಶತ್ರುಗಳಾದ ನಮ್ಮಲ್ಲಿ ವಿಶ್ವಾಸವನ್ನು ತೋರಿಸಿ, ಸ್ನೇಹಹಸ್ತವನ್ನು ನೀಡಿ

ಪ್ತಾರೆ. ಇದನ್ನು ತಿರಸ್ಕರಿಸುವಷ್ಟು ಉದ್ಧಟತನ, ಅವಿವೇಕ ನಮ್ಮಲ್ಲಿಲ್ಲ; ನಮಗೂ ಈ ಯುದ್ಧ ಬೇಕಿಲ್ಲ. ನಾವೂ ಅವರೊಡನೆ ಶಾಂತಿಗಾಗಿ ಸಿದ್ಧರಾಗಿದ್ದೇವೆ. ನಿಮ್ಮ ದೊರೆಗಳು ಪತ್ರದಲ್ಲಿ ಬರೆದಿರುವಂತೆ, ಎರಡು ರಾಷ್ಟಗಳ ಮೈತ್ರಿ, ಕಲ್ಯಾಣ ಈ ಒಪ್ಪಂದದಿಂದ ಸಾಧ್ಯವಾದರೆ, ನಾವೂ ಸಂತೋಷಪಡುತ್ತೇವೆ. ಈ ಸ್ನೇಹ ಒಪ್ಪಂದದ ಷರತ್ತುಗಳನ್ನು ತಾವು ನಿಸ್ಸಂಕೋಚವಾಗಿ ತಿಳಿಸಬೇಕು" ಎಂದು ಪ್ರಾರ್ಥಿಸಿದನು.

"ಪ್ರಭು, ಶ್ರೀಹರ್ಷವರ್ಧನ ಮಹಾರಾಜರು ತಮ್ಮ ಬಗ್ಗೆ ತಳೆದಿರುವ ಅಭಿಮಾನ ಗೌರವಗಳು ಯಥಾರ್ಥವೆಂದು ನನಗೆ ಈಗ ಅರಿವಾಯಿತು. ತಾವೂ ಅವರಂತೆ ವೀರಪುರುಷರೂ, ಶಾಂತಿಪ್ರಿಯರೂ ಆಗಿರುವುದರಿಂದ ಅವರ ಮೈತ್ರಿಯನ್ನೇ ಬಯಸಿದ್ದೀರಿ. ಸಂಧಾನದ ಮೂಲಕ ಎರಡೂ ರಾಷ್ಟ್ರಗಳ ಕಲ್ಯಾಣವನ್ನೇ ಸಾಧಿಸಬೇಕೆಂದಿದ್ದೀರಿ. ಇದು ತುಂಬಾ ಸಂತೋಷದ ಸಂಗತಿ. ನೀವು ನಮ್ಮನ್ನು ನಿಮ್ಮ ಸ್ನೇಹಿತರಂತೆ ನಡೆಸಿಕೊಂಡಿದ್ದೀರಿ. ನಿಮ್ಮಲ್ಲಿ ನಮಗೆ ಯಾವ ಸಂಕೋಚವಿಲ್ಲ. ನನ್ನ ಮನಸ್ಸಿನಲ್ಲಿರುವುದನ್ನು—ಅಲ್ಲ ಸಾಮ್ರಾಟರ ಮನಸ್ಸಿನಲ್ಲಿರುವುದನ್ನು—ತಮ್ಮಲ್ಲಿ ಬಿನ್ನವಿಸುತ್ತೇನೆ" ಎಂದು ಹೇಳಿ ಕೆಲವು ಕಾಲ ಯೋಚನಾಮಗ್ನನಾಗಿ ಕುಳಿತು ಅನಂತರ ಹೇಳಿದನು :

"ಸಾಮ್ರಾಟರು ನಮ್ಮೆರಡು ರಾಷ್ಟ್ರಗಳಿಗೆ ಹಿತವಾಗುವ ಗೌರವ ಒಪ್ಪಂದ ಯಾವ ರೀತಿಯಾಗಿ ರೂಪುಗೊಳ್ಳಬೇಕೆಂಬುದರ ಬಗ್ಗೆ ತಮ್ಮ ಆಶಯವೇನೆಂಬುದನ್ನೂ ಪತ್ರದಲ್ಲೇ ಸೂಚಿಸಿದ್ದಾರೆ. ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಾವು ಚರ್ಚಿಸಬಹುದು."

ಈ ಮಾತು ಕೇಳಿ ಪುಲಿಕೇಶಿಯು ತಿರಸ್ಕಾರದ ನಗೆ ನಕ್ಕನು. ಅದನ್ನು ನೋಡಿ ಭಂಡಿಕುಮಾರನು "ಏಕೆ ಪ್ರಭು ?" ಎಂದನು.

"ರಾಯಭಾರಿಗಳೇ, ನಾವು ಸ್ಪಷ್ಟವಾಗಿ ಮಾತನಾಡುವುದನ್ನು ನೀವು ಅನ್ಯಥಾ ಭಾವಿಸಬಾರದು. ನೀವು ಸ್ನೇಹಾಕಾಂಕ್ಷಿಗಳಾಗಿದ್ದೀರಿ. ನೀವು ನೀಡಿರುವ ಸ್ನೇಹಹಸ್ತವನ್ನು ತಿರಸ್ಕರಿಸುವ ಇಚ್ಛೆ ನಮಗಿಲ್ಲ. ಅಂತಲೇ ಈ ಮಾತನ್ನು ನಾವು ಸ್ಪಷ್ಟವಾಗಿ ತಿಳಿಸುತ್ತಿದ್ದೇವೆ. ನಿಮ್ಮ ಸಾಮ್ರಾಟರು ನಮ್ಮೊಡನೆ ಸ್ನೇಹ ಸೌಹಾರ್ದಗಳನ್ನು ಅಪೇಕ್ಷಿಸಿದ್ದರೂ, ಸಂಧಾನಾಪೇಕ್ಷಿಯಾಗಿದ್ದರೂ ಅವರು

ಸೂಚಿಸಿದ ಷರತ್ತಿನಮೇಲೆ ಎರಡು ರಾಷ್ಟ್ರಗಳಿಗೆ ಶಾಂತಿ ಒಪ್ಪಂದವೇರ್ಪಡಲು ಸಾಧ್ಯವಿಲ್ಲವೆಂದು ವಿಷಾದದಿಂದ ತಿಳಿಸಬೇಕಾಗಿದೆ."

"ಏಕೆ ಪ್ರಭು ?"

"ಸ್ವಾಭಿಮಾನಿಯಾದ, ಆತ್ಮಗೌರವವುಳ್ಳ, ಸ್ವತಂತ್ರ ಸಾಮ್ರಾಟನಾರೂ ಇಂತಹ ಅಪಮಾನಕರವಾದ ಒಪ್ಪಂದಕ್ಕೆ, ಅದು ಶಾಂತಿ ಒಪ್ಪಂದವೇ ಆಗಲಿ— ಒಪ್ಪಿಗೆ ಕೊಡಲಾರ. ನಿಮ್ಮ ಸಾಮ್ರಾಟರು ನಾವು ಯಾವ ಕಾಲಕ್ಕೂ ಒಪ್ಪಲು ಸಾಧ್ಯವಿಲ್ಲದ ಷರತ್ತನ್ನು ಸೂಚಿಸಿದ್ದಾರೆ. ಅದರ ಮೇಲೆ ನಮ್ಮೆರಡು ರಾಷ್ಟ್ರಗಳ ಕಲ್ಯಾಣ ಸಾಧಿಸುವ ಯಾವುದೇ ಸ್ನೇಹ ಒಪ್ಪಂದ ಮಾಡಿಕೊಳ್ಳಲು ಸಾಧ್ಯ ವಿಲ್ಲ!"

"ಪ್ರಭು, ತಾವು ಸಾಮ್ರಾಟ ಹರ್ಷವರ್ಧನ ಮಹಾರಾಜರು ವ್ಯಕ್ತಪಡಿ ಸಿದ ಅಭಿಪ್ರಾಯವನ್ನು ತಪ್ಪುಗ್ರಹಿಸಿದ್ದೀರಿ. ಅವರೆಂದೂ ತಮಗೆ ಅಪಚಾರ ಮಾಡುವ, ಇಲ್ಲವೇ ತಮ್ಮ ಘನತೆ ಗೌರವಗಳಿಗೆ ಕುಂದು ತರುವ ಯಾವುದೇ ಷರತ್ತನ್ನು ಸೂಚಿಸಿಲ್ಲ, ತಾವು ಘನತೆವೆತ್ತ ಸಾಮ್ರಾಟರೆಂದು ಹರ್ಷವರ್ಧನ ಮಹಾರಾಜರು ತಿಳಿದಿದ್ದಾರೆ. ತಮ್ಮನ್ನು ತಮ್ಮ ಸರಿಸಮಾನರೆಂದು ತಿಳಿ ದಿದ್ದಾರೆ. ಉತ್ತರಾಪಥದ ಯಾವ ಸಾಮ್ರಾಟನಿಗೂ ಕೊಡದ ಗೌರವವನ್ನೂ, ಮನ್ನಣೆಯನ್ನೂ ತಮಗೆ ಇತ್ತಿದ್ದಾರೆ. ಅವರಿಗೆ ಬೇಕಾಗಿರುವುದು ತಮ್ಮ ಸ್ನೇಹ ಸೌಹಾರ್ದಗಳೇ ಹೊರತು, ರಾಜ್ಯಲೋಭವಲ್ಲ."

"ಹಾಗಾದರೆ, ಅವರು ನಾವು ಬಾಹುಬಲದಿಂದ ಗೆದ್ದ ರಾಜ್ಯಗಳನ್ನು ಮತ್ತೆ ಬಿಟ್ಟುಕೊಡಲು ಏಕೆ ಸೂಚಿಸುತ್ತಾರೆ ?"

"ಪ್ರಭು, ತಾವು ನನ್ನ ಮಾತನ್ನು ಅನ್ಯಥಾ ಭಾವಿಸಬಾರದು. ಈ ರಾಜ್ಯ ಗಳು ಹಿಂದಿನಿಂದಲೂ, ನಮ್ಮ ಸಾಮ್ರಾಜ್ಯಕ್ಕೆ ಸೇರಿದ್ದ ಭೂಭಾಗಗಳು. ತಾವು ವೃಥಾ ಕಾರಣವಾಗಿ ಮಾಳವ, ಗುರ್ಜರ ವಲ್ಲಭಿಗಳನ್ನು ಮುತ್ತಿ ವಶಪಡಿಸಿ ಕೊಂಡಿದ್ದೀರಿ. ನಮ್ಮ ಸಾಮ್ರಾಟರು ತಮ್ಮದಾದ ರಾಜ್ಯಗಳನ್ನು ತಮಗೆ ಬಿಟ್ಟುಕೊಡಲು ಪ್ರಾರ್ಥಿಸಿದ್ದಾರೆ, ಇದರಲ್ಲಿ ಯಾವುದೇ ದುರಾಗ್ರಹವಿಲ್ಲ— ಎಲ್ಲವನ್ನೂ ಸದ್ಭಾವನೆಯಿಂದಲೇ ಬರೆದಿದ್ದಾರೆ !" ಎಂದು ಭಂಡಿಕುಮಾರ, ವಿನೀತನಾಗಿ.

"ನಿಮ್ಮ ಸಾಮ್ರಾಟರು ನಿಜವಾಗಿಯೂ ಸ್ನೇಹಾಪೇಕ್ಷಿಯಾಗಿದ್ದರೆ

ನಿರ್ಮಲಾಂತಃಕರಣ ಬುದ್ಧಿಯಿಂದ ನಮ್ಮೊಡನೆ ಮೈತ್ರಿಯನ್ನು ಅಪೇಕ್ಷಿಸು ತ್ತಿರುವುದಾದರೆ, ನಮ್ಮ ಮೇಲೆ ಇಂತಹ ಅವಮಾನಕರವಾದ ಷರತ್ತನ್ನು ಏಕೆ ಒತ್ತಾಯದಿಂದ ಹೇರುತ್ತಿದ್ದರು ? ಇದರಲ್ಲಿ ಸದ್ಭಾವನೆಗಿಂತಲೂ, ದುರುದ್ದೇಶವೇ ಇದೆ ಎಂದು ನಮ್ಮ ಭಾವನೆ."

"ತಮ್ಮದೇ ಆದ ಪ್ರದೇಶಗಳನ್ನು ಬಿಟ್ಟುಕೊಡಲು ಕೋರುವುದು ದುರದ್ದೇಶವೆ ?"

"ಹೌದು, ನಾವು ಅಧಿಕ ಬಲಿದಾನ, ಶ್ರಮ, ವೆಚ್ಚಗಳಿಂದ ಗೆದ್ದ ಆ ಪ್ರದೇಶಗಳನ್ನು ಬಿಟ್ಟುಕೊಡಲು ಬಯಸುವುದು ದುರುದ್ದೇಶವಲ್ಲವೆ ? ಇಲ್ಲ ಭಂಡಿಕುಮಾರರೇ, ಇಂತಹ ಯಾವುದೇ ಒಪ್ಪಂದಕ್ಕೆ ನಾವು ಒಪ್ಪಲು ಸಿದ್ಧರಿಲ್ಲ. ಮೈತ್ರಿಯ ಹೆಸರಿನಲ್ಲಿ ಅಪಮಾನಕರವಾದ ಒಪ್ಪಂದಕ್ಕೆ ಸಹಿ ಹಾಕಿ ಆತ್ಮಘಾತ ಮಾಡಿಕೊಳ್ಳಲಾರೆವು. ನಮ್ಮ ರಾಷ್ಟ್ರದ ಘನತೆಗೌರವಗಳನ್ನು ಗಾಳಿಗೆ ತೂರಲಾರೆವು! ನಿಮಗೆ ನಿಜವಾದ ನಮ್ಮ ಸ್ನೇಹಬೇಕಾಗಿದ್ದರೆ ವೀರರಿಗೊಪ್ಪುವ ರೀತಿಯಲ್ಲಿ ನಡೆಯಲಿ !"

"ಪ್ರಭು, ತಮ್ಮನ್ನು ಸಾಮ್ರಾಟರು ಅಪ್ರತಿಮ ವೀರರೆಂದು ಪರಿಗಣಿಸಿಯೇ ವೀರೋಚಿತವಾದ ರೀತಿಯಲ್ಲಿ ನಡೆಸಿಕೊಂಡಿದ್ದಾರೆ. ಉತ್ತರಾಪಥದ ಮಾಂಡಲೀಕ ಮನ್ನೆಯರಿಂದ ಓಲೈಸಿಕೊಳ್ಳುತ್ತಿರುವ ಮಹಾರಾಜರು, ತಮ್ಮ ವೀರಶ್ರೀಯನ್ನು ಕೇಳಿ, ತಮ್ಮ ಸಿಂಹಾಸನದಿಂದ ಕೆಳಗಿಳಿದು ಬಂದಿದ್ದಾರೆ!"

"ಇದು ಅವರು ನಮಗೆ ಕೊಡುತ್ತಿರುವ ಗೌರವವೆಂದು ನಾವು ತಿಳಿದಿಲ್ಲ. ಇದು ಸ್ನೇಹದ ಹೆಸರಿನಲ್ಲಿ ಅವರು ಮಾಡುತ್ತಿರುವ ಅಪಚಾರ. ಇವುಗಳಿಗೆ ಸಮ್ಮತಿಸುವುದು ಹಾಗಿರಲಿ, ಕಿವಿಯಾರ ಕೇಳಲೂ ನಾವು ಇಚ್ಛಿಸುವುದಿಲ್ಲ. ನೀವು ಇದೊಂದು ಮಾತು ಬಿಟ್ಟು ಬೇರೆ ಏನಾದರೂ ಇದ್ದರೆ ಹೇಳಿ, ಕೇಳುತ್ತೇವೆ."

"ನಾನು ಹೇಳುವುದು ಸನ್ನಿಧಾನದ ಚಿತ್ತಕ್ಕೆ ಬಾರದೆ ಇದ್ದರೆ ಅದು ನಮ್ಮ ದುರ್ದೈವ."

"ಅದು ನಿಮ್ಮ ದುರ್ದೈವವಲ್ಲ. ಇಂತಹ ಮಾತುಗಳನ್ನು ಕೇಳಿಯೂ ಸುಮ್ಮನಿರಬೇಕಾಗಿ ಬಂದಿದೆಯಲ್ಲ, ಅದು ನಮ್ಮ ದುರ್ದೈವ."

"ಪ್ರಭು...." ಗಾಬರಿಯಿಂದ ಭಂಡಿಕುಮಾರ ಹೇಳಿದ.

"ಹೌದು ಕುಮಾರರೇ. ಬೇರೊಬ್ಬರು ಇಂತಹ ಮಾತನ್ನು ನನ್ನ ಮುಂದೆ ಹೇಳಿದ್ದರೆ ಅವರ ನಾಲಗೆಯು ಕತ್ತರಿಸಿ ಬೀಳುತ್ತಿತ್ತು. ನೀವು ಶ್ರೀಹರ್ಷವರ್ಧನ ಮಹಾರಾಜರ ಕಡೆಯಿಂದ ಬಂದಿರುವ ರಾಯಭಾರಿಗಳೆಂದು ಸುಮ್ಮನಿರಬೇಕಾಗಿದೆ."

"ಪ್ರಭೂ, ನನ್ನ ಮೇಲೆ ಸಿಟ್ಟಾಗಬಾರದು. ನನ್ನಿಂದ ಸನ್ನಿಧಾನಕ್ಕೆ ಅಪಚಾರವಾಗಿದ್ದರೆ ಕ್ಷಮಿಸಬೇಕು. ನನ್ನ ಮಾತನ್ನು ಅನ್ಯಥಾ ಭಾವಿಸಬಾರದು. ತಮ್ಮ ಸ್ನೇಹಹಸ್ತ ದೊರಕಿಸಿಕೊಳ್ಳಬೇಕೆಂಬ ಸದ್ಭಾವನೆಯು ಹೊರತು, ತಮಗೆ ಅಪಚಾರ ಬಗೆಯುವ ಯಾವುದನ್ನೂ ನಾನು ಹೊಂದಿಲ್ಲ."

"ನಿಮಗೆ ನಮ್ಮ ಸಖ್ಯ–ಎರಡು ರಾಷ್ಟ್ರಗಳ ಸಾಮರಸ್ಯ–ಬೇಕಾಗಿದ್ದರೆ ಸಮಾನ ಗೌರವವಿರುವ ಇಬ್ಬರು ಸಾಮ್ರಾಟರಲ್ಲಿ ನಡೆಯುವ ಒಪ್ಪಂದ ನಡೆಯಲಿ. ಇದರಲ್ಲಿ ಕೊಟ್ಟು ಕೊಳ್ಳುವ ಮಾತನ್ನು ಮರೆಯಲಿ."

"ಪ್ರಭುಗಳು ಸಿಟ್ಟಾಗಬಾರದು. ಎರಡು ರಾಷ್ಟ್ರಗಳ ಮೈತ್ರಿಗಾಗಿ ತಾವು ಗೆದ್ದುಕೊಂಡ ರಾಜ್ಯಗಳನ್ನು ಸ್ನೇಹದ ಎಣಿಕೆ ಎಂದು ತಾವು ಏಕೆ ನಮ್ಮ ಮಹಾರಾಜರಿಗೆ ಬಿಟ್ಟುಬಿಡಬಾರದು ? ಗೆಳೆತನದ ವಿಶ್ವಾಸದ ಈ ಕೊಡಿಗೆ ಯಾರ ಘನತೆ ಗಾಂಭೀರ್ಯಗಳಿಗೂ ಧಕ್ಕೆ ತರಲಾರದು. ಸರ್ವ ವಿಷಯವನ್ನೂ ಬಲ್ಲ ಪ್ರಾಜ್ಞರಾದ ತಮಗೆ ನಾನು ಹೇಳುವುದೇನಿದೆ ?"

"ರಾಯಭಾರಿಗಳೇ, ನಿಮ್ಮ ಚತುರೋಕ್ತಿಗೆ ಬೆರಗಾಗುವ ವ್ಯಕ್ತಿ ನಾನಲ್ಲ. ನೀವು ಗೆದ್ದ ರಾಜ್ಯಗಳನ್ನು ನಿಮ್ಮ ಸಾಮ್ರಾಟರಿಗೆ ಗೆಳೆತನದ ಕಾಣಿಕೆಯಾಗಿ, ಪ್ರೀತಿವಿಶ್ವಾಸಗಳ ಉಡುಗೊರೆಯಾಗಿ ಬಿಟ್ಟುಕೊಡಲು ಬಯಸಿದಿರಿ ? ಈ ಮಾತನ್ನು ನಿಮ್ಮ ಸಾಮ್ರಾಟರಿಗೇಕೆ ಹೇಳಬಾರದು ?"

ಈ ಮಾತಿಗೆ ಭಂಡಿಕುಮಾರನು ಉತ್ತರ ಕೊಡಲಿಲ್ಲ.

"ಕುಮಾರರೇ, ಇಲ್ಲಿ ಕೇಳಿ, ನಿಮ್ಮ ಸಾಮ್ರಾಟರಿಗೆ ನಮ್ಮೊಡನೆ ಸಖ್ಯ ಬೇಕಾದರೆ, ನಾವು ಗೆದ್ದುಕೊಂಡುದನ್ನು ಬಿಟ್ಟು ಸ್ನೇಹದ ಮಾತು ಆಡಲಿ. ಸ್ನೇಹವೆಂದಿಗೂ ಬಲವಂತಕ್ಕೆ ಅರಳುವ ಹೂವಲ್ಲ. ಸಮಾನ ಅಭಿರುಚಿ, ಆದರ್ಶಗಳ ವ್ಯಕ್ತಿಗಳಲ್ಲಿ ಅರಳುವ ಮಂದಾರ ಕುಸುಮ ಅದು. ಅದರಲ್ಲಿ ಮೇಲು ಕೀಳೆಂಬ ಭಾವನೆಯಾಗಲೀ, ಬಡವ ಬಲ್ಲಿದನೆಂಬ ಭೇದವಾಗಲೀ, ಚಿಕ್ಕದೊಡ್ಡ

ವರೆಂಬ ಅಂತಸ್ತಾಗಲೀ ಇರುವುದಿಲ್ಲ. ಅದು ಪಂಕದಲ್ಲಿ ಹುಟ್ಟಿದರೂ, ನೀರಿನಲ್ಲಿ ಬೆಳೆದರೂ,ಅವೆರಡರ ಲೇಪದಿಂದ ಶುದ್ಧವಾಗಿರುವ ಕೆಂದಾವರೆಯಂತೆ ಪೂಜ್ಯವೂ ಪವಿತ್ರವೂ ಆದ ವಸ್ತು. ಅದನ್ನು ಲೋಭಕ್ಕಾಗಲಿ, ಸ್ವಾರ್ಥಕ್ಕಾಗಲೀ ವ್ಯಕ್ತಿಗಳು ಇಲ್ಲವೇ ರಾಷ್ಟ್ರದ ಹಿತಕ್ಕಾಗಲೀ ಬಲಿಕೊಡಬಾರದು. ಅಂತಹ ಸ್ನೇಹ ಸ್ನೇಹವಲ್ಲ. ಸ್ನೇಹದ ಹೆಸರಿನಲ್ಲಿ ನಡೆಸುವ ದಬ್ಬಾಳಿಕೆ. ದುರಾಕ್ರಮಣ ಇದಕ್ಕೆ ಎಂದಿಗೂ ನಾವು ತಲೆಬಾಗುವುದಿಲ್ಲ "

"ಹಾಗಾದರೆ ತಾವು ಅಪ್ಪಣೆಕೊಡಿಸುವುದಾದರೂ ಏನು ಪ್ರಭು "

"ನಿಮ್ಮ ಸಾಮ್ರಾಟರಿಗೆ ನಮ್ಮೊಡನೆ ನಿಜವಾದ ಮೈತ್ರಿ ಬೆಳೆಸುವುದು ಬೇಕಾಗಿದ್ದರೆ, ಅದು ನಿರ್ವ್ಯಾಜಪ್ರೇಮದಿಂದ ಬರಲಿ. ಈ ಮಾತನ್ನು ನಿಮ್ಮ ಸಾಮ್ರಾಟರಿಗೆ ತಿಳಿಸಿರಿ."

"ಪ್ರಭು, ನಾವು ತಮಗೆ ಯಾವ ಅಪರಾಧ ಮಾಡಿದ್ದೇವೆಂದು ನಮ್ಮ ಮೇಲೆ ದಂಡೆತ್ತಿ ಬಂದು, ನಮ್ಮ ಸಾಮ್ರಾಜ್ಯಕ್ಕೆ ಸೇರಿದ ಲಾಟ, ಮಾಳವ, ಗುರ್ಜರ, ವಲ್ಲಭಿಗಳನ್ನು ಕೈವಶಪಡಿಸಿಕೊಂಡಿರಿ ? ಅದನ್ನು ಮತ್ತೆ ಬೇಡುವುದು ತಪ್ಪೆ ?"

"ನಿಮ್ಮ ಸಾಮ್ರಾಟರು ಈ ಹಿಂದೆ ಸ್ವತಂತ್ರ ಅರಸರಾದ ಅವರನ್ನು ಯಾವ ಉದ್ದಿಶ್ಯದಿಂದ ಗೆದ್ದು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರೋ ಅದೇ ಉದ್ದಿಶ್ಯದಿಂದ ನಾವು ಅವುಗಳನ್ನು ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದೇವೆ."

"ಗಡಿಪ್ರದೇಶದ ಅರಸರಾದ ಅವರಿಂದ ಸಾಮ್ರಾಜ್ಯದ ಭದ್ರತೆಗೆ ಭಂಗ ಬರುತ್ತಿತ್ತು."

"ಅದೇ ಉತ್ತರವನ್ನು ನಾವೂ ನಿಮಗೆ ಕೊಡಬಯಸುತ್ತೇವೆ."

"ಪ್ರಭು, ಇದರಿಂದ ಸಮಸ್ಯೆ ಬಗೆಹರಿದಂತೆ ಆಗುವುದಿಲ್ಲ."

"ಬಗೆಹರಿಸುವ ಇಚ್ಛೆ ನಿಮ್ಮ ಸಾಮ್ರಾಟರಿಗೆ ಇಲ್ಲ...."

"ಇಚ್ಛೆ ಇಲ್ಲದಿದ್ದರೆ ನಾನು ತಮ್ಮ ಬಳಿಗೆ ಬರುವ ಕಾರಣವಾದರೂ ಏನಿತ್ತು ಪ್ರಭು ? ಯುದ್ಧಕ್ಕೆಂದು ಬಂದು ಕುಳಿತ ನಾವು ಸಂಧಾನದ ಮಾತನ್ನು ಆಡುವ ಅಗತ್ಯವಾದರೂ ಏನು ?"

"ಬಾಯಿಮಾತಿನ ಜಾಣ್ಮೆಯಿಂದ, ರಕ್ತಪಾತವಿಲ್ಲದೆ ಸೋಲಿಸಿ, ಕಾರ್ಯ

ಸಾಧಿಸಿಕೊಳ್ಳಬೇಕೆಂಬ ಇಚ್ಛೆಯಿಂದ ಎಂದು ಹೇಳಿದರೆ ನೀವು ಅನ್ಯಥಾ ಭಾವಿಸುವುದಿಲ್ಲವಷ್ಟೆ ?"

"ಪ್ರಭು ! ಎಂತಹ ಆರೋಪ ನಿಮ್ಮದು ? ನಾವು ನಿಮಗೆ ಮೋಸ ಮಾಡಿ, ಕಾರ್ಯಸಾಧಿಸಲು ಬಂದವರೆ ? ಇದರಿಂದ ನಮಗಾಗುವ ಲಾಭವಾದರೂ ಏನು ?"

"ನಿಮಗೆ ಲಾಭದಾಸೆ ಇಲ್ಲದಿದ್ದರೆ, ನೀವೇಕೆ ರಾಯಭಾರ ಹೊತ್ತು ಬರುತ್ತಿದ್ದಿರಿ ? ಯುದ್ಧಕ್ಕೆಂದು ಬಂದವರು ನೀವು ! ನಮ್ಮ ಇಷ್ಟ ಅಭೀಷ್ಟಗಳು ಏನಿದ್ದರೂ ನಮ್ಮ ಸೋಲು ಗೆಲುವುಗಳಮೇಲೆ ನಿರ್ಧಾರವಾಗಲಿ ! ಇದು ನಿಜವಾದ ವೀರರಿಗೆ ಒಪ್ಪುವ ರೀತಿ. ನಿಮ್ಮ ಸಾಮ್ರಾಟರ ವ್ಯಾಪಾರೀ ಮನೋಭಾವ ಕಂಡು ನನಗೆ ಅವರ ಬಗ್ಗೆ ತಿರಸ್ಕಾರವಾಗಿದೆ."

"ಪ್ರಭು !..." ಭಂಡಿಕುಮಾರನು ಕೆರಳಿ ಹೇಳಿದ.

"ಸತ್ಯಸಂಗತಿ ಹೇಳಿದುದಕ್ಕೆ ಕೋಪಿಸಬಾರದು ರಾಯಭಾರಿಗಳೇ. ನಮಗೆ ವ್ಯಾಪಾರ ಕುಶಲತೆ ಬಾರದು. ಸೈನಿಕರಂತೆ, 'ಒಂದು ಏಟು—ಎರಡು ತುಂಡು' ಎಂಬ ರೀತಿ ನಮ್ಮದು ! ನಾವು ನಿಮ್ಮ ದೊರೆಗಳಷ್ಟು ರಾಜತಂತ್ರ ನಿಪುಣರಲ್ಲ."

"ನಿರ್ಮಲ ಸ್ನೇಹ, ರಾಷ್ಟ್ರಕಲ್ಯಾಣಗಳ ಉಚ್ಚಾದರ್ಶಗಳಲ್ಲದೆ ನಮ್ಮ ಸಾಮ್ರಾಟರಿಗೆ ಈ ರಾಯಭಾರದಲ್ಲಿ ಬೇರೆ ಯಾವ ದುರುದ್ದೇಶವಿಲ್ಲ ಪ್ರಭು ! ಘನತೆವೆತ್ತ ಸಾಮ್ರಾಟರ ನಡುವೆ ಕೊಟ್ಟುಕೊಳ್ಳುವ ವ್ಯವಹಾರದಿಂದ ಎರಡು ರಾಷ್ಟ್ರಗಳ ಜನತೆಯ ಕಲ್ಯಾಣವಾಗವುದಾದರೆ ಇದರಲ್ಲಿ ವ್ಯಾಪಾರೀ ಮನೋಭಾವ ಎಲ್ಲಿದೆ ಪ್ರಭೂ ? ಇದು ರಾಷ್ಟ್ರದ ಹಿತಕ್ಕಾಗಿ ಮಾಡುವ ತ್ಯಾಗ—ಬಲಿದಾನಗಳೆನಿಸಿಕೊಳ್ಳುವುದಿಲ್ಲವೆ ?"

"ಭಂಡಿಕುಮಾರರೇ, ನೀವು ಯುಕ್ತಿ ಚಮತ್ಕಾರಗಳಿಂದ ನಮ್ಮನ್ನು ಮೋಸಗೊಳಿಸಲಾರಿರಿ ! ಇದಕ್ಕೆಲ್ಲಾ ಬೆರಗಾಗುವವರು ನಾವಲ್ಲ. ನೀವು ಈ ಮಾತನ್ನು ನಿಮ್ಮ ಮಹಾರಾಜರಿಗೆ ಸ್ಪಷ್ಟವಾಗಿ ತಿಳಿಸಿ : ಪುಲಿಕೇಶಿ ದೊರೆಗಳು ಉತ್ತರಾಪಥೇಶ್ವರರ ದೃಷ್ಟಿಯಲ್ಲಿ ಸಣ್ಣ ಸಾಮ್ರಾಟರಿರಬಹುದು. ಅವರು ಕನ್ನಡ ನಾಡಿನ ಪುರುಷಸಿಂಹ. ರಣವಿಕ್ರಮ, ಸತ್ಯಾಶ್ರಯ ಇತ್ಯಾದಿ ಬಿರುದಾಂಕಿತರು. ಪವಿತ್ರ ಚಾಲುಕ್ಯ ಸಿಂಹಾಸನದಲ್ಲಿ ಕುಳಿತಿರುವ ಸ್ವಾಭಿಮಾನಿಯಾದ ಸಾಮ್ರಾಟರು. ಅವರೆಂದಿಗೂ ತಮ್ಮ ಸಿಂಹಾಸನದ ಘನತೆ ಗೌರವ

ಗಳಿಗೆ ಕುಂದುಂಟುಮಾಡುವ ಯಾವುದೇ ಒಪ್ಪಂದಕ್ಕೆ ತಲೆಬಾಗಲು ಸಿದ್ಧರಿಲ್ಲ! ಎರಡು ರಾಷ್ಟ್ರಗಳ ನಡುವೆ ನಿಜವಾದ ಸ್ನೇಹ ಸೌಹಾರ್ದಗಳೇ ನಿಮ್ಮ ದೊರೆಗಳ ಇಚ್ಛೆಯಾಗಿದ್ದರೆ—ಯಾವ ಷರತ್ತುಗಳನ್ನೂ ಹಾಕದೆ, ನಮ್ಮನ್ನು ಸಮಾನಸ್ಕಂದರಂತೆ ನಡೆಸಿಕೊಳ್ಳಲಿ. ಇಲ್ಲವಾದರೆ, ಸಂಧಾನದ ಮಾತನ್ನು ಮರೆತು, ಯುದ್ಧದ ರಣಗೀತೆ ಮೊಳಗಿಸಲಿ. ಯುದ್ಧಕ್ಕೆಂದೇ ಬಂದಿರುವ ನಾವು ಯುದ್ಧಕ್ಕೆ ಹೆದರುವುದಿಲ್ಲ. ನಮ್ಮ ಜಯಾಪಜಯಗಳ ಮೇಲೆ ಇಬ್ಬರ ಶಕ್ತಿ ಸಾಮರ್ಥ್ಯಗಳ ಪರೀಕ್ಷೆ ನಡೆಯಲಿ."

ಎಂದು ಹೇಳಿ ಅದೇ ಮಾತನ್ನು ಸ್ವಹಸ್ತದಲ್ಲಿ ಬರೆದು ಭಂಡಿಕುಮಾರನಿಗೆ ಇತ್ತನು. ಅವನಿಗೆ ಅನೇಕ ಬೆಲೆಬಾಳುವ ಒಡವೆವಸ್ತುಗಳನ್ನು ಇತ್ತು ಮರ್ಯಾದೆಯಿಂದ ಬೀಳ್ಕೊಟ್ಟನು.

ಇದೆಲ್ಲ ಸಂಗತಿಯನ್ನು ಭಂಡಿಕುಮಾರನು ಸಾಮ್ರಾಟ್ ಶ್ರೀ ಹರ್ಷವರ್ಧನನಿಗೆ ತಿಳಿಸಿದಾಗ "ಹಾಗಾದರೆ, ಯುದ್ಧ ಅನಿವಾರ್ಯವೇ ಆಯಿತು, ದಂಡನಾಯಕರೇ! ಭಗವಾನ್ ಶಾಕ್ಯಮುನಿಯ ಇಚ್ಛೆಗೆ ನಮ್ಮ ಶಾಂತಿ ಸಂಧಾನ ಬರಲಿಲ್ಲ, ಭಗವಾನನ ಇಚ್ಛೆಯಿದ್ದಂತೆ ನಡೆಯಲಿ!" ಎಂದು ಉದ್ಗಾರ ತೆಗೆದನು.

## ೧೭

ಹರ್ಷವರ್ಧನನು ಭಂಡಿಕುಮಾರನ ಬಾಯಿಂದ ಪುಲಿಕೇಶಿ ಶಿಬಿರದ ವೈಭವ, ರಾಯಭಾರಿಯಾಗಿ ಬಂದ ತನ್ನನ್ನು ನಡೆಸಿಕೊಂಡ ರೀತಿ, ಅವನ ಉಚ್ಚ ಆದರ್ಶ ಧ್ಯೇಯ ಪ್ರಜಾವಾತ್ಸಲ್ಯ, ನಿರ್ಮಲಾಂತಃಕರಣ, ಧರ್ಮಬುದ್ಧಿಗಳನ್ನು ಕೇಳಿ ಮನ್ಮೂಕನಾದನು. ಅವನು ಶತ್ರುವೆನ್ನುವುದಕ್ಕಿಂತಲೂ ಮಿತ್ರನೆಂಬ ಭಾವನೆ ಬೆಳೆದಿತ್ತು. ಅಂಥ ಕಲಿಯ ಸ್ನೇಹಹಸ್ತ ತನಗೆ ದೊರೆಯದುದಕ್ಕಾಗಿ ಅವನು ವಿಷಾದಿಸಿದನು. ಅವನು ಹೃದಯದಲ್ಲಿ ಅಭಿಮಾನ, ಗೌರವಗಳನ್ನು ಹೊತ್ತು ಪುಲಿಕೇಶಿಯ ಮೇಲೆ ಯುದ್ಧ ಘೋಷಿಸಿದನು.

ಇದು ಉತ್ತರಾಪಥೇಶ್ವರನೆನಿಸಿದ ಸಾಮ್ರಾಟ್ ಹರ್ಷವರ್ಧನನಿಗೆ ಲಾಭ ನಷ್ಟಗಳ ಪ್ರಶ್ನೆಗಿಂತಲೂ, ಘನತೆಗೌರವಗಳ ಪ್ರಶ್ನೆಯಾಗಿತ್ತು. ಇದುವರೆಗೆ ಅವನ ಆಜ್ಞೆಯನ್ನು ತಿರಸ್ಕರಿಸಿದವರು ಯಾರೂ ಇರಲಿಲ್ಲ. ಉತ್ತರಾಪಥದ ಎಲ್ಲ ದೊರೆಗಳೂ ಅವನ ಆಶ್ರಿತರಾಗಿದ್ದರು. ಅವನ ವೈಭವ ದೇಶವಿದೇಶಗಳನ್ನು ಮುಟ್ಟಿತ್ತು. ಅವನ ಹೆಸರನ್ನು ಕೇಳಿ ಚೀನಾದೇಶದ ಹುಯೂನ್‌ತ್ಸಾಂಗನೆಂಬ ಬೌದ್ಧಯಾತ್ರಿಕನು ಕನ್ಯಾಕುಬ್ಜಕ್ಕೆ ಬಂದಿದ್ದನು. ಅವನು ಇನ್ನೂ ಹರ್ಷ ವರ್ಧನನ ಅತಿಥಿಯಾಗಿ ಸಾಮ್ರಾಜ್ಯದಲ್ಲಿ ಪ್ರವಾಸಮಾಡುತ್ತಿದ್ದನು. ಹೀಗಿದ್ದೂ ದಕ್ಷಿಣಾಪಥದ ಒಬ್ಬ ಸಾಮಾನ್ಯ ದೊರೆ, ತನ್ನ ಸಾಮಂತರನ್ನು ಸೋಲಿಸಿ, ಸಾಮ್ರಾಜ್ಯಲಕ್ಷ್ಮಿಗೆ ಅಪಮಾನ ಮಾಡಿ ತಾನು ಕಳುಹಿಸಿದ ರಾಯಭಾರವನ್ನು ತಿರಸ್ಕರಿಸಿದ್ದಾನೆ ಎಂಬುದನ್ನು ನೆನೆದಾಗ ಕ್ರೋಧ ಉಕ್ಕುತ್ತಿತ್ತು. ಈ ಅಪ ಮಾನವನ್ನು ತೊಡೆದು ಹಾಕಲು ಅವನಿಗೆ ಈಗ ಉಳಿದುದು ಯುದ್ಧವೊಂದೇ ದಾರಿ. ನಿರ್ವಾಹವಿಲ್ಲದೆ, ಅವನು ಯುದ್ಧವನ್ನು ಆಶ್ರಯಿಸಬೇಕಾಯಿತು. ಅದರ ಕಾರಣದಿಂದ ಉಂಟಾಗುವ ಸಾವುನೋವುಗಳನ್ನು ಎದುರಿಸಬೇಕಾಯಿತು !

ಪುಲಿಕೇಶಿಗೆ ಹರ್ಷವರ್ಧನನ ಶಕ್ತಿ ಸಾಮರ್ಥ್ಯಗಳ ಬಗ್ಗೆ ತಪ್ಪು ಕಲ್ಪನೆ ಇರಲಿಲ್ಲ. ಅವನು ತನಗಿಂತಲೂ ಸೈನ್ಯದಲ್ಲಿ, ಬಾಹುಬಲದಲ್ಲಿ ಶಕ್ತನೆಂಬುದು ತಿಳಿದಿತ್ತು. ಅವನ ಬಳಿ ಅಸಂಖ್ಯಾತ ಗಜತುರುಗ ಪಡೆಗಳು ಇರುವುದು ತಿಳಿ ದಿತ್ತು. ಆದರೆ ಅವುಗಳನ್ನು ಸದೆಬಡಿಯುವ ಪುರುಷಸಿಂಹ, ಶಾರ್ದೂಲಗಳು ತನ್ನ ಸೈನಿಕರು–ಕನ್ನಡ ಕಲಿಗಳು–ಎಂಬುದರ ಬಗ್ಗೆ ಆತ್ಮವಿಶ್ವಾಸವಿತ್ತು. ಇದು ಕೇವಲ ಹೆಗ್ಗಳಿಕೆಯಾಗದೆ, ಯಥಾರ್ಥ ಸಂಗತಿಯಾಗಿತ್ತು.

ಪುಲಿಕೇಶಿಯೂ ಹರ್ಷನಂತೆಯೇ ದಕ್ಷಿಣಾಪಥದ ಅನೇಕ ರಾಜರುಗಳನ್ನು ಗೆದ್ದು ತನ್ನ ಸಾಮಂತರನ್ನಾಗಿ ಮಾಡಿಕೊಂಡಿದ್ದನು. ಅವನು ಹರ್ಷವರ್ಧನ ನಂತೆಯೇ ಅರಿಭಯಂಕರನಾಗಿದ್ದನು, ಮಹತ್ವಾಕಾಂಕ್ಷಿಯಾಗಿದ್ದನು, ಆತ್ಮಾಭಿ ಮಾನಿಯಾಗಿದ್ದನು. ಅವನು ರಾಷ್ಟ್ರಘಾತಕವಾದ ಸ್ನೇಹ ಒಪ್ಪಂದವನ್ನು ತಿರ ಸ್ಕರಿಸಿ, ಸಮರ ಆಹ್ವಾನವನ್ನು ಸ್ವೀಕರಿಸಿದ್ದನು: ಇವರಿಬ್ಬರ ಹೋರಾಟ ಎರಡು ಮದ್ದಾನೆಗಳ ಹೋರಾಟದಂತೆ ಆಗಿತ್ತು. ಇದರಲ್ಲಿ ಯಾರು ಸೋಲುವರೋ ಯಾರು ಗೆಲ್ಲುವರೋ ಎಂಬುದನ್ನು ಯಾರೂ ಹೇಳುವಂತಿರಲಿಲ್ಲ. ಎರಡು ಕಡೆಯಲ್ಲೂ ವಿಪುಲವಾದ ಸೈನ್ಯ, ಶಸ್ತ್ರಾಸ್ತ್ರಗಳು ಇದ್ದವು. ಜೀವದ ಹಂಗು

ತೊರೆದು ಯುದ್ಧಮಾಡುವ ಸೈನಿಕರಿದ್ದರು. ಅವರು ರಣೋತ್ಸಾಹದಿಂದ ಬರಲಿರುವ ಕದನಕ್ಕೆ ಸಿದ್ಧರಾಗಿ ಕುಳಿತಿದ್ದರು.

ನರ್ಮದಾ ನದಿಯ ಬಡಗಣ ದಂಡೆಯಲ್ಲಿ ಸಾಮ್ರಾಟ್ ಹರ್ಷವರ್ಧನನು ತನ್ನ ಅಪಾರ ಸೈನ್ಯಸಮೇತ ಬೀಡುಬಿಟ್ಟಿದ್ದನು. ತೆಂಕಣ ದಂಡೆಯಲ್ಲಿ ಪುಲಿಕೇಶಿಯು ತನ್ನ ಸೈನ್ಯಸಮೇತ ಬೀಡುಬಿಟ್ಟಿದ್ದನು. ಯುದ್ಧ ಹೂಡುವುದೆಂದು ಇತ್ಯರ್ಥವಾಗಿದ್ದರೂ ಒಬ್ಬರ ಚಲನವಲನಗಳನ್ನು ಒಬ್ಬರು ನೋಡುತ್ತಾ, ಎರಡೂ ಕಡೆಯ ಸೈನಿಕರೂ, ಯಾವುದೇ ಯುದ್ಧವಿಲ್ಲದೆ ತಟಸ್ಥರಾಗಿದ್ದರು. ತಾವು ನದಿಯನ್ನು ಹಾದು ಪುಲಿಕೇಶಿಯ ಮೇಲೆ ಬಿದ್ದರೆ ಅಪಾಯಕಾರಿ ಎಂದು ಹರ್ಷವರ್ಧನ ತಿಳಿದಿದ್ದ. ಹೀಗೆ ಮಾಡಿದರೆ ಪೂರ್ಣ ಪ್ರವಾಹದ ನೀರಿನಲ್ಲಿ ಸೈನ್ಯ ಹಾಗೂ ಶಸ್ತ್ರಾಸ್ತ್ರಗಳು ಕೊಚ್ಚಿಹೋಗಿ ಇಲ್ಲವೇ ನಿರರ್ಥಕವಾಗಿ, ಶತ್ರುಗಳ ಮೇಲೆ ಬೀಳುವ ವೇಳೆಗೆ ತಾವು ದುರ್ಬಲರಾಗಿ, ಸೋಲುವ ಸಂಭವ ಉಂಟೆಂದು ಹರ್ಷವರ್ಧನನಿಗೆ ಸ್ಪಷ್ಟವಾಗಿ ತಿಳಿದಿತ್ತು. ಇಂತಹ ದುಡುಕು ವರ್ತನೆಗೆ ಅವನ ದಂಡನಾಯಕರು ಸಿದ್ಧರಿಲಿಲ್ಲ. ಪುಲಿಕೇಶಿಯ ಇಚ್ಛೆಯೂ ಹೀಗೇ ಇತ್ತು: ಸಾಮ್ರಾಟ್ ಹರ್ಷವರ್ಧನನ ಸೈನ್ಯದ ಮೇಲೆ ತಾವು ಬಿದ್ದರೆ, ತಮಗೆ ಉಳಿಗಾಲವಿಲ್ಲವೆಂದೂ, ತಮಗೆ ಸೋಲಾಗುವ ಸಂಭವ ಉಂಟೆಂದೂ ತಿಳಿದು ನದಿಯನ್ನು ದಾಟದೆ, ಕೂಟಯುದ್ಧದಿಂದ ಮಾತ್ರ ಜಯಗಳಿಸಲು ಅವನು ತನ್ನ ಯುದ್ಧತಂತ್ರವನ್ನು ರೂಪಿಸಿಕೊಂಡಿದ್ದನು.

ಇದ್ದಕ್ಕಿದ್ದಂತೆ ಸಾಮ್ರಾಟ್ ಹರ್ಷವರ್ಧನನ ಸೈನ್ಯದಲ್ಲಿ ಒಂದು ವದಂತಿ ಹಬ್ಬಿತು. ಪುಲಿಕೇಶಿಯು ಹರ್ಷವರ್ಧನನ ಸೈನ್ಯಕ್ಕೆ ಹೆದರಿ ಯುದ್ಧ ಹೂಡದೆ ಹಿಮ್ಮೆಟ್ಟಲು ಯೋಚಿಸಿದ್ದಾನೆ ಎಂಬ ವಾರ್ತೆ ಎಲ್ಲೆಲ್ಲೂ ಹರಡಿತು. ಅದಕ್ಕೆ ತಕ್ಕಂತೆ ಪುಲಿಕೇಶಿಯು ಹರ್ಷನಿಗೆ ಹೆದರಿ ಕುಳಿತಂತೆ ಇದುವರೆಗೆ ಯುದ್ಧ ಹೂಡುವ ಪ್ರಯತ್ನ ಮಾಡಿರಲಿಲ್ಲ. ಈಗ ಅವನು ತನ್ನ ಸೈನ್ಯಗಳನ್ನು ಹಿಂತೆಗೆದುಕೊಂಡು, ರಾಜಧಾನಿಯ ರಕ್ಷಣೆಗೆ ಹೆಚ್ಚಿನ ಗಮನ ಕೊಡುವಂತೆ ತೋರುತ್ತಿತ್ತು. ಮೊದಲು ದೊಡ್ಡ ನಗರದಂತೆ ಕಾಣುತ್ತಿದ್ದ ಪುಲಿಕೇಶಿಯ ಶಿಬಿರ ಬರಿದಾದಂತೆ ಕಂಡಿತು. ಅಲ್ಲಿದ್ದ ಆನೆ, ಕುದುರೆ, ಪದಾತಿ ಸೈನ್ಯಗಳು ಶತ್ರುಗಳಿಗೆ ಹೆದರಿ ಓಡಿದಂತೆ, ಅಲ್ಲಿಂದ ಹಠಾತ್ತನೆ ಕಣ್ಮರೆಯಾಗಿದ್ದವು. ಇದನ್ನೆಲ್ಲಾ

ಗೂಢಚಾರರು ಬಂದು ಹೇಳಿದಾಗ, ಇದನ್ನು ಹರ್ಷವರ್ಧನನು ನಂಬಲಿಲ್ಲ. ಅವನು ಇದರಲ್ಲಿ ಏನೋ ವಿಶೇಷ ಸಂಗತಿ ಇರಬೇಕೆಂದು ಕೂಡಲೇ ತನ್ನ ದಂಡ ನಾಯಕರನ್ನು ಸಮ್ಮುಖಕ್ಕೆ ಕರೆಸಿಕೊಂಡು, ತಾನು ಕೇಳಿದ ವಾರ್ತೆಯನ್ನು ತಿಳಿಸಿದನು.

"ಪ್ರಭು, ಇದರಲ್ಲಿ ಯಾವುದೋ ಮೋಸವಿರುವಂತೆ ಇದೆ. ಇದುವರೆಗೆ ಇಲ್ಲಿ ಧೈರ್ಯವಾಗಿ ಬೀಡುಬಿಟ್ಟ ಸೈನಿಕರು ಒಮ್ಮೆಲೇ ಹೆದರಿ ಓಡಿರುವರೆಂದರೆ, ನಂಬಲು ಸಾಧ್ಯವಿಲ್ಲ. ಸ್ವಯಂ ಪುಲಿಕೇಶಿಯೇ ನಮ್ಮ ಸ್ನೇಹಹಸ್ತವನ್ನು ತಿರಸ್ಕರಿಸಿ, ಸಮರಾಹ್ವಾನವನ್ನು ಕೊಟ್ಟಿದ್ದಾರೆ. ಹೀಗಿರುವಲ್ಲಿ ಅವರು ನಮಗೆ ಹೆದರಿ ಹಿಮ್ಮೆಟ್ಟಿರುವರೆಂದರೆ ಇದರಲ್ಲಿ ಯಾವುದೋ ಮೋಸವಿದೆ. ನಾವು ಈಗ ದುಡುಕದೆ ಅತಿ ಎಚ್ಚರದಿಂದ ಹೆಜ್ಜೆ ಇಡಬೇಕಾಗಿದೆ" ಎಂದು ಭಂಡಿಕುಮಾರನು ಹೇಳಿದನು.

"ಪ್ರಭು, ಭಂಡಿಕುಮಾರರು ತಮಗೆ ಪುಲಿಕೇಶಿ ದೊರೆಗಳು ಮಾಡಿದ ಸನ್ಮಾನದಿಂದ ಅವರ ಬಗ್ಗೆ ಅಭಿಮಾನ ತಳೆದು ಈ ಮಾತನ್ನು ಹೇಳುತ್ತಿದ್ದಾರೆ. ಅವರ ಮಾತಿನಲ್ಲಿ ಸತ್ಯಾಂಶವಿಲ್ಲ. ಪುಲಿಕೇಶಿ ನಮ್ಮ ಸ್ನೇಹಹಸ್ತವನ್ನು ತಿರಸ್ಕರಿಸ ಬಹುದು. ಆದರೆ ನಮ್ಮ ಸಹಸ್ರ ಸಹಸ್ರ ಸಂಖ್ಯೆಯ ಗಜತುರಗ ಪದಾತಿ ಸೈನ್ಯಗಳನ್ನು ನೋಡಿ, ಸ್ವಭಾವತಃ ಧೀರರಾದರೂ ನಮಗೆ ಹೆದರಿದ್ದಾರೆ. ಇದಕ್ಕೆ ಇದುವರೆಗೆ ನಮ್ಮ ಮೇಲೆ ಯುದ್ಧ ಹೂಡದಿರುವುದೇ ಸಾಕ್ಷಿ. ಈಗ ನಮ್ಮ ದಾಳಿಗೆ ಹೆದರಿ, ರಾಜಧಾನಿಯನ್ನು ರಕ್ಷಿಸಿಕೊಳ್ಳಲು ಸೈನ್ಯವನ್ನು ಹಿಂತೆಗೆದುಕೊಂಡಿರುವಂತೆ ಕಾಣುತ್ತಿದೆ. ಇಲ್ಲವೇ ಮತ್ತೆ ಸಂಧಾನಾಪೇಕ್ಷಿ ಯಾಗಿ ಈ ಕಾರ್ಯ ಮಾಡಿರಬೇಕೆಂದು ತೋರುತ್ತದೆ. ಈಗ ಶತ್ರು ಮೆತ್ತಗಾಗಿ ದ್ದಾನೆ. ಈ ಸಮಯದಲ್ಲಿ ನಾವು ಅವರ ಮೇಲೆ ಬಿದ್ದರೆ ಸುಲಭವಾಗಿ ಸದೆ ಬಡೆಯಬಹುದು. ಅವರ ಅಹಂಕಾರವನ್ನು ಮುರಿದು ತಕ್ಕ ಬುದ್ಧಿ ಕಲಿಸ ಬಹುದು" ಎಂದು ಹೇಳಿದ ದಂಡನಾಯಕ ಭಾನಿಸಿಂಹ.

"ಭಾನಿಸಿಂಹರು ಹೇಳುವ ಮಾತಿನಲ್ಲಿ ತಥ್ಯಾಂಶವಿದೆ ಪ್ರಭು. ಪುಲಿಕೇಶಿಗೆ ನಮ್ಮ ಸೈನ್ಯ ಕಂಡೇ ಹೆದರಿಕೆಯುಂಟಾಗಿರುವ ಬಗ್ಗೆ ಸಂದೇಹವೇ ಇಲ್ಲ. ಅವರಿಗೆ ಧೈರ್ಯ ಉಳಿದಿದ್ದರೆ, ನಮ್ಮ ಮೇಲೆ ಯುದ್ಧಕ್ಕೆ ಬರುತ್ತಿದ್ದರು. ಅವರು ಇದುವರೆಗೆ ತಟಸ್ಥರಾಗಿ ಕುಳಿತು, ಈಗ ಒಮ್ಮೆಲೇ ಹಿಮ್ಮೆಟ್ಟಿರುವ ಸಂಗತಿ

ನೋಡಿದರೆ, ಶತ್ರು ಅಧೀರನಾಗಿರುವನೆಂದು ಸುಸ್ಪಷ್ಟವಾಗಿದೆ. ಈಗ ನಾವು ದಾಳಿಯಿಟ್ಟರೆ, ಸುಲಭವಾಗಿ ಅವರನ್ನು ಬಗ್ಗು ಬಡಿಯಬಹುದು" ಎಂದು ಸಿಂಹನಾದ ಹೇಳಿದ.

ಆದರೆ ಸ್ಕಾಂದಗುಪ್ತ ಮಾತ್ರ,

"ಪ್ರಭು, ಇದು ದುಡುಕುವ ವಿಷಯವಲ್ಲ. ಶತ್ರುಗಳ ಚಲನವಲನಗಳನ್ನು ನೋಡಿದರೆ ಸಂಶಯಾಸ್ಪದವಾಗಿದೆ. ಅವರು ನಮಗೆ ಅಂಜಿ ಯುದ್ಧ ಹೂಡದೆ ತಟಸ್ಥರಾಗಿರುವರೆಂಬುದಕ್ಕಿಂತಲೂ ಯಾವುದೋ ಯುದ್ಧಕ್ಕೆ ಸಿದ್ಧರಾಗುತ್ತಿರುವಂತೆ ಕಾಣುತ್ತದೆ. ಪುಲಿಕೇಶಿಯು ನಮಗೆ ಹೆದರಿದ್ದರೆ, ಎಂದೋ ಸಂಧಾನಕ್ಕೆ ಸಮ್ಮತಿಸುತ್ತಿದ್ದರು. ಅವರು ನಮ್ಮ ಸ್ನೇಹಹಸ್ತವನ್ನು ತಿರಸ್ಕರಿಸಿದ್ದಾರೆ. ಇಂದು ನಮಗೆ ಹೆದರಿ ಹಿಮ್ಮೆಟ್ಟಿರುವರೆಂದರೆ ನಂಬುವುದು ಕಷ್ಟವಾಗುತ್ತದೆ!" ಎಂದು ಹೇಳಿದ.

"ನನ್ನ ಅಭಿಪ್ರಾಯವೂ ಇದೇ ಆಗಿದೆ ಪ್ರಭು, ಇದರಲ್ಲಿ ಯಾವುದೋ ಮೋಸ–ನಮಗೆ ತಿಳಿಯದ ರಹಸ್ಯ ಅಡಗಿದೆ. ಇದನ್ನು ಭೇದಿಸಿ ತಿಳಿಯದೆ, ನಾವು ಸೈನ್ಯವನ್ನು ಮುನ್ನಡೆಸಿಕೊಂಡು, ನದಿಯನ್ನು ಹಾದು ಶತ್ರುಗಳನ್ನು ಹಿಂಬಾಲಿಸಿ ಹೋಗಿ ಯುದ್ಧಮಾಡುವುದು–ಅಷ್ಟು ಸಮಂಜಸವಾಗಲಾರದು. ಏಕೆಂದರೆ, ಶತ್ರು ನಮ್ಮಷ್ಟೆ ಬಲಾಢ್ಯನಾಗಿದ್ದಾನೆ. ಮೇಲಾಗಿ ತಂತ್ರನಿಪುಣನಾಗಿದ್ದಾನೆ. ಅವರ ಬಲಾಬಲವನ್ನಾಗಲೀ, ತಂತ್ರವನ್ನಾಗಲೀ, ತಿಳಿಯದೆ ನಾವು ದುಡುಕಿದರೆ ಇದಕ್ಕಾಗಿ ಮುಂದೆ ಪಶ್ಚಾತ್ತಾಪಪಡಬೇಕಾದ ಪ್ರಸಂಗ ಬರಬಹುದು. ಇದಕ್ಕೆ ನಾವು ಅವಕಾಶ ಕಲ್ಪಿಸಿಕೊಡಬಾರದು!" ಎಂದು ಭಂಡಿಕುಮಾರನು ಹೇಳಿದ.

ಎಲ್ಲವನ್ನೂ ಕೂಲಂಕಷವಾಗಿ ವಿಚಾರಿಸಿದ ಹರ್ಷವರ್ಧನನು ಹೇಳಿದ: "ದಂಡನಾಯಕರೇ, ಸಾಮ್ರಾಜ್ಯದ ಅವಿಚ್ಛಿನ್ನ ಸ್ವಾಮಿ ಸೇವಕರೇ, ನಿಮ್ಮ ಸ್ಪಷ್ಟ ಅಭಿಪ್ರಾಯಗಳಿಗೆ ನಾನು ಋಣಿಯಾಗಿದ್ದೇನೆ. ಭಂಡಿಕುಮಾರರು ಹೇಳಿರುವಂತೆ ಇದು ದುಡುಕುವ ವಿಷಯವಲ್ಲ. ತೀರಾ ಎಚ್ಚರದಿಂದ ಹೆಜ್ಜೆ ಇಡಬೇಕಾದ ಸಂಗತಿ. ಈಗ ನಾವು ಇಡುವ ಹೆಜ್ಜೆಯಮೇಲೆ, ತೆಗೆದುಕೊಳ್ಳುವ ನಿರ್ಧಾರದ ಮೇಲೆ, ನಮ್ಮ ಜಯಾಪಜಯಗಳು ನಿಂತಿವೆ. ಆದುದರಿಂದ ನಾವು ಯಾವುದೇ ತೀರ್ಮಾನ ಕೈಗೊಳ್ಳುವ ಮೊದಲು, ನಮ್ಮಲ್ಲಿ ಒಮ್ಮತಕ್ಕೆ ಬರ

ಬೇಕಾಗಿದೆ. ನಿಮ್ಮಲ್ಲಿ ಪರಸ್ಪರ ವಿರೋಧ ಅಭಿಪ್ರಾಯವಿರಬಹುದು. ನಾವು ರಾಷ್ಟ್ರದ ಹಿತಸಾಧನೆಯಿಂದ ಯೋಚಿಸಿ, ಕಾರ್ಯನೀತಿಯನ್ನು ರೂಪಿಸಬೇಕಾಗಿದೆ. ನನ್ನ ಅಭಿಪ್ರಾಯ ಹೇಳುವುದಾದರೆ ನನಗೆ ಈ ಯುದ್ಧ ಬೇಡ. ಪುಲಿಕೇಶಿಯ ಸ್ನೇಹಬೇಕು. ಎರಡು ಸೈನ್ಯಗಳಿಗೆ ನಡೆಯುವ ಹೋರಾಟ ನಿಂತು, ರಕ್ತಪಾತವಿಲ್ಲದೆ ನಮ್ಮೆರಡು ರಾಷ್ಟ್ರಗಳ ಮೈತ್ರಿ, ಕಲ್ಯಾಣ ಏರ್ಪಡಬೇಕು. ಇದಕ್ಕೆ ಅನುಕೂಲಿಸುವ ಯಾವುದೇ ಕಾರ್ಯನೀತಿಗೆ ನಾನು ಸಿದ್ಧನಿದ್ದೇನೆ, ಆದರೆ ಒಂದು ಮಾತು. ನನಗೆ ಇಲ್ಲಿ ತಟಸ್ಥನಾಗಿ ಕುಳಿತು ಬೇಸರ ಬಂದಿದೆ. ಯುದ್ಧವಾಗಲಿ, ಶಾಂತಿ ಒಪ್ಪಂದವಾಗಲಿ, ಆದಷ್ಟು ಶೀಘ್ರವಾಗಿ ನಡೆಯಲಿ. ಯುದ್ಧವಾದರೆ ಯುದ್ಧ, ಶಾಂತಿಯಾದರೆ ಶಾಂತಿ. ಮುಖ್ಯ ನನ್ನ ಉದ್ದಿಶ್ಯ ಸಾಧನೆಯಾದರೆ ಸರಿ. ಸಾಮದಾನಭೇದಗಳಿಂದ ಶತ್ರುಗಳನ್ನು ನಾವು ಒಲಿಸಿಕೊಳ್ಳಲು ಸಾಧ್ಯವಾಗದಿದ್ದರೆ ಯುದ್ಧಕ್ಕೆ ಶರಣು ಬರುವುದೇ ಒಳಿತು ! ಇಲ್ಲಿ ಕುಳಿತು ವೃಥಾ ಕಾಲಹರಣ ಮಾಡುವುದಕ್ಕಿಂತ ಜಯಾಪಜಯಗಳನ್ನು ದೈವದ ಇಚ್ಛೆಗೆ ಬಿಟ್ಟು ನಾವು ಕಾರ್ಯೋನ್ಮುಖರಾಗುವುದು ಒಳಿತು. ನಾವು ದೀರ್ಘಕಾಲ ರಾಜಧಾನಿಯಿಂದ ಹೊರಗೆ ಇರುವುದು–ಈ ಯುದ್ಧಕ್ಕಿಂತ ಭಯಂಕರ ವಿಪತ್ತನ್ನು ಸ್ವಾಗತಿಸಿದಂತೆ ಆದೀತು "

ಹರ್ಷವರ್ಧನನ ಅಭಿಪ್ರಾಯ ಕೇಳಿ ಉಳಿದ ದಂಡನಾಯಕರು ತಮ್ಮ ತಮ್ಮಲ್ಲೇ ಗುಸುಗುಟ್ಟಿದರು. ಕಡೆಗೆ ಭಂಡಿಕುಮಾರ ಹೇಳಿದ:

"ಪ್ರಭು, ತಾವು ಹೇಳಿದ ಮಾತು ಸದ್ಯದ ಪರಿಸ್ಥಿತಿಯಲ್ಲಿ ಯೋಗ್ಯವಾದ ಮಾತು. ನಮಗೆ ಶತ್ರುಮರ್ದನಕ್ಕಿಂತಲೂ ಶತ್ರುಗಳ ಮೇಲೆ ಧರ್ಮವಿಜಯ ಬೇಕು. ಇದನ್ನು ಸಾಧಿಸಲು ನಾವು ಶಾಂತಿಸಂಧಾನದ ಮೂಲಕ ಪ್ರಯತ್ನಿಸಿ ವಿಫಲರಾದೆವು. ಈಗ ಯುದ್ಧಕ್ಕೆ ಶರಣು ಬರುವುದರಲ್ಲಿ ನಮ್ಮಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಕೈಗೊಳ್ಳಬೇಕಾಗಿರುವ ಕಾರ್ಯಾಚರಣೆಯ ಬಗ್ಗೆ ಭಿನ್ನಾಭಿಪ್ರಾಯ ಅಷ್ಟೆ !"

"ಈ ಯುದ್ಧ ಆದಷ್ಟು ಬೇಗ ಪರ್ಯವಸಾನಗೊಳ್ಳಬೇಕೆಂಬುದರ ಬಗ್ಗೆ ನಮ್ಮೆಲ್ಲರಿಗೂ ಒಮ್ಮತವಿದೆ. ಈಗ ನಾವು ಯಾವ ಮಾರ್ಗದಿಂದ ಜಯ ಪಡೆಯಬೇಕೆಂಬುದನ್ನು ನಿರ್ಧರಿಸಬೇಕಾಗಿದೆ. ಯಾವ ದಾರಿ ಹಿಡಿದರೆ, ವಿಜಯವಧು ನಮ್ಮವಳಾಗುವಳೆಂಬುದನ್ನು ಯೋಚಿಸಬೇಕಾಗಿದೆ" ಎಂದು ಸ್ಕಾಂದ

ಗುಪ್ತ ಹೇಳಿದ.

"ನಾವು ಈಗ ತಡಮಾಡದೆ ಶತ್ರುಗಳ ಮೇಲೆ ಯುದ್ಧಕ್ಕೆ ಹೊರಡೋಣ!" ಭಾನಿಸಿಂಹ ಹೇಳಿದ.

"ನದಿಯನ್ನು ದಾಟಿಯೇ ?" ಭಂಡಿಕುಮಾರ ಪ್ರಶ್ನಿಸಿದ.

"ಹೌದು, ನದಿಯನ್ನು ತೆಪ್ಪ ಇಲ್ಲವೇ ಮರಗಳ ದಿಮ್ಮಿಗಳ ಸಹಾಯದಿಂದ ನಿರ್ಮಿಸಿದ ಸೇತುವೆಯಿಂದ ಹಾದು ಶತ್ರುಗಳ ಮೇಲೆ ಬೀಳೋಣ !" ಎಂದು ಸಿಂಹನಾದ ಹೇಳಿದ.

"ಇದು ಒಳ್ಳೆಯ ಸಲಹೆ. ಆದರೆ ನಾವು ನದಿಯನ್ನು ದಾಟುವುವರ ಬಗ್ಗೆ ನನ್ನ ವಿರೋಧವಿಲ್ಲ. ಇದರಿಂದ ಜಡರಾಗಿ ಕುಳಿತ ಸೈನಿಕರಲ್ಲಿ ಚೈತನ್ಯ ತುಂಬುತ್ತದೆ. ಆದರೆ ನಾವು ನಮ್ಮ ಸರ್ವಸೈನ್ಯಗಳನ್ನು ಸುರಕ್ಷಿತವಾಗಿ ಇನ್ನೊಂದು ದಡದಲ್ಲಿ ಪ್ರತಿಷ್ಠಾಪಿಸುವ ವರೆಗೆ, ನಾವು ಶತ್ರುಗಳ ಮೇಲೆ ದಾಳಿ ಇಡಬಾರದು !"

ಎಂದು ಭಂಡಿಕುಮಾರ ಹೇಳಿದ. ಈ ಸೂಚನೆ ಎಲ್ಲರಿಗೂ ಪ್ರಿಯವಾಯಿತು. ಇದಕ್ಕೆ ಸಾಮ್ರಾಟ ಹರ್ಷವರ್ಧನನೂ ತನ್ನ ಅಂಗೀಕಾರದ ಮುದ್ರೆಯನ್ನು ಒತ್ತಿದನು. ಅದರಂತೆ ಮರುದಿನವೇ ಸೈನಿಕ ಶಿಬಿರದಲ್ಲಿ, ಶತ್ರುಗಳ ಮೇಲೆ ದಾಳಿ ಇಡಲು ಯಾವ ಗಳಿಗೆಯಲ್ಲಾದರೂ ನದಿಯನ್ನು ದಾಟಲು ಸೈನಿಕರು ಸಿದ್ಧರಾಗಬೇಕೆಂದು ಡಂಗೂರ ಹಾಕಲಾಯಿತು. ಸೈನಿಕರು ಅನೇಕ ದಿನಗಳ ತಮ್ಮ ಜಡತೆಯನ್ನು ನೀಗಿ ಸಮರೋತ್ಸಾಹದಲ್ಲಿ ಮೈಮರೆತರು.

ನಿಶ್ಚಿತವಾದ ಕಾರ್ಯಕ್ರಮದಂತೆ, ನದಿಯನ್ನು ದಾಟಲು ಆನೆ ಕುದುರೆ ಶಸ್ತ್ರಾಸ್ತ್ರಗಳನ್ನು ಸುರಕ್ಷಿತವಾಗಿ ಇನ್ನೊಂದು ದಡ ಮುಟ್ಟಿಸಲು, ಒಂದು ಸುಭದ್ರವಾದ ಮರದ ಸೇತುವೆಯನ್ನು ಕಟ್ಟುವುದು ಅನಿವಾರ್ಯವಾಗಿತ್ತು. ಇದಕ್ಕೆ ಬೇಕಾಗಿರುವ ಮರದ ತೊಲೆಗಳನ್ನೂ, ದಿಮ್ಮಿಗಳನ್ನೂ ಸಮೀಪದ ಕಾಡುಗಳಿಂದ ಕಡಿದು, ಆನೆಗಳ ಸಹಾಯದಿಂದ ಗಾಡಿಗಳಲ್ಲಿ ಸಾಗಿಸಿಕೊಂಡು ಬರಲು ಸಹಸ್ರಾರು ಸೈನಿಕರು ನಿಯೋಜಿತರಾದರು. ಅವರು ಅಹೋರಾತ್ರಿ ದುಡಿದು ಅತ್ಯಲ್ಪ ಕಾಲದಲ್ಲಿ, ನದಿಯ ಪಾತ್ರ ಕಿರಿದಾದ ಕಡೆಯಲ್ಲಿ ಆಳ ಕಡಿಮೆಯಾಗಿರುವ ಸ್ಥಳದಲ್ಲಿ, ಮರದ ಭವ್ಯಸೇತುವೆಯೊಂದನ್ನು ಭರದಿಂದ ನಿರ್ಮಿಸಿದರು. ಇಷ್ಟೆಲ್ಲಾ ಕಾರ್ಯ ಚಟುವಟಿಕೆಯನ್ನು ನೋಡಿಯೂ ಪುಲಿಕೇಶಿಯು

ಅದಕ್ಕೆ ಧಕ್ಕೆ ತರುವ ಯಾವುದೇ ಕೆಲಸ ಮಾಡಲಿಲ್ಲ. ಅವನು ಈ ಅವಧಿಯಲ್ಲಿ ತೆಂಕಣ ದಂಡೆಯಲ್ಲಿದ್ದ ತನ್ನ ಶಿಬಿರವನ್ನು ಸಂಪೂರ್ಣವಾಗಿ ಕಿತ್ತು ಒಳನಾಡಿನ ಬೆಟ್ಟಗುಡ್ಡಗಳ ಪ್ರದೇಶಕ್ಕೆ ಸಾಗಿಸಿದ್ದನು.

ಸೇತುವೆಯ ನಿರ್ಮಾಣಕಾರ್ಯ ಮುಗಿಯಿತು. ಸಾಮ್ರಾಟ ಹರ್ಷವರ್ಧನನು ಕಟಕಾಚಾರ್ಯರು ನಿರ್ಧರಿಸಿದ ಶುಭಲಗ್ನದಲ್ಲಿ ರಣಗಂಭಕ್ಕೆ ಪೂಜೆಮಾಡಿ ಶಸ್ತ್ರಾಸ್ತ್ರಗಳನ್ನು ಹೊತ್ತ ಆನೆ ಕುದುರೆಗಳನ್ನು ಇನ್ನೊಂದು ದಡಕ್ಕೆ ಮುಟ್ಟಿಸುವ ಕಾರ್ಯಕ್ಕೆ ಆರಂಭಿಸಿದನು. ಅನೇಕ ಲಕ್ಷಗಳ ಕಾಲ್ಬಲ, ಆನೆ, ಕುದುರೆ ಒಂಟೆಗಳ ಸೈನ್ಯ, ಅವುಗಳ ಶಸ್ತ್ರಾಸ್ತ್ರಗಳೂ, ಇನ್ನಿತರ ಯುದ್ಧೋಪಕರಣಗಳೂ, ಆಹಾರ ವಸ್ತುಗಳೂ, ನದಿಯನ್ನು ದಾಟಲು ಅನೇಕ ದಿನಗಳು ಬೇಕಾದವು. ಈ ಕಾರ್ಯದಲ್ಲಿ ವ್ಯರ್ಥಕಾಲಹರಣ ಮಾಡದೆ, ಹಗಲು ರಾತ್ರಿ ಸೈನಿಕರು ದುಡಿದು ದಣಿದರು. ಅನೇಕ ದಿನಗಳ ಸಂತತ ಶ್ರಮದಿಂದ ಹರ್ಷವರ್ಧನನ ಸೈನ್ಯದ ಅರ್ಧಭಾಗ ತೆಂಕಣ ದಂಡೆಯನ್ನು ಮುಟ್ಟಿತ್ತು. ತಮಗಾಗಿ ಪೂರ್ವಭಾವಿಯಾಗಿ ನಿರ್ಮಿತವಾದ ನೂತನ ಶಿಬಿರಗಳನ್ನು ಮುಟ್ಟಿ ದಣಿದ ಸೈನಿಕರು ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಾ ಕೆಲಕಾಲ ಮೈಮರೆತರು. ಸೈನ್ಯದ ಪೂರ್ಣಭಾಗ ನದಿಯನ್ನು ದಾಟಿ ಬಂದ ಹೊರತು ಸಮರದ ಕಾರ್ಯಾಚರಣೆಗೆ ತೊಡಗುವಂತೆ ಇರಲಿಲ್ಲ. ಅವರು ಈ ಸಾಗಾಣಿಕೆ ಕಾರ್ಯ ಮುಗಿಯುವುದನ್ನೇ ಇದಿರು ನೋಡುತ್ತಾ ಮನೋರಂಜನೆ, ವಿಶ್ರಾಂತಿಗಳಲ್ಲಿ ತೊಡಗಿದ್ದರು.

ಹರ್ಷವರ್ಧನನ ಸೈನಿಕರು ಚಾಲುಕ್ಯ ಸೈನ್ಯ ತಮಗೆ ಹೆದರಿ, ಯುದ್ಧ ಕೊಡದೆ ಓಡಿಹೋಗಿದೆ ಎಂದು ತಿಳಿದು ಯಾವ ಅಪಾಯವನ್ನೂ ನಿರೀಕ್ಷಿಸದೆ, ಯುದ್ಧ ಸಿದ್ಧತೆಯ ಬಗ್ಗೆ ನಿರ್ಲಕ್ಷ್ಯದಿಂದ ಇದ್ದರು. ಸೈನಿಕರನ್ನು ಇನ್ನೊಂದು ಕಡೆಗೆ ಸಾಗಿಸುವ ಕಾರ್ಯಮಾತ್ರ ಎಡಬಿಡದೆ ಸಾಗಿತ್ತು. ರಾತ್ರಿಹಗಲುಗಳು ಅವರಿಗೆ ಒಂದೇ ಆಗಿದ್ದವು. ರಾತ್ರಿಯ ದೀವಿಗೆಯ ಬೆಳಕಿನಲ್ಲೂ ಈ ಸಾಗಾಣಿಕೆಯ ಕಾರ್ಯ ನಿರಂತರವಾಗಿ ಸಾಗಿತ್ತು.

ಸೇತುವೆಯನ್ನು ಎರಡು ಆನೆಗಳನ್ನು ಸಾಗಿಸುವಷ್ಟು ವಿಶಾಲವಾಗಿ ನಿರ್ಮಿಸಿದ್ದರು. ನದಿಯು ಆಳವಾಗಿದ್ದುದರಿಂದಲೂ ಪಾತ್ರ ವಿಶಾಲವಾಗಿದ್ದುದರಿಂದಲೂ ಸಾಗಾಣಿಕೆ ನಿಧಾನವಾಗಿತ್ತು. ಮಳೆಗಾಲ ಆರಂಭವಾಗುವುದರೊಳಗೆ ಈ ದಂಡಯಾತ್ರೆಯನ್ನು ಮುಗಿಸದಿದ್ದರೆ ತಮಗೆ ತುಂಬಾ ತೊಂದರೆಯಾಗುವು

ದೆಂದು ಹರ್ಷವರ್ಧನನಿಗೆ ಚೆನ್ನಾಗಿ ತಿಳಿದಿತ್ತು. ತಾನು ರಾಜಧಾನಿಯನ್ನು ಬಿಟ್ಟು ಶತ್ರುರಾಜ್ಯದ ಗಡಿಯಲ್ಲಿ ದೀರ್ಘಕಾಲ ತಟಸ್ಥನಾಗಿ ಕುಳಿತುದೇ ಈಗ ತಪ್ಪಾಗಿತ್ತು. ಸಂಧಾನದ ನೆಪದಲ್ಲಿ ಸೈನಿಕರ ಕಾರ್ಯಾಚರಣೆ ನಿರೀಕ್ಷಿಸುತ್ತಾ ತೊಡಗುವುದರಲ್ಲಿ ಅವರ ಅಮೂಲ್ಯ ವೇಳೆ ಕಳೆದಿತ್ತು.

ಇನ್ನು ಮೇಲೆ ಕಾರ್ಯಾಚರಣೆಗೆ ತೊಡಗದಿದ್ದರೆ, ಮಳೆಗಾಲದಲ್ಲಿ ಶತ್ರುರಾಜ್ಯದಲ್ಲಿ ಸಿಕ್ಕಿಕೊಂಡು, ನಿಸರ್ಗ ಹಾಗೂ, ಶತ್ರುಗಳ ಉಪಟಳಕ್ಕೆ ಒಳ ಗಾಗಬೇಕಾದ ಪ್ರಸಂಗ ಕಾದಿತ್ತು. ಅದರ ಮುನ್ಸೂಚನೆಯಂತೆ, ಮಳೆಗಾಲ ಆರಂಭವಾದುದರ ಗುರುತಾಗಿ ಶುಭ್ರ ಆಕಾಶದಲ್ಲಿ ಮೋಡಗರ್ಜನೆ ಕೇಳಿಸ ಲಾರಂಭಿಸಿತ್ತು. ಮೇಘಾಚ್ಛಾದಿತ ಆಕಾಶದಲ್ಲಿ ಸೂರ್ಯನು ಅನೇಕ ದಿನಗಳ ವರೆಗೆ ತಲೆಮರೆಸಿಕೊಂಡಿದ್ದನು. ತನಗೆ ಹೆದರಿ ಓಡಿದ ಪುಲಿಕೇಶಿಯಂತೆ. ಇದ್ದ ಕ್ಕಿದ್ದಂತೆ ನದಿಯ ನೀರು ಏರತೊಡಗಿತ್ತು. ಎಲ್ಲೊ ಮಳೆ ಬಿದ್ದ ಕಾರಣದಿಂದ ನದಿಯ ಮಹಾಪೂರವಾಗಿ ಹರಿಯುತ್ತಿತ್ತು. ಅದರ ರಭಸಕ್ಕೆ ನದಿಯಲ್ಲಿ ಸೇತುವೆಯನ್ನು ಹೊತ್ತು ನಿಂತಿದ್ದ ಮರದ ಕಂಭಗಳು ಶಿಥಿಲವಾಗುತ್ತಾ ನಡೆ ದವು. ನದಿಯ ನೀರಿನ ಹೊಡೆತಕ್ಕೆ, ಅವರ ಸೇತುವೆ ಕೊಚ್ಚಿಹೋಗುವ ಮೊದಲು ಸೈನಿಕ ಸಾಗಾಣಿಕೆಯನ್ನು ಮುಗಿಸಬೇಕಾಗಿತ್ತು. ಅಂತಲೇ ಅಹೋ ರಾತ್ರಿ ಈ ಕಾರ್ಯ ಭರಾಟೆಯಲ್ಲಿ ನಡೆದಿತ್ತು.

ಆ ದಿನ ರಾತ್ರಿ ಹರ್ಷವರ್ಧನನ ಶಿಬಿರದಲ್ಲಿ ಹೆಚ್ಚು ಗಡಿಬಿಡಿ ಇರಲಿಲ್ಲ. ಸಾಗಾಣಿಕೆಗೆ ಸಂಬಂಧಿಸಿದ ವ್ಯಕ್ತಿಗಳ ವಿನಃ ಉಳಿದ ಸೈನಿಕರು ನಿದ್ರೆಯ ಜೋಲಿಯಲ್ಲಿದ್ದರು. ಸೈನಿಕರಲ್ಲಿ ಅರ್ಧಭಾಗ ಉತ್ತರದ ದಂಡೆಯ ಶಿಬಿರದಲ್ಲೂ, ಇನ್ನರ್ಧಭಾಗ ದಕ್ಷಿಣದ ದಂಡೆಯಲ್ಲೂ ತಮ್ಮ ಶಿಬಿರಗಳಲ್ಲಿ ನಿದ್ರಿಸುತ್ತಿದ್ದರು. ಶತ್ರುಗಳ ಅಪಾಯ ನಿರೀಕ್ಷಿಸದೆ. ಮಧ್ಯರಾತ್ರಿ ಸಮಯ. ಇದ್ದಕ್ಕಿದ್ದಂತೆ ಶಿಬಿರದ ರಕ್ಷಣೆಗಿದ್ದ ಮೈಗಾವಲು ದಳದವರು ಅಪಾಯಸೂಚಕ ವಾದ್ಯಗಳನ್ನು ನುಡಿಸಿದರು. ಸೈನಿಕರು ನಿದ್ರೆಯಿಂದ ಎಚ್ಚೆತ್ತರು. ಶತ್ರುದಾಳಿಯನ್ನು ನಿರೀಕ್ಷಿಸಿ, ಶಸ್ತ್ರಾಸ್ತ್ರಗಳನ್ನು ತೊಟ್ಟು ಗದ್ದಲವಾಗುತ್ತಿದ್ದ ಕಡೆಗೆ ಬಿರುಗಾಳಿಯ ವೇಗದಲ್ಲಿ ನುಗ್ಗಿದರು.

ಅಷ್ಟರಲ್ಲಿ ಸೈನಿಕ ಶಿಬಿರದಲ್ಲಿ ಹಾಹಾಕಾರಕ್ಕೆ ಆರಂಭವಾಗಿತ್ತು. ಪುಲಿಕೇಶಿಯ ಸೈನಿಕರು ಹೆದರಿ ಹಿಮ್ಮೆಟ್ಟುವ ಸೋಗು ಹಾಕಿ, ಗುಡ್ಡಗಾಡಿನಲ್ಲಿ

ತಲೆಮರೆಸಿಕೊಂಡಿದ್ದವರು—ಈಗ ಸುದ್ದಿ ಕೊಡದೆ ಬಂದು ಹಠಾತ್ತನೆ ತೆಂಕಣ ದಂಡೆಯಲ್ಲಿದ್ದ ಶತ್ರುಶಿಬಿರದ ಮೇಲೆ ಬಿದ್ದಿದ್ದರು. ಅವರು ಕೈಗೆ ಸಿಕ್ಕಿದ ಗುಡಾರ ಗಳನ್ನು ಅಗ್ನಿನಾರಾಯಣನಿಗೆ ಅರ್ಪಿಸುತ್ತಾ, ಇದಿರಾದ ಸೈನಿಕರನ್ನು ಖಡ್ಗಕ್ಕೆ ಬಲಿಗೊಡುತ್ತಾ, ದೈತ್ಯಾವೇಶದಲ್ಲಿ ವಿಜೃಂಭಿಸುತ್ತಿದ್ದರು. ಕತ್ತಿಯಾದರೆ ಕತ್ತಿ, ಬೆಂಕಿಯಾದರೆ ಬೆಂಕಿ, ಆನೆ, ಕುದುರೆಗಳಾದರೆ ಆನೆ, ಕುದುರೆಗಳು–ಶತ್ರು ಮರ್ದನ ಕಾರ್ಯದಲ್ಲಿ ತೊಡಗಿದ್ದವು. ಎಲ್ಲೆಲ್ಲೂ ಚೀತ್ಕಾರ, ಹಾಹಾಕಾರ ! ನೋವಿನ ಧ್ವನಿ ! ವಿಜೇತರಾದವರ ಜಯಘೋಷ ! ಮದ್ದು ಗುಂಡುಗಳ ಭಯಂಕರ ಶಬ್ದ ! ಆಕಾಶಬಾಣಗಳ ಹಾರಾಟ–ಇವುಗಳಿಂದ ಬಾನು ಬಿರಿ ಯಿತು. ದಿಗಂತಗಳು ಶಬ್ದದಿಂದ ತುಂಬಿದವು.

ನೋಡು ನೋಡುತ್ತಿದ್ದಂತೆ ಶತ್ರುಶಿಬಿರ ಪುಲಿಕೇಶಿಯ ಸೈನಿಕರಿಗೆ ವಶ ವಾಯಿತು. ಶತ್ರುಗಳ ಮದ್ದುಗುಂಡುಗಳ ಉಗ್ರಾಣ, ಶಸ್ತ್ರಾಗಾರ, ಆಹಾರ ವಸ್ತುಗಳು ಅವರ ವಶವಾದವು. ಅಧಿಕ ಸಂಖ್ಯೆಯಲ್ಲಿ ಪುಲಿಕೇಶಿಯ ಸೈನಿಕರು ಹರ್ಷವರ್ಧನನ ಸೈನಿಕರನ್ನು ಮುತ್ತಿ ಅನೇಕರನ್ನು ಕೊಂದು, ಹೆಚ್ಚಿನ ಸಂಖ್ಯೆ ಯಲ್ಲಿ ಸೈನಿಕರನ್ನು ಗಾಯಗೊಳಿಸಿ, ಶಿಬಿರದಲ್ಲಿದ್ದ ಸೈನಿಕರನ್ನೂ, ಶಸ್ತ್ರಾಸ್ತ್ರ ಗಳನ್ನೂ ವಶಪಡಿಸಿಕೊಂಡರು. ಈ ಸುದ್ದಿ ಮಿಂಚಿನ ವೇಗದಲ್ಲಿ ಹಬ್ಬಿತು. ಇದನ್ನು ಕೇಳಿ ಉಳಿದ ಸೈನಿಕರು ಕಂಗಾಲಾದರು. ಅವರು ಜೀವದ ಮೇಲಣ ಹಂಗು ತೊರೆದು ಯುದ್ಧಮಾಡಿದರೂ ಶತ್ರುಗಳ ಕೈಯಿಂದ ತಮ್ಮ ಶಿಬಿರವನ್ನು ಉಳಿಸಿಕೊಳ್ಳಲು ಅವರಿಂದ ಸಾಧ್ಯವಾಗಲಿಲ್ಲ.

ಇಷ್ಟೆಲ್ಲ ಹತ್ಯಾಕಾಂಡ ತೆಂಕಣದಂಡೆಯ ಶಿಬಿರದಲ್ಲಿ ನಡೆದರೂ ಉತ್ತರದ ದಂಡೆಯಲ್ಲಿದ್ದ ಸಾಮ್ರಾಟ ಹರ್ಷವರ್ಧನನಾಗಲಿ, ಭಂಡಿಕುಮಾರನಾಗಲಿ ಅವರ ನೆರವಿಗೆ ಸೈನ್ಯಸಮೇತ ಬರಲು ಸಾಧ್ಯವಾಗಲಿಲ್ಲ. ಶತ್ರು ಸೈನ್ಯ ಶಿಬಿರವನ್ನು ಮುತ್ತಿದಾಗ, ಈ ಸುದ್ದಿಯನ್ನು ಹರ್ಷವರ್ಧನನಿಗೆ ತಿಳಿಸಲು ಹೊರಟ ಸೈನಿಕರು ನಿರಾಶೆಯಿಂದ ಹಿಂದಿರುಗಬೇಕಾಯಿತು. ಅವರು ಉತ್ತರದಿಕ್ಕಿನ ದಂಡೆಯಲ್ಲಿದ್ದ ಶಿಬಿರಕ್ಕೆ ಹೋಗಲು ಇದ್ದ ಮರದ ಸೇತುವೆ ನಡುದಾರಿಯಲ್ಲಿ ಮುರಿದು ಹೋಗಿ, ನೀರಿನಲ್ಲಿ ಕೊಚ್ಚಿಹೋಗಿತ್ತು. ಇದರಿಂದ ಆ ಕಡೆಯ ಸೈನಿಕರು ಈ ಕಡೆ ಗಾಗಲಿ, ಈ ಕಡೆಯ ಸೈನಿಕರು ಆ ಕಡೆಗಾಗಲೀ ಬರುವುದು ಸಾಧ್ಯವಾಗದೇ ಹೋಗಿತ್ತು. ಪುಲಿಕೇಶಿಯ ಕಡೆಯ ಕೇವಲ ಹತ್ತಿಪ್ಪತ್ತು ಸಾಹಸಿಗಳು ಈ

ಪವಾಡವನ್ನು ಮಾಡಿದ್ದರು.

ಪುಲಿಕೇಶಿಯು ತಾನು ನದಿಯನ್ನು ದಾಟಿ ಶತ್ರುಗಳ ಮೇಲೆ ಬಿದ್ದರೆ ಗೆಲ್ಲುವುದು ಕಠಿಣವೆಂದು ಅರಿತು, ಸೋತು ಹಿಮ್ಮೆಟ್ಟಿದ್ದ ಸುಳ್ಳು ಸುದ್ದಿಯನ್ನು ಶತ್ರುಶಿಬಿರದಲ್ಲಿ ಹರಡಿ, ತನ್ನ ಸೈನ್ಯವನ್ನು ಹಿಂದಕ್ಕೆ ನಡೆಸಿಕೊಂಡು ಬೆಟ್ಟಗುಡ್ಡಗಳಲ್ಲಿ ಠಾಣೆ ಹಾಕಿದ್ದನು. ಅಲ್ಲಿ ತನ್ನ ಮಿತ್ರರಾದ ಸಮಂತಭದ್ರ, ರವಿಕೀರ್ತಿ, ಎರಪ್ಪದಂಡನಾಯಕರೊಡನೆ ಸಮಾಲೋಚನೆ ನಡೆಸಿ, ಒಂದು ತಂತ್ರವನ್ನು ಸಿದ್ಧಪಡಿಸಿದನು. ಅದರಂತೆ, ಶತ್ರುಗಳ ಅರ್ಧಭಾಗದ ಸೈನ್ಯ ಇನ್ನೊಂದು ದಂಡೆಗೆ ಸುರಕ್ಷಿತವಾಗಿ ಬಂದು ಮುಟ್ಟುವ ತನಕ ಸುಮ್ಮನಿದ್ದು ಸೈನ್ಯ ಇಬ್ಭಾಗವಾದ ಕೂಡಲೇ ಉಪಾಯವಾಗಿ ಮರದ ಸೇತುವೆಯನ್ನು ಒಡೆದು ನೀರಿನ ಪಾಲುಮಾಡಿ, ಎರಡು ಕಡೆಯ ಶಿಬಿರಗಳಿಗೆ ಸಂಪರ್ಕ ತಪ್ಪಿಸಿ, ಹಠಾತ್ತನೆ ತೆಂಕಣ ದಂಡೆಯ ಶಿಬಿರದ ಮೇಲೆ ದಾಳಿ ಇಟ್ಟು, ಅದನ್ನು ವಶಪಡಿಸಿಕೊಳ್ಳಬೇಕೆಂಬುದೇ ಈ ತಂತ್ರದ ಉದ್ದಿಶ್ಯವಾಗಿತ್ತು.

ಅದರಂತೆ ಕೇವಲ ಇಪ್ಪತ್ತು ಜನ ಸಾಹಸಿಗಳಾದ ದಂಡಾಳುಗಳನ್ನು ಕರೆದುಕೊಂಡು ಎರಪ್ಪದಂಡನಾಯಕನು, ಕತ್ತಲೆಯಾಗುವತನಕ ಕಾದಿದ್ದು, ದೋಣಿಯಲ್ಲಿ ಹೊರಟು, ಮರದ ಸೇತುವೆ ಶಿಥಿಲವಾಗಿದ್ದ ಕಡೆ, ಮದ್ದುಗುಂಡುಗಳನ್ನು ಇಟ್ಟು, ಇಬ್ಭಾಗವಾಗಿ ಸೀಳಿದ್ದನು. ನೀರಿನ ಪ್ರವಾಹ ಮರದ ತೊಲೆಗಳನ್ನು ಕೊಚ್ಚಿಕೊಂಡು ಹೋಗಿತ್ತು—ಸೇತುವೆಯ ನಡುವೆ ಸುಲಭವಾಗಿ ಸಂಪರ್ಕ ಕಲ್ಪಿಸಲಾಗದಷ್ಟು ದೊಡ್ಡದಾಗಿ ಬಿರುಕು ಬಿಟ್ಟಿತು. ಹರ್ಷವರ್ಧನನ ಸೈನಿಕರು ನಡೆದಿರುವ ಸಂಗತಿಯೇನೆಂದು ಅರಿಯುವ ಮುನ್ನವೇ ಸೇತುವೆಯು ಮುರಿದು ಬಿದ್ದಿತ್ತು.

ಈ ಸುದ್ದಿ ಕೇಳಿ ಅಲ್ಲಿಗೆ ಸ್ವಯಂ ಹರ್ಷವರ್ಧನನು ಬಂದು, ಸೇತುವೆಯನ್ನು ಮತ್ತೆ ರಚಿಸುವ ಪ್ರಯತ್ನ ಮಾಡುವ ಮೊದಲೇ, ಇನ್ನೊಂದು ಭಾಗದ ಸೇತುವೆಯ ಬಹುಭಾಗ ಪುಲಿಕೇಶಿಯ ಸೈನಿಕರ ವಶವಾಗಿತ್ತು. ಶತ್ರುಗಳು ಮರದ ಸೇತುವೆಯನ್ನು ಅಲ್ಲಲ್ಲಿ ಕೊಚ್ಚಿ, ನೀರಿನ ಪಾಲು ಮಾಡಿ, ಅದು ಹರ್ಷವರ್ಧನನ ಸೈನಿಕರಿಗೆ ಅನುಪಯೋಗಮಾಡಿದ್ದರು. ರಾತ್ರಿಯ ಕಗ್ಗತ್ತಲೆಯಲ್ಲಿ ನಡೆದ ಈ ಎಲ್ಲ ಕಾರ್ಯ, ನಿರ್ವಿಘ್ನವಾಗಿ ಸಾಗಿತ್ತು.

ಸೇತುವೆ ಮುರಿದು ಬಿದ್ದುದೇ ತಡ. ಪುಲಿಕೇಶಿಯು ತನ್ನ ಸೈನಿಕರನ್ನು ತಾನೇ ನಡೆಸಿಕೊಂಡು ಶತ್ರುಶಿಬಿರದ ಮೇಲೆ ಬಿದ್ದು, ಸೈನಿಕರನ್ನು ನಿಶ್ಶಸ್ತ್ರಗೊಳಿಸಿ ಶಿಬಿರವನ್ನು ತನ್ನ ವಶಪಡಿಸಿಕೊಂಡಿದ್ದನು. ಕುಡಿದು ಮತ್ತರಾದ ಸೈನಿಕರು, ಅಷ್ಟೇ ಮದ್ಯ ಕುಡಿದು ಮದವೇರಿದ್ದ ಆನೆ ಕುದುರೆಗಳೂ, ಶತ್ರುಗಳ ಮೇಲೆ ಬಿದ್ದು, ಪ್ರಾಣದ ಹಂಗಿಲ್ಲದೆ ಹೋರಾಡಿ, ಅತ್ಯಲ್ಪ ಕಾಲದಲ್ಲಿ ಕಡಮೆ ರಕ್ತಪಾತ ಹರಿಸಿ, ಸಂಪದ್ಭರಿತವಾದ ಶಿಬಿರವನ್ನು ವಶಪಡಿಸಿಕೊಂಡಿದ್ದರು, ಕನ್ನಡಿಗರ ವೀರಶ್ರೀಗೆ ತಿಲಕವಿಟ್ಟಿದ್ದರು.

ಬೆಳಗಾದ ಮೇಲೆ ಪುಲಿಕೇಶಿಗೆ ತನಗೆ ದೊರೆತ ಶಿಬಿರದ ಪೂರ್ಣಸ್ವರೂಪ ತಿಳಿಯಿತು. ಅಲ್ಲಿನ ಶಸ್ತ್ರಾಸ್ತ್ರಗಳೂ, ಆಹಾರ ವಸ್ತುಗಳೂ, ಯುದ್ಧೋಪಕರಣಗಳೂ ಅವನ ವಶವಾಗಿದ್ದವು. ಶಿಬಿರದಲ್ಲಿದ್ದ ಬಹು ಸಂಖ್ಯೆಯ ಆನೆ ಕುದುರೆಗಳೂ, ಸೈನಿಕರೂ ಸೆರೆ ಸಿಕ್ಕಿದ್ದರು. ಸೆರೆ ಸಿಕ್ಕಿದವರಲ್ಲಿ ಭಾನಿಕುಮಾರನೂ, ಸಿಂಹನಾದರೂ ಮುಖ್ಯರಾಗಿದ್ದರು. ಅಲ್ಲದೆ ಅನೇಕ ದಳಪತಿಗಳು ಕೈಸೆರೆಯಾಗಿದ್ದರು. ಪುಲಿಕೇಶಿಯು ಅವರನ್ನು ಗೌರವವಾಗಿ ನಡೆಸಿಕೊಂಡು, ವೀರಸನ್ಮಾನ ಮಾಡಿದನು. ಯುದ್ಧ ಮುಗಿಯುವವರೆಗೆ ಅವರನ್ನು ಸೆರೆಯಲ್ಲಿ ಇರಿಸಿದನು.

ಈ ಎಲ್ಲ ಸುದ್ದಿ ಹರ್ಷವರ್ಧನನಿಗೆ ಚಾರರು ಮುಟ್ಟಿಸಿದರು. ಇದನ್ನು ಕೇಳಿ ಅವನು ಕಿಡಿಕಿಡಿಯಾದನು. ಕೋಪದಿಂದ ಹಲ್ಲು ಕಡಿದನು, ಆದರೆ ತನ್ನ ಕ್ರೋಧದ ಪರಿಣಾಮವೇನಾಗಬಹುದೆಂದು ಊಹಿಸಿದಾಗ, ಮುಖ ಕಳೆಗುಂದಿ, ಶೋಕತಪ್ತನಾಯಿತು. ತನ್ನ ಶಿಬಿರದ ಬಹುಪಾಲು ಸೈನಿಕರು ಶತ್ರುಗಳಿಗೆ ಸೆರೆ ಸಿಕ್ಕಿರುವ ಸಂಗತಿಯನ್ನು ನೆನೆದಾಗ, ಸಮರೋತ್ಸಾಹ ಬತ್ತಿಹೋಯಿತು. ತನ್ನ ನೆಚ್ಚಿನ ದಂಡನಾಯಕರಾದ ಭಾನಿಕುಮಾರ, ಸಿಂಹನಾದರು ಪುಲಿಕೇಶಿಯ ಕೈಸೆರೆಯಾಗಿ, ಮರಣವನ್ನು ಎದುರು ನೋಡುತ್ತಿರುವ ದೃಶ್ಯ ನೆನೆದಾಗ ಹೃದಯ ಬಿರಿಯಿತು.

ಶಿಬಿರದ ಅಮೂಲ್ಯ ವಸ್ತುಗಳೂ ಯುದ್ಧೋಪಕರಣಗಳೂ ಆನೆ ಕುದುರೆಗಳೂ ಶತ್ರುಗಳಿಗೆ ವಶವಾದುದಕ್ಕೆ ಅವನಿಗೆ ವ್ಯಥೆಯಾಗಲಿಲ್ಲ. ತನ್ನ ಪ್ರೀತಿಯ ದಂಡನಾಯಕರೂ, ಸಾಮ್ರಾಜ್ಯನಿಷ್ಠಸೇವಕರೂ ಆದ ಭಾನಿಕುಮಾರ, ಸಿಂಹನಾದರು ಶತ್ರುಗಳ ಕೈಗೆ ಸಿಕ್ಕಿದುದಕ್ಕೂ ವ್ಯಥೆಯಾಗಲಿಲ್ಲ. ಆದರೆ ನಿರಪರಾಧಿಗಳಾದ ಸೈನಿಕರು ಶತ್ರುಗಳ ಕೈಗೆ ಸಿಕ್ಕಿ ಕಗ್ಗೊಲೆಗೆ ಸಿದ್ಧರಾಗಿರುವ ಸಂಗತಿ

ಯನ್ನು ನೆನೆದಾಗ ಹೃದಯ ಒಡೆದಿತ್ತು. ತಾನು ಭಗವಾನ್ ಬುದ್ಧನ ಹಿಂಬಾಲಕನಾಗಿ, ಸತ್ಯ, ಪ್ರೇಮ, ಕರುಣೆ, ಅಹಿಂಸೆಗಳ ಧರ್ಮಸಂದೇಶವನ್ನು ಸಾರಲು ಹೊರಟು, ಸಾಮ್ರಾಜ್ಯದ ನಿರಪರಾಧಿ ಸೈನಿಕರನ್ನು ಕಗ್ಗೊಲೆಯಾಗಲು ಅವಕಾಶ ಕೊಟ್ಟುದುದಕ್ಕಾಗಿ ತುಂಬಾ ವ್ಯಥೆಯಾಗಿತ್ತು. ಅವನಿಗೆ ಆ ಕ್ಷಣಕ್ಕೆ ತನ್ನ ಸಾಮ್ರಾಜ್ಯ ಹಾಗೂ ಸಿಂಹಾಸನದ ಘನತೆಗೌರವಗಳ ಪ್ರಶ್ನೆಗಳಿಗಿಂತಲೂ ಮಾನವೀಯ ಅನುಕಂಪ ಮೇಲ್ಗೈಯಾಯಿತು. ಅವನು ಸೈನಿಕರ ಕಗ್ಗೊಲೆಯನ್ನು ನಿಲ್ಲಿಸಲು, ವಿಜೇತನಾದ ಪುಲಿಕೇಶಿಯ ಜೊತೆಯಲ್ಲಿ ಸಂಧಾನಾಪೇಕ್ಷಿಯಾದನು.

ಈ ಸುದ್ದಿಯನ್ನು ಕೇಳಿ ಸ್ಕಾಂಧಗುಪ್ತನು—

"ಪ್ರಭು, ಎಂತಹ ಹುಚ್ಚು ವಿಚಾರ ತಮ್ಮದು ! ನಾವು ಬಲಶಾಲಿಗಳಾಗಿದ್ದಾಗ ನಮ್ಮ ಸಂಧಾನದ ಕೋರಿಕೆಯನ್ನು ತಿರಸ್ಕರಿಸಿದ ಪುಲಿಕೇಶಿಯು ಈಗ ವಿಜೇತನಾಗಿರುವಾಗ, ನಮ್ಮ ಸಂಧಾನಕ್ಕೆ ಒಪ್ಪುವನೆ ? ಒಪ್ಪಿದರೂ, ನಮ್ಮ ಘನತೆಗೌರವಗಳಿಗೆ ತಕ್ಕ ಶಾಂತಿ ಒಪ್ಪಂದವೇರ್ಪಡುವುದೆ ? ಅವನಿಂದ ಮತ್ತೆ ತಿರಸ್ಕೃತರಾಗಿ, ಅಪಮಾನ ಸೋಲುಗಳನ್ನು ಅನುಭವಿಸುವುದಕ್ಕಿಂತಲೂ ಕಡೆ ತನಕ ಹೋರಾಡಿ ಸಾಯುವುದು ಲೇಸು. ರಣರಂಗದಲ್ಲಿ ಶತ್ರುಗಳನ್ನು ಕಡಿಸು ಚೆಲ್ಲಿ, ಈ ಪವಿತ್ರಕಾರ್ಯದಲ್ಲಿ ಬಿದ್ದು ಹೋಗುವುದು ಲೇಸು !" ಎಂದನು.

"ಸ್ಕಾಂಧಗುಪ್ತರೇ, ನೀವು ಹೇಳುವುದು ಒಂದು ರೀತಿ ಸರಿಯಾಗಿದೆ. ಆದರೆ, ಪುಲಿಕೇಶಿಯು ನೀವು ತಿಳಿದಿರುವಷ್ಟು ದಯಾಶೂನ್ಯವಾದ ರಾಕ್ಷಸನಲ್ಲ. ಆತನಲ್ಲಿ ಮಾನವತೆ ಇದೆ. ಆಗ ವೀರಪಕ್ಷಪಾತಿ. ಅಲ್ಲದೆ ಆತನಿಗೆ ಈ ಯುದ್ಧವಾಗಲಿ, ಕಗ್ಗೊಲೆಯಾಗಲಿ ಪ್ರಿಯವಲ್ಲವೆಂಬುದು ನನಗೆ ಚೆನ್ನಾಗಿ ತಿಳಿದಿದೆ. ಈಗ ನಾವು ದೈವದ ಉಪೇಕ್ಷೆಯಿಂದ ಸೋತಿರಬಹುದು. ನಾವು ಮತ್ತೆ ಯುದ್ಧ ಹೂಡಿದರೆ ನಮ್ಮ ಸರ್ವನಾಶವಾಗುವುದು ಖಂಡಿತ. ಶತ್ರುಗಳಿಗೆ ಸೆರೆ ಸಿಕ್ಕಿರುವ ನಮ್ಮ ಸೈನಿಕರೂ, ದಂಡನಾಯಕರೂ ಮಡಿಯುವುದೂ ಖಂಡಿತ. ನಾವು ಈಗ ದುಡುಕಿದರೆ ನಮ್ಮ ಸರ್ವಸ್ವವನ್ನು ವೃಥಾ ಕಾರಣಕ್ಕಾಗಿ ಬಲಿ ಕೊಡುತ್ತೇವೆ. ಇದರಿಂದ ವೀರಮರಣ ದೊರೆಯಬಹುದು. ಆದರೆ ನಮ್ಮ ಹೆಗ್ಗಳಿಕೆಯನ್ನು ಉಳಿಸಿಕೊಳ್ಳಲು ನಾವು ಮಾಡಲಿರುವ ಸಹಸ್ರಾರು ನಿರಪರಾಧಿಗಳ ಬಲಿದಾನ

ವನ್ನು ನೆನೆವರೆ, ನಮ್ಮ ಅಹಂಕಾರ, ದುರಭಿಮಾನಗಳನ್ನು ಬಿಟ್ಟುಕೊಟ್ಟು, ಶತ್ರುಗಳೊಂದಿಗೆ ಸಂಧಾನಕ್ಕೆ ಬರುವುದು ಲೇಸು ಎನಿಸುತ್ತದೆ !" ಎಂದ ಭಂಡಿ ಕುಮಾರ.

"ನಾವು ಶತ್ರುಗಳೊಡನೆ ಯುದ್ಧಕ್ಕೆ ಸಿದ್ಧರಿಲ್ಲ, ಕುಮಾರರೇ. ಆದರೆ, ಈಗ ನಾವು ಸಂಧಾನಕ್ಕೆ ಪ್ರಯತ್ನಿಸಿದರೆ, ನಮ್ಮ ಮಾತಿಗೆ ಬೆಲೆ ದೊರೆಯು ವುದೆ ? ನಮ್ಮ ರಾಷ್ಟ್ರದ ಘನತೆಗೌರವಗಳಿಗೆ ತಕ್ಕ ಸ್ನೇಹ ಒಪ್ಪಂದ ಏರ್ಪಡು ವುದೆ ?" ಎಂದು ವ್ಯಾಕುಲದ ಧ್ವನಿಯಲ್ಲಿ ಹೇಳಿದ ಹರ್ಷವರ್ಧನ.

"ಪ್ರಭು, ಈ ಬಗ್ಗೆ ತಮಗೆ ಯಾವ ಚಿಂತೆಯೂ ಬೇಡ. ಪುಲಿಕೇಶಿಯ ಅಂತರಂಗ ನೀವು ತಿಳಿದಿರುವಷ್ಟು ಕಠಿಣವಾಗಿಲ್ಲ. ಅಲ್ಲದೆ ಅವರಿಗೆ ತಮ್ಮ ವಿಷಯದಲ್ಲಿ ಅನುಪಮ ಗೌರವ, ಅಭಿಮಾನಗಳು ಇವೆ. ಈಗ ನಾವು ನಮ್ಮ ಹಿಂದಿನ ಷರತ್ತುಗಳನ್ನು ಬಿಟ್ಟುಕೊಟ್ಟು, ನಿರ್ವ್ಯಾಜ ಪ್ರೇಮದಿಂದ, ನಿರ್ಮಲ ಸ್ನೇಹಾಂತಃಕರಣಗಳಿಂದ ಉಭಯ ರಾಷ್ಟ್ರಗಳ ಹಿತಕ್ಕಾಗಿ ಸ್ನೇಹ ಸೌಹಾರ್ದ ಗಳ ಶಾಂತಿ ಒಪ್ಪಂದವನ್ನು ಬಯಸಿದರೆ, ಅವರು ಖಂಡಿತವಾಗಿಯೂ ತಿರಸ್ಕರಿ ಸಲಾರರು ! ಈ ಬಗ್ಗೆ ನನಗೆ ನಂಬಿಕೆ ಇದೆ" ಎಂದು ಹೇಳಿದ ಭಂಡಿಕುಮಾರ.

"ಹಾಗಾದರೆ, ಈ ಬಾರಿಯೂ ನೀವೇ ರಾಯಭಾರಿಗಳಾಗಿ ಹೋಗ ಬೇಕಾಗುತ್ತದೆ ಕುಮಾರರೇ !" ಎಂದು ಕೋರಿಕೆಯ ರೀತಿಯಲ್ಲಿ ಹೇಳಿದ ಹರ್ಷವರ್ಧನ.

"ಪ್ರಭು ! ಇದು ನನ್ನ ಕರ್ತವ್ಯ. ಸಾಮ್ರಾಜ್ಯನಿಷ್ಠ ಸೇವಕನಿಗೆ ಇದಕ್ಕಿಂತ ಬೇರೆ ಭಾಗ್ಯ ಬೇಕೆ ? ನನ್ನ ಸಂಧಾನ ಯಶಸ್ವಿಯಾದರೆ ನಾನು ತಮಗೆ ಮುಖ ತೋರಿಸುತ್ತೇನೆ. ಇಲ್ಲದಿದ್ದರೆ ನಾನು ಹಿಂದಿರುಗಿ ಬರುವುದಿಲ್ಲ. ಆಗ ನಾನು ನಿಮ್ಮ ಹಾಗೂ ಜಗತ್ತಿನ ಪಾಲಿಗೆ ಇಲ್ಲವೆಂದು ತಿಳಿಯಿರಿ !" ಎಂದು ಭೀಷಣ ಪ್ರತಿಜ್ಞೆಯನ್ನು ಸ್ವೀಕರಿಸಿ ಭಂಡಿಕುಮಾರನು ಮತ್ತೆ ಪುಲಿಕೇಶಿಯ ಶಿಬಿರಕ್ಕೆ ರಾಯಭಾರಿಯಾಗಿ ಹೊರಟನು.

ಈ ಬಾರಿ ತನಗೆ ಪುಲಿಕೇಶಿಯ ಶಿಬಿರದಲ್ಲಿ ಯಾವ ರೀತಿಯ ಸನ್ಮಾನ ದೊರೆಯುವುದೋ ಎಂದು ವ್ಯಾಕುಲಚಿತ್ತನಾಗಿ ಬಂದ ಭಂಡಿಕುಮಾರನನ್ನು ಪುಲಿಕೇಶಿಯು ಪ್ರೀತಿ, ವಿಶ್ವಾಸ, ಗೌರವಗಳಿಂದಲೇ ಬರಮಾಡಿಕೊಂಡು, ಉಚಿತಾಸನವನ್ನು ತೋರಿಸಿದನು. ಅನಂತರ ಕುಶಲ ಪ್ರಶ್ನೆಮಾಡಿ, ಬಂದ

ಕಾರಣ ಕೇಳಿದನು.

ಭಂಡಿಕುಮಾರನು ಎದ್ದುನಿಂತು,

"ಪ್ರಭು, ಮತ್ತೆ ತಮ್ಮೆಡೆಗೆ ಸಂಧಾನಾಪೇಕ್ಷಿಗಳಾಗಿ ಬರುವ ದುರ್ವಿಧಿ ನಮ್ಮದಾಗಿದೆ. ಸನ್ನಿಧಾನ ಪರಾಂಬರಿಸಬೇಕು !" ಎಂದು ಹೇಳಿ, ತಾನು ತಂದಿದ್ದ ಶ್ರೀ ಹರ್ಷವರ್ಧನನ ಪತ್ರವನ್ನು ಕೊಟ್ಟನು.

ಅದರಲ್ಲಿ ಹರ್ಷವರ್ಧನನು ಕೆಲವೇ ಮಾತುಗಳಲ್ಲಿ ತನ್ನ ಹೃದ್ಗತವನ್ನು ತೋಡಿಕೊಂಡಿದ್ದನು. ಎರಡು ರಾಷ್ಟ್ರಗಳ ಮೈತ್ರಿ, ಕಲ್ಯಾಣಗಳ ಸಲುವಾಗಿ ತಾನು ಯಾವ ತ್ಯಾಗಕ್ಕೂ, ಬಲಿದಾನಕ್ಕೂ ಸಿದ್ಧನಾಗಿರುವುದಾಗಿ ಸ್ಪಷ್ಟವಾಗಿ ತಿಳಿಸಿದ್ದನು. ಒಮ್ಮೆ ಪುಲಿಕೇಶಿಯ ಕೈಯಿಂದ ತಿರಸ್ಕೃತನಾಗಿದ್ದರೂ ಪರಾಭವ ಗೊಂಡಿದ್ದರೂ, ನಿರಪರಾಧಿ ಸೈನಿಕರ ರಕ್ತ ಹರಿಯುವುದನ್ನು ತಪ್ಪಿಸಲು, ತನ್ನ ಅಹಂಕಾರ ಆತ್ಮಾಭಿಮಾನಗಳನ್ನು ಬದಿಗೊತ್ತಿ ಈ ಬಾರಿ ಸ್ನೇಹಹಸ್ತ ಕೋರಿ, ಶಾಂತಿ ಒಪ್ಪಂದ ಬೇಡಿ, ಪತ್ರ ಬರೆದಿರುವುದಾಗಿ ತಿಳಿಸಿದ್ದನು. ಈ ಬಾರಿ ತಾನು ಯಾವುದೇ ಷರತ್ತುಗಳನ್ನು ಅಪೇಕ್ಷಿಸದೆ, ನಿರ್ಮಲಾಂತಃಕರಣ, ಪ್ರೀತಿ, ವಿಶ್ವಾಸಗಳ ಬುನಾದಿಯ ಮೇಲೆ ನಿಂತ ಸ್ನೇಹ ಒಪ್ಪಂದಕ್ಕೆ ಸಿದ್ಧನಿರುವುದಾಗಿ ತಿಳಿಸಿದ್ದನು.

ಈ ಪತ್ರವನ್ನು ಓದಿಕೊಂಡು ಪುಲಿಕೇಶಿಯ ಕಣ್ಣುಗಳಲ್ಲಿ ನೀರೂರಿತು. ಹರ್ಷವರ್ಧನನ ಪ್ರಜಾನುರಾಗ, ಧರ್ಮಶ್ರದ್ಧೆ, ವೀರಪೂಜೆ, ಗುಣಪಕ್ಷಪಾತ ಗಳನ್ನು ಕಂಡು ಮನ್ಮೂಕನಾದನು. ಅವನು ಯಾವ ಮಾತನಾಡದೆ, ಭಂಡಿ ಕುಮಾರನನ್ನು ಬಾಚಿ ತಬ್ಬಿಕೊಂಡು, "ಕುಮಾರರೇ, ಇಂತಹ ಮಹಾಪುರುಷ ನನ್ನು ಸಾಮ್ರಾಟನಾಗಿ ಪಡೆದ ನೀವು ಧನ್ಯರು ! ಈತನು ಮಾನವನಲ್ಲ– ದೇವತಾತ್ಮ ! ಒಬ್ಬ ಅವತಾರ ಪುರುಷ ! ಈತನ ಕೋರಿಕೆಯನ್ನು ನಾನು ಶಿರದಲ್ಲಿ ಮುಡಿಯುವ ಪ್ರಸಾದವೆಂದು ಸ್ವೀಕರಿಸುತ್ತೇನೆ" ಎಂದು ಉತ್ತರಿಸಿದ.

ಪುಲಿಕೇಶಿ, ಭಂಡಿಕುಮಾರರು ತಾವು ಶತ್ರುಗಳೆಂಬುದನ್ನು ಮರೆತು ಸ್ನೇಹಿತರಂತೆ ಕುಳಿತು, ಬಿಚ್ಚುಮನಸ್ಸಿನಿಂದ ಸಂಧಾನದ ವಿಷಯವನ್ನು ಚರ್ಚಿಸಿದರು. ಎರಡು ರಾಷ್ಟ್ರದ ಘನತೆ ಗೌರವಗಳಿಗೆ ಅಡ್ಡಿ ತರುವ ಷರತ್ತು ಗಳನ್ನು ಬಿಟ್ಟು ಒಂದು ಸ್ನೇಹ ಸಂಬಂಧವನ್ನು ರೂಪಿಸಿದರು. ಅದಕ್ಕೆ ಹರ್ಷ ವರ್ಧನನು ಸಂತೋಷದಿಂದಲೇ ಒಪ್ಪಿದನು.

ಈ ಒಪ್ಪಂದದಂತೆ ನರ್ಮದಾ ನದಿಯ ತೆಂಕಲು ಸೀಮೆಯೆಲ್ಲವೂ ಪುಲಿಕೇಶಿಗೆ ಸಂತೋಷದಿಂದ ಒಪ್ಪಿಸಲು ಹರ್ಷವರ್ಧನನು ಒಪ್ಪಿಕೊಂಡನು. ಕನ್ನಡಿಗರ ಭಾಗ್ಯದ ನದಿಯಾದ ನರ್ಮದೆಯೇ ಎರಡು ರಾಷ್ಟ್ರಗಳ ಉತ್ತರ ದಕ್ಷಿಣಮೇರೆಯಾಯಿತು. ಹರ್ಷವರ್ಧನನು ಪುಲಿಕೇಶಿಯನ್ನು ಆಸ್ಥಾನಕ್ಕೆ ಕರೆಸಿಕೊಂಡು ಸಾಮ್ರಾಟರಿಗೆ ಒಪ್ಪುವ ರೀತಿಯಲ್ಲಿ ಸನ್ಮಾನಿಸಿ ಅವನಿಗೆ ಪರಮೇಶ್ವರನೆಂಬ ಬಿರುದನ್ನು ಇತ್ತು ಗೌರವಿಸಿದನು. ಜನತೆ ಹಿಗ್ಗಿನಿಂದ ಅವನನ್ನು ದಕ್ಷಿಣಾಪಥೇಶ್ವರನೆಂದು ಕರೆಯಿತು. ಹರ್ಷವರ್ಧನನು ಪುಲಿಕೇಶಿಯನ್ನು ರಾಜೋಚಿತವಾಗಿ ಸತ್ಕರಿಸಿ, ಬೆಲೆಬಾಳುವ ಒಡವೆ ವಸ್ತುಗಳನ್ನೂ ಆನೆ ಕುದುರೆಗಳನ್ನೂ ಕೊಟ್ಟನು.

ಎರಡು ರಾಷ್ಟ್ರಗಳ ಚಿರಬಾಂಧವ್ಯಕ್ಕಾಗಿ ತನ್ನ ಆಸ್ಥಾನದ ಕಲಾವಿದೆಯಾದ ನಾಗಶ್ರೀ ಎಂಬ ರಾಜನರ್ತಕಿಯನ್ನು ಸಾಂಸ್ಕೃತಿಕ ರಾಯಭಾರಿಯಾಗಿ ಪುಲಿಕೇಶಿಯ ಆಸ್ಥಾನದಲ್ಲಿ ನಿಲ್ಲಿಸಿದನು. ಅವಳನ್ನು ಹರ್ಷವರ್ಧನನು ಪುತ್ರೀ ಪ್ರೇಮದಿಂದ ನೋಡುತ್ತಿದ್ದನು. ಅವಳಿಗೆ ಪುಲಿಕೇಶಿಯು ಸ್ವತಂತ್ರ ಸ್ಥಾನಮಾನವನ್ನು ಕಲ್ಪಿಸಿಕೊಟ್ಟು, ರಾಜಪುತ್ರಿಗನುಗುಣವಾಗಿ ನೋಡಿಕೊಳ್ಳುವುದಾಗಿ ಆಶ್ವಾಸನವಿತ್ತನು.

ಹರ್ಷವರ್ಧನನು ಇಷ್ಟರಿಂದಲೇ ತೃಪ್ತಿಗೊಳ್ಳದೆ ಪುಲಿಕೇಶಿಯ ದಂಡನಾಯಕರಾದ ರವಿಕೀರ್ತಿ, ಸಮಂತಭದ್ರ ಎರಪ್ಪದಂಡನಾಯಕರಿಗೂ ಅನೇಕ ಬೆಲೆಬಾಳುವ ವಸ್ತುಗಳನ್ನು ಕೊಟ್ಟನು. ಅಲ್ಲದೆ ಸಾಮಾನ್ಯ ಸೈನಿಕರಿಗೂ ಒಡವೆ ವಸ್ತುಗಳನ್ನು ಇತ್ತು ತಾನೆಂತಹ ಉದಾರಿ ಎಂಬುದನ್ನು ತೋರಿಸಿಕೊಂಡನು.

ಪುಲಿಕೇಶಿಯೂ ಹರ್ಷವರ್ಧನನನ್ನು ಬೀಳ್ಕೊಳ್ಳುವಾಗ, ಅವನಿಗೆ ತನ್ನ ಘನತೆ ಒಪ್ಪುವ ರೀತಿಯಲ್ಲಿ ಮರ್ಯಾದೆ ಮಾಡಿದನು. ಅವನು ಹರ್ಷವರ್ಧನನಿಗೆ ಚಿತ್ರದ ಕೆಲಸಮಾಡಿದ ಛತ್ರಿ ಚಾಮರಗಳನ್ನೂ ಕುಸುರಿನ ಕೆಲಸ ಮಾಡಿದ ಮನೋಹರವಾದ ಮೇಲ್ಹಾಸನ್ನು ಹೊದ್ದಿಸಿದ ಆನೆ ಕುದುರೆಗಳನ್ನೂ ವಿವಿಧ ವರ್ಣಪ್ರಭೆಯಿಂದ ಬೆಳಗುತ್ತಿದ್ದ ರತ್ನಾಭರಣಗಳನ್ನೂ ಮುತ್ತಿನ ಹಾರಗಳನ್ನೂ, ಅನೇಕ ದಂತದ ಸುಖಾಸನಗಳನ್ನೂ ಪರ್ಯಾಂಕಗಳನ್ನೂ ಕೊಟ್ಟು ಸನ್ಮಾನಿಸಿದನು.

ಹೀಗೆ ಪುಲಿಕೇಶಿ ಹರ್ಷವರ್ಧನರು ಶತ್ರುಗಳಾಗಿ ಬಂದವರು ಮಿತ್ರರಾಗಿ ಹಿಂದಿರುಗಿದ್ದರು.

ಪರಮೇಶ್ವರ ಪುಲಿಕೇಶಿಯ ಹೆಸರು ದಿಗಂತವಿಶ್ರಾಂತವಾಯಿತು.

ಅವನ ವೀರಶ್ರೀಯ ಖ್ಯಾತಿ ದೇಶ ವಿದೇಶಗಳಲ್ಲಿ ಹರಡಿತು. ಕನ್ನಡಿಗರ ಕಲಿತನ, ಕೆಚ್ಚು, ಶೌರ್ಯ, ಸಾಹಸ, ಗುಣ ಪಕ್ಷಪಾತಗಳ ಕೀರ್ತಿಪುಂಜವಾಗಿ ಪುಲಿಕೇಶಿಯು ವಾತಾಪಿಗೆ ಹಿಂದಿರುಗಿದನು.

ಅವನ ಜೊತೆಯಲ್ಲಿ ನಾಗಶ್ರೀ ವಿಜಯವಧುವಿನಂತೆ ನಡೆದಳು.



ನರ್ಮದೆಯ ದಂಡೆಯಲ್ಲಿ ನಡೆದ ಯುದ್ಧದಿಂದ ಪುಲಿಕೇಶಿಯ ಹೆಸರು ದಿಗಂತವಿಶ್ರಾಂತವಾಯಿತು. ಅವನು ಸಾಮ್ರಾಟ ಹರ್ಷವರ್ಧನನನ್ನು ಸೋಲಿಸಿ 'ದಕ್ಷಿಣಾಪಥ ಪೃಥಿವ್ಯಾಃಸ್ವಾಮಿ' ಎಂದೆನಿಸಿದನು. ಸ್ವಯಂ ಹರ್ಷವರ್ಧನನಿಂದ ದಕ್ಷಿಣಾಪಥೇಶ್ವರ, ಪರಮೇಶ್ವರನೆಂಬ ಬಿರುದಿಗೆ ಪಾತ್ರನಾದನು. ಕವಿಗಳ ಬಾಯಲ್ಲಿ ಅವನ ಕೀರ್ತಿ ದಶದಿಕ್ಕುಗಳಿಗೂ ಹರಡಿತು. ಅವನ ಕೀರ್ತಿಯನ್ನು, ಶೌರ್ಯ ಸಾಹಸಗಳನ್ನು ಕೇಳಿ ಕಾಳಿದಾಸನಿಗೆ ಸಮನೆನಿಸಿದ ಭಾಣಭಟ್ಟನೂ, ಭಾರವಿಗೆ ಸಮನೆನಿಸಿದ ರವಿಕೀರ್ತಿಯೂ ಹಾಡಿ ಹೊಗಳಿದರು. ಪುಲಿಕೇಶಿಯು ಉತ್ತರಾಪಥೇಶ್ವರನ ಗರ್ವಭಂಗ ಮಾಡಿ, ಸಾಮ್ರಾಟ ಹರ್ಷವರ್ಧನನನ್ನು ಹರ್ಷವಿಲ್ಲದಂತೆ ಮಾಡಿದನು. ಆದರೆ ಸೋತ ಅವನನ್ನು ಮಿತ್ರನಂತೆ ನಡೆಸಿಕೊಂಡು,ತನ್ನ ಔದಾರ್ಯವನ್ನೂ, ಸರಸಸಜ್ಜನಿಕೆಯನ್ನೂ ಮೆರೆದನು. ಶತ್ರುವನ್ನು ಮಿತ್ರನನ್ನಾಗಿ ಮಾಡಿಕೊಂಡು, ಎರಡು ರಾಷ್ಟ್ರಗಳ ಮೈತ್ರಿಗೆ ಚಿರಂತರವಾದ ಬುನಾದಿಯನ್ನು ನಿರ್ಮಿಸಿದನು. ಕನ್ನಡ ದೊರೆಯ ಕಲಿತನದ ಜೊತೆಯಲ್ಲೇ ಅವರ ಔದಾರ್ಯ, ಗುಣಪಕ್ಷಪಾತ, ಸ್ನೇಹ, ನಿರ್ಮಲಾಂತಃಕರಣ, ಆಶ್ರಿತ ವಾತ್ಸಲ್ಯಗಳೂ ದೂರದ ನಾಡುಗಳನ್ನು ವ್ಯಾಪಿಸಿದವು.

ಇವು ವ್ಯಾಪಾರಿಗಳ ಬಾಯಲ್ಲಿ, ಪ್ರವಾಸಿಗಳ ಬಾಯಲ್ಲಿ ಬಿದ್ದು ಪರ್ಶಿಯಾ

ದೇಶದ ಇಮ್ಮಡಿ ಖುಸ್ರುದೊರೆಯ ಕಿವಿಗೂ ತಲುಪಿತು. ಪುಲಿಕೇಶಿಯ ಕೀರ್ತಿ ಯನ್ನು ಕೇಳಿ ಖುಸ್ರುವು ತನ್ನ ಆಪತ್ತಿನಲ್ಲಿ ತನಗೆ ನೆರವಾಗಬಲ್ಲ ದೊರೆ ಅವ ನೆಂದು ಗ್ರಹಿಸಿ ಪುಲಿಕೇಶಿಯ ಬಳಿಗೆ ಒಂದು ರಾಯಭಾರ ಕಳುಹಿಸಿಕೊಡಲು ನಿಶ್ಚಯಿಸಿದನು.

ಖುಸ್ರುವು ಕ್ರಿ. ಶ. ೫೯೦ ರಲ್ಲಿ ಭಾರತದ ವಾಯುವ್ಯ ಗಡಿಯಲ್ಲಿದ್ದ ಪರ್ಶಿಯಾ ದೇಶದ ರಾಜಧಾನಿ ಇಸ್ಪಿಹಾನದಲ್ಲಿ ಇಮ್ಮಡಿ ಖುಸ್ರುವೆಂಬ ಹೆಸರಿನಲ್ಲಿ ಪಟ್ಟಕ್ಕೆ ಬಂದಿದ್ದನು. ಇವನಿಗೆ ಪರ್ವಿಜ್ ಅಂದರೆ ವಿಜಯಿ ಎಂಬ ಬಿರುದು ಇತ್ತು. ಇವನು ಸಸಾನಿಯನ್ ವಂಶದಲ್ಲೆಲ್ಲಾ ಅತ್ಯಂತ ಪ್ರಖ್ಯಾತನಾದ ದೊರೆ ನಾಲ್ವಡಿ ಹೊರ್‌ಮಿಡಾಸನ ಮಗನು. ಮೊದಲಿನಿಂದಲೂ ಕಾನ್‌ಸ್ಟಾಂಟಿನೋ ಪಲಿನ ಅರಸರಿಗೂ, ಪರ್ಶಿಯಾದೇಶದವರಿಗೂ ವೈರವಿತ್ತು. ಅದು ಇವನ ತಂದೆಯ ಕಾಲದಲ್ಲೂ ಮುಂದುವರೆದು ಕಾನ್‌ಸ್ಟಾಂಟಿನೋಪಲಿನ ಮೌರಿಸ ನೆಂಬುವನು ಇಸ್ಪಿಹಾನದ ಮೇಲೆ ಅನೇಕ ಬಾರಿ ದಂಡೆತ್ತಿ ಬಂದಿದ್ದನು.

ಇದೇ ಸಮಯದಲ್ಲಿ ಪರ್ಶಿಯಾ ದೇಶದಮೇಲೆ ಟರ್ಕರೂ ದಂಡೆತ್ತಿ ಬಂದರು. ಆದರೆ ಹೊರ್‌ಮಿಡಾಸನ ಸೇನಾನಿ ಬಹರಾಮ್ ಚುಬಿನನು ಅವ ರನ್ನು ಎದುರಿಸಿ, ಸೋಲಿಸಿ ಸದೆಬಡಿದನು. ಖಾನನು ಯುದ್ಧದಲ್ಲಿ ಮಡಿದು, ಅವನ ಮಗನು ಪರ್ಶಿಯರಿನ್‌ಗೆ ಸೆರೆಸಿಕ್ಕಿದ್ದನು. ಈಯುದ್ಧದಲ್ಲಿ ಪರ್ಶಿಯನ್ನರಿಗೆ ಎರಡು ಲಕ್ಷ ಐವತ್ತುಸಾವಿರ ಒಂಟೆ ಹೇರಿನಷ್ಟು ಅಮೂಲ್ಯವಾದ ಸೂರೆ ಸಿಕ್ಕಿ ತಂತೆ. ಇದರಿಂದ ಉಬ್ಬಿ ಅವನು ಲಾಜಿಕ್‌ದ ಮೇಲೆ ದಂಡೆತ್ತಿ ಹೋಗಲು ರೋಮನ್ನರು ಅವನನ್ನು ಸೋಲಿಸಿ, ಸೆರೆಸಿಕ್ಕಿದ ಅವನಿಗೆ ಸ್ತ್ರೀಯರ ಉಡುಗೆ ಇತ್ತು ಅಪಮಾನಗೊಳಿಸಿದರು. ಇದರಿಂದ ಹೊರ್‌ಮಿಡಾಸನು ಚೇತರಿಸಿ ಕೊಳ್ಳುವುದರೊಳಗೇ ಅವನು ತನ್ನ ಬಂಧುಗಳಾದ ಬೊಸ್ಟಮ್ ಮತ್ತು ಬಂಡೆ ಯಸ್‌ರಿಂದ ಕೊಲೆಯಾದನು.

ತಂದೆಯನಂತರ ಖುಸ್ರು ಪಟ್ಟಕ್ಕೆ ಬಂದಕೂಡಲೇ ಸಮರ್ಥ ಸೇನಾನಿ ಯಾದ ಬಹರಾಮನು ದಂಗೆ ಎದ್ದನು. ಅವನು ತನ್ನ ಸೈನಿಕರ ಬೆಂಬಲದಿಂದ ತಾನೇ ರಾಜನಾಗಲು ಹವಣಿಸಿದನು. ದಂಡೆಯಾತ್ರೆಯಲ್ಲಿ ತೊಡಗಿದ್ದ ಅವನನ್ನು, ರಾಜಧಾನಿಗೆ ಕೂಡಲೇ ಹೊರಟುಬರಲು ಖುಸ್ರು ಬರೆದ ಪತ್ರವನ್ನು ಅವನು ತಿರಸ್ಕರಿಸಿದನು. ಈ ಧೂರ್ತನನ್ನು ಶಿಕ್ಷಿಸಲು ಹೊರಟ ಖುಸ್ರುವು ಬಹರಾಮನ

ಕುತಂತ್ರದಿಂದ ಸೋತು ಹಿಮ್ಮೆಟ್ಟಬೇಕಾಯಿತು. ಇದೇ ಸಮಯದಲ್ಲಿ ಹಿತಶತ್ರು ಗಳಾದ ರೋಮನ್‌ರು ಇಸ್ಪಿಹಾನನ್ನು ಮುತ್ತಿದರು. ಅವರ ನಾಲ್ಕುಸಾವಿರ ಸೈನ್ಯವನ್ನು ಎದುರಿಸಲಾರದೆ, ಖುಸ್ರುವು ಸೋತು ಯೂಫ್ರಿಟಿಸ್ ಕಡೆಗೆ ಓಡಿ ಹೋಗಿ ತಲೆಮರೆಸಿಕೊಳ್ಳಬೇಕಾಯಿತು. ಈ ಸಮಯ ಸಾಧಿಸಿ, ಖುಸ್ರುವಿನ ಚಿಕ್ಕಪ್ಪ ಬಂಡೇಸನು ಶತ್ರುಗಳನ್ನು ಸಮರ್ಥ ರೀತಿಯಲ್ಲಿ ಎದುರಿಸಿ, ಓಡಿಸಿ, ತಾನೇ ದೊರೆ ಎಂದು ಘೋಷಿಸಿಕೊಂಡನು.

ಇತ್ತ ರಾಜ್ಯಕೋಶಗಳನ್ನು ಕಳೆದುಕೊಂಡಿದ್ದ ಖುಸ್ರುವು ಐಯ್ಯಾಸ್ ನೆಂಬ ಅರಬ್ಬೀ ದೇಶದವನ ಸಹಾಯದಿಂದ ಸಿರ್‌ಸೆಡಿಯವನ್ನು ಸುರಕ್ಷಿತವಾಗಿ ತಲುಪಿ, ರೋಮನ್ನರ ಸಹಾಯವನ್ನು ಯಾಚಿಸಿದನು. ರೋಮನ್ ದೊರೆ ಮರಿಯಸನು ಅವನ ಮೇಲೆ ಕನಿಕರಿಸಿ, ಅವನನ್ನು ಹೈರೋಪೋಲಿಸ್ ಎಂಬ ನಗರದಲ್ಲಿ ಇರಿಸಿ, ಮಗನಂತೆ ನೋಡಿಕೊಂಡನು. ಈ ಸಹಾಯಕ್ಕೆ ಪ್ರತಿ ಫಲವಾಗಿ ಖುಸ್ರುವು ತಾನು ದೊರೆಯಾದರೆ ಅವರಿಗೆ ಪರ್ಶಿಯನ್ ಆರ್ಮಾನಿಯ ದೇಶವನ್ನು ಬಿಟ್ಟುಕೊಡಲು ಒಪ್ಪಿಕೊಂಡನು.

ಅತ್ತ ಇಸ್ಪಿಹಾನದಲ್ಲಿ ಸಿಂಹಾಸನವನ್ನೇರಿದ ಬಹರಾಮ ರೋಮನ್‌ರನ್ನು ಒಲಿಸಿಕೊಂಡು, ಸಿಂಹಾಸನವನ್ನು ಊರ್ಜಿತಗೊಳಿಸಿಕೊಳ್ಳಲು ಪ್ರಯತ್ನಿಸಿ ದನು. ಆದರೆ ಇದು ಸಫಲವಾಗಲಿಲ್ಲ. ಖುಸ್ರುವು ರೋಮನ್‌ರ ಸಹಾಯ ಪಡೆದು, ಬಹರಾಮನ ಮೇಲೆ ದಂಡೆತ್ತಿ ಹೊರಟು ಟೈಗ್ರೀಸ್ ನದಿಯನ್ನು ದಾಟಿದನು. ಅಲ್ಲಿ ನಡೆದ ಕದನದಲ್ಲಿ ಬಹರಾಮನ ಸೇನಾನಿಯನ್ನು ಸೆರೆಹಿಡಿ ದನು. ಅವನ ಕಿವಿ ಮೂಗುಗಳನ್ನು ಕಿತ್ತು, ಕ್ರೂರ ರೀತಿಯಾಗಿ ಶಿಕ್ಷಿಸಿ, ತನ್ನ ಸೇಡನ್ನು ತೀರಿಸಿಕೊಂಡನು. ಮುಂದೆ ಇಸ್ಪಿಹಾನವನ್ನು ಮುತ್ತಿ ದಾಗ, ಬಹರಾಮನು ಸೋತು ಓಡಿದನು. ಅವನನ್ನು ಬೆನ್ನಟ್ಟಿ ಖುಸ್ರುವು ಅವನ ಅನೇಕ ಆನೆ ಕುದುರೆಗಳನ್ನು ವಶಪಡಿಸಿಕೊಂಡನು. ಆದರೂ ಬಹ ರಾಮನು ಮಾತ್ರ ಸೆರೆಸಿಕ್ಕಲಿಲ್ಲ.

ಕೈಬಿಟ್ಟು ಹೋಗಿದ್ದ ಸಿಂಹಾಸನ ಖುಸ್ರುವಿನ ವಶವಾಗಿತ್ತು. ಅವನು ತನಗೆ ಸಿಂಹಾಸನ ದೊರಕಿಸಿಕೊಡಲು ಕಾರಣರಾದವರಿಗೆಲ್ಲ ಯೋಗ್ಯರೀತಿ ಯಲ್ಲಿ ಸನ್ಮಾನಿಸಿ, ತಂದೆಯನ್ನು ಕೊಲೆ ಮಾಡಿದವರ ಮೇಲೆ ಸೇಡು ತೀರಿಸಿ ಕೊಂಡನು. ಪ್ರಜೆಗಳ ವಿಶ್ವಾಸಕ್ಕೆ ಪಾತ್ರನಾಗಿ ಪರ್ವಿಜ್ ಎಂಬ ಬಿರುದು ತಳೆ

ದನು. ಅವನ ತೊಂದರೆಗಳು ಮಾತ್ರ ಪರಿಹಾರವಾಗಲಿಲ್ಲ.

ಕ್ರಿ. ಶ. ೬೦೩ ರಲ್ಲಿ ಮಿತ್ರರಾಗಿದ್ದ ರೋಮನ್‌ರೊಡನೆ ಮತ್ತೆ ಯುದ್ಧ ಘಟಿಸಿತು. ಮೌರಿಸನು ವಿದ್ರೋಹಿಗಳ ಕೈಯಲ್ಲಿ ಕೊಲೆಯಾದ ಮೇಲೆ, ಸಿಂಹಾಸನಕ್ಕಾಗಿ ಅವನ ಮಕ್ಕಳಲ್ಲಿ ಸ್ವಯೂಥ ಕಲಹಕ್ಕೆ ಆರಂಭವಾಯಿತು. ಖುಸ್ರುವು ಸಿಂಹಾಸನಕ್ಕೆ ಹಕ್ಕುದಾರನಾದ ಎಡಿಸ್ ಎಂಬವನ ಪಕ್ಷಕಟ್ಟಿದನು. ಉಳಿದ ಆಸ್ಥಾನಿಕರು ಫೋಕಾಸ್‌ನ ಪಕ್ಷ ಕಟ್ಟಿದರು. ಇವರಿಬ್ಬರಿಗೆ ನಡೆದ ಹೋರಾಟದಲ್ಲಿ ಮೆಸಪೋಟೋಮಿಯಾದ ಅಮಿಡ್ ಮುಂತಾದ ದುರ್ಗಗಳು ಖುಸ್ರುವಿನ ವಶವಾದವು. ಮುಂದೆ ಪರ್ಶಿಯನ್ ಸೈನ್ಯಗಳು ಹಾರನ್ ಮತ್ತು ಎಡಿಸ್ಸಾ ದುರ್ಗಗಳನ್ನು ಮುತ್ತಿ ವಶಪಡಿಸಿಕೊಂಡವು. ಇನ್ನೊಂದು ಸೈನ್ಯ ಅರ್ಮೇನಿಯಾವನ್ನು ಮುತ್ತಿತ್ತು. ಫ್ರೈಜಿಯಾ, ಗಲೇಶಿಯಾ, ಬಥೀನಿಯಾಗಳು ಖುಸ್ರುವಿನ ದಾಳಿಯಿಂದ ನಾಶವಾದವು. ಇದನ್ನು ಕೇಳಿ ಕಾನ್‌ಸ್ಟಾಂಟಿನೋಪಲಿನ ಜನ ಕಂಗೆಟ್ಟರು. ಖುಸ್ರುವು ಶತ್ರುಗಳಿಗೆ ನೆರವಿತ್ತ ಹೀರಾ ಎಂಬ ಅರಬ್ಬೀ ರಾಜ್ಯದ ಮೇಲೆ ದಂಡೆತ್ತಿಹೋಗಿ ಅಲ್ಲಿನ ಅರಸನನ್ನು ಜುಕಾರ್ ಎಂಬಲ್ಲಿ ಸೋಲಿಸಿದನು. ಹೀಗೆ ಖುಸ್ರು ಎಲ್ಲೆಲ್ಲೂ ವಿಜೇತನಾದನು.

ಹೀರಾ ರಾಜ್ಯವು ಯೂಫ್ರಿಟಿಸ್ ಮತ್ತು ಜೆರೂಸಲೇಂಗಳ ನಡುವೆ ಇದ್ದ ಸಣ್ಣ ಅರಬ್ಬಿ ರಾಜ್ಯವಾಗಿತ್ತು. ಇಲ್ಲಿನ ದೊರೆ ನೋಮಾನನಿಗೆ ಅತ್ಯಂತರೂಪವತಿಯಾದ ಮಗಳಿದ್ದಳು. ಅವಳನ್ನು ಖುಸ್ರುವು ಮೋಹಿಸಿ, ವಿವಾಹವಾಗಲು ಬಯಸಿದನು. ಆದರೆ ದೊರೆಯು ಸ್ವಾಭಿಮಾನಿಯಾಗಿದ್ದುದರಿಂದ ಇದನ್ನು ತಿರಸ್ಕರಿಸಿದನು. ಅವನನ್ನು ಶಿಕ್ಷಿಸಲು ಖುಸ್ರುವು ಐಯ್ಯಾಸನೆಂಬುವನನ್ನು ಕಳುಹಿಸಿಕೊಟ್ಟನು. ಇದನ್ನು ಕೇಳಿ ದೊರೆ ನೋಮನು ಶಯಬಾನಿಗೆ ಓಡಿಹೋದನು. ಕಡೆಗೆ ಹಾನಿ ಎಂಬ ದೊರೆಯು ಅವನಿಗೆ ಆಶ್ರಯ ನೀಡಿದನು. ಆದರೆ ಅವನು ಖುಸ್ರುವಿನ ಮುಂದೆ ನಿಲ್ಲಲಾಗಲಿಲ್ಲ. ಅವನು ಆಶ್ರಯ ಬೇಡಿ ಬಂದ ನೋಮನನ್ನು ಶಿರಚ್ಛೇದ ಮಾಡಿದರೂ, ಖುಸ್ರುವಿನ ವಿಶ್ವಾಸ ಮಾತ್ರ ದೊರಕಲಿಲ್ಲ.

ಇದೇ ಸಮಯದಲ್ಲಿ ಬೈಜಾಂಟಿಯಂ ಸಾಮ್ರಾಜ್ಯದಲ್ಲಿ ತಲೆದೋರಿದ್ದ ಅನಾಯಕತೆಯಲ್ಲಿ ಖುಸ್ರು ಪ್ರಮುಖ ಪಾತ್ರವಹಿಸಬೇಕಾಯಿತು. ಕಾನ್‌ಸ್ಟಾಂಟಿನೋಪಲಿನಮೇಲೆ ದಂಡೆತ್ತಿಹೋಗಿದ್ದ ಫೋಕಾಸನು ಮೌರಿಸನ ನಂತರ

ಸಿಂಹಾಸನಕ್ಕೆ ತಾನೇ ಒಡೆಯನಾದನು ಆದರೆ ದುರ್ಬಲನಾದ ಇವನನ್ನು ಆಫ್ರಿಕಾದ ಗೌರ್ನರ್ ಆಗಿದ್ದ ಹರ್‌ಕ್ಯುಲಿಸ್ ಎಂಬುವ ಮಹತ್ವಾಕಾಂಕ್ಷಿಯಾದ ತರುಣನು ಮೂಲೆಗೊತ್ತಿ ತಾನೇ ಅರಸನಾದನು. ಅವನು ರಾಜ್ಯದ ಅನ್ಯಾಯ ಕತೆಯನ್ನು ಪರಿಹರಿಸಿ, ದಿನದಿನಕ್ಕೂ ಪ್ರವರ್ಧಮಾನಕ್ಕೆ ಬರುತ್ತಿದ್ದ ಪರ್ಶಿಯಾದ ಮೇಲೆ ದಂಡೆತ್ತಿ ಹೊರಟನು.

ಖುಸ್ರುವಿಗೂ, ಹರ್‌ಕ್ಯುಲಿಸನಿಗೂ ಆರ್ಮೇನಿಯದ ಸಲುವಾಗಿ ಯುದ್ಧ ಮೊದಗಿತು. ಹರ್‌ಕ್ಯುಲಿಸನಿಗೆ ಇಪ್ಪತ್ತುಸಾವಿರ ಸಣ್ಣಪುಟ್ಟದೊರೆಗಳು ನೆರವಾದರಂತೆ. ಆದರೂ ಖುಸ್ರುವು ಜೆರೂಸಲೇಮನ್ನು ಮುತ್ತಿ ಅಲ್ಲಿದ್ದ ಪವಿತ್ರವಾದ ಶಿಲುಬೆಯನ್ನು ಕದ್ದೊಯ್ದನು. ಮುಂದೆ ಈಜಿಪ್ಟಿನ ಮೇಲೆ ಹೊರಟು ಅದನ್ನು ವಶಪಡಿಸಿಕೊಂಡನು. (ಸುಮಾರು ಒಂಬತ್ತು ಶತಮಾನಗಳ ನಂತರ ಅದು ಪರ್ಶಿಯನ್ನರಿಗೆ ವಶವಾಯಿತು.) ಇದರಿಂದ ಪರ್ಶಿಯನ್ನರ ಕೀರ್ತಿ ಎಲ್ಲೆಡೆಗೂ ಹರಡಿತು.

ಖುಸ್ರುವನ್ನು ಎದುರಿಸಿ ಉಳಿಗಾಲವಿಲ್ಲವೆಂದು ಅರಿತ ಹರ್‌ಕ್ಯುಲಿಸನು ನಿರ್ವಾಹವಿಲ್ಲದೆ ಖುಸ್ರು ಬಳಿಗೆ ಸಂಧಾನಾಪೇಕ್ಷಿಯಾಗಿ ರಾಯಭಾರಿಗಳನ್ನು ಕಳುಹಿಸಿದನು. ವಿಜೇತನಾದ ಖುಸ್ರು ಅವರನ್ನು ತಿರಸ್ಕಾರದಿಂದ ಕಂಡನು. ಖುಸ್ರುವು ರಾಯಭಾರಿಗಳನ್ನು ಸೆರೆಹಿಡಿದು ಅಪಮಾನಗೊಳಿಸಿದನು. ಈ ಸಂಧಾನಕ್ಕೆ ಕಾರಣನಾದ ತನ್ನ ಸೇನಾಧಿಪತಿ ಷಹೀನನ ಮೇಲೆ ಅಸಮಾಧಾನಗೊಂಡನು. ತನ್ನ ದಂಡಯಾತ್ರೆಯನ್ನು ಮುಂದುವರಿಸಿ ಖುಸ್ರುವು ಚಾಲ್‌ಸಡಾನವನ್ನು ಕೈವಶಪಡಿಸಿಕೊಂಡನು. ಅಖಿಮಿನಿಯನ್ ವಂಶದವರು ಪಡೆದಿದ್ದ ಎಲ್ಲ ಸಾಮ್ರಾಜ್ಯ ಅವನ ವಶವಾಯಿತು.

ಹರ್‌ಕ್ಯುಲಿಸನಿಗೆ ಈಗ ಬೇರಾವ ಮಾರ್ಗವೂ ಉಳಿಯಲಿಲ್ಲ. ಅವನು ತನ್ನ ಎಲ್ಲ ಸಂಪತ್ತಿನೊಡನೆ ಕಾರ್ಥೇಜಿಗೆ ಓಡಿಹೋಗಲು ಪ್ರಯತ್ನಿಸಿದನು. ಈ ಸುದ್ದಿ ಹೇಗೋ ಬಯಲಾಯಿತು. ಇದನ್ನು ಕೇಳಿದ ಜನ ಅವನ ಮೇಲೆ ರೊಚ್ಚಿಗೆದ್ದರು. ಅವರ ವಿರೋಧವನ್ನು ಅವನು ತಿರಸ್ಕರಿಸುವಂತೆ ಇರಲಿಲ್ಲ. ಇದರ ಪರಿಣಾಮವಾಗಿ ಅವನು ತನ್ನ ಜನತೆಗೆ ತಾನು ಅವರನ್ನು ತೊರೆದು ಓಡಿಹೋಗುವುದಿಲ್ಲವೆಂದು ಸೆಂಟ್ ಸೋಫಿಯಾದಲ್ಲಿ ಪ್ರತಿಜ್ಞೆ ಸ್ವೀಕರಿಸಿ, ಅಭಯ ನೀಡಬೇಕಾಯಿತು ಇಷ್ಟಾದರೂ ಖುಸ್ರು ಮಾಡಿದ ಅಪಚಾರ—ಪವಿತ್ರವಾದ

ಶಿಲುಬೆಯನ್ನು ಅಪಹರಿಸಿದುದು—ಜನತೆಯ ಮನಸ್ಸಿನಿಂದ ಮರೆಯಾಗಿರಲಿಲ್ಲ. ಅವರು ಖುಸ್ರುವಿನ ಮೇಲೆ ಸೇಡು ಬಗೆಯಲು ಹಾತೊರೆಯುತ್ತಿದ್ದರು.

ಹರ್‌ಕ್ಯುಲಿಸನು ಸೋತರೂ ಎದೆಗುಂದಲಿಲ್ಲ. ಅವನಿಗೆ ಇನ್ನೂ ಸಮುದ್ರದ ಒಡೆತನವಿತ್ತು. ಅವನು ಒಂದು ದೊಡ್ಡ ಹಡಗುಪಡೆಯನ್ನು ಕಟ್ಟಿ ಪರ್ಶಿಯಾದ ಮೇಲೆ ಏರಿಹೋದನು. ಹವೆಯು ಕೆಟ್ಟದ್ದರೂ ಅಂಜದೆ, ಏಜಿಯನ್ ಸಮುದ್ರದ ಮೂಲಕ ಹೊರಟು ಇಸ್ಸೂಸ್ ಬಳಿ ಇಳಿದನು. ಹಿಂದೆ ಈ ಪ್ರದೇಶದಲ್ಲಿ ಅಲೆಕ್ಸಾಂಡರನಿಗೆ ಒಂದು ನೌಕಾವಿಜಯ ದೊರೆತಿತ್ತು. ಪರ್ಶಿಯನರ ಷಹಿರ್ ಬರಾಜನು ರೋಮನ್ನರ ಸೈನ್ಯವನ್ನು ಎದುರಿಸಿದನು. ಆರ್ಮೀನಿಯನ್ ಗಡಿಯಲ್ಲಿ ಯುದ್ಧವಾಗಿ ಹರ್‌ಕ್ಯುಲಿಸನಿಗೆ ಪ್ರಚಂಡ ವಿಜಯ ದೊರಕಿತು. ಇದರಿಂದ ಪರ್ಶಿಯನ್ನರ ಸಾಮ್ರಾಜ್ಯಲಾಲಸೆಗೆ ಕೊನೆ ಬಂದಂತೆ ಆಯಿತು.

ಮೂರನೆಯ ವರ್ಷ ಖುಸ್ರುವು ತನ್ನ ನಲವತ್ತು ಸಾವಿರ ಸೈನ್ಯದೊಡನೆ ಹೊರಟು ಕಜಕದ ಬಳಿ ಶತ್ರುಗಳಮೇಲೆ ಬಿದ್ದನು. ಈ ಯುದ್ಧದಲ್ಲಿ ಹರ್‌ಕ್ಯುಲಿಸನಿಗೆ ಕಜಕಾಸನೆಂಬುವನು ನೆರವಾದನು. ಯುದ್ಧದಲ್ಲಿ ಖುಸ್ರುವು ಸೋತು ಜಿಗೋರಸ್ ಬೆಟ್ಟಗುಡ್ಡಗಳಲ್ಲಿ ತಲೆಮರೆಸಿಕೊಳ್ಳಬೇಕಾಯಿತು. ಈ ವೇಳೆಗೆ ಚಳಿಗಾಲ ಆಗಮಿಸಿದುದರಿಂದ ಹರ್‌ಕ್ಯುಲಿಸನು ಆಲ್‌ಬೇನಿಯಾಕ್ಕೆ ಹಿಂದಿರುಗಬೇಕಾಯಿತು. ಹಿಂದಿರುವಾಗ ಅವನು ಅನೇಕ ನಗರಗಳನ್ನು ನಾಶಮಾಡಿದನು. ಪರ್ಶಿಯನ್ನರ ಧರ್ಮಗುರುವಾದ ಜಾರತೂಸ್ತ್ರನು ಹುಟ್ಟಿದ ಊರಾದ ಉರುಮಿಯನ್ನು ಮುತ್ತಿ ಅಲ್ಲಿನ ಪವಿತ್ರ ಅಗ್ನಿಯನ್ನು ನಾಶಪಡಿಸಿದನು.

ಇಷ್ಟಾದರೂ ಖುಸ್ರುವು ಧೈರ್ಯಗೆಡಲಿಲ್ಲ. ಅವನು ತನ್ನ ಧರ್ಮಗುರುವಿನ ಊರಿಗಾದ ಅಪಮಾನವನ್ನು ನೆನೆದು ಕನಲಿದನು. ಕೂಡಲೇ ಷಹರ್‌ಬ ರಾಜನನ್ನು ಸೈನ್ಯದೊಡನೆ ಕಳುಹಿಸಿಕೊಟ್ಟನು. ಅವನು ಸೋತು ಸಾಲಬಾನಕ್ಕೆ ಹಿಂದಿರುಗಬೇಕಾಯಿತು.

ಹರ್‌ಕ್ಯುಲಿಸನು ಇಷ್ಟರಿಂದ ತೃಪ್ತಿಗೊಳ್ಳಲಿಲ್ಲ. ಅವನು ಷಹರ್‌ಬರಾಜನ ಮೇಲೆ ಯುದ್ಧಕ್ಕೆ ಹೊರಟು, ಯೂಪ್ರಿಡಿಸ್ ನದಿಯ ಬಳಿಯ ಅಮಿಾಡ, ಮೆಟ್ರೊಪೊಲಿಸ್‌ಗಳನ್ನು ಕಿತ್ತುಕೊಳ್ಳಲು ಪ್ರಯತ್ನಿಸಿನನು. ಆಗ ಖುಸ್ರುವು

ಅವಾರರ ಮುಖಂಡ ಖಾನಸ್ ಸಹಾಯ ಪಡೆದು ಕಾನ್‌ಸ್ಟಾಂಟಿನೋಪಲಿನ ಮೇಲೆ ಹೊರಟನು. ಇದನ್ನು ಎದುರಿಸಲು ಸಹೋದರ ಥಿಯೋಡರ್‌ನನ್ನು ಸೈನ್ಯಸಮೇತ ಕಳುಹಿಸಿ, ತಾನು ಲಜಕದ ಮೇಲೆ ದಾಳಿ ಇಟ್ಟನು.

ಥಿಯೋಡರನು ಶತ್ರುಗಳನ್ನು ಸದೆಬಡಿದು ಹರ್‌ಕ್ಯುಲಿಸನ ಅಸೂಯೆಗೆ ಪಾತ್ರನಾದನು. ಈ ಮಧ್ಯೆ ಕಾನ್‌ಸ್ಟಾಂಟಿನೋಪಲನ್ನು ಗೆಲ್ಲಲು ಬಂದ ಅವಾರರು ಸೋತು ಹಿಮ್ಮೆಟ್ಟಬೇಕಾಯಿತು.

ಹೀಗೆ ಎಲ್ಲೆಲ್ಲೂ ಹರ್‌ಕ್ಯುಲಿಸನಿಗೆ ದೈವ ಅನುಕೂಲವಾಗಿತ್ತು. ಅವನು ತನ್ನ ವಿಜಯದಿಂದ ಹಿಗ್ಗಿ ಖುಸ್ರುವಿನ ಮೇಲೆ ಅಂತಿಮ ಜಯವನ್ನು ಸಾಧಿಸಲು ಇಸ್ಪಿಹಾನನಕ್ಕೆ ಎಪ್ಪತ್ತು ಮೈಲಿ ದೂರವಿದ್ದ ಖುಸ್ರುವಿನ ನಿವಾಸವಾಗಿದ್ದ ದಸ್ತಗಿರ್ದ್ ಎಂಬ ನಗರವನ್ನು ಮುತ್ತಿದನು. ಕಜಕದಲ್ಲಿ ಇದ್ದ ಪರ್ಶಿಯನ್ ಸೈನ್ಯ ಅವನ ನೆರವಿಗೆ ಬಾರದಿರುವಂತೆ ಮಾಡಲು ಗ್ರೇಟ್‌ಜಾಬರದ ಬಳಿಗೆ ಬಂದು ಬೀಡು ಬಿಟ್ಟನು. ನೈನಾಫ್ಹದ ಬಳಿ ನಡೆದ ಯುದ್ಧದಲ್ಲಿ ಪರ್ಶಿಯನ್ ಸೇನಾಧಿಪತಿಯು ಮಡಿದನು. ಆದರೂ ಖುಸ್ರುವು ಧೈರ್ಯಗೆಡದೆ, ತನ್ನ ಸೈನ್ಯವನ್ನು ಹುರಿದುಂಬಿಸುತ್ತಾ ನಡೆದನು. ಅವನಿಗೆ ಬರಾಜ್‌ರುಡ್ ಎಂಬ ಕಡಲ್ಗಾಲುವೆ ರಕ್ಷಣೆ ಕೊಟ್ಟಿತು. ಶತ್ರುಗಳ ಅಗಾಧ ಸೈನ್ಯ ನೋಡಿ ಅವನು ಹಿಮ್ಮೆಟ್ಟಬೇಕಾಯಿತು. ಹರ್‌ಕ್ಯುಲಿಸನು ಇನ್ನೂರು ಆನೆಗಳಿಂದ ಕಡಲ್ಗಾಲುವೆಯನ್ನು ಹಾದು ಇಸ್ಪಿಹಾನವನ್ನು ಮುತ್ತಿ ಅದನ್ನು ಸಂಪೂರ್ಣವಾಗಿ ನಾಶ ಮಾಡಿದನು.

ಇದೇ ಸಮಯದಲ್ಲಿ ಖುಸ್ರುವು ಯುದ್ಧದಲ್ಲಿ ಮಡಿದ ಷಹೀರನನ್ನು ನಡೆಸಿಕೊಂಡ ರೀತಿಯಿಂದ ಜನಸಿಟ್ಟಿಗೆದ್ದಿದ್ದರು. ಖುಸ್ರುವು ಷಹರಬರಾಜನನ್ನು ಕೊಲ್ಲಿಸಲು ಪ್ರಯತ್ನಪಟ್ಟನೆಂದು ಅವನ ಮೇಲೆ ದಂಗೆ ಎದ್ದರು. ಇದರಲ್ಲಿ ಭಾಗವಹಿಸಿದ ಅನೇಕ ಅಧಿಕಾರಿಗಳನ್ನು ಖುಸ್ರುವು ಕೊಲ್ಲಿಸಿದನು. ಇದರಿಂದ ಕುಪಿತರಾದ ಕೆಲವು ಸೇನಾನಿಗಳು ರೊಚ್ಚಿಗೆದ್ದು, ಖುಸ್ರುವನ್ನು ಸೆರೆಹಿಡಿದು, ಅರಮನೆಯ ಕತ್ತಲಿನ ಕೋಣೆಯಲ್ಲಿ ಬಂಧಿಸಿದರು. ಅಲ್ಲಿ ಅವನಿಗೆ ಕೇವಲ ರೊಟ್ಟಿಯನ್ನು ಒಂದು ಗುಟುಕು ನೀರನ್ನು ಮಾತ್ರವೇ ಕೊಡಲಾಗುತ್ತಿತ್ತು. ಜನ ಮೇಲಿಂದ ಮೇಲೆ ಬಂದು ಅವನಿಗೆ ಉಗುಳಿಹೋಗುತ್ತಿದ್ದರು. ಅವನ ಕಣ್ಣೆದುರಿಗೇ ಅವನ ಮಗ ಮೆರ್‌ಡಾಸನನ್ನು ಕೊಲ್ಲಿಸಲಾಯಿತು.

ಈ ಪರಿಸ್ಥಿತಿಯಲ್ಲಿ ಖುಸ್ರುವಿಗೆ ತನ್ನನ್ನು ಕಾಪಾಡಲು ಪುಲಿಕೇಶಿಯಲ್ಲದೆ ಬೇರೆ ದೊರೆಗಳು ಸಮರ್ಥರಾಗಿ ಕಾಣಲಿಲ್ಲ. ಹರ್ಷವರ್ಧನನನ್ನು ಸೋಲಿಸಿದ ದೊರೆ, ಪುಲಿಕೇಶಿಯ ನೆರವನ್ನು ಪಡೆದರೆ ತಾನು ಬಂಧಮುಕ್ತನಾಗುವುದರ ಜೊತೆಗೆ ರಾಜ್ಯಕೋಶಗಳನ್ನು ಮತ್ತೆ ಹೊಂದಬಹುದೆಂದು ಅವನು ಭಾವಿಸಿ, ಸಮರ್ಥರಾದ ರಾಯಭಾರಿಗಳನ್ನು ಗೋಪ್ಯವಾಗಿ ಪುಲಿಕೇಶಿಯ ಆಸ್ಥಾನಕ್ಕೆ ಕಳುಹಿಸಿದನು.

ರಾಯಭಾರಿಗಳು ಕಾಬೂಲ್, ಕಾಂದಹಾರಗಳ ಮಾರ್ಗವಾಗಿ ಹೊರಟು ಕಳ್ಳಕಾಕರು ಹಾಗೂ ಹವೆಯಿಂದ ಅಧಿಕ ಕಷ್ಟನಷ್ಟಗಳನ್ನು ಅನುಭವಿಸಿ ವಾತಾಪಿಗೆ ಬಂದರು. ಅವರು ಅರಬ್ಬಿ ವರ್ತಕರಂತೆ ಸಮುದ್ರ ಮಾರ್ಗ ಹಿಡಿಯದೆ ಭೂಮಾರ್ಗ ಹಿಡಿದುದೇ ಇಷ್ಟೆಲ್ಲ ತೊಂದರೆಗೆ ಕಾರಣವಾಯಿತು.

ಖುಸ್ರು ದೊರೆಯ ರಾಯಭಾರಿಗಳು ಬಂದು ಅಮಾತ್ಯನಾದ ಸಮಂತಭದ್ರನನ್ನು ಕಂಡು ತಮ್ಮ ರಾಯಭಾರದ ಸಂಗತಿಯನ್ನು ವಿಜ್ಞಾಪಿಸಿಕೊಂಡರು. ಇದನ್ನೆಲ್ಲಾ ಸಮಾಧಾನದಿಂದ ಕೇಳಿಕೊಂಡು, ಅವರನ್ನು ಪುಲಿಕೇಶಿಯ ಸಮ್ಮುಖಕ್ಕೆ ಕರೆದೊಯ್ದನು. ಈ ಸಮಯದಲ್ಲಿ ಪುಲಿಕೇಶಿಯು ಪುತ್ರೋತ್ಸವದ ಹಿಗ್ಗಿನಲ್ಲಿ ಇದ್ದನು. ಅವನಿಗೆ ತನ್ನ ಕೀರ್ತಿಯನ್ನು ಕೇಳಿ ಪರ್ಶಿಯಾದ ಖುಸ್ರು ದೊರೆಯು ತನ್ನ ರಾಯಭಾರಿಯನ್ನು ಕೇಳಿ ಪರ್ಶಿಯಾದ ಖುಸ್ರು ದೊರೆಯು ತನ್ನ ರಾಯಭಾರಿಯನ್ನು ಕಳುಹಿಸಿಕೊಟ್ಟಿರುವ ಸಂಗತಿ ಮನಸ್ಸಿಗೆ ತುಂಬಾ ಅಪ್ಯಾಯಮಾನವಾಯಿತು.

ಪುಲಿಕೇಶಿಯು ಸಾಮ್ರಾಟ್ ಹರ್ಷವರ್ಧನನ್ನು ಸೋಲಿಸಿದ ಮೇಲೆ ತನಗೆ ದೊರೆತ ವಿಜಯದಿಂದ ತೃಪ್ತಿಗೊಳ್ಳದೆ ತನ್ನ ದಂಡಯಾತ್ರೆಯನ್ನು ಮುಂದುವರೆಸಿ ದಕ್ಷಿಣಾಪಥೇಶ್ವರನೆಂಬ ತನ್ನ ಬಿರುದನ್ನು ಸಾರ್ಥಕಪಡಿಸಿಕೊಳ್ಳಲು ನಿಶ್ಚಯಿಸಿ, ವಿಂಧ್ಯಾದ್ರಿಯ ಆಗ್ನೇಯ ದಿಕ್ಕಿನಲ್ಲಿದ್ದ ಕೋಸಲದ ಮೇಲೆ ದಂಡೆತ್ತಿ ಹೊರಟನು.

ಕೋಸಲ ರಾಜ್ಯವು ಇಂದಿನ ರಾಯಪುರ, ಸಂಬಳಪುರ, ಕಟಕ ಮುಂತಾದ ಪಟ್ಟಣಗಳನ್ನು ಒಳಗೊಂಡ ರಾಜ್ಯವಾಗಿತ್ತು. ಇಲ್ಲಿನ ಅರಸನು ಪುಲಿಕೇಶಿಯನ್ನು ಧಿಕ್ಕರಿಸಿದನು. ಪುಲಿಕೇಶಿಯ ಮುಂದೆ ಅವನು ಹೆಚ್ಚು ಕಾಲ ನಿಲ್ಲಲಾರದೆ, ಸೋತು ಶರಣು ಬಂದನು. ಅವನನ್ನು ಪುಲಿಕೇಶಿಯು ಉದಾರವಾಗಿ

ಕ್ಷಮಿಸಿ, ಅವನನ್ನು ತನ್ನ ಮಾಂಡಲೇಶ್ವರನನ್ನಾಗಿ ಮಾಡಿಕೊಂಡು, ಕಲಿಂಗ ರಾಜ್ಯದ ಮೇಲೆ ದಂಡೆತ್ತಿ ಹೊರಟನು.

ಕಲಿಂಗವು ಉತ್ಕಲವೆಂಬ ಹೆಸರಿನಲ್ಲಿ ಹಿಂದಿನಿಂದಲೂ ಪ್ರಸಿದ್ಧವಾಗಿತ್ತು. ಉತ್ತರದಲ್ಲಿ ವೈತರಣಿ ನದಿ, ದಕ್ಷಿಣದಲ್ಲಿ ಮಹೇಂದ್ರಗಿರಿ, ಪೂರ್ವದಲ್ಲಿ ಬಂಗಾಳಾ ಕೊಲ್ಲಿಯವರೆಗೆ ಅದು ವಿಸ್ತರಿಸಿತ್ತು. ಕಳಿಂಗಾಧಿಪತಿಯು ಪುಲಿಕೇಶಿಯನ್ನು ಎದುರಿಸದೆ, ಅವನಿಗೆ ಸಾಮಂತನಾಗಿರಲು ಒಪ್ಪಿಕೊಂಡು, ಕಪ್ಪವನ್ನು ಒಪ್ಪಿಸಿದನು. ಅವನ ಸೇವೆಯನ್ನು ಸ್ವೀಕರಿಸಿ, ಅವನ ಮಗಳನ್ನು ವಿವಾಹ ವಾಗಿ ಪುಲಿಕೇಶಿಯು ತನ್ನ ರಾಜ್ಯಕ್ಕೆ ಹಿಂದಿನಿಂದಲೂ ಕಿರುಕುಳ ಕೊಡುತ್ತಿದ್ದ ಪಲ್ಲವರ ಪಿಷ್ಟಪುರದ ಮೇಲೆ ಬಿದ್ದನು.

ಹಿಂದಿನಿಂದಲೂ ಪಲ್ಲವರಿಗೂ ಚಾಲುಕ್ಯರಿಗೂ ಹಗೆತನ ಬೆಳೆದುಬಂದಿತ್ತು. ರಣಾಗಾರನ ಕಾಲದಿಂದಲೂ ಇಬ್ಬರಿಬ್ಬರಿಗೂ ಪರಸ್ಪರ ಯುದ್ಧಗಳು ನಡೆಯು ತ್ತಿದ್ದವು. ಹಿಂದೊಂದು ಕಾಲದಲ್ಲಿ ವಾತಾಪಿಯು ಪಲ್ಲವರ ರಾಜಧಾನಿ ಯಾಗಿತ್ತಂತೆ ! ರಣಾಗಾರ ವಿಜಯಾದಿತ್ಯರು ಅವರನ್ನು ಅಲ್ಲಿಂದ ಓಡಿಸಿ ತಮ್ಮದು ಮಾಡಿಕೊಂಡು, ಚಾಲುಕ್ಯ ಸಾಮ್ರಾಜ್ಯಕ್ಕೆ ಅದನ್ನು ರಾಜಧಾನಿ ಯಾಗಿ ಮಾಡಿಕೊಂಡಿದ್ದರು. ಪಲ್ಲವರು ನಿರ್ವಾಹವಿಲ್ಲದೆ ಒತ್ತಲ್ಪಟ್ಟ ಕಾಂಚಿ ಯನ್ನು ತಮ್ಮ ರಾಜಧಾನಿ ಮಾಡಿಕೊಂಡು ನೆಲೆಯಾಗಿ ನಿಂತರು. ಆದರೂ ತಮ್ಮ ಪೂರ್ವಜರ ವಾತಾಪಿಯನ್ನು ಮತ್ತೆ ಸಾಧಿಸುವ ಕನಸು ಮಾತ್ರ ಅವರು ಮರೆಯಲಿಲ್ಲ. ಇದರ ಸಲುವಾಗಿ ಅನೇಕ ಬಾರಿ ಯುದ್ಧಗಳಾಗಿದ್ದವು. ಅವರ ಪ್ರಯತ್ನ ಮಾತ್ರ ಸಫಲವಾಗಿರಲಿಲ್ಲ. ಈಗ ಪಲ್ಲವರ ದೊರೆ ಮಹೇಂದ್ರ ವರ್ಮನು ಪುಲಿಕೇಶಿಯು ಬಾಲಕನೆಂಬ ಕಾರಣದಿಂದ, ವಾತಾಪಿಯನ್ನು ಸಾಧಿಸಲು ಸಮಯ ಕಾಯುತ್ತಿದ್ದನು. ಆದರೆ ಪುಲಿಕೇಶಿ ತಾನೆಂತಹ ಬಾಲಕ ನೆಂಬುದನ್ನು ಜಗತ್ತಿಗೆ ತೋರಿಸಿಕೊಟ್ಟದ್ದುದರಿಂದ, ಮಹೇಂದ್ರವರ್ಮನು ಅವನ ತಂಟೆಗೆ ಬಂದಿರಲಿಲ್ಲ. ಆದರೂ ಚಾಲುಕ್ಯ ಸಾಮ್ರಾಜ್ಯದ ಗಡಿಯಲ್ಲಿದ್ದ ಪಿಷ್ಟಪುರದ ಪಲ್ಲವರಿಂದ ಅನೇಕ ಬಾರಿ ತೊಂದರೆಯಾಗುತ್ತಿತ್ತು. ಅದನ್ನು ನಿವಾರಿಸುವುದೇ ಪುಲಿಕೇಶಿಯ ದಂಡಯಾತ್ರೆಯ ಉದ್ದಿಶ್ಯವಾಗಿತ್ತು.

ಇಂದಿನ ಆಂಧ್ರಪ್ರದೇಶದ ಗೋದಾವರಿ ಜಿಲ್ಲೆಯಲ್ಲಿ ಕಾಕಿನಾಡಾಗೆ ಹನ್ನೆರಡು ಮೈಲಿ ದೂರವಿರುವ ಪಿಟ್ಟಾಪುರಂ ಆ ಕಾಲದಲ್ಲಿ ಮಹಾನಗರ

ವಾಗಿತ್ತು. ಇದಕ್ಕೆ ಸುಭದ್ರವಾದ ಕೋಟೆಕೊತ್ತಲುಗಳು ಇದ್ದವು. ಅದು ಶತ್ರುದಾಳಿಗೆ ಸುಲಭವಾಗಿ ವಶವಾಗುವಂತೆ ಇರಲಿಲ್ಲ. ಅಲ್ಲಿ ಪಲ್ಲವರ ದೊಡ್ಡ ದೊಂದು ಸೈನ್ಯಠಾಣೆ ಇತ್ತು. ಇದನ್ನು ಪುಲಿಕೇಶಿಯು ಸುಲಭವಾಗಿ ಗೆದ್ದು, ಅಲ್ಲಿ ತನ್ನ ವರಾಹಾಂಕಿತ ಧ್ವಜವನ್ನು ಏರಿಸಿ, ತನ್ನ ಅಧಿಕಾರಿಯೊಬ್ಬನನ್ನು ಮಾಂಡಲೇಶ್ವರನನ್ನಾಗಿ ನೇಮಿಸಿ, ರಾಜಧಾನಿಗೆ ಹಿಂತಿರುಗಿದಾಗ ಅವನಿಗೆ ಪುತ್ರೋತ್ಸವವಾಗಿತ್ತು.

ಕದಂಬಪುತ್ರಿ ಉಮಾದೇವಿಯಲ್ಲಿ ಒಬ್ಬ ಮಗನೂ, ಗಂಗ ರಾಜಪುತ್ರಿ ಗಂಗಮಹಾದೇವಿಯಲ್ಲಿ ಒಬ್ಬ ಮಗನೂ, ಉತ್ಕಲ ರಾಜಪುತ್ರಿಯಲ್ಲಿ ಒಬ್ಬ ಮಗನೂ ಹುಟ್ಟಿದ್ದರು. ಇವರಿಗೆ ಕ್ರಮವಾಗಿ ಆದಿತ್ಯವರ್ಮ, ಚಂದ್ರಾದಿತ್ಯ ಮತ್ತು ವಿಕ್ರಮಾದಿತ್ಯನೆಂಬ ಹೆಸರನ್ನು ಇಟ್ಟಿದ್ದನು. ಪುಲಿಕೇಶಿಯ ಕೀರ್ತಿ ಲತೆಯ ಮೂರು ಕುಡಿಗಳಂತೆ ಈ ಮೂವರು ಮಕ್ಕಳು ಹುಟ್ಟಿದ್ದರು. ಈ ಸಂತೋಷದ ಹೆಚ್ಚಳದಲ್ಲಿ ಪುಲಿಕೇಶಿ ಮಾತ್ರವಲ್ಲ—ಇಡೀ ಸಾಮ್ರಾಜ್ಯನೇ ಆನಂದದಿಂದ ನಲಿಯುತ್ತಿರುವವಾಗ, ಅವನ ಕೀರ್ತಿಯನ್ನು ಕೇಳಿ ಪರ್ಶಿಯಾದ ರಾಯಭಾರಿಗಳು ಅವನಲ್ಲಿ ನೆರವು ಬೇಡಲು ಬಂದಿದ್ದರು.

ಪುಲಿಕೇಶಿಯು ಖುಸ್ರು ದೊರೆಯ ಘನತೆಗೌರವಗಳಿಗೆ ತಕ್ಕಂತೆ ರಾಯ ಭಾರಿಗಳನ್ನು ವಿಶೇಷ ಓಲಗದಲ್ಲಿ ಮರ್ಯಾದೆಯಿಂದ ಬರಮಾಡಿಕೊಂಡು ಗೌರವಿಸಿದನು. ಅನಂತರ ರಾಯಭಾರಿಗಳು ತಾವು ತಮ್ಮ ದೊರೆಯಿಂದ ತಂದಿದ್ದ ಬೆಲೆಬಾಳುವ ವಸ್ತುಗಳನ್ನು ಪುಲಿಕೇಶಿಯ ಪದತಲದಲ್ಲಿ ಅರ್ಪಿಸಿ, ತಮ್ಮ ದೊರೆಯ ನಿರೂಪವನ್ನು ಒಪ್ಪಿಸಿದರು.

ಅದರಲ್ಲಿ ಖುಸ್ರುವು ಹೀಗೆ ಬರೆದಿದ್ದನು :

"ಷಹನ್‌ಷಹ, ಸಾಮ್ರಾಟ್ ಪುಲಿಕೇಶಿ ಸಾರ್ವಭೌಮರಿಗೆ, ಖುಸ್ರು ಪರ್ವಿಜ್ ಮಾಡುವ ವಂದನೆಗಳು.

ನಾನು ತಮಗೆ ಅಪರಿಚಿತನಾದರೂ, ನನಗೆ ತಾವು ಚಿರಪರಿಚಿತರಿದ್ದೀರಿ. ತಮ್ಮ ಕೀರ್ತಿಯನ್ನೂ, ಶೌರ್ಯಸಾಹಸಗಳನ್ನೂ, ಸಂಪತ್ತನ್ನೂ, ಗುಣಾತಿ ಶಯಗಳನ್ನೂ, ನಾನು ಅನೇಕರ ಬಾಯಲ್ಲಿ ಕೇಳಿ ನಿಮ್ಮ ಬಗ್ಗೆ ಗೌರವ ತಳೆದಿದ್ದೇನೆ.

ಈಗ ನಾನು ತಮ್ಮಲ್ಲಿ ಮಾಡಿಕೊಳ್ಳುವ ವಿನಂತಿ ಏನೆಂದರೆ, ನಾನು ನಿಮ್ಮಂತೆಯೇ ಸಾಮ್ರಾಟರ ಹೊಟ್ಟೆಯಲ್ಲಿ ಹುಟ್ಟಿದ್ದರೂ, ದೊಡ್ಡದೊಂದು ಸಾಮ್ರಾಜ್ಯಕ್ಕೆ ಅಧಿಪತಿಯಾಗಿದ್ದರೂ, ದೈವಗತಿಯಿಂದ ಇಂದು ನಿರ್ಗತಿಕನಾಗಿ, ನನ್ನ ಅರಮನೆಯ ಕತ್ತಲಕೋಣೆಯಲ್ಲಿ ಬಂದಿಯಾಗಿ, ನಾಯಿನರಿಗಳಿಗೂ ಹೇಯವಾದ, ಬದುಕನ್ನು ಬಾಳುತ್ತಿದ್ದೇನೆ. ನನ್ನನ್ನು ಈ ದುಸ್ಥಿತಿಯಿಂದ ಪಾರುಮಾಡಿ, ಕಳೆದುಕೊಂಡ ನನ್ನ ಸಾಮ್ರಾಜ್ಯವನ್ನು ನನಗೆ ದೊರಕಿಸಿ ಕೊಡಲು ನಿಮ್ಮ ಹೊರತು, ಜಗತ್ತಿನಲ್ಲಿ ಬೇರೆ ಶಕ್ತಿಸಂಪನ್ನರನ್ನೂ, ಉದಾರಿಗಳನ್ನೂ ನಾನು ಕಾಣೆ. ತಾವು ನನ್ನನ್ನು ಪರಕೀಯನೆಂದು ಭಾವಿಸದೆ, ನನ್ನ ಆಪತ್ಕಾಲದಲ್ಲಿ ದೇವರಂತೆ ಒದಗಿ, ಸಹಾಯಮಾಡಿದರೆ,ನಾನು ಯಾವಜ್ಜೀವವೂ ತಮಗೆ ಕೃತಜ್ಞನಾಗಿರುತ್ತೇನೆ. ಬಲ್ಲವರಿಗೆ ಹೆಚ್ಚಿಗೆ ಬರೆಯಲಾರೆ. ನಾನು ಕಳುಹಿಕೊಟ್ಟ ರಾಯಭಾರದಿಂದ ನಮ್ಮೆರಡು ರಾಷ್ಟ್ರಗಳಿಗೆ ಭದ್ರವಾದ ಸ್ನೇಹಕ್ಕೆ ಬುನಾದಿ ಬೀಳುವುದೆಂದು ನಂಬಿದ್ದೇನೆ.

ಇಂತು ನಿಮ್ಮ ಸ್ನೇಹಾಕಾಂಕ್ಷಿ,
ಖುಸ್ರು ಪರ್ವಿಜ್."

ಮರುದಿನ ಪುಲಿಕೇಶಿಯು ರಾಯಭಾರಿಗಳನ್ನು ತನ್ನ ಅರಮನೆಗೆ ಕರೆಸಿಕೊಂಡು ಅವರ ಕುಶಲಪ್ರಶ್ನೆ ಮಾಡಿದನು :

"ನಿಮ್ಮ ಸಾಮ್ರಾಟರು ನಮ್ಮನ್ನು ತಮ್ಮ ಸ್ನೇಹಿತರೆಂದು ತಿಳಿದು ನಮ್ಮ ಬಳಿಗೆ ರಾಯಭಾರಿಗಳನ್ನು ಕಳುಹಿಸಿಕೊಟ್ಟು ನಮಗೆ ದೊಡ್ಡ ಗೌರವಮಾಡಿದ್ದಾರೆ."

"ಪ್ರಭು ! ರಾಜ್ಯಕೋಶಗಳನ್ನು ಕಳೆದುಕೊಂಡು, ನೆಲಕ್ಕೆ ಬಿದ್ದಿರುವ ನಮ್ಮ ಸಾಮ್ರಾಟರನ್ನು ತಾವು ಸ್ನೇಹಿತರಾಗಿ ಪರಿಗಣಿಸಿದುದು ನಮ್ಮ ಭಾಗ್ಯ. ಇದು ತಮ್ಮ ಹಿರಿಮೆಯನ್ನೂ, ಸ್ನೇಹವಾತ್ಸಲ್ಯವನ್ನೂ ತೋರಿಸುತ್ತದೆ. ಈಗ ನಮ್ಮ ಸಾಮ್ರಾಟರಿಗೆ ನೀವಲ್ಲದೇ ಬೇರೆ ಸ್ನೇಹಿತರಿಲ್ಲ. ನೀವು ಅವರಿಗೆ ನೆರವಾದರೆ ಅವರು ಉಳಿಯುತ್ತಾರೆ. ಇಲ್ಲವೇ ಅಳಿಯುತ್ತಾರೆ !" ಎಂದು ದೈನ್ಯದಿಂದ ರಾಯಭಾರಿ ಹೇಳಿದನು.

ನಮ್ಮ ಬಳಿ ರಾಯಭಾರ ಕಳುಹಿಸಿದರೆ ನೀವು ಅಪೇಕ್ಷಿಸುವ ನೆರವು

ದೊರೆಯುವುದೆಂದು ನಿಮ್ಮ ದೊರೆಗಳಿಗೆ ತಿಳಿಸಿದವರು ಯಾರು ?"

"ನಮ್ಮ ದೊರೆಗಳಿಗೆ ಈ ಸಂಗತಿಯನ್ನು ಯಾರೂ ತಿಳಿಸಲಿಲ್ಲ ಪ್ರಭು ! ನಮ್ಮ ಸಾಮ್ರಾಟರಿಗೇ ಹೊಳೆಯಿತು. ಅವರು ತಮ್ಮ ದುಸ್ಥಿತಿಯಿಂದ ತಮ್ಮನ್ನು ರಕ್ಷಿಸಬಲ್ಲ ಲೋಕೈಕವೀರರಿದ್ದರೆ, ಅದು ಸಾಮ್ರಾಟ್ ಹರ್ಷವರ್ಧನರನ್ನು ಗೆದ್ದ ತಾವು ಮಾತ್ರ ಎಂದು ಅವರೇ ಅರಿತರು. ಅಂತಲೇ ತಮ್ಮ ಬಳಿಗೆ ನೆರವು ಯಾಚಿಸಲು ನಮ್ಮನ್ನು ಕಳುಹಿಸಿಕೊಟ್ಟಿದ್ದಾರೆ."

"ನಮ್ಮ ಹೆಸರು ನಿಮ್ಮ ಸಾಮ್ರಾಟರ ಕಿವಿಗೆ ಬಿದ್ದಿರುವುದನ್ನು ನೆನೆದರೆ ನಮಗೆ ಆಶ್ಚರ್ಯವಾಗುತ್ತದೆ. ನಾವು ಮಾಡಿದ ಅಲ್ಪ ಕಾರ್ಯ ಅಷ್ಟು ದೂರ ವ್ಯಾಪಿಸಿದಿಯೆ ? ಆಶ್ಚರ್ಯ."

"ಇದರಲ್ಲಿ ಆಶ್ಚರ್ಯವೇನು ಬಂತು ಪ್ರಭು ? ಸೂರ್ಯನ ಪ್ರಕಾಶ ತಿಳಿಯಲು ಹೆಚ್ಚಿನ ಪ್ರಯತ್ನಬೇಕೆ ? ತಮ್ಮ ಕೀರ್ತಿಸೂರ್ಯದ ಬೆಳಕು ಪರ್ಶಿಯಾ ಮಾತ್ರವಲ್ಲ—ಈ ಲೋಕವನ್ನೆಲ್ಲಾ ಪಸರಿಸಿದೆ."

"ಇದು ದೊಡ್ಡ ಮಾತು! ನಿಮ್ಮ ಸಾಮ್ರಾಟರ ಘನತೆಗೆ ಒಪ್ಪುವ ಮಾತೇ ಹೊರತು, ಇಷ್ಟೆಲ್ಲ ಕೀರ್ತಿಗೆ ನಾನು ಬಾಧ್ಯನಲ್ಲ. ಈಗ ನೀವು ಬಂದ ಕಾರ್ಯವೇನು? ನಮ್ಮಿಂದ ನಿಮಗೆ ಯಾವ ನೆರವು ಬೇಕಾಗಿದೆ ? ನಿಸ್ಸಂಕೋಚ ವಾಗಿ ತಿಳಿಸಿರಿ."

"ಪ್ರಭು, ನಾವು ತಮ್ಮಲ್ಲಿಗೆ ಬಂದ ಉದ್ದಿಶ್ಯ, ತಮ್ಮ ನೆರವನ್ನು ಪಡೆದು ನಮ್ಮ ಸಾಮ್ರಾಟರಿಗೆ ಕಳೆದುಕೊಂಡ ಸಾಮ್ರಾಜ್ಯವನ್ನೂ, ಸಾಮ್ರಾಟ ಪದವಿ ಯನ್ನೂ ಗಳಿಸಿಕೊಡುವುದು. ನಾವು ತಮ್ಮ ರಾಜಧಾನಿಯ ವೈಭವ, ತಮ್ಮ ಶ್ರೀಮಂತಿಕೆ, ತಮ್ಮ ಸೈನ್ಯಗಳನ್ನು ನೋಡಿದ ಮೇಲೆ, ತಮ್ಮಲ್ಲಿ ನಮ್ಮ ಸಾಮ್ರಾಟರು ಇಟ್ಟಿದ್ದ ನಂಬಿಕೆ ಯಥಾರ್ಥವಾಗಿದೆ ಎಂದು ತಿಳಿಯಿತು. ತಾವು ಈಗ ನಮಗೆ ಅಭಯನೀಡಬೇಕು ಪ್ರಭು !"

ವಾಸ್ತವ ಸಂಗತಿಯೂ ಹಾಗೇ ಇತ್ತು. ರಾಯಭಾರಿಗಳು ವಾತಾಪಿಗೆ ಬಂದಾಗ ಅಲ್ಲಿನ ವೈಭವವನ್ನು ಕಂಡು ಮಾರುಹೋಗಿದ್ದರು. ಅಲ್ಲಿನ ಉಪ್ಪರಿಗೆ ಮನೆಗಳೂ, ಸಂಪದ್ಭರಿತವಾದ ರಾಜಬೀದಿಗಳೂ, ತಿಳಿಗೊಳಗಳೂ, ಉದ್ಯಾನ ಗಳೂ ಅವರನ್ನು ಬೆರಗುಗೊಳಿಸಿದ್ದವು ಅದಕ್ಕೆ ನೂರ್ಮಡಿಯಾದ ವೈಭವವನ್ನು ಅರಮನೆಯಲ್ಲಿ ಕಂಡಿದ್ದರು.

ಪುಲಿಕೇಶಿಯ ಅರಮನೆಯು ವಾತಾಪಿ ಗುಡ್ಡದ ನೆತ್ತಿಯಲ್ಲಿ, ಪ್ರಶಸ್ತ

ವಾದ ಸ್ಥಳದಲ್ಲಿ ಭವ್ಯವಾಗಿ ನಿಂತಿತ್ತು. ಅಲ್ಲಿಂದ ನೋಡಿದರೆ ವಾತಾಪಿಯ ವಿಹಂಗಮ ದೃಶ್ಯ ಕಾಣುತ್ತಿತ್ತು. ಅರಮನೆಯ ಸುಭದ್ರವಾದ ಕೋಟೆಯೊಂದು ಬಳಸಿತ್ತು. ಅದರೊಳಗೆ ವಿಶಾಲವಾದ ಅನೇಕ ಉಪ್ಪರಿಗೆಗಳಿಂದಲೂ ಕಳಶ ಗೋಪುರಗಳಿಂದಲೂ ಹೊಳೆಯು ಅರಮನೆ ಕಂಗೊಳಿಸುತ್ತಿತ್ತು. ಅಲ್ಲಿಗೆ ಬಂದವರಿಗೆ ತಾವು ಸ್ವರ್ಗಲೋಕಕ್ಕೆ ಬಂದೆವೋ ಎಂಬ ಭ್ರಮೆ ಹುಟ್ಟುತ್ತಿತ್ತು. ಅರಮನೆಯಲ್ಲಿ ಎಲ್ಲ ನೋಡಿದರೂ ಚಿತ್ರವಿಚಿತ್ರವಾದ ಕಮಾನುಗಳೂ ಸ್ತಂಭರಾಜಿಗಳೂ, ಚಿತ್ರದ ಕೆಲಸ ಮಾಡಿದ ಗೋಡೆಗಳೂ, ಭಿತ್ತಿಗಳೂ ಕಾಣುತ್ತಿದ್ದವು. ಗೋಡೆಗಳಿಗೆ ಅನೇಕ ಸುಂದರ ಪರದೆಗಳನ್ನು ಬಿಡಲಾಗಿತ್ತು. ಎಲ್ಲೆಡೆಯಲ್ಲೂ ಕಲಾತ್ಮಕವಾದ ಸುಖಾಸನಗಳೂ, ಸಿಂಹಾಸನಗಳೂ, ಮುತ್ತು ರತ್ನಗಳ ಹಾರಗಳೂ, ಬಂಗಾರದಲ್ಲಿ ಕೆತ್ತಿದ ವಿಗ್ರಹಗಳೂ, ಪಚ್ಚೆ ನೀಲಗಳ ಬಟ್ಟಲುಗಳೂ, ನವರತ್ನ ಖಚಿತವಾದ ತೋರಣ, ಛತ್ರಚಾಮರಗಳೂ, ಮುತ್ತು ರತ್ನಗಳ ಕರ್ಣಕುಂಡಲಗಳು ದಂತದ ಪೆಟ್ಟಿಗೆಗಳೂ ಮುತ್ತು ಮಾಣಿಕ್ಯದ ಒಡವೆಗಳೂ, ಪಟ್ಟೆಪೀತಾಂಬರಗಳೂ ನೋಟಕರನ್ನು ನಿಬ್ಬೆರಗುಗೊಳಿಸುತ್ತಿದ್ದವು. ಇವೆಲ್ಲವನ್ನೂ ಅವಾಕ್ಕಾಗಿ ನೋಡುತ್ತಾ ಬಂದ ರಾಯಭಾರಿಗೆ ಪುಲಿಕೇಶಿಯ ಸಂಪತ್ತು ತನ್ನ ಊಹೆಗಿಂತ ಮಿಗಿಲೆಂದು ಅರಿವಾಗಿತ್ತು. ಅವನು ಪುಲಿಕೇಶಿಯ ಸಂಪತ್ತನ್ನು ಹೊಗಳಿದಾಗ,

"ಸನ್ಮಾನ್ಯ ಖುಸ್ರು ದೊರೆಗಳು ತಮ್ಮ ಭಟ್ಟಂಗಿಗಳಲ್ಲಿ ಯಾರನ್ನೋ ರಾಯಭಾರಿಗಳಾಗಿ ಕಳುಹಿಸಿರುವಂತೆ ಇದೆ!" ಎಂದು ಪರಿಹಾಸ್ಯ ಮಾಡಿದ ಪುಲಿಕೇಶಿ.

"ಏಕೆ ಪ್ರಭು?"

"ಇನ್ನೇನು ? ನೀವು ನಮ್ಮನ್ನು ವೃಥಾ ಹೊಗಳಿ, ಲಜ್ಜೆ ಉಂಟುಮಾಡುತ್ತಿರುವಿರಿ. ನಮಗೆ ನಿಮ್ಮ ದೇಶದ ಹಾಗೂ ನಿಮ್ಮ ಸಾಮ್ರಾಟರ ವಿಷಯ ತಿಳಿಯುವುದು ಬೇಕಾಗಿದೆ."

"ತಮ್ಮ ಯಾವ ವಿಷಯ ಬೇಕೋ ನಿಸ್ಸಂಕೋಚವಾಗಿ ಕೇಳಬಹುದು. ಪ್ರಭು !"

"ನಿಮ್ಮ ಖುಸ್ರು ದೊರೆ ನಮ್ಮಷ್ಟೇ ವೈಭವಶಾಲಿಗಳೆಂದು ಅವರಿವರ ಬಾಯಲ್ಲಿ ಕೇಳಿದ್ದೇವೆ, ದಿಟವೆ ?"

"ಪ್ರಭು ತಮ್ಮಲ್ಲೇಕೆ ಮರೆಮಾಚುವುದು ! ಸಾಮ್ರಾಟರು ಆ ದುರುಳ

ಹರ್‌ಕ್ಯುಲೀಸನನ್ನು ಎದುರುಹಾಕಿಕೊಳ್ಳುವ ಮೊದಲು ತುಂಬಾ ವೈಭವದಿಂದ ಇದ್ದರು. ಅವರಿಗೆ ಸಾಹಿತ್ಯಕಲೆಗಳಲ್ಲಿ ಅಪಾರ ಆಸಕ್ತಿ ಇದೆ. ಅನೇಕ ಕಲಾವಿದ ರಿಗೆ ಆಶ್ರಯ ಕೊಟ್ಟಿದ್ದರು. ಅವರಿಗೆ ಅಧಿಕಾರ, ವೈಭವ, ಸಿರಿಸಂಪತ್ತುಗಳ ವ್ಯಾಮೋಹವಿತ್ತೆಂದರೂ ಸಲ್ಲುತ್ತದೆ. ಅವರು ಬೈಜಾಂತಿಯಮ್ ಸಾಮ್ರಾಜ್ಯದ ತಂಟೆಗೆ ಹೋಗದಿದ್ದರೆ ಅಚಿಮೀನಿಯನ್ ದೊರೆಗಳಂತೆ ವೈಭವೋನ್ನತಿಯಿಂದ ಮೆರೆಯಬಹುದಿತ್ತು. ಆದರೆ ವಿಧಿ ಅದಕ್ಕೆ ಅಡ್ಡ ಬಂದ. ಅವನ ಇಚ್ಛೆ ಬೇರೆ ಯಾಗಿತ್ತು !"

ಎಂದು ನಿಟ್ಟುಸಿರು ಬಿಟ್ಟ.

"ನಿಮ್ಮ ದೊರೆಗಳ ಬಳಿ ಅಪಾರ ಸಂಪತ್ತು ಸಂಗ್ರಹವಾಗಿತ್ತೆಂದು ಕೇಳಿ ದ್ದೇವೆ, ದಿಟವೆ ?"

"ದಿಟ ಪ್ರಭು ! ಅವರ ಬಳಿ ವಜ್ರವೈಡೂರ್ಯಗಳಿಂದ ಮಾಡಿದ ನಾಲ್ಕು ಕಾಲಿನ ಸಿಂಹಾಸನವಿತ್ತು. ಅವರ ಸೈನ್ಯದಲ್ಲಿ ಐವತ್ತುಸಾವಿರ ಒಂಟೆಗಳೂ, ಕುದುರೆಗಳೂ, ಹೇಸರಕತ್ತೆಗಳೂ ಇದ್ದುವು. ಆನೆಗಳ ಸಂಖ್ಯೆಯೇ ಸಾವಿರವಿತ್ತು. ಅವರ ಅಂತಃಪುರದಲ್ಲಿ ಸುಮಾರು ೧೨ ಸಾವಿರ ಸ್ತ್ರೀಯರು ಇದ್ದರು. ಅವರು ಚಿನ್ನವನ್ನು ಮಣ್ಣಿನಂತೆ ನೋಡುತ್ತಿದ್ದರು. ಅದನ್ನು ಹಾಗೆಯೇ ಬಳಸುತ್ತಿ ದ್ದರು. ಅವರೆಂದಿಗೂ ಹೇಡಿಯಾಗಿರಲಿಲ್ಲ. ಅವರ ಗುಣಪಕ್ಷಪಾತವೇ ಅವರಿಗೆ ಮುಳುವಾಯಿತು. ಅವರನ್ನು ದ್ರೋಹಿಗಳು ಸವಿಮಾತುಗಳಿಂದ ವಂಚಿಸಿ, ಸೆರೆಹಿಡಿದು, ಅಧಿಕಾರವನ್ನು ಕಸಿದುಕೊಂಡರು."

"ನಿಮ್ಮ ಸಾಮ್ರಾಟರು ಅಗ್ನಿಯನ್ನು ಆರಾಧಿಸುವ ಜಾರತುಷ್ಟ್ರನ ಪಂಥ ದವರಾಗಿದ್ದು, ಕ್ರೈಸ್ತಮತದವರನ್ನು ಪೀಡಿಸಿದರೆಂದು ಕೇಳಿದ್ದೇನೆ."

"ಇದು ಸುಳ್ಳು ಪ್ರಭು ! ಅವರು ತಾವು ಗೆದ್ದ ಪ್ರದೇಶಗಳಿಂದ, ಕ್ರೈಸ್ತ ಪ್ರಜೆಗಳಿಂದ ಹಣವನ್ನು ಕಾಣಿಕೆಯಾಗಿ ಸ್ವೀಕರಿಸಿದ್ದಾರೆ ದಿಟ. ಕ್ರೈಸ್ತರ ಪವಿತ್ರವಾದ ಶಿಲುಬೆಯನ್ನು ಅಪಹರಿಸಿದ್ದಾರೆ. ಆದರೆ ಕ್ರೈಸ್ತ ಮತದವರನ್ನು ಅಕಾರಣವಾಗಿ ಹಿಂಸಿಸಿಲ್ಲ. ಹಾಗೆ ನೋಡಿದರೆ ಅವರು ಅಂತರಂಗದಲ್ಲಿ ಕ್ರೈಸ್ತ ಮತದ ಅಭಿಮಾನಿಯಾಗಿದ್ದರು."

"ಹೇಗೆ ?"

"ಸಾಮ್ರಾಟ್ ಖುಸ್ರು ದೊರೆಗಳಿಗೆ ತಮ್ಮ ಅಸಂಖ್ಯಾತ ಪತ್ನಿಯರಲ್ಲಿ

ಷಹಬದೀಜ್ ಎಂಬ ರಾಣಿಯಲ್ಲಿ ತುಂಬಾ ಮೋಹವಿದೆ. ಈಕೆಯು ಕ್ರೈಸ್ತ ಮತಕ್ಕೆ ಸೇರಿದ ರಾಜಪುತ್ರಿ. ಸಾಮ್ರಾಟರು ಅವರನ್ನು ಚಣಕಾಲವೂ ಅಗಲಿರ ಲಾರರು. ತಾವು ಸೆರೆಮನೆಯಲ್ಲಿ ಇದ್ದರೂ ಇದುವರೆಗೆ ಜೀವದಿಂದ ಇರುವು ದಾದರೂ ಈ ರಾಣಿಯವರ ಸಾಂತ್ವನವಚನಗಳಿಂದ. ನಮ್ಮನ್ನು ತಮ್ಮ ಬಳಿಗೆ ರಾಯಭಾರಿಗಳಾಗಿ ಕಳುಹಿಸಲು ರಾಣಿಯವರು ಮಾಡಿದ ಸೂಚನೆಯೇ ಕಾರಣ ವೆಂದರೆ ನೀವು ನಂಬಲಾರಿರಿ."

"ಹಾಗೋ ಸಂಗತಿ. ತುಂಬಾ ಸಂತೋಷ–ನಿಮ್ಮ ಸಾಮ್ರಾಟರ ಪರಿ ಚಯ, ಸ್ನೇಹವಾದುದಕ್ಕೆ ನಾವು ಹೆಮ್ಮೆಪಡುತ್ತೇವೆ. ನಿಮ್ಮ ಸಾಮ್ರಾಟರಿಗೆ ಈಗ ನಮ್ಮಿಂದ ಯಾವ ಸಹಾಯ ಆಗಬೇಕಾಗಿದೆ ? ತಿಳಿಸುವ ಕೃಪೆ ಮಾಡ ಬೇಕು."

"ತಾವು ಲೋಕವಿಖ್ಯಾತ ಸಾಮ್ರಾಟರಾಗಿದ್ದೀರಿ. ತಮ್ಮಲ್ಲಿ ನಾವು ಬೇಡುವುದು ಇಷ್ಟೆ. ತಾವು ಸೈನ್ಯದೊಡನೆ ಹೊರಟು ಇಲ್ಲವೇ ಸಮರ್ಥರಾದ ದಂಡನಾಯಕರನ್ನು ಕಳುಹಿಸಿ, ನಮ್ಮ ಸಾಮ್ರಾಟರು ಕಳೆದುಕೊಂಡ ರಾಜ್ಯ ಕೋಶಗಳನ್ನು ಮತ್ತೆ ದೊರಕಿಸಿಕೊಡಬೇಕು. ನೀವು ಸಹಾಯವನ್ನು ಕೊಡದಿ ದ್ದರೆ, ಇದೇ ಕೊರಗಿನಿಂದ ನಮ್ಮ ಸಾಮ್ರಾಟರು ಮಡಿಯುವುದು ಖಂಡಿತ. ಈಗ ತಮ್ಮ ಹತಾಶ ಬಾಳಿನಲ್ಲಿ ಇರುವ ಒಂದೇ ಒಂದು ಆಶಾಕಿರಣವೆಂದರೆ ತಾವು."

"ಆಗಲಿ, ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ. ನಾವು ಯಾವುದನ್ನು ನಮ್ಮ ಅಮಾತ್ಯರೊಡನೆ ವಿಚಾರ ಮಾಡಿ ನಿಮಗೆ ತಿಳಿಸುತ್ತೇವೆ. ನೀವು ಅಷ್ಟು ದೂರದಿಂದ ದಣಿದು ಬಂದಿದ್ದೀರಿ. ಇಲ್ಲಿ ನಮ್ಮ ಅತಿಥಿಗಳಾಗಿ ಕೆಲವು ಕಾಲ ಇದ್ದುಹೋಗಿ. ಇಲ್ಲಿ ನಿಮಗೆ ಯಾವುದಕ್ಕೂ ತೊಂದರೆಯಾಗದು."

ಎಂದು ಹೇಳಿ ಅವರನ್ನು ರಾಜೋಚಿತವಾದ ಬಿಡಾರದಲ್ಲಿ ಇರಿಸಿದನು.

## ೧೪

ಪುಲಿಕೇಶಿಯು ವಿದೇಶಿ ರಾಯಭಾರಿಗೆ ಕೊಟ್ಟಿದ್ದ ಆಶ್ವಾಸನದಂತೆ, ಇಮ್ಮಡಿ ಖುಸ್ರುವಿಗೆ ನೆರವೀಯುವ ಸಾಧ್ಯಾಸಾಧ್ಯತೆಯನ್ನು ತಿಳಿಯಲು ಆಪ್ತ

ಮಿತ್ರರಾದ ಅಮಾತ್ಯ ಸಮಂತಭದ್ರನನ್ನೂ ಪಂಡಿತರಾಜ ರವಿಕೀರ್ತಿಯನ್ನೂ ಅಂತರಂಗಕ್ಕೆ ಕರೆಸಿಕೊಂಡು ಆಪ್ತ ಸಮಾಲೋಚನೆ ನಡೆಸಿದನು. ತನ್ನ ನೆರವನ್ನು ಯಾಚಿಸಿ, ದೂರದ ನಾಡಾದ ಪರ್ಶಿಯಾ ದೇಶದಿಂದ ಬಂದಿರುವ ರಾಯಭಾರಿಯನ್ನು ನಿರಾಸೆಗೊಳಿಸುವುದು ಪುಲಿಕೇಶಿಗೆ ಇಷ್ಟವಿರಲಿಲ್ಲ. ಆದರೆ ದೇಶದ ಪರಿಸ್ಥಿತಿ ಇದಕ್ಕೆ ಅನುಕೂಲವಾಗಿರಲಿಲ್ಲ.

ಪುಲಿಕೇಶಿಯು ಸಾಮ್ರಾಟ್ ಹರ್ಷವರ್ಧನನ ಗರ್ವಭಂಗ ಮಾಡಿ ಅವನಿಂದ ಪರಮೇಶ್ವರನೆಂಬ ಬಿರುದಿಗೆ ಪಾತ್ರನಾದರೂ, ದಕ್ಷಿಣಾಪಥೇಶ್ವರನೆಂಬ ಹೆಸರಿಗೆ ಪಾತ್ರನಾಗಲು ದಕ್ಷಿಣದ ಇನ್ನೂ ಅನೇಕ ಸಣ್ಣ ದೊಡ್ಡ ದೊರೆಗಳನ್ನು ಗೆಲ್ಲಬೇಕಾಗಿತ್ತು. ಗೆಲ್ಲಬೇಕಾಗಿದ್ದ ದಕ್ಷಿಣದ ದೊರೆಗಳಲ್ಲಿ ಪಲ್ಲವರ ಮಹೇಂದ್ರವರ್ಮನು ಅತ್ಯಂತ ಪ್ರಬಲನಾಗಿದ್ದನು. ಇವನು ಚಾಲುಕ್ಯ ಸಿಂಹಾಸನಕ್ಕೆ ಕಂಟಕಪ್ರಾಯನಾಗಿದ್ದನು. ಚಾಲುಕ್ಯ ಸಾಮ್ರಾಜ್ಯ ಚಂದ್ರನಿಗೆ ರಾಹುವಂತೆ ಇದ್ದನು. ಕುಲ ಶತ್ರುಗಳಾದ ಅವರನ್ನು ಸೋಲಿಸಿ ಸದೆಬಡಿಯುವ ಹೊರತು-ಸಾಮ್ರಾಜ್ಯಕ್ಕೆ ಶತ್ರುಬಾಧೆ ನಿವಾರಣೆಯಾಗುತ್ತಿರಲಿಲ್ಲ. ಇದರ ಜೊತೆಗೆ ದಕ್ಷಿಣದಲ್ಲಿದ್ದ ಪಾಂಡ್ಯ, ಚೋಳರನ್ನೂ ಗೆಲ್ಲಬೇಕಾಗಿತ್ತು. ಸಿಂಹಳದ ಮೇಲೆ ಚಾಲುಕ್ಯರ ವರಾಹಾಂಕಿತ ಧ್ವಜವನ್ನು ಮೆರೆಸಬೇಕೆಂಬ ಮಹಾತ್ವಾಕಾಂಕ್ಷೆ ಇತ್ತು. ಅಂಡಮಾನ್, ನಿಕೋಬಾರ್ ದ್ವೀಪಗಳ ತನಕ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಬೇಕೆಂಬ ಆಸೆ ಇತ್ತು. ಇಷ್ಟೇ ಮಹತ್ವದ ಇನ್ನೊಂದು ಕಾರ್ಯ ಪುಲಿಕೇಶಿಯ ಗಮನವನ್ನು ಎದುರು ನೋಡುತ್ತಿತ್ತು; ಅದು ಸಾಮ್ರಾಜ್ಯದ ಒಳಾಡಳಿತ.

ಇದುವರೆಗೆ ಪುಲಿಕೇಶಿಯು ಸಶಕ್ತವಾದ ಸೈನ್ಯವನ್ನು ಕಟ್ಟಿ ಗಂಗ, ಕದಂಬ, ಕೋಸಲ, ಕಳಿಂಗ, ಲಾಟ, ಮಾಳವ, ಗುರ್ಜರಗಳನ್ನು ಗೆದ್ದು ಅವರನ್ನು ಸಾಮ್ರಾಜ್ಯದ ಅಂಕಿತದಲ್ಲಿ ಸಾಮಂತರಾಗಿ ಇಲ್ಲವೇ ಮಾಂಡಲೇಶ್ವರರನ್ನಾಗಿ ಮಾಡಿಕೊಂಡಿದ್ದರೂ, ಸಾಮ್ರಾಜ್ಯದ ಆಡಳಿತಯಂತ್ರವನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸಿ, ಪ್ರಜಾಹಿತ-ಕಲ್ಯಾಣಸಾಧಕ ಕಾರ್ಯಗಳ ಕಡೆಗೆ, ಜನೋಪಯೋಗಿ ಕೆಲಸಗಳ ಬಗ್ಗೆ ಮನಸ್ಸು ಕೊಡಲು ಸಾಧ್ಯವಾಗಿರಲಿಲ್ಲ. ತಾನು ಯಾವ ಪವಿತ್ರ ಉದ್ದಿಶ್ಯ ಸಾಧನೆಗಾಗಿ ಸಿಂಹಾಸನವನ್ನೇರಿದನೋ, ಅವರ ಸಾಧನೆಯಲ್ಲಿ ತೊಡಗಲು ಅವಕಾಶ ದೊರೆತಿರಲಿಲ್ಲ. ಪ್ರಜೆಗಳು ತನ್ನ

ಬಗ್ಗೆ ಇಟ್ಟದ್ದ ನಿರೀಕ್ಷೆಯನ್ನು ಸಫಲಗೊಳಿಸಲು ಅವಕಾಶ ದೊರೆತಿರಲಿಲ್ಲ. ಸಾಮ್ರಾಜ್ಯ ವಿಸ್ತರಣೆಗಿಂತಲೂ ಪ್ರಜಾಹಿತ ಕಾರ್ಯಗಳಲ್ಲಿ ತನ್ನ ಶಕ್ತಿ ಸಾಮರ್ಥ್ಯಗಳನ್ನೂ, ಸಾಧನಸಂಪತ್ತನ್ನೂ ವಿನಿಯೋಗಿಸಬೇಕಾಗಿತ್ತು. ಇಂತಹ ಸಮಯದಲ್ಲಿ ಖುಸ್ರು ದೊರೆಯು ಪುಲಿಕೇಶಿಯ ನೆರವನ್ನು ಬೇಡಿ ರಾಯಭಾರಿಯನ್ನು ಕಳುಹಿಸಿಕೊಟ್ಟಿದ್ದನು.

ಇದು ನಿಜಕ್ಕೂ ಗಂಭೀರ ಪ್ರಸಂಗವಾಗಿತ್ತು.

"ಅಮಾತ್ಯರೇ, ಈ ಪ್ರಸಂಗದಲ್ಲಿ ನಾವು ಏನು ಮಾಡಬೇಕು ? ಅಪ್ಪಣೆ ಕೊಡಿಸಬೇಕು" ಎಂದ ಪುಲಿಕೇಶಿ.

"ಪ್ರಭು, ಈ ಬಗ್ಗೆ ನಮ್ಮ ಸ್ಪಷ್ಟ ಅಭಿಪ್ರಾಯ ತಿಳಿಸಬೇಕಾದರೆ ನಾವು ಇದುವರೆಗೆ ರಾಜ್ಯ ಕಟ್ಟುವ ಕಾರ್ಯದಲ್ಲಿ ನಮ್ಮ ವಿರಾಮವನ್ನೆಲ್ಲಾ, ಸಾಧನ ಸಂಪತ್ತನ್ನೆಲ್ಲಾ ವ್ಯಯಗೊಳಿಸಿದ್ದೇವೆ. ಈಗ ವಿಶ್ರಾಂತಿ ತೆಗೆದುಕೊಂಡು, ನಾವು ವಿಸ್ತರಿಸಿದ ಸಾಮ್ರಾಜ್ಯವನ್ನು ಭದ್ರವಾದ ಅಸ್ತಿಭಾರದ ಮೇಲೆ ನಿಲ್ಲಿಸುವ, ದೇಶವನ್ನು ಶತ್ರುಗಳಿಂದ, ಕ್ಷಾಮಡಾಮರಗಳಿಂದ ರಕ್ಷಿಸುವ ಕಾರ್ಯಗಳ ಕಡೆಗೆ ಗಮನ ಕೊಡಬೇಕಾಗಿದೆ. ಆದುದರಿಂದ, ನಾವಾಗಲಿ, ನಮ್ಮ ಸೈನಿಕರಾಗಲಿ, ಖುಸ್ರು ದೊರೆಯ ನೆರವಿಗೆ ಹೋಗುವುದು ಸಾಧ್ಯವಾಗಲಾರದೆಂಬುದು ನನ್ನ ಅಭಿಪ್ರಾಯ" ಎಂದು ಸಮಂತಭದ್ರನು ಹೇಳಿದನು.

"ಈಗ ನಾವು ಸಂದಿಗ್ಧ ಪರಿಸ್ಥಿತಿಯಲ್ಲಿ ಇದ್ದೇವೆ. ನೀವು ಹೇಳುವುದೇನೊ ದಿಟ. ನಮ್ಮ ಕೀರ್ತಿಯನ್ನು ಕೇಳಿ ಖುಸ್ರುವು ತನ್ನ ವಿಪತ್ತಿನಲ್ಲಿ ನೆರವಾಗಲು ನಮ್ಮ ನೆರವು ಬೇಡಿ ರಾಯಭಾರಿಯನ್ನು ಕಳುಹಿಸಿದ್ದಾರೆ. ಅವರ ನಿರೀಕ್ಷೆಯನ್ನು ನಾವು ವ್ಯರ್ಥಗೊಳಿಸುವುದು ನಮಗೆ ಭೂಷಣವಲ್ಲ. ಅಲ್ಲದೆ ನಾವು ಆಶ್ರಿತಜನವತ್ಸಲರೆಂಬ ಕೀರ್ತಿಗೆ ಪಾತ್ರರಾಗಿದ್ದೇವೆ. ಇದನ್ನು ಉಳಿಸಿಕೊಳ್ಳಬೇಕು. ನಾವು ಈ ಕಾರ್ಯದಲ್ಲಿ ಅನೇಕ ಕಷ್ಟನಷ್ಟಗಳನ್ನು ಎದುರಿಸಬೇಕಾಗುತ್ತದೆ. ಆದರೆ ಕನ್ನಡಿಗರ ಕೀರ್ತಿ ಪತಾಕೆಯನ್ನು ಅನ್ಯದೇಶಗಳಲ್ಲಿ ಮೆರೆಸುವ ಈ ಸುಸಂಧಿಯನ್ನು ನಾವು ಕಳೆದುಕೊಳ್ಳಬಾರದು."

"ಪ್ರಭು, ತಮ್ಮ ಹೇಳಿಕೆ ಯಥಾರ್ಥವಾದುದು; ಪವಿತ್ರವಾದ ಚಾಲುಕ್ಯ ಸಿಂಹಾಸನದಲ್ಲಿ ಮಂಡಿಸಿದ ದೊರೆಗಳು ಸತ್ಯಾಶ್ರಯರೆಂಬ ಕೀರ್ತಿಯನ್ನು ಪಡೆದಿದ್ದಾರೆ. ಅಲ್ಲದೆ ಆಶ್ರಿತವತ್ಸಲರೆಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ಕಷ್ಟದಲ್ಲಿರುವ

ಮಿತ್ರರಿಗೆ ನೆರವಾಗುವುದು ನಮ್ಮ ಕರ್ತವ್ಯವಾಗಿದೆ, ದಿಟ. ಆದರೆ ಬೇರೊಬ್ಬರ ಕಷ್ಟ ಪರಿಹರಿಸಲು ಹೋಗಿ ನಾವು ನಮ್ಮ ಸಾಮ್ರಾಜ್ಯವನ್ನು ಕಷ್ಟಕಾರ್ಪಣ್ಯ ಗಳ ಮಡುವಿಗೆ ನೂಕಬಾರದಷ್ಟೇ."

"ನೀವು ಹೇಳುವುದು ನನಗೆ ಅರ್ಥವಾಗಲಿಲ್ಲ."

"ನನ್ನ ಅಭಿಪ್ರಾಯವಿಷ್ಟೇ ಪ್ರಭು ! ಈಗ ಅನೇಕ ದೊರೆಗಳನ್ನು ಗೆದ್ದು ನಮ್ಮ ಸಾಮಂತರನ್ನಾಗಿ ಮಾಡಿಕೊಂಡಿದ್ದೇವೆ. ಅವರಲ್ಲನೇಕರಿಗೆ ನಮ್ಮ ಅಂಕಿತದಲ್ಲಿ ಇರಲು ಇಷ್ಟವಿಲ್ಲ. ಅಲ್ಲದೆ ಅವರನ್ನು ನಮ್ಮ ವಿರುದ್ಧ ಎತ್ತಿ ಕಟ್ಟಲು ರಾಹಪ್ಪಯ್ಯನಂತಹ ಹಿತಶತ್ರುಗಳು ಇನ್ನೂ ಜೀವಂತವಾಗಿ ಇದ್ದಾರೆ. ಈ ಮಾತನ್ನು ನಾವು ಮರೆಯಬಾರದು : ಅವನು ಮಂಗಳೇಶನ ಮರಣಕ್ಕೆ ಸೇಡು ಬಗೆಯಲು ಬದುಕಿದ್ದಾನೆ. ಸಾಮ್ರಾಜ್ಯದಲ್ಲಿ ಧೂರ್ತನಾದ ಮಂಗಳೇಶನ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುವ ಜನರಿಗೆ ಕೊರತೆ ಇಲ್ಲ. ಇದಕ್ಕೆ ಕಳ ಶವಿಟ್ಟಂತೆ ಕುಲಶತ್ರುಗಳಾದ ಪಲ್ಲವರು ನಮ್ಮ ಮೇಲೆ ಕತ್ತಿ ಮಸೆಯುತ್ತಿ ದ್ದಾರೆ. ಅವರಿಗೆ ನಾವು ಪಿಷ್ಟಪುರವನ್ನು ವಶಪಡಿಸಿಕೊಂಡಿರುವುದೇ ಸಾಕಾ ಗಿದೆ. ಅವರು ನಮ್ಮ ಮೇಲೆ ಯಾವ ಗಳಿಗೆಯಲ್ಲಾದರೂ ಯುದ್ಧಕ್ಕೆ ಬರಬ ಹುದು–ಇದಕ್ಕೆ ನಾವು ಸಿದ್ಧರಾಗಬೇಕಾಗಿದೆ. ಈ ಸಮಯದಲ್ಲಿ ನಮ್ಮ ಸೈನ್ಯ ವನ್ನು ಹೊರಗೆ ತೆಗೆದುಕೊಂಡು ಹೋದರೆ ನಮ್ಮ ಸಾಮ್ರಾಜ್ಯದ ಅಸ್ತಿತ್ವಕ್ಕೆ ಧಕ್ಕೆ ಬರುವ ಸಂಭವವಿದೆ" ಎಂದು ಸಮಂತಭದ್ರ ಹೇಳಿದ.

ಈ ಮಾತು ಪುಲಿಕೇಶಿಯ ಮನಸ್ಸಿನ ಮೇಲೆ ಪರಿಣಾಮ ಮಾಡದೆ ಇರ ಲಿಲ್ಲ. ಅವನು ಯೋಚಿಸುತ್ತಾ ಕುಳಿತ.

"ಪ್ರಭು ! ಇಲ್ಲಿ ವಿಚಾರಿಸಬೇಕಾಗಿರುವ ಮತ್ತೊಂದು ಅಂಶವೂ ಇದೆ. ಅದೇನಂದರೆ, ನಮ್ಮ ಸೈನಿಕರು ಕಳೆದು ಹತ್ತು ವರ್ಷಗಳಿಂದಲೂ ಮೇಲಿಂದ ಮೇಲೆ ಸಂಭವಿಸುವ ಯುದ್ಧ–ದಂಡಯಾತ್ರೆಗಳಿಂದ ಬೇಸತ್ತಿದ್ದಾರೆ. ಅವರಿಗೆ ಈಗ ವಿಶ್ರಾಂತಿ ಬೇಕಾಗಿದೆ. ಅಲ್ಲದೆ ಅವರು ಕೆಲಕಾಲ ತಮ್ಮ ಹೆಂಡತಿ ಮಕ್ಕ ಳೊಡನೆ ನೆಮ್ಮದಿಯಿಂದ ಇರಲು ಬಯಸುತ್ತಿದ್ದಾರೆ. ಅವರಿಗೆ ಈಗತಾನೇ ಬಯಸುತ್ತಿದ್ದ ವಿಶ್ರಾಂತಿ ದೊರೆತಿದೆ. ಈ ಸಮಯದಲ್ಲಿ ಅವರನ್ನು ಇನ್ನೊಂದು ಯುದ್ಧಕ್ಕೆ ಸಿದ್ಧರಾಗಲು ಆಜ್ಞೆ ಮಾಡಿದರೆ, ಅದು ಅವರ ಮನಸ್ಸಿನ ಮೇಲೆ ಭಯಂಕರ ಪರಿಣಾಮ ಉಂಟುಮಾಡಬಹುದು. ಅವರಲ್ಲಿ ಅಸಂತೃಪ್ತಿ ಬೆಳೆಯು

ಬಹುದು. ಇಂತಹ ಸೈನಿಕರಿಂದ ನಾವು ನಿರೀಕ್ಷಿಸುವ ಕಾರ್ಯ ಸಾಧಿಸುವುದಿಲ್ಲ."

"ಹೌದು ನೀವು ಹೇಳುವ ಮಾತು ನಿಜ!" ಎಂದು ಪುಲಿಕೇಶಿ ಉದ್ಗಾರ ತೆಗೆದ.

"ಇನ್ನೊಂದು ಮಾತು ಪ್ರಭು! ಈಗ ನಾವು ಖುಸ್ರು ದೊರೆಗಳ ನೆರವಿಗೆ ಸೈನ್ಯ ಕಳುಹಿಸಿಕೊಟ್ಟೆವೆಂದು ಭಾವಿಸಿದರೂ, ಪರನಾಡಿನಲ್ಲಿ, ಶತ್ರುಗಳ ನಡುವೆ ಸಿಕ್ಕಿಬಿದ್ದ ನಮ್ಮ ಸೈನ್ಯದ ಗತಿ ಏನಾಗಬಹುದೆಂದು ಯೋಚಿಸಬೇಕಾಗಿದೆ. ಶತ್ರುಗಳ ಸಂಖ್ಯೆ ಅಧಿಕವಾಗಿದ್ದರೆ, ನಮ್ಮ ಸೈನಿಕರು ಅಲ್ಲಿಂದ ಜೀವಸಹಿತ ಹಿಂತಿರುಗಿ ಬರುವುದು ಅಸಂಭವವಾಗುತ್ತದೆ. ಹಾಗಿಲ್ಲದಿದ್ದರೆ, ಸೋತು ಸಾವು ನೋವುಗಳಿಗೆ ಈಡಾಗಿ ಹಿಂತಿರುಗಿ ಬರಬೇಕಾಗುತ್ತದೆ. ಇದು ನಮಗೆ ಕೀರ್ತಿ ತರುವ ಕೆಲಸವಲ್ಲ. ಈಗ ನಾವು ಖುಸ್ರು ದೊರೆಗೆ ನೆರವಾಗುವುದಾದರೆ, ನಮ್ಮ ಸರ್ವಸೈನ್ಯಗಳನ್ನೂ ಒಟ್ಟುಗೂಡಿಸಿಕೊಂಡು ಸಾಮ್ರಾಟರೇ ಪರ್ಶಿಯಾ ದೇಶಕ್ಕೆ ಹೋಗಬೇಕಾಗುತ್ತದೆ. ಅದು ರಾಷ್ಟ್ರದ ಸದ್ಯದ ಸ್ಥಿತಿಯಲ್ಲಿ ಎಂತಹ ಅಪಾಯ ಕಾರ್‍ಯವಾಗುವುದೆಂಬುದನ್ನು ತಾವು ಬಲ್ಲಿರಿ! ಇಷ್ಟರ ಮೇಲೆ ಪ್ರಭುಗಳ ಚಿತ್ತ ವಿದ್ದಂತೆ ಆಗಲಿ."

ಪುಲಿಕೇಶಿಯು ಇದುವರೆಗೂ ಎಲ್ಲವನ್ನೂ ಮೌನವಾಗಿ ಆಲಿಸಿ ಸುಮ್ಮನೆ ಕುಳಿತ ರವಿಕೀರ್ತಿಯ ಕಡೆ ನೋಡಿ,

"ನಿಮ್ಮ ಅಭಿಪ್ರಾಯವೇನು ರವಿಕೀರ್ತಿಗಳೇ?" ಎಂದನು.

"ಪ್ರಭು, ಅಮಾತ್ಯ ಸಮಂತಭದ್ರರು ಹೇಳುವ ಮಾತಿನಲ್ಲಿ ಸತ್ಯವಿದೆ. ನಾವು ಪರನಾಡಿನಲ್ಲಿ ಶತ್ರುಗಳ ಬಲಾಬಲ ತಿಳಿಯದೆ ದುಡುಕುವುದರಿಂದ ನಮಗೆ ತೊಂದರೆಯಾಗುವ ಸಂಭವ ಹೆಚ್ಚು. ಆದುದರಿಂದ ಅಲ್ಲಿನ ಪರಿಸ್ಥಿತಿ ಯನ್ನೂ ಅನುಕೂಲ ಪ್ರತಿಕೂಲಗಳನ್ನೂ ತಿಳಿದು ಅನಂತರ ಅವರ ನೆರವಿಗೆ ಹೋಗುವುದೇ ಸದ್ಯದ ಪರಿಸ್ಥಿತಿಯಲ್ಲಿ ಯೋಗ್ಯವಾದ ದಾರಿ ಎಂದು ನನ್ನ ಭಾವನೆ" ಎಂದನು.

"ಹೌದು, ರವಿಕೀರ್ತಿಗಳು ಹೇಳುವ ಮಾತು ದಿಟ. ನಾವು ರಾಯಭಾರಿ ಗಳ ಮಾತಿನ ಮೇಲಿಂದ ಇಸ್ಪಹಾನಕ್ಕೆ ಸೈನ್ಯವನ್ನು ಕಳುಹಿಸಿಕೊಟ್ಟು ಕಂಡರಿಯದ ದೇಶದಲ್ಲಿ ಬಲಿಕೊಡುವುದಕ್ಕಿಂತಲೂ, ಅಲ್ಲಿನ ಸ್ಥಿತಿಗತಿಗಳನ್ನು ಅರಿತುಕೊಂಡು ಇಂತಹ ಕಾರ್ಯಕ್ಕೆ ಕೈ ಹಾಕುವುದು ಲೇಸೆಂದು ನನ್ನ ಅಭಿಪ್ರಾಯ!" ಎಂದು ಸಮಂತಭದ್ರನು ರವಿಕೀರ್ತಿಯ ಸಲಹೆಯನ್ನು ಅನು

ಮೋದಿಸಿದನು.

"ಒಳ್ಳೆಯದು, ನಾವು ಈ ಮಾತನ್ನೇ ರಾಯಭಾರಿಗಳಿಗೆ ತಿಳಿಸುತ್ತೇವೆ. ಆದರೆ ಅವರ ನಿರೀಕ್ಷೆಯನ್ನು ವ್ಯರ್ಥಗೊಳಿಸುವುದಿಲ್ಲವೆಂದೂ, ನಮಗೆ ಅವರ ಸಾಧನ ಸಂಪತ್ತು ಹಾಗು ದೇಶದ ಸ್ಥಿತಿಗಳು ತಿಳಿದ ಮೇಲೆ ಈ ದಂಡೆಯಾತ್ರೆಯನ್ನು ಕೈಗೊಳ್ಳುವುದಾಗಿಯೂ ಆಶ್ವಾಸನವನ್ನು ಕೊಡುತ್ತೇನೆ. ಇದರಿಂದ ಅವರು ಬರಿಗೈಯಲ್ಲಿ ಹಿಂದಿರುಗುವಂತೆ ಆಗುವುದಿಲ್ಲ!" ಎಂದು ಪುಲಿಕೇಶಿಯು ತನ್ನ ನಿರ್ಧಾರವನ್ನು ತಿಳಿಸಿದನು. ಇದು ಉಳಿದವರಿಗೆ ಪ್ರಿಯವಾಯಿತು.

ಅದರಂತೆ ಮರುದಿನ ಪುಲಿಕೇಶಿಯು ಪರ್ಶಿಯಾದ ರಾಯಭಾರಿಯನ್ನು ಸಮ್ಮುಖಕ್ಕೆ ಕರೆಸಿಕೊಂಡು ರಾಜೋಚಿತವಾಗಿ ಸನ್ಮಾನಿಸಿ,

"ರಾಯಭಾರಿಗಳೇ, ನಾವು ತಮ್ಮ ಸಾಮ್ರಾಟರಿಗೆ ಒದಗಿರುವ ದೌರ್ಭಾಗ್ಯಕ್ಕಾಗಿ ಮರುಗುತ್ತೇವೆ. ಅವರಿಗೆ ನೆರವಾಗಲು ನಾವು ನಿಮ್ಮಷ್ಟೇ ಉತ್ಸುಕರಾಗಿದ್ದೇವೆ. ಆದರೆ, ಪರದೇಶದಲ್ಲಿ ನಡೆಯುವ ದಂಡಯಾತ್ರೆ ಇದು. ಕಂಡರಿಯದ ದೇಶದಲ್ಲಿ ಶತ್ರುಗಳ ಬಲಾಬಲ ತಿಳಿಯದೆ ನಾವು ಇಂತಹ ದಂಡಯಾತ್ರೆ ಕೈಗೊಳ್ಳುವುದು ಅನುಚಿತವಾಗಬಹುದು. ಆದುದರಿಂದ ನಾವು ನಿಮ್ಮ ದೊರೆಯ ಬಳಿಗೆ ಮೊದಲು ಸೌಹಾರ್ದದ ನಿಯೋಗವೊಂದನ್ನು ಕಳುಹಿಸಿಕೊಡಲು ನಿಶ್ಚಯಿಸಿದ್ದೇವೆ. ಅವರು ಅಲ್ಲಿನ ಸ್ಥಿತಿಗತಿಗಳನ್ನು ತಿಳಿದುಕೊಂಡು ನಮಗೆ ವರದಿ ಮಾಡಿದ ಕೂಡಲೆ ನಾವು ನಿಮ್ಮ ನೆರವಿಗೆ ನಮ್ಮ ಸೈನ್ಯವನ್ನು ಕಳುಹಿಸಿಕೊಡುತ್ತೇನೆ. ನೀವು ನಮ್ಮ ಮಾತಿನಲ್ಲಿ ನಂಬಿಕೆ ಇರಿಸಿ, ನಿಶ್ಚಿಂತೆಯಿಂದ ನಿಮ್ಮ ನಾಡಿಗೆ ಹಿಂದಿರುಗಬಹುದು" ಎಂದು ಹೇಳಿದನು.

"ಪ್ರಭು, ನಾವು ತುಂಬ ಆಶಾವಾದಿಗಳಾಗಿ ಬಂದಿದ್ದೆವು. ಈಗ ನಾವು ಬರಿಗೈಯಲ್ಲಿ ಹಿಂದಿರುಗಿದರೆ, ನಮ್ಮ ದೊರೆ ನಮ್ಮನ್ನು ಜೀವಂತ ಉಳಿಸುವುದಿಲ್ಲ—"

"ನಾವು ನಿಮ್ಮನ್ನು ಬರಿಗೈಯಲ್ಲಿ ಕಳುಹಿಸುತ್ತಿಲ್ಲ. ನಿಮ್ಮ ಜೊತೆಯಲ್ಲಿ ನಮ್ಮ ರಾಯಭಾರಿಗಳನ್ನು ಕಳುಹಿಸಿಕೊಡುತ್ತೇವೆ. ಅವರು ನಮ್ಮೆರಡು ರಾಷ್ಟ್ರಗಳ ಚಿರಸ್ನೇಹಕ್ಕೆ ಬೇಕಾಗುವ ಅಡಿಪಾಯ ಹಾಕುವರೆಂಬ ನಂಬಿಕೆ, ಭರವಸೆ ನಮಗೆ ಇದೆ. ತಾವು ಈ ಬಗ್ಗೆ ನಿಶ್ಚಿಂತೆಯಿಂದ ಇರಬೇಕು. ನೀವು ಯಾವುದೇ ಕಾರಣಕ್ಕೆ ಅಧೀರರಾಗುವ ಕಾರಣವಿಲ್ಲ!" ಎಂದು ಹೇಳಿ ಪುಲಿಕೇಶಿಯು

ಅವರಿಗೂ, ಖುಸ್ರು ದೊರೆಗೂ ಬೆಲೆ ಬಾಳುವ ಅನೇಕ ವಸ್ತುಗಳನ್ನು ಸ್ನೇಹದ ಕಾಣಿಕೆಯಾಗಿ ಅರ್ಪಿಸಿ, ರಾಯಭಾರಿಯನ್ನು ಬೀಳ್ಕೊಟ್ಟನು. ಅವನಿಗೆ ಇದ ರಿಂದ ನಿರಾಶೆಯುಂಟಾದರೂ, ತನ್ನ ಜೊತೆಯಲ್ಲಿ ಪುಲಿಕೇಶಿಯು ನಿಯೋಗ ವೊಂದನ್ನು ಕಳುಹಿ ಕೊಡುವ ಸುದ್ದಿ ಕೇಳಿ ಕೊಂಚ ಸಮಾಧಾನವಾಯಿತು. ಅವನು ತನ್ನ ಪ್ರಯಾಣಕ್ಕೆ ಬೇಕಾದ ಸಿದ್ಧತೆಗೆ ತೊಡಗಿದನು.

ಪುಲಿಕೇಶಿಯು ಇಮ್ಮಡಿ ಖುಸ್ರು ದೊರೆಯ ಬಳಿಗೆ ರಾಯಭಾರಿಗಳಾಗಿ ಯಾರನ್ನು ಕಳುಹಿಸಬೇಕೆಂದು ದೀರ್ಘವಾಗಿ ಯೋಚಿಸಿ, ಕಡೆಗೆ ಈ ಕೆಲಸಕ್ಕೆ ರಾಜಕವಿ ರವಿಕೀರ್ತಿಯನ್ನು ಕಳುಹಿಸಲು ನಿಶ್ಚಯಿಸಿದನು. ಪರ್ಶಿಯಾದೇಶದ ಸ್ಥಿತಿಗತಿಗಳನ್ನೂ ಖುಸ್ರುವಿನ ಸಾಧನಸಂಪತ್ತುಗಳನ್ನೂ ತಿಳಿದು ಬರಲು ಅವನೇ ಸರಿಯಾದ ವ್ಯಕ್ತಿ ಎಂದು ಅರಿತನು. ರವಿಕೀರ್ತಿಗೆ ಸಹಾಯಕನಾಗಿ ಹಾಗೂ ಪರ್ಶಿಯಾದೇಶದ ಜನಜೀವನ, ನಡೆನುಡಿಗಳನ್ನು ತನಗೆ ವರದಿ ಮಾಡಲು ಆಸ್ಥಾನದ ಚತುರ ವರ್ಣಶಿಲ್ಪಿಯಾದ ಚಂದ್ರೋಜನನ್ನು ನಿಯೋಜಿಸಿದನು. ಅವನು ತನ್ನ ಚಿತ್ರಕಲೆಯ ಮೂಲಕ ತಾನು ನೋಡಿದ ಸಂಗತಿಗಳನ್ನೆಲ್ಲ ಬಣ್ಣ ಹಾಗೂ ರೇಖೆಗಳಲ್ಲಿ ಸೆರೆ ಹಿಡಿದು, ಪುಲಿಕೇಶಿಗೆ ಪರ್ಶಿಯಾ ದೇಶದ ಜನಜೀವನ ವನ್ನು ಪರಿಚಯ ಮಾಡುವ ಮಹತ್ವದ ಹೊಣೆಗಾರಿಕೆಯನ್ನು ಹೊತ್ತಿದ್ದನು. ಪುಲಿಕೇಶಿಗೆ ತಮ್ಮೆರಡು ರಾಷ್ಟ್ರಗಳ ಸ್ನೇಹ ಸಂಬಂಧಕ್ಕೆ ಖುಸ್ರು ದೊರೆಯ ನಿಕಟ ಪರಿಚಯ ಮಾಡಿಕೊಳ್ಳುವುದು ಅಗತ್ಯವೆನಿಸಿತ್ತು. ಅವನ ಹಾಗೂ ಅವನ ಆಪ್ತರ ಚಿತ್ರಗಳನ್ನು ಬಿಡಿಸಿ ತರಲು ಚಿತ್ರಕಾರ ಚಂದ್ರೋಜನಿಗೆ ವಿಶೇಷ ನಿರ್ದೇಶನ ಕೊಟ್ಟಿದ್ದನು. ಪರ್ಶಿಯಾ, ಕರ್ನಾಟಕಗಳ ನಡುವೆ ಚಿರಂತರ ವಾದ ಸ್ನೇಹ ಸಂಬಂಧವೇರ್ಪಡಬೇಕೆಂಬುದೇ ಪುಲಿಕೇಶಿಯ ಆಸೆಯಾಗಿತ್ತು.

ಅಲ್ಲದೆ ಚಂದ್ರೋಜನನ್ನು ರವಿಕೀರ್ತಿಯ ಜೊತೆಯಲ್ಲಿ ಕಳುಹಿಸಿಕೊಡು ವುದರಲ್ಲಿ ಪುಲಿಕೇಶಿಗೆ ಇನ್ನೊಂದು ಉದ್ದಿಶ್ಯವಿತ್ತು. ತಾನು ಸಾಮ್ರಾಟ್ ಹರ್ಷವರ್ಧನನೊಡನೆ ಇಟ್ಟುಕೊಂಡಿದ್ದ ರಾಜಕೀಯ, ವಾಣಿಜ್ಯ, ಸಾಂಸ್ಕೃತಿಕ ಸಂಬಂಧದಂತೆ ಪರ್ಶಿಯಾದೊಡನೆ ಸಂಬಂಧವಿಟ್ಟುಕೊಳ್ಳುವುದು ಬೇಕಾಗಿತ್ತು. ಅದರ ಸಲುವಾಗಿ ರಾಜಕಾರಣಿಯೂ ಕವಿಯೂ ಆದ ರವಿಕೀರ್ತಿಯನ್ನೂ, ಚತುರವರ್ಣ ಶಿಲ್ಪಿಯಾದ ಚಂದ್ರೋಜನನ್ನೂ ರಾಯಭಾರಿಗಳಾಗಿ ಆರಿಸಿ ದ್ದನು. ಹತ್ತು ರಾಜಕೀಯ ನಿಯೋಗ ಮಾಡುವ ಕೆಲಸವನ್ನು ಇಬ್ಬರು ಕಲಾ

ವಿದರು ಸಾಧಿಸಿಕೊಂಡು ಬರುವರೆಂದು ಅವನು ತಿಳಿದಿದ್ದನು. ಅಂತಲೇ ಈ ಇಬ್ಬರು ಕಲಾವಿದರನ್ನು ಸಾಂಸ್ಕೃತಿಕ ರಾಯಭಾರಕ್ಕೆ ನಿಯೋಜಿಸಿದ್ದನು.

ಚಂದ್ರೋಜನು, ಪುಲಿಕೇಶಿಯ ತಂದೆ ಕೀರ್ತಿವರ್ಮನ ಕಾಲದಲ್ಲಿ ವಾತಾಪಿಯ ಗುಡ್ಡದಲ್ಲಿ ಶೇಷನಾರಾಯಣನ ಗುಹಾಂತರ್ದೇವಾಲಯವನ್ನು ನಿರ್ಮಿಸಿದ ದೇವೋಜನ ಮಗನು. ಅವನು ತಂದೆಯಂತೆ ಶಿಲ್ಪಕಲೆಯನ್ನು ಆಶ್ರಯಿಸದೆ ಚಿತ್ರಕಲೆಯನ್ನು ಆಶ್ರಯಿಸಿದ್ದನು. ದೇವೋಜನು ಕಗ್ಗಲ್ಲಿನಲ್ಲಿ ಸುಂದರ ಶಿಲ್ಪಕೃತಿಗಳನ್ನು ನಿರ್ಮಾಣಮಾಡಿ ಕೀರ್ತಿ ಪಡೆದಂತೆ, ಚಂದ್ರೋಜನು ವರ್ಣಶಿಲ್ಪಿಯಾಗಿ ಕೀರ್ತಿ ಪಡೆದಿದ್ದನು. ಅವನು ದೇವೋಜನ ಮಗನಾದರೂ, ಬಾಲ್ಯದಿಂದಲೂ ಅವನ ಒಲವು ಚಿತ್ರಕಲೆಯ ಕಡೆಗೆ ಇತ್ತು. ಬಣ್ಣಗಳಲ್ಲಿ ಸೌಂದರ್ಯವನ್ನು ಸೆರೆ ಹಿಡಿಯುವ ಅಪೂರ್ವ ಕೌಶಲ–ಪ್ರತಿಭೆಗಳು ಅವನಲ್ಲಿ ಬೀಜರೂಪದಲ್ಲಿ ಹುದುಗಿದ್ದವು. ಅದು ವಿಕಾಸವಾಗಲು ತಂದೆ ಅವಕಾಶ ಕೊಟ್ಟಿದ್ದನು. ಮಗನಿಗೆ ಅಪ್ರಿಯವಾದ ಶಿಲ್ಪಕಲೆಯನ್ನು ಒತ್ತಾಯದಲ್ಲಿ ಹೇರದೆ, ಅವನಿಗೆ ಅಭಿರುಚಿ ಇದ್ದ ಚಿತ್ರಕಲೆಯಲ್ಲಿ ಅವನು ಮುಂದಕ್ಕೆ ಬರಲು ಅನುವು ಮಾಡಿಕೊಟ್ಟಿದ್ದನು. ಬಾಲ್ಯದಲ್ಲೇ ಯೋಗ್ಯಚಿತ್ರಕಾರನ ಕೈಯಲ್ಲಿ ಶಿಕ್ಷಣ ಕೊಡಿಸಿದ್ದನು. ಅವನ ಚಿತ್ರಕಲೆ ಯೋಗ್ಯ ಗುರುವಿನ ಬಳಿ ದೊರೆತ ಶಿಕ್ಷಣದಿಂದ ಪರಿಷ್ಕೃತವಾಗಿ ಬೆಳೆದು ಸುಂದರ ಪುಷ್ಪವಾಗಿ ವಿಕಸಿಸುವುದನ್ನು ನೋಡುವ ಭಾಗ್ಯ ದೇವೋಜನಿಗೆ ಇರಲಿಲ್ಲ. ಅವನು ತನ್ನ ವೃದ್ಧಾಪ್ಯದಲ್ಲಿ ಹುಟ್ಟಿದ, ಒಬ್ಬನೇ ಮಗನ ಅಭ್ಯುದಯವನ್ನು ಹಾರೈಸುತ್ತಾ ತನ್ನ ಕಡೆಯುಸಿರನ್ನು ಎಳೆದಿದ್ದನು.

ಅನೇಕ ವರ್ಷಗಳವರೆಗೆ ಹಗಲು ರಾತ್ರಿ ಎನ್ನದೆ, ಗುಹೆಯ ದೇಗುಲದ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದ ಅವನಿಗೆ ಐವತ್ತರ ಹರೆಯದಲ್ಲೇ ಮುಪ್ಪು ಕವಿದು, ಅರವತ್ತನೆಯ ವಯಸ್ಸಿನಲ್ಲೆ ತನ್ನ ಪತ್ನಿಯನ್ನೂ, ಹದಿನೈದು ವರ್ಷದ ಬಾಲಕನಾದ ಚಂದ್ರೋಜನನ್ನೂ ಅನಾಥರನ್ನಾಗಿಮಾಡಿ ತೀರಿಕೊಂಡಿದ್ದನು. ಇದರಿಂದ ಚಂದ್ರೋಜನ ಶಿಕ್ಷಣ ಮಧ್ಯಕ್ಕೇ ನಿಂತು, ಸಂಸಾರ ನಿರ್ವಹಣೆಯ ಭಾರ ಅವನ ಹೆಗಲಿಗೆ ಬಿದ್ದಿತು. ಅವನು ತನ್ನ ಚಿತ್ರಕಲೆಯನ್ನು ನಂಬಿ ಉದರ ಪೋಷಣೆ ಮಾಡುವಂತೆ ಇರಲಿಲ್ಲ. ಅವನ ಚಿತ್ರಕಲೆ ಹೊಟ್ಟೆಯನ್ನು ತುಂಬಿಸುವ ಕಲೆಯಾಗಲು—ಇನ್ನೂ ಅನೇಕ ವರ್ಷಗಳ ಸಂತತ ಶ್ರಮ ಅಗತ್ಯ

ವಾಗಿತ್ತು. ಇದರಿಂದಾಗಿ, ಅವನು ಚಿತ್ರಕಲೆಯಲ್ಲಿ ಸಿದ್ಧಿ ಪಡೆಯುವವರೆಗೆ ತನ್ನ ಶಿಕ್ಷಣವನ್ನು ಹೇಗಾದರೂ ಮುಂದುವರಿಸಬೇಕಾಗಿತ್ತು.

ಇದುವರೆಗೆ ದೊರೆತ ಶಿಕ್ಷಣ ಅವನಿಗೆ ಬೇಕಾದ ಹಿನ್ನೆಲೆಯನ್ನು ಸಿದ್ಧಗೊಳಿಸಿತ್ತು. ಈಗ ಅವನು ತನ್ನ ಪ್ರತಿಭೆಯಿಂದ ತನ್ನ ಕಲೆಯನ್ನು ಬೆಳಸಿಕೊಳ್ಳಬೇಕಾಗಿತ್ತು. ಲೋಕಜೀವನವನ್ನು ಚಿತ್ರಿಸಿ ತನ್ನ ಕಲೆಯನ್ನು ಪರಿಷ್ಕರಿಸಿಕೊಳ್ಳಬೇಕಾಗಿತ್ತು. ಅದರ ಸಲುವಾಗಿ ಅವನು ಪ್ರತಿಫಲಾಪೇಕ್ಷೆಯಿಲ್ಲದೆ ಅನೇಕ ಕೃತಿಗಳನ್ನು ನಿರ್ಮಿಸಿ ತನ್ನ ಭಾವನೆಗಳನ್ನು ವರ್ಣಗಳಲ್ಲಿ ವ್ಯಕ್ತಗೊಳಿಸಲು ಪ್ರಯತ್ನಿಸಿದನು. ಇದರಿಂದ ಅವನು ನಿರೀಕ್ಷಿಸಿದ್ದ ಪ್ರೋತ್ಸಾಹ ಮಾತ್ರ ಜನತೆಯಿಂದ ದೊರೆಯಲಿಲ್ಲ. ಇತ್ತ ಬಡತನದ ಬೇಗೆ, ಅತ್ತ ಜನತೆಯ ಅನಾದರಗಳಿಂದ ಬೇಸತ್ತು ಚಂದ್ರೋಜನು ಎಷ್ಟೋ ಬಾರಿ ತಂದೆಯಂತೆ ಶಿಲ್ಪಿಯಾಗುವ ಬದಲು, ವರ್ಣಶಿಲ್ಪಿಯಾದುದು ತಪ್ಪಾಯಿತೆಂದೆನಿಸಿತ್ತು. ಆದರೆ ಒಮ್ಮೊಮ್ಮೆ ತಾನು ತುಳಿದ ದಾರಿ ಸರಿ ಎಂದು ಅನಿಸುತ್ತಿತ್ತು. ಶಿಲ್ಪಕಲೆಯಲ್ಲಿ ತಾನು ಸಾಮಾನ್ಯ ಶಿಲ್ಪಿಯಾಗುವದಕ್ಕಿಂತಲೂ ಚಿತ್ರಕಲೆಯಲ್ಲಿ ಪ್ರತಿಭಾವಂತ ಕಲೆಗಾರನಾಗುವುದು ಲೇಸೆಂದು ಅವನು ತಿಳಿದಿದ್ದನು. ಅವನು ತನ್ನ ತಂದೆ ಸಂಪಾದಿಸಿದ್ದ ಒಡವೆ ವಸ್ತುಗಳನ್ನೆಲ್ಲಾ ಮಾರಿ, ಕಷ್ಟದಿಂದ ಜೀವನಮಾಡುತ್ತಾ ತನ್ನ ಚಿತ್ರಕಲೆಗೆ ಜೋತುಬಿದ್ದಿದ್ದನು. ಆದರೆ ಮಗ ವಯಸ್ಸಿಗೆ ಬಂದರೂ, ಅವನು ತನ್ನ ಚಿತ್ರಕಲೆಯಿಂದ ಒಂದು ಗದ್ಯಾಣ ಸಂಪಾದಿಸದೆ ಹೋದಾಗ, ಇದುವರೆಗೆ ಬಡತನವನ್ನೂ, ದುಃಖ ದಾರಿದ್ರ್ಯಗಳನ್ನೂ ಸಹಿಸಿಕೊಂಡಿದ್ದ ತಾಯಿಗೆ ಮಗನ ಬಗ್ಗೆ ಇದ್ದ ನಂಬಿಕೆ ನಷ್ಟವಾಯಿತು. ಅವಳು ಚಂದ್ರೋಜನು ಚಿತ್ರಕಲೆಯನ್ನು ಬಿಟ್ಟು ಬೇರೆ ಯಾವುದಾದರೂ ವೃತ್ತಿಯನ್ನು ಹಿಡಿದು, ಉದರ ನಿರ್ವಹಣೆಮಾಡಿಕೊಳ್ಳಲು ಆಗ್ರಹಪಡಿಸಲಾರಂಭಿಸಿದಳು.

ಇದರಿಂದ ಚಂದ್ರೋಜನಿಗೆ ಭಾರಿ ಪೆಟ್ಟು ಬಿದ್ದಂತೆ ಆಯಿತು. ತಾನು ನಂಬಿದ ಚಿತ್ರಕಲೆಯಿಂದ ತಾನು ಉಪವಾಸ ಬೀಳುವಂತೆ ಆಯಿತೇ ? ಇದನ್ನು ಬಿಟ್ಟುಬಿಡಲೇ ಎಂದು ಯೋಚಿಸಿದನು. ಇಲ್ಲ, ಚಿತ್ರಕಲೆಯನ್ನು ಬಿಟ್ಟು ಚಣಕಾಲ ಬದುಕುವುದು ಸಾಧ್ಯವಿಲ್ಲವೆಂದು ಅವನಿಗೆ ಅನಿಸಿತ್ತು. ತನಗೆ ಮುಕ್ತಿ ದೊರೆಯುವುದಾದರೆ ಅದು ತನ್ನ ಚಿತ್ರಕಲೆಯಿಂದ ಎಂಬ ದೃಢ

ನಂಬಿಕೆ ಇತ್ತು. ಅವನು ತಾಯಿಯು ಉಪವಾಸದಿಂದ ಇರುವುದನ್ನು ನೋಡ ಲಾರದೆ, ತನ್ನ ಚಿತ್ರಕಲೆಯನ್ನು ಹಣಕ್ಕಾಗಿ ಮಾರಿಕೊಳ್ಳಲು ನಿಶ್ಚಯಿಸಿದನು; ಆದರೆ ಅವನ ಚಿತ್ರಕಲೆಗೆ ಬೆಲೆಕೊಡುವವರು ಮಾತ್ರ ದೊರೆತಿರಲಿಲ್ಲ. ಅವನು ಇದೇ ಚಿಂತೆಯಲ್ಲಿ ಕೊರಗಿ, ಕಂಗೆಟ್ಟು ತನ್ನ ತಂದೆಯು ನಿರ್ಮಿಸಿದ ಶೇಷ ನಾರಾಯಣ ದೇಗುಲದ ಮುಂದಿನ ಹೊರವಲಯದಲ್ಲಿ ಒಂದು ದಿನ ಮೈಮರೆತು ಯೋಚಿಸುತ್ತಾ ಕುಳಿತಿರುವಾಗ, ಇದ್ದಕ್ಕಿದ್ದಂತೆ ಯಾರೋ ತನ್ನನ್ನು ಬಡಿದು ಎಚ್ಚರಿಸುತ್ತಿರುವುದು ಗೋಚರಿಸಿತು. ಅವನು ತನ್ನ ಭಾವಸಮಾಧಿಯಿಂದ ಎಚ್ಚೆತ್ತಾಗ, ಎದುರಿಗೆ ಪ್ರಧಾನ ಅಮಾತ್ಯ ಸಮಂತಭದ್ರನು ನಿಂತಿದ್ದನು.

ಅವನು ಜೈನನಾದರೂ ವಿಷ್ಣು ಹಾಗೂ ಮಹೇಶ್ವರರನ್ನು ಗೌರವದಿಂದ ಕಾಣುತ್ತಿದ್ದನು. ಅವನು ಪ್ರತಿದಿನವೂ ಜಿನನ ಚೈತ್ಯಾಲಯಕ್ಕೆ ಬಂದು ಪೂಜಿ ಸದೆ ಊಟಮಾಡುತ್ತಿರಲಿಲ್ಲ. ಅಂದು ಚೈತ್ಯಾಲಯದಿಂದ ಹೊರಗೆ ಬರುವಾಗ ದಾರಿಯಲ್ಲಿ ವಿಷ್ಣುಗವಿಯ ಮುಂದೆ ಕುಳಿತು, ಕನಸು ಕಾಣುತ್ತಿದ್ದ ಚಂದ್ರೋ ಜನು ಅವನ ಗಮನಕ್ಕೆ ಬಿದ್ದಿದ್ದನು. ಅವನನ್ನು ನೋಡುತ್ತಲೇ ಅವನು ಯಾರೋ ಕಷ್ಟದಲ್ಲಿರುವ ಕಲಾವಿದನಿರಬೇಕೆಂದು ಸಮಂತಭದ್ರನಿಗೆ ಅನಿಸಿತು. ಅವನಿಗೆ ತನ್ನಿಂದಾಗುವ ಸಹಾಯಮಾಡಬೇಕೆಂದು ಅನಿಸಿ, ತಾನಾಗಿ ಮೇನೆ ಯಿಂದ ಇಳಿದು ಬಂದು ಅವನನ್ನು ಎಚ್ಚರಿಸಿದ್ದನು.

"ಪ್ರಭು, ತಾವು ಯಾರೋ ನನಗೆ ತಿಳಿಯದು, ತಮ್ಮ ಮುಖ ಎಲ್ಲೋ ನೋಡಿದಂತೆ ಇದೆ!" ಎಂದು ಹೇಳಿ ಅವನ ಕಾಲಿಗೆ ಬಿದ್ದ ಚಂದ್ರೋಜ.

"ನಾನು ಸಾಮ್ರಾಟರ ಪಾದಸೇವಕ ಸಮಂತಭದ್ರ—"

"ಏನು ? ತಾವು ಮಹಾಪ್ರಧಾನಿ ಸಮಂತಭದ್ರರೇ? ಪ್ರಭು, ತಮಗೆ ನನ್ನಿಂದ ಅಪಚಾರವಾಗಿದ್ದರೆ ಕ್ಷಮಿಸಬೇಕು. ತಿಳಿಯದೆ ಅಪರಾಧವೆಸಗಿದೆ...."

"ನೀವು ಯಾವ ಅಪರಾಧವನ್ನೂ ಮಾಡಿಲ್ಲ. ನೀವು ಆ ಬಗ್ಗೆ ಚಿಂತಿಸುವ ಕಾರಣವಿಲ್ಲ. ಇರಲಿ, ನೀವು ಯಾರು ? ಏಕೆ ಇಲ್ಲಿ ಒಬ್ಬರೇ ಕುಳಿತಿದ್ದೀರಿ ?"

"ನಾನು ಚಂದ್ರೋಜ ಪ್ರಭು ! ದೇವೋಜರ ಹೊಟ್ಟೆಯಲ್ಲಿ ಹುಟ್ಟಿದ ನಿರ್ಭಾಗ್ಯ ವರ್ಣಶಿಲ್ಪಿ."

"ಏನು ? ಈ ದೇವಾಲಯವನ್ನು ನಿರ್ಮಿಸಿದ ದೇವೋಜರ ಪುತ್ರರೇ ನೀವು !" ಆಶ್ಚರ್ಯದಿಂದ ಸಮಂತಭದ್ರ ಕೇಳಿದ.

"ಹೌದು ಪ್ರಭು! ಆ ನಿರ್ಭಾಗ್ಯಪುತ್ರ ನಾನೇ."

"ನೀವು ಖಂಡಿತ ನಿರ್ಭಾಗ್ಯರಲ್ಲ....ಆ ಮಹಿಮಾವಂತರ ಹೊಟ್ಟೆಯಲ್ಲಿ ಹುಟ್ಟಿದ ನೀವು ನಿರ್ಭಾಗ್ಯರಲ್ಲ! ಅವರು ಸಾಮ್ರಾಟ್ ಕೀರ್ತಿವರ್ಮರ ಅಭಿಮಾನಕ್ಕೆ ಪಾತ್ರರಾಗಿ, ಶಿಲ್ಪಕುಲತಿಲಕರೆಂಬ ಕೀರ್ತಿಗೆ ಪಾತ್ರರಾದವರು. ಅವರ ಪುಣ್ಯ ಸಂತಾನ, ನೀವು ಎಂದಿಗೂ ನಿರ್ಭಾಗ್ಯರಲ್ಲ. ಏನೋ ದೇಶ, ಕಾಲಸ್ಥಿತಿಯಿಂದ ನೀವು ತೊಂದರೆಯಲ್ಲಿ ಬಿದ್ದಿರಬಹುದೇ ಹೊರತು, ನೀವು ನಿರ್ಭಾಗ್ಯರಲ್ಲ!" ಎಂದು ಹೇಳಿ ಚಂದ್ರೋಜನ ಕತೆಯನ್ನೆಲ್ಲಾ ಕೂಲಂಕಷವಾಗಿ ವಿಚಾರಿಸಿಕೊಂಡನು.

ಚಂದ್ರೋಜನ ಕರುಣಕತೆಯನ್ನು ಕೇಳಿ ಎಂತಹ ಶಿಲ್ಪಿಯ ಮಗನಿಗೆ ಎಂತಹ ದುರ್ಗತಿ ಪ್ರಾಪ್ತವಾಯಿತು ಎಂದು ಸಮಂತಭದ್ರನು ವಿಷಾದಿಸಿದನು. ಅಂದೇ ಅವನು ಚಂದ್ರೋಜನನ್ನು ಸಾಮ್ರಾಟ್ ಪುಲಿಕೇಶಿಯ ಸಮ್ಮುಖಕ್ಕೆ ಕರೆದೊಯ್ದು, ಅವನಿಗೆ ಚಂದ್ರೋಜನ ಪರಿಚಯಮಾಡಿಕೊಟ್ಟನು. ಪುಲಿಕೇಶಿಯು ಚಂದ್ರೋಜನ ಕಲೆಯನ್ನು ಪರೀಕ್ಷಿಸಲು ವಿಷ್ಣುಗವಿಯನ್ನು ವರ್ಣಗಳಿಂದ ಅಲಂಕರಿಸುವ ಕೆಲಸಗಳನ್ನು ಚಂದ್ರೋಜನಿಗೆ ವಹಿಸಿದನು. ಇದನ್ನು ಶ್ರದ್ಧೆಯಿಂದ ನಿರ್ವಹಿಸಿ, ಕಗ್ಗಲ್ಲಿನ ಮೂರ್ತಿಗಳಲ್ಲಿ ಜೀವಕಳೆ ತುಂಬಿದನು. ಇದನ್ನು ನೋಡಿ ಮನಸಾರ ಮೆಚ್ಚಿದ ಪುಲಿಕೇಶಿಯು ಚಂದ್ರೋಜನನ್ನು ಆಸ್ಥಾನದ ವರ್ಣಶಿಲ್ಪಿಯಾಗಿ ನೇಮಿಸಿದನು.

ರಾಜಧಾನಿಯ ಜನತೆ, ಕಲ್ಲಿನ ಬೊಂಬೆಗಳಿಗೆ ಬಣ್ಣದಿಂದ ಜೀವತುಂಬಿದ, ಗವಿಯನ್ನು ಶ್ರೀಮನ್ಮಹಾವಿಷ್ಣುವಿನ ಆಡುಂಬೊಲವಾಗಿ ಮಾರ್ಪಡಿಸಿದ ಚಂದ್ರೋಜನ ಕಲೆಗಾರಿಕೆಯನ್ನೂ, ಕುಸುರಿನ ಕೆಲಸವನ್ನೂ ಮೆಚ್ಚಿ ಅವನಿಗೆ ಕಲಾಚಕ್ರವರ್ತಿ ಎಂಬ ಬಿರುದನ್ನು ಇತ್ತು ಸನ್ಮಾನಿಸಿತು. ಇತ್ತ ರಾಜಸನ್ಮಾನ, ಅತ್ತ ಜನತೆಯ ಸನ್ಮಾನ ಇವುಗಳಿಂದ ಚಂದ್ರೋಜನ ಸುಪ್ತವಾದ ಪ್ರತಿಭೆ ಪೂರ್ಣವಾಗಿ ವಿಕಸಿತವಾಗಿ, ಚಂದ್ರೋಜನು ಸಾಮ್ರಾಟರ ಅರಮನೆಯಲ್ಲಿ ಅನೇಕ ಭವ್ಯಚಿತ್ರಗಳನ್ನು ನಿರ್ಮಿಸಿ, ಪ್ರಭುವನ್ನು ತನ್ನದೇ ಆದ ರೀತಿಯಲ್ಲಿ ಸೇವಿಸಿದ್ದನು. ಇಂದು ಇದಕ್ಕೂ ಹೆಚ್ಚಿನ ರೀತಿಯಲ್ಲಿ ತನ್ನ ದೊರೆಯನ್ನು ಸೇವಿಸುವ ಸೌಭಾಗ್ಯ ಅವನದಾಗಿತ್ತು.

ಅವನು ರವಿಕೀರ್ತಿಯ ಜೊತೆಯಲ್ಲಿ ಇಸ್ಪಿಹಾನಿಗೆ ಹೊರಟನು.

ಈ ಬಾರಿ ರಾಯಭಾರಿಗಳು ಸಮುದ್ರಮಾರ್ಗವನ್ನು ಹಿಡಿದರು. ಯಾವುದೇ ತೊಂದರೆಯಿಲ್ಲದೆ ನಿಶ್ಚಿತಕಾಲದಲ್ಲಿ ಪರ್ಶಿಯಾ ದೇಶವನ್ನು ಮುಟ್ಟಿ, ಇಸ್ಪಿಹಾನ ಸೇರಿದರು. ದಾರಿಯಲ್ಲಿ ತಾವು ಶತ್ರುಗಳ ಸಂಶಯಕ್ಕೆ ಗುರಿಯಾಗಿ ತೊಂದರೆಪಡಬಾರದೆಂದು ವ್ಯಾಪಾರಿಗಳ ಸೋಗಿನಲ್ಲಿ ಹೊರಟಿದ್ದರು. ಅವರು ದಾರಿಯಲ್ಲಿ ತಾವು ನೋಡಿದ ಸಂಗತಿಗಳನ್ನೆಲ್ಲಾ ತಮ್ಮದೇ ಆದ ರೀತಿಯಲ್ಲಿ ಚಿತ್ರಿಸಿಕೊಳ್ಳುತ್ತಾ ಇಸ್ಪಿಹಾನವನ್ನು ಸಕಾಲದಲ್ಲಿ ತಲುಪಿದರು. ರವಿಕೀರ್ತಿಯು ತನ್ನ ಅನುಭವಗಳನ್ನೆಲ್ಲಾ ಕಾವ್ಯಮಯವಾದ ಮಾತಿನಲ್ಲಿ ಸೆರೆಹಿಡಿದರೆ, ಚಂದ್ರೋಜನು ಅವುಗಳನ್ನು ವರ್ಣಗಳಲ್ಲಿ ಸೆರೆಹಿಡಿಯುತ್ತಿದ್ದನು. ಹೀಗೆ ಅವರಿಬ್ಬರ ಜೊತೆ ಅಪೂರ್ವ ಜೋಡಿಯಾಗಿತ್ತು.

ರಾಯಭಾರಿಗಳು ಇಸ್ಪಿಹಾನವನ್ನು ತಲುಪಿದ ವೇಳೆಯಲ್ಲಿ ಖುಸ್ರು ದೊರೆಯು ತನ್ನ ಬಂಧನದಿಂದ ಮುಕ್ತನಾಗಿ, ಹೆಸರಿಗೆ ಮಾತ್ರ ದೊರೆಯಾಗಿ ದ್ದನು. ಅಧಿಕಾರವೆಲ್ಲವೂ ಅವನ ವಿರೋಧಿಗಳ ಕೈಯಲ್ಲಿ ಕೇಂದ್ರೀಕೃತ ವಾಗಿತ್ತು. ಅವರನ್ನು ತಿರಸ್ಕರಿಸಿ, ಅವರ ವಿರೋಧ ಕಟ್ಟಿಕೊಂಡು ಬದುಕು ವುದು ಅವನಿಗೆ ಕಷ್ಟವಾಗಿತ್ತು. ಆ ದ್ರೋಹಿಗಳು ಎಂತಹ ನಿಷ್ಕರುಣಿಗಳೆಂಬು ದನ್ನು ಅವನು ಕಂಡಿದ್ದುದರಿಂದ ಎಚ್ಚರದಿಂದ ಇದ್ದನು. ವಿದ್ರೋಹಿಗಳ ಕೋರಿಕೆಯನ್ನು ಈಡೇರಿಸದೆ ಹೋದುದಕ್ಕೆ ಅವರು ಖುಸ್ರುವಿನ ಮಗನನ್ನೇ ಅವನ ಕಣ್ಣೆದುರಿಗೆ ಕ್ರೂರ ರೀತಿಯಲ್ಲಿ ಕೊಲೆ ಮಾಡಿದ್ದರು. ತನ್ನನ್ನೂ ತನ್ನ ಪತ್ನಿಯನ್ನೂ ನಿಕೃಷ್ಟರೀತಿಯಿಂದ ನಡೆಸಿಕೊಂಡು ಕಿರುಕುಳ ಕೊಟ್ಟಿದ್ದರು. ಈ ಯಾತನೆಯಿಂದ ದೂರವಾಗಲು, ಖುಸ್ರು ತನ್ನ ಅಧಿಕಾರವನ್ನೆಲ್ಲಾ ಅವರಿಗೆ ಬಿಟ್ಟುಕೊಟ್ಟು, ಹೆಸರಿಗೆ ಮಾತ್ರ ದೊರೆಯಾಗಿರಲು ಒಪ್ಪಿದನು.

ಇದರಿಂದ ಖುಸ್ರುವಿಗೆ ಮೊದಲಿನ ವೈಭವದ ಜೀವನ ದೊರೆತರೂ, ಅವನು ದ್ರೋಹಿಗಳ ಕೈಬೊಂಬೆಯಾಗಿ, ಅವರ ಆಜ್ಞಾನುವರ್ತಿಯಾಗಿ ಕಾಲ ಹಾಕಬೇಕಾಗಿತ್ತು. ಇದು ಸ್ವಾಭಿಮಾನಿಯಾದ ಖುಸ್ರುವಿಗೆ ಸಹಿಸದಾಗಿತ್ತು. ಆದರೆ ಪತ್ನಿಯ ಸಲುವಾಗಿ ಈ ಪರಿಸ್ಥಿತಿಗೆ ಹೊಂದಿಕೊಂಡಿದ್ದ. ಇಂದಲ್ಲ ನಾಳೆ ತನಗೆ ಪುಲಿಕೇಶಿಯ ಸಹಾಯ ಬರಬಹುದು. ಆಗ ತಾನು ದ್ರೋಹಿ ಗಳನ್ನು ತುಂಡರಿಸಿ, ನಿಜವಾದ ಸಾಮ್ರಾಟನಾಗಿ ಮೆರೆಯಬಹುದೆಂದು ದೂರದ ಆಸೆ ಇಟ್ಟುಕೊಂಡು, ದೊರೆಯಾಗಿರಲು ಒಪ್ಪಿಕೊಂಡಿದ್ದನು. ಅವನು ತನ್ನ

ರಾಯಭಾರದ ಗತಿ ಏನಾಯಿತೆಂದು ಉತ್ಸುಕನಾಗಿದ್ದನು. ಇಷ್ಟುಕಾಲ ವಾದರೂ ಅವರು ಏಕೆ ಹಿಂದಿರುಗಿ ಬರಲಿಲ್ಲವೆಂದು ಯೋಚಿಸುತ್ತಿರುವಾಗಲೇ ರವಿಕೀರ್ತಿ, ಚಂದ್ರೋಜರು ಇಸ್ಪಿಹಾನಕ್ಕೆ ಬಂದು, ಅರಮನೆಯಲ್ಲಿ ಅವನನ್ನು ಭೇಟಿಯಾಗಿದ್ದರು.

## ೨೦

ವ್ಯಾಪಾರಿಗಳ ವೇಷದಲ್ಲಿ ಖುಸ್ರುವನ್ನು ಭೆಟ್ಟಿಯಾದ ರವಿಕೀರ್ತಿ, ಚಂದ್ರೋಜರ ಪರಿಚಯವನ್ನು ಅವನ ರಾಯಭಾರಿ ಮಾಡಿಕೊಟ್ಟನು. ಖುಸ್ರುವು ಚಕಿತನಾದನು. ತಾನು ನಿರೀಕ್ಷಿಸಿದ್ದ ಸೈನ್ಯಸಹಾಯ ದೊರಕದೆ, ಕೇವಲ ನಿಯೋಗಿಗಳಿಬ್ಬರು ಬಂದುದಕ್ಕಾಗಿ ನಿರಾಶೆಯುಂಟಾಯಿತು. ಇದನ್ನು ಅವನು ತೋರಿಸಿಕೊಳ್ಳದೆ, ರವಿಕೀರ್ತಿ, ಚಂದ್ರೋಜರನ್ನು ಆದರದಿಂದಲೇ ಬರಮಾಡಿಕೊಂಡು, ರಾಜೋಚಿತವಾಗಿ ಸತ್ಕರಿಸಿ, ತನ್ನ ಘನತೆಗೆ ತಕ್ಕ ಅರ ಮನೆಯಲ್ಲಿ ಬಿಡಾರ ಕಲ್ಪಿಸಿಕೊಟ್ಟನು. ಮೂರನೆಯ ದಿನ ಅವರಿಬ್ಬರನ್ನು ಅಂತರಂಗಕ್ಕೆ ಕರೆಸಿಕೊಂಡು, ಅವರ ಕುಶಲವನ್ನು ಕೇಳಿದ ಮೇಲೆ,

"ನಿಯೋಗಿಗಳೇ, ನಾನು ತಮ್ಮ ಸಾಮ್ರಾಟರಿಂದ ಇದಕ್ಕೂ ಹೆಚ್ಚಿನ ಸಹಾಯವನ್ನು ನಿರೀಕ್ಷಿಸಿದ್ದೆ. ನಿಮ್ಮ ಸಾಮ್ರಾಟರು ನಮ್ಮ ಕೋರಿಕೆಯನ್ನು ಮನ್ನಿಸಿ, ದೊಡ್ಡದೊಂದು ಸೈನ್ಯವನ್ನು ಕಳುಹಿಸಿಕೊಡುವರೆಂದು ತಿಳಿದಿದ್ದೆ. ಆದರೆ ನಮ್ಮ ಪ್ರಾರ್ಥನೆ ನಿಮ್ಮ ಪ್ರಭುಗಳ ಚಿತ್ತಕ್ಕೆ ಬರಲಿಲ್ಲ. ನಾವು ನಿರ್ಭಾಗ್ಯರೇ ಸರಿ ..."

ಎಂದು ವಿಷಾದದಿಂದ ಖುಸ್ರು ಹೇಳಿದನು.

"ಪ್ರಭು, ತಾವು ನಮ್ಮ ಮಾತನ್ನು ಅನ್ಯಥಾ ಭಾವಿಸಬಾರದು. ತಮ್ಮ ಬಗ್ಗೆ ನಮ್ಮ ಸಾಮ್ರಾಟರು ತುಂಬಾ ಗೌರವ, ಆದರ, ಅಭಿಮಾನಗಳನ್ನು ತಳೆದಿದ್ದಾರೆ. ಅವರು ತಮ್ಮ ಸ್ನೇಹವನ್ನು ತಮ್ಮ ಭಾಗ್ಯವಿಶೇಷವೆಂದು

ಪರಿಗಣಿಸಿದ್ದಾರೆ. ತಮಗೆ ಕೂಡಲೇ ನೆರವಾಗಲು ಅವರು ಚಡಪಡಿಸಿದರು. ಆದರೆ ನಮ್ಮ ದೇಶದ ಸದ್ಯದ ಪರಿಸ್ಥಿತಿ ಅದಕ್ಕೆ ಅವಕಾಶಕೊಡಲಿಲ್ಲ. ಅಲ್ಲದೆ, ತಾವು ಶತ್ರುಗಳ ಸೆರೆಮನೆಯಲ್ಲಿರುವುದಾಗಿ ತಿಳಿಯಿತು. ಶತ್ರುಗಳ ಬಲಾಬಲ ಗಳನ್ನು ತಿಳಿಯದೆ, ತಮ್ಮ ಸಾಧನಸಂಪತ್ತನ್ನೂ ತಿಳಿಯದೆ, ಇಲ್ಲಿನ ಸ್ಥಿತಿ ಗಳನ್ನೂ ಆಯಕಟ್ಟಿನ ಪ್ರದೇಶಗಳನ್ನೂ ತಿಳಿದುಕೊಳ್ಳದೆ ನಾವು ಸೈನ್ಯಸಮೇತ ದಂಡೆತ್ತಿ ಬಂದರೆ ತೊಂದರೆಗೊಳಗಾಗಬಹುದೆಂದೂ, ನಿಮಗೆ ನಮ್ಮಿಂದ ಉಪ ಕಾರಕ್ಕಿಂತಲೂ ಅಪಕಾರವಾಗಬಹುದೆಂದೂ ನಮ್ಮ ಸಾಮ್ರಾಟರು ಯೋಚಿಸಿ ದಂಡಯಾತ್ರೆಯ ಪೂರ್ವಭಾವಿಯಾಗಿ ಈ ನಿಯೋಗವನ್ನು ಕಳುಹಿಸಿಕೊಟ್ಟಿ ದ್ದಾರೆಯೇ ಹೊರತು, ಅನ್ಯಥಾ ಅಲ್ಲ. ಈಗ ನೀವು ನಮ್ಮ ಪುಣ್ಯಕ್ಕೆ ಸೆರೆಮನೆ ಯಿಂದ ಬಿಡುಗಡೆ ಹೊಂದಿದ್ದೀರಿ. ಅಧಿಕಾರವಿಲ್ಲದಿದ್ದರೂ ವ್ಯಕ್ತಿ ಸ್ವಾತಂತ್ರ್ಯ ವಾದರೂ ಇದೆ! ಈಗ ನಾವು ದಂಡೆತ್ತಿ ಬರಲು ತಕ್ಕ ಆವರಣವಿದೆ. ನೀವು ದ್ರೋಹಿಗಳೊಡನೆ ಮಿತ್ರರಂತೆ ನಟಿಸುತ್ತಾ, ಅವರನ್ನು ವಂಚಿಸುತ್ತಿರಿ. ಬಹು ಬೇಗ ಚಾಲುಕ್ಯರ ಸೈನ್ಯ ತಮ್ಮ ನೆರವಿಗೆ ಬಂದು ತಮ್ಮ ಸಿಂಹಾಸನವನ್ನೂ, ಸಾಮ್ರಾಜ್ಯವನ್ನೂ ತಮಗೆ ಭದ್ರಪಡಿಸಿಕೊಡುತ್ತದೆ! ಈ ಬಗ್ಗೆ ತಾವು ಚಿಂತಿ ಸುವ ಕಾರಣವಿಲ್ಲ!" ಎಂದು ರವಿಕೀರ್ತಿಯು ಆಶ್ವಾಸನವಿತ್ತಮೇಲೆ ಖುಸ್ರುವಿಗೆ ಎಷ್ಟೋ ಸಮಾಧಾನವಾಯಿತು. ಅವನು ತನ್ನ ನಿರಾಶೆಯನ್ನು ಹತ್ತಿಕ್ಕಿ ರಾಯ ಭಾರಿಗಳಿಬ್ಬರನ್ನೂ ವೈಭವವಾಗಿ ಸತ್ಕರಿಸಿ, ಅವರ ನಂಬಿಕೆಗೆ ಪಾತ್ರನಾದನು.

ರವಿಕೀರ್ತಿ ಚಂದ್ರೋಜರು ಒಂದು ತಿಂಗಳಕಾಲ ಇಸ್ಪಿಹಾನದಲ್ಲಿ ವ್ಯಾಪಾರಿಗಳ ವೇಷದಲ್ಲಿ ಇದ್ದು, ತಮಗೆ ಬೇಕಾದ ಸಂಗತಿಯನ್ನೆಲ್ಲಾ ಸಂಗ್ರ ಹಿಸಿಕೊಂಡರು. ಅನಂತರ ಖುಸ್ರುದೊರೆಯಿಂದ ಬೀಳ್ಕೊಳ್ಳಲು ಅರಮನೆಗೆ ಹೋದಾಗ ಖುಸ್ರುವು ಗದ್ಗದಿತನಾಗಿ ಹೇಳಿದ:

"ರಾಯಭಾರಿಗಳೇ ನಾನು ನಿಮ್ಮ ಆಶ್ವಾಸನೆಯನ್ನು ನೆಚ್ಚಿ ಇದುವರೆಗೆ ಜೀವಧಾರಣೆಮಾಡಿದ್ದೇನೆ. ಇಲ್ಲದಿದ್ದರೆ, ಎಂದೋ ಆತ್ಮಹತ್ಯೆ ಮಾಡಿಕೊಳ್ಳು ತ್ತಿದ್ದೆ. ನನಗೆ ಇಂತಹ ಹೇಯಬಾಳಿಗಿಂತ, ಸಾವು ಸುಖಕರ. ಸಾಮ್ರಾಟರ ಹೊಟ್ಟೆಯಲ್ಲಿ ಹುಟ್ಟಿ, ಸಾಮ್ರಾಟನಾಗಿ ಮೆರೆದು ಈಗ ನಾನು ಜೀವಗಳ್ಳನಾಗಿ ಬದುಕಲೆ? ಇಲ್ಲ ರಾಯಭಾರಿಗಳೇ, ನಾನು ಈ ವಿದ್ರೋಹಿಗಳ ಕೈಗೊಂಬೆ ಯಾಗಿ ನೆಪಮಾತ್ರಕ್ಕೆ ಸಾಮ್ರಾಟನಾಗಿ ಉಳಿಯಲಾರೆ!"

"ಪ್ರಭು, ತಾವು ಹತಾಶರಾಗಬಾರದು ! ನಮ್ಮ ಸಾಮ್ರಾಟರು ಒಮ್ಮೆ ಕೊಟ್ಟ ವಚನವನ್ನು ಎಂದಿಗೂ ಮರೆಯುವುದಿಲ್ಲ. ಎಷ್ಟೇ ಕಷ್ಟವಾದರೂ ಸಾಮ್ರಾಟರು ತಮ್ಮ ನೆರವಿಗೆ ಸೈನ್ಯವನ್ನು ಕಳುಹಿಸಿಕೊಡುತ್ತಾರೆ. ನೀವು ಈ ಬಗ್ಗೆ ಸಂದೇಹ ತಾಳಬಾರದು !" ಎಂದು ಆಶ್ವಾಸನವಿತ್ತ ರವಿಕೀರ್ತಿ.

"ರಾಯಭಾರಿಗಳೇ, ನಾನು ನಿಮ್ಮ ಭರವಸೆಯ ಮೇಲೆ ಬದುಕಿದ್ದೇನೆ. ನೀವು ನನ್ನ ಕೈಬಿಟ್ಟರೆ, ನಾನೇ ಸ್ವತಂತ್ರನಾಗಲು ಪ್ರಯತ್ನಿಸಿ, ಬಂದುದನ್ನು ಅನುಭವಿಸುತ್ತೇನೆ ! ನಮ್ಮ ಹಣೆಯಲ್ಲಿ ವಿಧಿ ಬರೆದಿದ್ದಂತೆ ಆಗಲಿ !" ಎಂದು ಹೇಳಿ, ರವಿಕೀರ್ತಿ, ಚಂದ್ರೋಜರಿಗೆ ಅನೇಕ ಬೆಲೆಬಾಳುವ ವಸ್ತುಗಳನ್ನು ಉಡುಗೊರೆಯಾಗಿತ್ತು ಸನ್ಮಾನಿಸಿದನು. ಅಲ್ಲದೆ ಪುಲಿಕೇಶಿಗೆ ಸ್ನೇಹದ ಕಾಣಿಕೆಯಾಗಿ ಅನೇಕ ಅಮೂಲ್ಯವಸ್ತುಗಳನ್ನು ಕೊಟ್ಟನು. ನಿಯೋಗಿಗಳಿಬ್ಬರೂ ಭಾರವಾದ ಹೃದಯದಿಂದ ಖುಸ್ರುದೊರೆಯನ್ನು ಬೀಳ್ಕೊಂಡು ಗೃಹಾಭಿಮುಖವಾಗಿ ತೆರಳಿದರು.

ಅವರು ಆದಷ್ಟು ಜಾಗ್ರತೆ ವಾತಾಪಿಯನ್ನು ತಲುಪಿ ಪುಲಿಕೇಶಿಯನ್ನು ಕಂಡು ಅವನಿಗೆ ಖುಸ್ರುದೊರೆ ಇತ್ತ ಎಲ್ಲ ಕಾಣಿಕೆಯನ್ನು ಒಪ್ಪಿಸಿ, ತಮ್ಮ ರಾಯಭಾರದ ವೃತ್ತಾಂತವನ್ನೆಲ್ಲಾ ತಿಳಿಸಿದರು. ಇದರಿಂದ ಸುಪ್ರೀತನಾದ ಪುಲಿಕೇಶಿಯು ವಿನೋದದ ಧ್ವನಿಯಲ್ಲಿ ಕೇಳಿದನು :

"ರವಿಕೀರ್ತಿಯವರೇ, ತಾವು ಪರ್ಶಿಯಾದಿಂದ ನನಗಾಗಿ ಏನು ತಂದಿದ್ದೀರಿ ?"

"ಪ್ರಭು, ನನ್ನ ಪ್ರವಾಸವನ್ನು ಕುರಿತು ಬರೆದ ಒಂದು ಮಹಾಕಾವ್ಯವನ್ನು ತಮಗೆ ಅರ್ಪಿಸಿದ್ದೇನೆ, ಸ್ವೀಕರಿಸುವ ಕೃಪೆಮಾಡಬೇಕು ಪ್ರಭು !" ಎಂದು ಹೇಳಿ ಸುವರ್ಣಾಕ್ಷರಗಳಿಂದ ಬರೆದ ಒಂದು ಕಾವ್ಯವನ್ನು ಪುಲಿಕೇಶಿಗೆ ಭಕ್ತಿ ಪುರಸ್ಸರವಾಗಿ ಅರ್ಪಿಸಿದನು. ಅವನ್ನು ಸಂತೋಷದಿಂದ ಸ್ವೀಕರಿಸುತ್ತಾ ಪುಲಿಕೇಶಿಯು ನಗುತ್ತಾ ಹೇಳಿದ :

"ನೀವು ನನಗಾಗಿ ಪರ್ಶಿಯಾದಿಂದ ಏನು ತಂದಿದ್ದೀರಿ ಚಂದ್ರೋಜರೇ?"

ಚಂದ್ರೋಜನು ತಾನು ಬಹಳ ಎಚ್ಚರಿಕೆಯಿಂದ ಕಾಪಾಡಿಕೊಂಡು ಬಂದಿದ್ದ ಒಂದು ಭಾವಚಿತ್ರವನ್ನು ಹೊರತೆಗೆದು, ಅದನ್ನು ಪುಲಿಕೇಶಿಯ ಪಾದಗಳ ಮೇಲೆ ಇಟ್ಟು "ಈ ಕಾಣಿಕೆಯನ್ನು ಸ್ವೀಕರಿಸಬೇಕು !" ಎಂದನು.

ಪುಲಿಕೇಶಿಯು ಅದನ್ನು ಅತ್ಯಾದರದಿಂದ ಸ್ವೀಕರಿಸಿ, ಭಾವಚಿತ್ರದ ಹೊರ ಹೊದಿಕೆಯನ್ನು ತೆಗೆದನು. ಚಿತ್ರಪಟವನ್ನು ದಿಟ್ಟಿಸಿ ನೋಡಿದನು. ಅದನ್ನು ನೋಡುತ್ತಿದ್ದಂತೆ ಮುಗುಳುನಗೆಯೊಂದು ಪುಲಿಕೇಶಿಯ ಮುಖದ ಮೇಲೆ ಮಿಂಚಿತು.

"ಇದು ಇಮ್ಮಡಿ ಖುಸ್ರು ದೊರೆಗಳ ಭಾವಚಿತ್ರ ಪ್ರಭು! ಅದನ್ನು ಸ್ನೇಹದ ಕಾಣಿಕೆಯಾಗಿ, ನನ್ನಿಂದ ಬರೆಸಿ ತಮಗೆ ಕಳುಹಿಸಿಕೊಟ್ಟಿದ್ದಾರೆ!" ಎಂದು ಚಂದ್ರೋಜನು ಹೇಳಿದ.

"ತುಂಬ ಸೊಗಸಾಗಿದೆ."

"ಪ್ರಭು, ಖುಸ್ರು ದೊರೆಗಳು ತಮ್ಮದೊಂದು ಭಾವಚಿತ್ರವನ್ನು ನಮ್ಮಿಂದ ಕೇಳಿ ಪಡೆದರು! ಅವರಿಗೆ ತಮ್ಮ ಬಗ್ಗೆ ಅತಿಶಯವಾದ ಆದರ ಅಭಿಮಾನಗಳು ಇವೆ. ತಮ್ಮನ್ನು ತಮ್ಮ ಭಾಗದ ದೇವತೆ ಎಂದು ತಿಳಿದಿದ್ದಾರೆ!" ಎಂದು ತನ್ನ ಮಾತನ್ನು ಚಂದ್ರೋಜ ಮುಂದುವರೆಸಿದ.

"ನಾವು ಅವರ ವಿಶ್ವಾಸಕ್ಕೆ ಚಿರಋಣಿಯಾಗಿದ್ದೇವೆ. ಅದನ್ನು ತಕ್ಕ ರೀತಿಯನ್ನು ತೀರಿಸುವ ಸಂದರ್ಭವನ್ನು ಆದಿವರಾಹಸ್ವಾಮಿಯು ದಯಪಾಲಿಸುವನೆಂದು ನಂಬಿದ್ದೇನೆ!" ಎಂದು ಪುಲಿಕೇಶಿಯು ಹೇಳಿ ಚಣಕಾಲ ಮೌನ ಧರಿಸಿದನು.

ಮುಂದೆ ಖುಸ್ರು ದೊರೆಯ ರಾಜ್ಯದ ಬಗ್ಗೆ ಅನೇಕ ಮಾತುಕತೆಗಳಾದವು. ರವಿಕೀರ್ತಿ, ಚಂದ್ರೋಜರು ಸಂಗ್ರಹಿಸಿಕೊಂಡು ಬಂದ ಅನೇಕ ಮಹತ್ವದ ಸಂಗತಿಗಳನ್ನು ಬಹಳ ಆಸಕ್ತಿಯಿಂದ ಪುಲಿಕೇಶಿಯು ಕೇಳಿದನು. ಕಡೆಗೆ ಅವರಿಗೆ ರಾಜೋಚಿತವಾದ ರೀತಿಯಲ್ಲಿ ಸನ್ಮಾನಿಸಿ ಚಂದ್ರೋಜನನ್ನು ಬೀಳ್ಕೊಡುತ್ತಾ,

"ಚಂದ್ರೋಜರೇ, ನೀವು ನಮ್ಮ ನಿರೀಕ್ಷೆಯನ್ನು ವ್ಯರ್ಥಗೊಳಿಸಲಿಲ್ಲ. ನೀವು ಬರೆದಿರುವ ಖುಸ್ರು ದೊರೆಗಳ ಚಿತ್ರ ತುಂಬ ಸೊಗಸಾಗಿದೆ. ವ್ಯಕ್ತಿಯೇ ಎದ್ದು ಬಂದು ಮಾತನಾಡಿಸುವಂತೆ ಸಜೀವವಾಗಿದೆ. ಇಂತಹ ಕೆಲವು ಚಿತ್ರಗಳನ್ನು ನೀವು ಬರೆದುಕೊಟ್ಟು ನಮ್ಮ ಅಂತಃಪುರದ ಜನರಿಗೆ ಅಲ್ಲಿನ ಜನಜೀವನ–ನಡೆನುಡಿಗಳನ್ನು ಪರಿಚಯಮಾಡಿಕೊಡಬೇಕು. ಇದರಿಂದ ನಮ್ಮೆರಡು ರಾಷ್ಟ್ರಗಳ ಮೈತ್ರಿಯು ಹೆಗ್ಗುರುತಾಗುವುದಲ್ಲದೆ, ನಮ್ಮ ಅಂತಃಪುರದ ಸ್ತ್ರೀಯರಿಗೆ

ಪರ್ಶಿಯಾ ಬಗ್ಗೆ ಅನೇಕ ಸಂಗತಿಗಳು ತಿಳಿದಂತೆ ಆಗುತ್ತದೆ!" ಎಂದನು.

ಹಿಂದಿನಿಂದಲೂ ಅಂತಃಪುರದ ಸ್ತ್ರೀಯರ ಸಲುವಾಗಿ ದೊರೆಗಳು ಕುಶಲರಾದ ಕಲಾವಿದರಿಂದ ಚಿತ್ರಗಳನ್ನು ಗೋಡೆಗಳ ಮೇಲೆ ಚಿತ್ರಿಸುವ ಪರಿಪಾಠವಿತ್ತು. ಪುಲಿಕೇಶಿಯ ಪೂರ್ವಜರು ತಮ್ಮ ಪತ್ನಿಯರಿಗೆ ಅನೇಕ ದೇಶಗಳ ಜೀವನ ಕ್ರಮ–ಉಡಿಗೆತೊಡಿಗೆ ಹಾಗೂ ಅಲಂಕಾರಗಳನ್ನು–ಪರಿಚಯ ಮಾಡಿಕೊಡಲು ಇಂತಹ ಅನೇಕ ಚಿತ್ರಗಳನ್ನು ಅಂತಃಪುರದಲ್ಲಿ ಬರೆಸಿದ್ದರು. ಈ ಚಿತ್ರಮಾಲಿಕೆಯಲ್ಲಿ ಪರ್ಶಿಯಾದ ಚಿತ್ರಗಳೂ ಸೇರಬೇಕೆಂಬುದೇ ಪುಲಿಕೇಶಿಯ ಆಶಯವಾಗಿತ್ತು.

ಚಂದ್ರೋಜನು ಪುಲಿಕೇಶಿಯ ಕೋರಿಕೆಯನ್ನು ಕೇಳಿ,

"ಪ್ರಭು, ತಮ್ಮ ಆಜ್ಞೆಯನ್ನು ಶಿರದಲ್ಲಿ ಹೊತ್ತು ಸಂತೋಷದಿಂದ ನಡೆಸಿಕೊಡುತ್ತೇನೆ. ತಮ್ಮಂತಹ ಮಹಾಪ್ರಭುಗಳ ಸೇವೆ ದೊರೆತುದು ನನ್ನ ಭಾಗ್ಯ ವಿಶೇಷವೇ ಸರಿ."

ಎಂದು ಹೇಳಿ ಪುಲಿಕೇಶಿಯ ಅನುಮತಿ ಪಡೆದು ಅಲ್ಲಿಂದ ಬೀಳ್ಕೊಂಡನು.

ಪುಲಿಕೇಶಿಯ ಕೋರಿಕೆಯಂತೆ ಮರುದಿನವೇ ಚಂದ್ರೋಜನು ಅಂತಃಪುರದ ಅಧಿಕಾರಿಗಳನ್ನು ಕಂಡು, ಚಿತ್ರಗಳನ್ನು ಬರೆಯಲು ಪ್ರಶಸ್ತವಾದ ಸ್ಥಳವನ್ನು ಆರಿಸಿದನು. ಅಲ್ಲಿಗೆ ತನ್ನ ಬಿಡಾರವನ್ನು ಬದಲಾಯಿಸಿ, ಚಿತ್ರಗಳ ರಚನೆಯಲ್ಲಿ ತೊಡಗಿದನು. ಒಂದೊಂದು ಚಿತ್ರ ಮುಗಿಯುತ್ತಲೂ ಅದಕ್ಕೆ ಒಂದು ರೇಶಿಮೆಯ ಪರದೆಯನ್ನು ಎಳೆದು ಜೋಪಾನಪಡಿಸುತ್ತಿದ್ದನು. ಹೀಗೆ ಅನೇಕ ತಿಂಗಳು ಸಂತತವಾಗಿ ದುಡಿದ ಮೇಲೆ ಚಿತ್ರರಚನೆಯ ಕಾರ್ಯ ಮುಗಿಯಿತು. ತನ್ನ ಕೆಲಸ ಮುಗಿದುದೇ ತಡ ಚಂದ್ರೋಜನು ಈ ಸುದ್ದಿಯನ್ನು ಪುಲಿಕೇಶಿಗೆ ತಿಳಿಸಿದನು.

"ಪ್ರಭು, ತಮ್ಮ ಆಜ್ಞೆಯಂತೆ ನಾನು ಪರ್ಶಿಯಾ ದೇಶದಲ್ಲಿ ಕಂಡ ಅನೇಕ ಸ್ವಾರಸ್ಯವಾದ ಸಂಗತಿಗಳನ್ನು ಅಂತಃಪುರದ ಕಲಾಭವನದ ಗೋಡೆಗಳ ಮೇಲೆ ಚಿತ್ರಿಸಿದ್ದೇನೆ. ತಾವು ಅದನ್ನು ಪರಾಂಬರಿಸಬೇಕು!" ಎಂದು ಹೇಳಿದನು.

ಈ ಸುದ್ದಿಯನ್ನು ಕೇಳಿ ಪುಲಿಕೇಶಿಗೆ ತುಂಬಾ ಸಂತೋಷವಾಯಿತು. ಅವನು ತನ್ನ ಆಪ್ತಮಿತ್ರರಾದ ಸಮಂತಭದ್ರ, ರವಿಕೀರ್ತಿ ಇವರೊಡನೆ ಹೊರಟು ಅಂತಃಪುರದ ಚಿತ್ರಶಾಲೆಗೆ ಬಂದನು.

ಅಂತಃಪುರದ ಚಿತ್ರಶಾಲೆಯಲ್ಲಿ ಹಿಂದಿನ ದೊರೆಗಳು ಅನೇಕ ಅಪೂರ್ವ ಕಲಾಕೃತಿಗಳನ್ನು ಸಂಗ್ರಹಿಸಿದ್ದರು. ಅಲ್ಲಿ ಒಂದೊಂದೂ ಎಷ್ಟು ಬಾರಿ ನೋಡಿದರೂ ಬೇಸರವಾಗದ ಚಿತ್ರಗಳು. ಒಂದೊಂದೂ ಒಂದೊಂದು ರತ್ನ. ಸೌಂದರ್ಯವನ್ನು ಎರಕಹೊಯ್ದಿರುವ ವರ್ಣಚಿತ್ರಗಳು. ಅವುಗಳ ಮಾಲಿಕೆಯಲ್ಲಿ ಚಂದ್ರೋಜನು ಪರ್ಶಿಯಾದ ಕೆಲವು ಚಿತ್ರಗಳನ್ನು ಬಿಡಿಸಿದ್ದನು. ಅವುಗಳನ್ನು ಒಂದೊಂದಾಗಿ ತೋರಿಸುತ್ತಾ ಚಂದ್ರೋಜನು ವಿವರಣೆ ಹೇಳಿದನು.

"ಪ್ರಭು, ಇದು ಪರ್ಶಿಯಾದೇಶದ ಖುಸ್ರು ದೊರೆಗಳು ತಮ್ಮ ಸನ್ನಿಧಾನಕ್ಕೆ ಕಳುಹಿಸಿಕೊಟ್ಟ ರಾಯಭಾರದ ಚಿತ್ರ."

ಪುಲಿಕೇಶಿಯು ಅವಾಕ್ಕಾಗಿ ಚಿತ್ರವನ್ನು ದಿಟ್ಟಿಸಿ ನೋಡಿದನು :

ವಿಶಾಲವಾದ ರಾಜಸ್ಥಾನ. ಸಾಮ್ರಾಟ್ ಪುಲಿಕೇಶಿಯು ಓಲಗ ಕೊಟ್ಟಿದ್ದಾನೆ. ಅವನು ಭವ್ಯವಾದ ನವರತ್ನ ಖಚಿತವಾದ ಸಿಂಹಾಸನದಲ್ಲಿ ಮಂಡಿಸಿದ್ದಾನೆ. ಬಲಗೈ ದಿಂಬಿನಮೇಲೆ ಊರಿದೆ. ದೊರೆ ಪದ್ಮಾಸನಾರೂಢನಾಗಿ ಮೊಳಕಾಲು ಎತ್ತಿ ರಾಜಠೀವಿಯಿಂದ ಕುಳಿತಿದ್ದಾನೆ. ಅವನು ರಾಯಭಾರಿಗಳನ್ನು ಕರೆತರಲು ಸೇವಕರಿಗೆ ಎಡತೋಳೆತ್ತಿ ಸಂಜ್ಞೆಮಾಡುತ್ತಿದ್ದಾನೆ. ಅಕ್ಕಪಕ್ಕದಲ್ಲಿ ಬೃಹತ್ ಪ್ರಮಾಣದ ಸ್ತಂಭರಾಜಿ. ಅವುಗಳಲ್ಲಿ ಮರೆಯಲ್ಲಿ ಅಂತಃಪುರದ ಸ್ತ್ರೀಜನರು ಖುಸ್ರು ದೊರೆಯ ಕಾಣಿಕೆಯನ್ನು ವೀಕ್ಷಿಸಲು ಕುತೂಹಲದಿಂದ ನಿಂತಿದ್ದಾರೆ. ಸಿಂಹಾಸನದ ಬಲಗಡೆ ಒಬ್ಬ ಸುಂದರಲಲನೆ ಮಂಡಿಯೂರಿ ವೀಳಯವನ್ನು ಹಿಡಿದಿದ್ದಾಳೆ. ಎಡಗಡೆ ಇಬ್ಬರು ಸುಂದರಿಯರು ನವರತ್ನ ಖಚಿತವಾದ ಹಿಡಿಕೆಯುಳ್ಳ ಚಾಮರಗಳನ್ನು ಹಿಡಿದ್ದಾರೆ. ಅವರ ಹಿಂದೆ ಸೇವಕನೊಬ್ಬನು ಕೈಕಟ್ಟಿ ನಿಂತಿದ್ದಾನೆ. ಸಮೀಪದಲ್ಲೇ ಇಬ್ಬರು ಶ್ಯಾಮಲಕಾಯರಾದ, ಭೀಮಾಕೃತಿಯ ಸೇವಕರು ರಾಯಭಾರಿಗಳಿಗೆ ದಾರಿ ತೋರಿಸುತ್ತಿದ್ದಾರೆ. ರಾಯಭಾರಿಯು ತನ್ನ ದೊರೆ ಕೊಟ್ಟಿರುವ ಕಾಣಿಕೆಯನ್ನು ಒಪ್ಪಿಸಲು ಬಂದಿದ್ದಾನೆ. ಅವನು ನಮಸ್ಕರಿಸುವಂತೆ ಬಗ್ಗಿ ನಮ್ರವಾಗಿ ನಿಂತಿದ್ದಾನೆ.*

ಎಲ್ಲವೂ ಅಂದು ನಡೆದಿದ್ದಂತೆ ಇಂದು ಚಿತ್ರದಲ್ಲಿ ಚಿತ್ರಿತವಾಗಿತ್ತು. ಪುಲಿಕೇಶಿಯು ಈ ಚಿತ್ರವನ್ನು ಕಲಾವಿದನ ಕಣ್ಣಿನಲ್ಲಿ ನೋಡಿ "ಭಲೆ !" ಎಂದನು.

---

* ಪರಿಶಿಷ್ಟ ನೋಡಿ.

"ಮುಂದಿನ ಚಿತ್ರ—ನಮ್ಮ ರಾಯಭಾರಿಗಳನ್ನು ಖುಸ್ರು ದೊರೆಗಳು ಸ್ವಾಗತಿಸುತ್ತಿರುವ ಚಿತ್ರ."

ಚಿತ್ರದಲ್ಲಿ ಖುಸ್ರು ದೊರೆಯು ಉನ್ನತ ಸಿಂಹಾಸನದಲ್ಲಿ ಮಂಡಿಸಿದ್ದಾನೆ. ವ್ಯಾಪಾರಿಗಳ ವೇಷದಲ್ಲಿರುವ ರವಿಕೀರ್ತಿ ಹಾಗೂ ಚಂದ್ರೋಜರನ್ನು ಸ್ವಾಗತಿಸುತ್ತಿದ್ದಾನೆ. ಬಳಿಯಲ್ಲಿ ವಜೀರರು ಕೈಕಟ್ಟಿ ನಿಂತಿದ್ದಾರೆ. ಅವರ ಮುಖದಲ್ಲಿ ಪುಲಿಕೇಶಿಯು ಕಳುಹಿಸಿಕೊಟ್ಟ ಅಮೂಲ್ಯ ವಸ್ತುಗಳನ್ನು ಕಂಡು ಆಶ್ಚರ್ಯ ಉಂಟಾಗಿದೆ.

ಮೂರನೆಯ ಚಿತ್ರ: ಖುಸ್ರು ದೊರೆಯು ರಾಯಭಾರಿಗಳು ತಂದಿತ್ತ ಕಾಣಿಕೆಗಳನ್ನು ತನ್ನ ಪತ್ನಿಯ ಜೊತೆಯಲ್ಲಿ ಪರೀಕ್ಷಿಸುತ್ತಿರುವುದು.

ನಾಲ್ಕನೆಯ ಚಿತ್ರ: ಖುಸ್ರು ದೊರೆಯು ರಾಯಭಾರಿಗಳಿಗೆ ಕೊಟ್ಟ ಸತ್ಕಾರದ ಚಿತ್ರ.

ಐದನೆಯ ಚಿತ್ರ: ರಾಯಭಾರಿಗಳ ಸಲುವಾಗಿ ಅವನು ಏರ್ಪಡಿಸಿದ್ದ ಒಂದು ನೃತ್ಯದ ದೃಶ್ಯ.

ಆರನೆಯ ಚಿತ್ರ: ಖುಸ್ರು ದೊರೆ ತನ್ನ ಪತ್ನಿಯೊಂದಿಗೆ ಮದ್ಯ ಸೇವಿಸುತ್ತಿರುವ ಚಿತ್ರ.

ಏಳನೆಯ ಚಿತ್ರ: ಖುಸ್ರು ದೊರೆಯ ರಾಣಿ ಷರಬದೀಜಳು ಅಲಂಕರಿಸಿಕೊಳ್ಳುವ ದೃಶ್ಯ.

ಎಂಟನೆಯ ಚಿತ್ರ: ಇಸ್ಪಿಹಾನದ ವಿಹಂಗಮದ ನೋಟ.

ಒಂಬತ್ತನೆಯ ಚಿತ್ರ: ರಾಜಧಾನಿಯ ಒಂದು ಬೀದಿ, ಅಲ್ಲಿನ ವ್ಯಾಪಾರ.

ಹತ್ತನೆಯ ದೃಶ್ಯ: ಪುಲಿಕೇಶಿಯ ಆಸ್ಥಾನದಲ್ಲಿ ರಾಯಭಾರಿಗಳು ತಾವು ತಂದ ಖುಸ್ರು ದೊರೆಯ ಕಾಣಿಕೆಯನ್ನು ಒಪ್ಪಿಸುತ್ತಿರುವ ದೃಶ್ಯ.

ಈ ಹತ್ತು ಚಿತ್ರಗಳಲ್ಲಿ ಒಂದು ಇನ್ನೊಂದನ್ನು ಮೀರಿಸುವಂತೆ ಇತ್ತು ಎಲ್ಲವೂ ಸುಂದರವಾಗಿದ್ದವು; ಭವ್ಯವಾಗಿದ್ದವು.

ಇದನ್ನೆಲ್ಲಾ ನೋಡಿ ಪುಲಿಕೇಶಿಗೆ ಮೈರೋಮಾಂಚನವಾಯಿತು.ಅವನು ಸಂತೋಷದ ಹೆಚ್ಚಳದಲ್ಲಿ ಹೇಳಿದ:

"ಚಂದ್ರೋಜರೇ, ನೀವು ಇಂತಹ ಶ್ರೇಷ್ಠ ಕಲಾವಿದರೆಂಬುದನ್ನು ನಾನು ಇದುವರೆಗೆ ತಿಳಿದಿರಲಿಲ್ಲ. ನೀವು ಒಂದು ರತ್ನ—ನನ್ನ ಆಸ್ಥಾನದ ಅಪೂರ್ವ

ರತ್ನ!” ಎಂದು ಉದ್ಗಾರ ತೆಗೆದನು.

“ಪ್ರಭು ! ನಾನು ಇಂದು ಚಿತ್ರಕಲೆಯಲ್ಲಿ ಏನನ್ನಾದರೂ ಸಾಧಿಸಿದ್ದರೆ– ಅದು ನಿಮ್ಮ ಅನುಗ್ರಹದಿಂದ! ಈ ಎಲ್ಲ ಹೊಗಳಿಕೆಗೆ ನಾನು ಎಳ್ಳಷ್ಟೂ ಪಾತ್ರನಲ್ಲ. ನಾನು ಮಣ್ಣಿನ ಹುಡಿಯಾಗಿದ್ದೆ. ನೀವು ಅದಕ್ಕೆ ಒಂದು ರೂಪಕೊಟ್ಟಿರಿ, ಅಷ್ಟೆ.”

“ಚಂದ್ರೋಜರೇ, ನಿಮ್ಮ ಚಿತ್ರಕಲೆಗೆ ನಾನು ಮಾರುಹೋಗಿದ್ದೇನೆ. ನಿಮ್ಮಂತಹ ಶ್ರೇಷ್ಠ ಕಲಾವಿದರನ್ನು ಪಡೆದ ನಾನೇ ಧನ್ಯ ! ನಿಮ್ಮನ್ನು ಸಾಮ್ರಾಟನಂತೆ ಸತ್ಕರಿಸಬೇಕೆಂದಿದ್ದೇನೆ. ಕನಕಸ್ನಾನಮಾಡಿಸಬೇಕೆಂದಿದ್ದೇನೆ ಇಷ್ಟರಿಂದಲೇ ನನಗೆ ತೃಪ್ತಿ ಇಲ್ಲ. ನಿಮಗೆ ಏನು ಬೇಕು ಕೇಳಿ–ಕೊಡುತ್ತೇನೆ. ನಿಮ್ಮ ಮನದ ಆಶಯವೇನಿದ್ದರೂ ಹೇಳಿ, ಈಡೇರಿಸಿಕೊಡುತ್ತೇನೆ!” ಎಂದನು.

“ಪ್ರಭು ! ತಮ್ಮ ಔದಾರ್ಯಕ್ಕೆ ನಾನು ಎಳ್ಳಷ್ಟೂ ಪಾತ್ರನಲ್ಲ–ಆದರೂ ತಮ್ಮಲ್ಲಿ ನನ್ನದೊಂದು ಅಲ್ಪಕೋರಿಕೆ ಇದೆ. ಅಪ್ಪಣೆಯಿದ್ದರೆ ಅಧನ್ನು ಅಂತ ರಂಗದಲ್ಲಿ ನಿವೇದಿಸುತ್ತೇನೆ !” ಎಂದು ಹೇಳಿದನು. ಪುಲಿಕೇಶಿಯು ಸುತ್ತಲಿದ್ದವರನ್ನು ನೋಡಿದರು. ಅವರು ಅವನ ಇಂಗಿತ ಅರಿತು ಅಲ್ಲಿಂದ ನಿರ್ಗಮಿಸಿದರು.

“ಪ್ರಭು....” ಮುಂದೆ ಮಾತನಾಡಲು ಬಾಯಿ ಬರಲಿಲ್ಲ.

“ಚಂದ್ರೋಜರೇ, ನೀವು ಯಾವುದನ್ನೂ ನಿಸ್ಸಂಕೋಚವಾಗಿ ತಿಳಿಸಿರಿ. ನನ್ನಲ್ಲಿ ಸಂಕೋಚಬೇಡ....”

“ಪ್ರಭು, ನಾನು ಇಂತಹ ಕ್ಷುಲ್ಲಕ ಬೇಡಿಕೆಯನ್ನು ಸನ್ನಿಧಾನದಲ್ಲಿ ಮಂಡಿಸುತ್ತಿರುವುದಕ್ಕೆ ನನಗೆ ಸಂಕೋಚವೆನಿಸಿದೆ. ಆದರೆ, ಈ ಸಂಗತಿಯ ಮೇಲೆ ಎರಡು ಮುಗ್ಧ ಜೀವಿಗಳ ಅಳಿವು ಉಳಿವು ನಿಂತಿದೆ. ನೀವು ಈ ನನ್ನ ಕೋರಿಕೆಯನ್ನು ತಿರಸ್ಕರಿಸಿದರೆ—ಇಬ್ಬರು ಕಲಾವಿದರು ಭಗ್ನಪ್ರಣಯದಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ತಾವು ಅವರ ಅಭೀಷ್ಟವನ್ನು ಈಡೇರಿಸಿ ಕೊಟ್ಟರೆ ಯಾವಜ್ಜೀವವೂ ನಿಮಗೆ ಕೃತಜ್ಞರಾಗಿರುತ್ತಾರೆ.”

“ಅದೇನು ಸಂಗತಿ ನಿರ್ಭಯದಿಂದ ತಿಳಿಸಿರಿ.”

“ಪ್ರಭು ! ನಿಮ್ಮ ಆಸ್ಥಾನದ ನರ್ತಕಿಯಾದ ನಾಗಶ್ರೀಯನ್ನು ಆಸ್ಥಾನದ ಇನ್ನೊಬ್ಬ ಕಲಾವಿದ—ಚಿತ್ರಕಾರ—ಪ್ರೀತಿಸುತ್ತಿದ್ದಾನೆ. ಅವಳನ್ನು ಅವನಿಗೆ ಅನುಗ್ರಹಿಸಬೇಕು.”

"ಏನು ! ಸಾಮ್ರಾಟ್ ಹರ್ಷವರ್ಧನರು ಸಾಂಸ್ಕೃತಿಕ ರಾಯಭಾರಿಯಾಗಿ ಇರಿಸಿರುವ, ನಮ್ಮ ಅಭಿಮಾನದ ಪುತ್ರಿಯಂತಿರುವ ಆ ನಾಗಶ್ರೀಯನ್ನು ಆ ಚಿತ್ರಕಾರ ಬಯಸುತ್ತಾನೆಯೆ ? ಆಶ್ಚರ್ಯ !"

"ಇದರಲ್ಲಿ ಆಶ್ಚರ್ಯವಿಲ್ಲ ಪ್ರಭು ! ಇಬ್ಬರೂ ಕಲಾವಿದರು ! ಮೇಲಾಗಿ ಜನ್ವನಿಗರು ! ಸಮಾನ ಅಭಿರುಚಿ, ಕಲಾಪ್ರೇಮವುಳ್ಳವರು. ಅವನು ತಾವಾಗಿ ಒಲಿದು ಕೂಡಿದ್ದಾರೆ. ಅವರನ್ನು ವಿವಾಹದ ಮಂಗಳಸೂತ್ರದಿಂದ ಒಂದು ಮಾಡುವುದಷ್ಟೇ ಉಳಿದಿದೆ. ಸಾಮ್ರಾಟರು ಅನುಗ್ರಹಿಸಬೇಕು."

ಚಣಕಾಲ ಪುಲಿಕೇಶಿಯು ಯೋಚನಾಮಗ್ನನಾದ.

"ಏಕೆ ಪ್ರಭು ? ಈ ಕೋರಿಕೆ ಅಸಾಧ್ಯವಾದುದೆ ?

"ಇದು ಅಸಾಧ್ಯವಾದ ಕೋರಿಕೆಯಲ್ಲ ಚಂದ್ರೋಜರೇ, ಇಬ್ಬರೂ ಪರಸ್ಪರ ಪ್ರೀತಿಸುತ್ತಿದ್ದರೆ, ನಾವು ಅದಕ್ಕೆ ಅಡ್ಡಿ ಬರುವುದಿಲ್ಲ. ಆದರೆ ಆ ನಾಗಶ್ರೀಯ ಹೃದಯವನ್ನು ಅಪಹರಿಸಿದ ಆ ಕಲಾವಿದನಾರೆಂದು ಯೋಚಿಸುತ್ತಿದ್ದೆ."

"ಏಕೆ ಪ್ರಭು !"

"ಅವನು ನಿಜಕ್ಕೂ ಭಾಗ್ಯಶಾಲಿ. ನಾಗಶ್ರೀ ಒಂದು ರತ್ನ. ಈ ರತ್ನವನ್ನು ಕಂಠಾಹಾರವಾಗಿ ಪಡೆಯುವ ಪುಣ್ಯಶಾಲಿ ಯಾರೆಂದು ಯೋಚಿಸುತ್ತಿದ್ದೆ."

"ಆ ಭಾಗ್ಯಶಾಲಿ ನಾನೇ ಪ್ರಭು."

"ಏನು ? ನೀವು ನಾಗಶ್ರೀಯನ್ನು ಪ್ರೀತಿಸುತ್ತಿದ್ದೀರಾ ? ಈ ಬಗ್ಗೆ ಈ ಮೊದಲೇ ಏಕೆ ಹೇಳದೆ ಹೋದಿರಿ ಚಂದ್ರೋಜರೇ ?"

ಈ ಮಾತು ಕೇಳಿ ಚಂದ್ರೋಜ ಮುಗುಳುನಗೆ ನಕ್ಕ. ಅದು ಪುಲಿಕೇಶಿಯ ಮುಖದ ಮೇಲೆ ಪ್ರತಿಫಲಿಸಿತು.

## ೨೮

ನಾಗಶ್ರೀ ! ಎಂತಹ ಹೆಸರು ಆ ಹೆಣ್ಣಿಗೆ. ದುಂಡಾದ ಮುಖದಲ್ಲಿ ದುಂಬಿಯಂತೆ ಇರುವ ಕಣ್ಣುಗಳು.ಅದರೊಡನೆ ಸ್ಪರ್ಧೆಗೆ ನಿಂತ ಮುಂಗುರುಳು,

ಕುಸುಮಶರನ ಬಿಲ್ಲಿನಂತೆ ಇದ್ದ, ಮಾಟವಾದ ತಿದ್ದಿದ ಹುಬ್ಬುಗಳು. ವಿಶಾಲವಾದ ಹಣೆಯಲ್ಲಿ ಒಪ್ಪುವ ತಿಲಕ. ಎಳೆಯ ನಾಸಿಕ. ರಕ್ತದಿಂದ ಬಿರಿಯುವ ದುಂಡು ತುಟಿಗಳು. ಬಿಳಿ ಮುತ್ತಿನ ಸಾಲಿನಂತೆ ತೋರುವ ಹಲ್ಲುಗಳು. ತುಂಬಿದ ಕಪೋಲ, ಮಿಂಚಿನ ಕುಡಿನೋಟ, ಯೌವ್ವನ ಹೂ ಬಿಟ್ಟಂತೆ ತೋರುವ ವಕ್ಷಸ್ಥಳ. ಲತೆಯಂತೆ ಬಾಗಿ ಬಳುಕುವ ದೇಹ. ಅದಕ್ಕೆ ಒಪ್ಪುವ ನಡಿಗೆ–ಮೋಡಗಳ ಮೇಲೆ ನರ್ತಿಸುವ ಕಾಮನಬಿಲ್ಲಿನಂತೆ. ನಲ್ಲೆಯನ್ನು ಒಲಿಸಲು ಹೊರಟ ಮಯೂರನ ನಡಿಗೆಯಂತೆ ನಯನಮನೋಹರ.

ಅವಳು ನಡೆದರೆ, ನೃತ್ಯವಾಗುತ್ತದೆ, ಮಾತನಾಡಿದರೆ ಕಾವ್ಯವಾಗುತ್ತದೆ. ನಕ್ಕರೆ ಬೆಳದಿಂಗಳಾಗುತ್ತದೆ. ಎಂತಹ ಚೆಲುವು! ಎಂತಹ ಯೌವ್ವನ! ಹೆಸರು ನಾಗಶ್ರೀ–ಫಣಿರಾಜನ ರತ್ನ. ತನ್ನ ರೂಪ ಯೌವ್ವನಗಳನ್ನು ಬಯಸಿ ಬಂದವರ ಪಾಲಿಗೆ ನಾಗಕನ್ಯೆ!

ಎಂತಹ ಹೆಸರು ಆ ರಾಜನರ್ತಕಿಗೆ? ಇಂತಹವಳನ್ನು ಬಯಸಿ ಬಂದವರು ಅನೇಕರು! ಆದರೆ ದೊರೆತುದು ಮಾತ್ರ ಚಂದ್ರೋಜನಿಗೆ. ಈ ಘಟನೆ ಹೇಗೆ ಸಂಭವಿಸಿತು?

ರಾಜಮಹಾರಾಜರನ್ನು ಕಡೆಗಣ್ಣಿನಿಂದ ನೋಡದ ಆ ಹೆಣ್ಣು ಸಾಮಾನ್ಯ ವ್ಯಕ್ತಿ ಚಂದ್ರೋಜನಿಗೆ ಒಲಿದುದಾದರೂ ಹೇಗೆ?

ನಾಗಶ್ರೀ ವೇಶ್ಯಾಕುಲದಲ್ಲಿ ಹುಟ್ಟಿದ್ದರೂ ಯಾರಿಗೂ ಭೋಗಕಾಂತೆಯಾಗಿರಲಿಲ್ಲ. ಕಲಾವಿದೆಯಾದರೂ, ತನ್ನ ಕಲೆಯನ್ನು ಉದರ ಪೋಷಣೆಗೆ ಬಳಸಿಕೊಂಡಿರಲಿಲ್ಲ. ಅವಳು ರಾಜನರ್ತಕಿಯಾದರೂ, ಕುಲೀನಸ್ತ್ರೀಯಾಗಿದ್ದಳು. ಅವಳು ತನ್ನ ವೃತ್ತಿಗೆ ಹೊರತಾದ, ಕಲೆಗೆ ಹೊರತಾದ ಗರತಿಯ ಜೀವನ ಬಾಳಿದ್ದಳು. ರಾಜನರ್ತಕಿ ನಾಗಶ್ರೀ ರಾಜಪುತ್ರಿಯಂತೆ ಕಳಂಕರಹಿತಳಾಗಿದ್ದಳು. ಇವಳನ್ನು ಸಾಮ್ರಾಟ್ ಹರ್ಷವರ್ಧನನು ತನ್ನ ಮಗಳಂತೆ ನೋಡಿಕೊಂಡಿದ್ದನು. ಮಹಾರಾಜ್ಞಿ ರಾಜ್ಯಶ್ರೀದೇವಿಯು ಇವಳನ್ನು ಒಡಹುಟ್ಟಿದ ಸಹೋದರಿಯಂತೆ ನೋಡಿಕೊಂಡಿದ್ದಳು. ಅವರಿಬ್ಬರೂ ನಾಗಶ್ರೀಯನ್ನು ಪುಲಿಕೇಶಿಯ ಆಸ್ಥಾನದಲ್ಲಿ ಸಾಂಸ್ಕೃತಿಕ ರಾಯಭಾರಿಯಾಗಿ ಕಳುಹಿಸಿಕೊಡುವಾಗ, ಪತಿಗೃಹಕ್ಕೆ ಮಗಳನ್ನು ಕಳುಹಿಸುವ ತಾಯಿತಂದೆಗಳಂತೆ ದುಃಖಿಸಿದ್ದರು. ಅಂತಹ ಪ್ರೀತಿ ವಿಶ್ವಾಸ ಮೈತ್ರಿ!

ನಾಗಶ್ರೀ ಹರ್ಷವರ್ಧನನ ಆಶ್ರಯಕ್ಕೆ ಬಂದುದೇ ಒಂದು ಕತೆ. ಅವಳ ತಾಯಿ ರಾಗಿಣಿಯು ಕನ್ಯಾಕುಬ್ಜದ ಶ್ರೀಮಂತ ವೇಶ್ಯೆ. ಅವಳು ರೂಪ ಯೌವ್ವನ ಸೌಂದರ್ಯಗಳಲ್ಲಿ ವೇಶ್ಯಾವಾಟದ ಕಣ್ಮಣಿಯಾಗಿದ್ದಳು. ಅವಳ ಸಹವಾಸವನ್ನು ಬಯಸಿ ಬರುವ ಶ್ರೀಮಂತರು, ರಾಜಪುತ್ರರಿಗೆ ಲೆಕ್ಕವಿರಲಿಲ್ಲ. ಆದರೆ ರಾಗಿಣಿ ಯಾರೊಬ್ಬ ಶ್ರೀಮಂತನ ಮಡದಿಯಾಗಿರಲೊಪ್ಪದೆ, ದೇವದಾಸಿ ಯಾಗಿದ್ದಳು. ಯಾರು ತನ್ನನ್ನು ಸ್ವರ್ಗಲೋಕದ ಐಸಿರಿಯಲ್ಲಿ ಮೆರೆಸುವರೋ ಅಂತಹವರನ್ನು ಮಾತ್ರ ಮನಸದಿನಿಯನ್ನಾಗಿ ಸ್ವೀಕರಿಸುತ್ತಿದ್ದಳು. ಅವನ ಸಂಪತ್ತು ನಷ್ಟವಾದಮೇಲೆ ತನ್ನ ವೃತ್ತಿಗೆ ಸಹಜವಾದ ರೀತಿಯಲ್ಲಿ, ರಸವನ್ನು ಹೀರಿ ಕಬ್ಬನ್ನು ಒಗೆಯುವಂತೆ, ಮತ್ತೊಬ್ಬನಲ್ಲಿ ಅನುರಕ್ತಳಾಗುತ್ತಿದ್ದಳು. ಇದರಿಂದಾಗಿ ರಾಗಿಣಿಗೆ ಮಿತ್ರರಿದ್ದಂತೆಯೇ ಅವಳ ಶತ್ರುಗಳೂ ಇದ್ದರು. ಅವಳಿಂದಾಗಿ ಮನೆಮಠಗಳನ್ನು ಕಳೆದುಕೊಂಡವರೂ, ಅವಳಿಂದ ತಿರಸ್ಕೃತರಾಗಿ ಕ್ರೋಧದಿಂದ ಕುದಿಯುತ್ತಿದ್ದವರೂ ಅವಳನ್ನು ಅವರು ಸ್ತ್ರೀ ರೂಪರಕ್ಕಸಿ–ರೂಪ ಸರ್ಪಿಣಿ—ಎಂದು ಕರೆಯುತ್ತಿದ್ದರು. ಇಂತಹವಳ ಹೊಟ್ಟೆಯಲ್ಲಿ ನಾಗಶ್ರೀ ಹುಟ್ಟಿದ್ದಳು.

ರಾಗಿಣಿಗೆ ತನ್ನ ರೂಪ, ಯೌವನ, ಸಿರಿಸಂಪತ್ತುಗಳ ಮದದಲ್ಲಿ ಯಾರ ನಾದರೂ ಒಲಿಸಿಕೊಂಡು, ತಿರಸ್ಕರಿಸಬಲ್ಲೆನೆಂಬ ಹೆಮ್ಮೆ ಇತ್ತು. ಅವಳು ತನ್ನನ್ನು ಬಯಸಿ ಬರುತ್ತಿದ್ದ ಯುವಕರನ್ನು ಕ್ಷುದ್ರಜಂತುಗಳೆಂಬಂತೆ ಕಾಣುತ್ತಿದ್ದಳು. ಪುರುಷರನ್ನು ತಿರಸ್ಕಾರದಿಂದ ನೋಡುತ್ತಿದ್ದಳು. ಅವರನ್ನು ತನ್ನ ಸಹವಾಸ ಕ್ಕಾಗಿ ಹಂಬಲಿಸಿ, ವಿಲಾಸ ಭೋಗಗಳ ಬೆಂಕಿಯಲ್ಲಿ ಬೇಯಲು ಬರುವ ಪತಂಗ ಗಳೆಂದು ತಿಳಿದಿದ್ದಳು. ಅವಳಿಗೆ ಹೆಣ್ಣನ್ನು ದೇವಿ ಎಂದು ಕರೆದು, ಅದೇ ಹೆಣ್ಣನ್ನು ಭೋಗವಸ್ತುವಾಗಿ ಮಾಡಿಕೊಳ್ಳುವ ಗಂಡಸರ ಬಗ್ಗೆ ತಿರಸ್ಕಾರವಿತ್ತು. ಯಾರನ್ನು ಬೇಕಾದರೂ ತನ್ನ ಪಾಪಪಂಕದಲ್ಲಿ ಕೆಡಹಬಲ್ಲೆನೆಂಬ ಹೆಮ್ಮೆ ಇತ್ತು.

ಆದರೆ ಉಪಗುಪ್ತನ ಪ್ರಸಂಗದಲ್ಲಿ ಮಾತ್ರ ಅವಳಿಗೆ ಸೋಲುಂಟಾಗಿತ್ತು. ರಾಗಿಣಿಯು ದುರ್ಲಭಳಾದ ಗಣಿಕಾಸ್ತ್ರೀ ಎಂಬುದನ್ನು ತಿಳಿದಿದ್ದರೂ, ಅವಳು ತನ್ನನ್ನು ಬಯಸಿ ಬಂದರೂ, ಉಪಗುಪ್ತನು ಅವಳನ್ನು ತಿರಸ್ಕರಿಸಿದ್ದ. ಪ್ರಥಮ ಬಾರಿಗೆ ರಾಗಿಣಿಗೆ ಸೋಲಿನ ಪರಿಚಯವಾಗಿತ್ತು. ಇದು ಅವಳ ಬಾಳಿನಲ್ಲಿ ಭರಿಸಲಾಗದ ಪೆಟ್ಟಾಯಿತು. ಎಂತಹ ಅಪಮಾನ ? ಎಂತಹ ಸೋಲು !

ಆ ದಿನ ರಾಗಿಣಿಯು ತನ್ನ ಪ್ರಿಯಕರನೊಬ್ಬನ ಆಗಮನವನ್ನೇ ನಿರೀಕ್ಷಿಸುತ್ತಾ, ಮನೆಯ ಉಪ್ಪರಿಗೆಯಲ್ಲಿ ಕುಳಿತು, ವೀಣಾವಾದನವನ್ನು ಕೇಳುತ್ತಿದ್ದಳು. ತನ್ನ ಪ್ರಿಯಕರನು ಇನ್ನೂ ಏಕೆ ಬರಲಿಲ್ಲವೆಂದು ಅವಳಿಗೆ ಬೇಸರವಾಗಿತ್ತು. ಅವಳು ತನ್ನ ಆತಂಕಗೊಂಡ ಮನಸ್ಸಿನಲ್ಲಿ ಹೊನ್ನಿನ ಪಾತ್ರೆಯಲ್ಲಿದ್ದ ಅರಳಿದ ಗುಲಾಬಿಯೊಂದನ್ನು ಕೈಗೆ ತೆಗೆದುಕೊಂಡು, ಒಮ್ಮೆ ಮೂಸಿನೋಡಿ, ಮರುಗಳಿಗೆಯಲ್ಲಿ ಅದರ ದಳಗಳನ್ನು ಕಿತ್ತು ಕಾಲಿನಿಂದ ಹೊಸೆದುಹಾಕಿ, ಉಪ್ಪರಿಗೆಯಾಚೆಯ ಬೀದಿಗೆ ಎಸೆದಳು.

ಅಲ್ಲಿ ಯಾರೋ ನಡೆದು ಬರುತ್ತಿರುವಂತೆ ಕಾಣಿಸಿತು. ರಾಗಿಣಿಯು ಅವನನ್ನೇ ಅವಾಕ್ಕಾಗಿ ನೋಡಿದಳು. ಅವನು ಹತ್ತಿರ ಬಂದಾಗ, ಅವನು ತನ್ನ ಪ್ರಿಯಕರನಲ್ಲ, ಒಬ್ಬ ಸಾಮಾನ್ಯ ಬೌದ್ಧ ಭಿಕ್ಷುವೆಂದು ತಿಳಿಯಿತು. ಅವನನ್ನು ನೋಡಿ ರಾಗಿಣಿ ಒಳಗೆ ಹೋಗಬೇಕೆಂದಿರುವಾಗ, ಆ ಬೌದ್ಧಭಿಕ್ಷುವು ಅವಳ ಮನೆಯ ಮುಂದೆ ನಿಂತು, ಕತ್ತೆತ್ತಿ ಅವಳನ್ನು ನೋಡಿ, ಮರುಕ್ಷಣದಲ್ಲಿ ನಿರ್ಲಕ್ಷ್ಯ ವಹಿಸಿ, "ಬುದ್ಧಂ ಶರಣಂ ಗಚ್ಛಾಮಿ ! ಸಂಘಂ ಶರಣಂ ಗಚ್ಛಾಮಿ ! ಧರ್ಮಂ ಶರಣಂ ಗಚ್ಛಾಮಿ !" ಎಂದು ಶಾಂತ ಧ್ವನಿಯಿಂದ ಹೇಳಿದನು. ಅವನ ಕಣ್ಣುಗಳಲ್ಲಿ ಶಾಂತಿ ತುಂಬಿ ತುಳುಕುತ್ತಿತ್ತು. ಅವನು ಮೌನವೇ ಮೂರ್ತಿಯಾಗಿ ನಿಂತಂತೆ, ಗಂಭೀರವಾಗಿ ನಿಂತಿದ್ದನು. ಮುಖದಲ್ಲಿ ತೃಪ್ತಿ ಎದ್ದು ಕಾಣುತ್ತಿತ್ತು. ಉಟ್ಟಿದ್ದುದು ಸಾಮಾನ್ಯ ಹಳದಿ ಬಟ್ಟೆಯಾದರೂ ಅವನ ಸುದೃಢವಾದ ದೇಹಕ್ಕೆ ಅದು ಚೆನ್ನಾಗಿ ಒಪ್ಪುತ್ತಿತ್ತು. ಕೈಯಲ್ಲಿದ್ದ ಪಾತ್ರೆ, ನಿಂತ ನಿಲುವು ಅವನಿಗೆ ಸಹಜವಾಗಿತ್ತು. ರಾಗಿಣಿಯು ಅವನನ್ನು ನೋಡಿದಳು.

ಅವನದು ತೇಜಃಪುಂಜ ಮುಖ. ಯೌವ್ವನದಿಂದ ಬಿಗಿದ ಮೈಕಟ್ಟು; ಗಂಭೀರವಾದ ನಿಲುವು. ತೃಪ್ತಿ ಶಾಂತಿಗಳೇ ಮೈವೆತ್ತು ನಿಂತಂತೆ ಕಂಡನು. ಆ ಭಿಕ್ಷು ರಾಗಿಣಿಗೆ ವಿಚಿತ್ರ ಸಮ್ಮೋಹತೆಯನ್ನು ಉಂಟುಮಾಡಿದ್ದನು.

ರಾಗಿಣಿಯು ಚಣಕಾಲ ದಂಗುಬಡಿದು ಮೈಯೆಲ್ಲಾ ಕಣ್ಣಾಗಿಸಿಕೊಂಡು ನೋಡಿದಳು. ಮದನನ ಶರಾಘಾತದಿಂದ ಜರ್ಝರಿತಳಾದವಳಂತೆ, ಬಾಯಾರಿ ಬಸವಳಿದಂತೆ, ತೃಷ್ಣನೋಟದಿಂದ ನೋಡಿದಳು. ಅವಳೆಂದೂ ಯಾರನ್ನೂ ಈ ರೀತಿಯಲ್ಲಿ ನೋಡಿರಲಿಲ್ಲ. ಈ ರೀತಿಯಲ್ಲಿ ಬಯಸಿರಲಿಲ್ಲ. ಉಪಗುಪ್ತಮಾತ್ರ ಅವಳು ತನ್ನನ್ನು ಕಾಮಾತುರಳಾಗಿ ನೋಡುತ್ತಿದ್ದರೂ, ಅವಳ ಬಗ್ಗೆ ತೀರ

ನಿರ್ಲಕ್ಷ್ಯದಿಂದ ಇದ್ದ. ಒಮ್ಮೆಯಾದರೂ ಅವಳನ್ನು ಕತ್ತೆತ್ತಿ ನೋಡುವ ಸಾಹಸ ಮಾಡಲಿಲ್ಲ.

ತಾನು ಆ ಮನೆಯ ಬಾಗಿಲಿಗೆ ಬಂದು ನಿಂತು, ಭಿಕ್ಷೆ ಬೇಡಿದರೂ, ಯಾರೂ ಉತ್ತರಕೊಡದೆ ಇದ್ದುದನ್ನು ನೋಡಿ, ಭಿಕ್ಷು ಉಪಗುಪ್ತನು, ಅಲ್ಲಿಂದ ಹೊರಡಲು ಕಾಲ್ತೆಗೆದನು. ಅವನನ್ನು ತಾನು ಹಿಂದಕ್ಕೆ ಕರೆಯದಿದ್ದರೆ, ಅವನು ತನ್ನನ್ನು ತಿರಸ್ಕರಿಸಿ ಹೊರಟುಹೋಗುವನೆಂದರಿತ ರಾಗಿಣಿಯು, ಕೂಡಲೇ ದಾಸಿಯನ್ನು ಕರೆದು ಭಿಕ್ಷುವನ್ನು ಕರೆತರಲು ಹೇಳಿದಳು.

ದಾಸಿಯು ಓಡಿಹೋಗಿ ಭಿಕ್ಷುವಿಗೆ ಅಡ್ಡಬಿದ್ದು,

"ಭಗವಾನ್, ನಮ್ಮ ಒಡತಿಯು ತಮ್ಮನ್ನು ಕರೆತರಲು ಆಜ್ಞಾಪಿಸಿದ್ದಾರೆ. ತಾವು ಹಿಂದಿರುಗಿ ಬಂದು ಭಿಕ್ಷೆ ಸ್ವೀಕರಿಸಬೇಕು !" ಎಂದು ಬೇಡಿಕೊಂಡಳು.

ಉಪಗುಪ್ತನು ಅವಳನ್ನು ಅಡಿಯಿಂದ ಮುಡಿಯವರೆಗೆ ನೋಡಿ, ತಲೆಯನ್ನು ಅಲ್ಲಾಡಿಸಿ, ಮುಂದಕ್ಕೆ ಹೆಜ್ಜೆ ಹಾಕಿದನು.

"ಸ್ವಾಮಿನ್, ತಾವು ಬಾರದೆ ಇದ್ದರೆ, ನನ್ನ ಒಡತಿಯು ಸಿಟ್ಟುಮಾಡುತ್ತಾಳೆ. ತಾವು ಬಾರದೆ ಇದ್ದರೆ ಅವಳಿಗೆ ತುಂಬಾ ದುಃಖವಾಗುತ್ತದೆ" ಎಂದಳು.

ಈ ಮಾತು ಆ ಭಿಕ್ಷುವಿನ ಮನಸ್ಸಿನ ಮೇಲೆ ಪರಿಣಾಮ ಮಾಡಲಿಲ್ಲ. ಅವನು ಮುಗುಳು ನಕ್ಕು ಅಲ್ಲಿಂದ ಹೊರಡಲು ನೋಡಿದ.

"ಸ್ವಾಮಿ, ತಾವು ನಮ್ಮ ಭಿಕ್ಷೆಯನ್ನು ತಿರಸ್ಕರಿಸಿ ಹೊರಟರೆ, ಆ ಶಾಕ್ಯಪುತ್ರನ ಆಣೆ ಇದೆ. ನಮ್ಮ ಒಡತಿಯೇ ಬಂದು ಕರೆಯಬೇಕೆಂಬ ಅಪೇಕ್ಷೆ ಇದ್ದರೆ, ಹೋಗಿ ಕರೆತರುತ್ತೇನೆ !" ಎಂದಳು ಆ ದಾಸಿ.

ಈ ಮಾತಿಗೆ ಉತ್ತರ ಕೊಡದೆ ಬೌದ್ಧಭಿಕ್ಷು ಮುಗುಳ್ನಕ್ಕು, ತಲೆಯಲ್ಲಾಡಿಸಿದ. ದಾಸಿಯು ಓಡಿಹೋಗಿ ತನ್ನ ಒಡತಿಗೆ ಎಲ್ಲವನ್ನೂ ನಿವೇದಿಸಿದಳು. ಇದನ್ನು ಕೇಳಿ ರಾಗಿಣಿಗೆ ಆಶ್ಚರ್ಯವಾಯಿತು. ಹಿಂದೆ ಯಾರೂ ಅವಳ ಕೋರಿಕೆಯನ್ನು ಈ ರೀತಿಯಲ್ಲಿ ತಿರಸ್ಕರಿಸಿರಲಿಲ್ಲ. ಇದು ಅವಳಿಗೆ ಹೊಸ ಅನುಭವವಾಗಿತ್ತು. ಈಗ ಸುಮ್ಮನಿದ್ದರೆ, ಆ ಭಿಕ್ಷುವು ಹೊರಟುಹೋಗುವನೆಂದರಿತು ರಾಗಿಣಿಯೇ ಅವನ ಬಳಿಗೆ ಲಗುಬಗೆಯಿಂದ ಹೊರಟು ಬಂದಳು. ಅವಳು ಬಂದು

ವೈಯ್ಯಾರದಿಂದ ಭಿಕ್ಷುವಿಗೆ ವಂದಿಸಿದಳು. ಅವನನ್ನು ನೋಡಿ ಸಮ್ಮೋಹಕರ ವೆನಿಸುವ ನಗೆ ನಕ್ಕಳು; ಕುಡಿನೋಟದ ಮಾಯೆಯನ್ನು ಬೀಸಿದಳು. ನಮಸ್ಕರಿ ಸುವ ನೆಪವಲ್ಲಿ ಸೆರಗನ್ನು ಜಾರಿಸಿ, ಪ್ರೇಮಯಾಚನೆ ಮಾಡಿದಳು. ಇವುಗಳಾ ವುದರಿಂದಲೂ ಉಪಗುಪ್ತನು ವಿಚಲಿತನಾಗಲಿಲ್ಲ. ಅವನು ಗಂಭೀರವಾಗಿ ನಿಂತಿದ್ದ. ತನ್ನ ರೂಪ ಯೌವನಗಳಿಂದ ಯಾರನ್ನು ಬೇಕಾದರೆ ಒಲಿಸಿಕೊಳ್ಳ ಬಲ್ಲೆನೆಂಬ ರಾಗಿಣಿಯ ಅಹಂಕಾರ ಇಳಿಯಿತು. ಅವಳು ಇಷ್ಟು ಸುಲಭವಾದ ಸೋಲನ್ನು ಒಪ್ಪದೆ, ತುಂಟನಗೆ ನಗುತ್ತಾ,

"ಸ್ವಾಮಿನ್, ತಾವು ಯಾರೋ ಈ ನಗರಕ್ಕೆ ಹೊಸಬರಂತೆ ಕಾಣುತ್ತೀರಿ. ಇಲ್ಲದಿದ್ದರೆ ತಮಗೆ ನನ್ನ ಪರಿಚಯವಿರುತ್ತಿತ್ತು" ಎಂದಳು.

"ಹೌದು, ತಾಯಿ. ನಾನು ಇಲ್ಲಿನ ಸಂಘಾರಾಮಕ್ಕೆ ಹೊಸದಾಗಿ ಬಂದಿದ್ದೇನೆ."

"ಇದುವರೆಗೆ ನೀವು ಎಲ್ಲಿದ್ದಿರಿ ?"

"ತಕ್ಷಶಿಲೆಯಲ್ಲಿ."

"ಅಲ್ಲೇನು ಮಾಡುತ್ತಿದ್ದಿರಿ ?"

"ವ್ಯಾಸಂಗ ಮಾಡುತ್ತಿದ್ದೆ. ಅದು ಮುಗಿಯುತ್ತಲೂ ಅಲ್ಲಿನ ಕುಲಪತಿಗಳ ಆಜ್ಞೆಯಂತೆ, ಲೋಕ ಸಂಗ್ರಹಾರ್ಥವಾಗಿ ಪ್ರಯಾಣ ಹೊರಟು ಇಲ್ಲಿನ ಸಂಘಾರಾಮದಲ್ಲಿ ತಂಗಿದ್ದೇನೆ. ತಾವು ಯಾರು ತಾಯಿ ?"

"ನಾನು ಈ ನಗರದಲ್ಲೇ ಶ್ರೇಷ್ಠಳಾದ ಗಣಿಕೆ—ಹೆಸರು ರಾಗಿಣಿ."

"ತಮ್ಮ ಪರಿಚಯವಾದುದಕ್ಕೆ ತುಂಬಾ ಸಂತೋಷ ತಾಯಿ !"

"ತಮ್ಮ ಹೆಸರು ?"

"ಉಪಗುಪ್ತ."

"ಎಂತಹ ಸುಂದರ ಹೆಸರು ! ಅಷ್ಟೇ ಸುಂದರವಾಗಿದ್ದೀರಿ ನೀವು. ನಿಮ್ಮನ್ನು ನೋಡಿದರೆ, ನೀವೆಲ್ಲೋ ರಾಜಪುತ್ರರಾಗಿದ್ದು, ಜೀವನದಲ್ಲಿ ವೈರಾಗ್ಯ ಹುಟ್ಟಿ ಸಂನ್ಯಾಸ ಸ್ವೀಕರಿಸಿರುವಂತೆ ಕಾಣುತ್ತದೆ."

"ಹೌದು ತಾಯಿ ! ನಾನೊಬ್ಬ ಅರಸುಕುವರ. ಬಾಲ್ಯದಲ್ಲೇ ಜೀವನ ದಲ್ಲಿ ವೈರಾಗ್ಯ ಹುಟ್ಟಿ ಗುರುವನ್ನು ಹುಡುಕಿಕೊಂಡು ಹೊರಟು ನಾನು ತಕ್ಷ ಶಿಲೆಗೆ ಬಂದೆ. ಅಲ್ಲಿ ನಾನು ಅರಸುತ್ತಿದ್ದ ಗುರು ನನಗೆ ದೊರೆತರು. ನನ್ನ

ಆಧ್ಯಾತ್ಮದ ಹಸಿವು ಹಿಂಗಿಸಿತು. ಮನಸ್ಸಿನಲ್ಲಿ ಉದಿಸಿದ್ದ ಸಂದೇಹಗಳು ನಿವಾರಣೆಯಾದವು. ನಾನು ಇಹಸಂಸಾರಕ್ಕೆ ತಿಲಾಂಜಲಿಯಿತ್ತು ಬೌದ್ಧಧರ್ಮ ಸ್ವೀಕರಿಸಿ, ಭಿಕ್ಷುವಾದೆ. ಈಗ ದೇಶಾಟನೆಗೆ ಹೊರಟಿದ್ದೇನೆ—ಕಲಿತ ಪಾಠವನ್ನು ಜೀವನದಲ್ಲಿ ಒರೆಹಚ್ಚಿ ನೋಡಲು !"

"ನಿಮ್ಮನ್ನು ನೋಡುತ್ತಲೇ ನಾನು ನೀವು ಅಸಾಧಾರಣ ವ್ಯಕ್ತಿಗಳೆಂದು ಅರಿತೆ. ನನ್ನ ಊಹೆ ಸುಳ್ಳಾಗಲಿಲ್ಲ. ಭಗವಾನ್, ತಾವು ನನ್ನ ಬಡ ಕುಟೀರಕ್ಕೆ ಆಗಮಿಸಬೇಕು. ತಮ್ಮ ಪಾದಧೂಳಿಯಿಂದ ನನ್ನ ಮನೆ ಪವಿತ್ರವಾಗಲಿ."

"ಅದು ತುಂಬಾ ದೊಡ್ಡ ಮಾತು ತಾಯಿ. ನಾನು ಒಬ್ಬ ಕ್ಷುದ್ರವ್ಯಕ್ತಿ. ನನ್ನಂತಹ ಹುಲುಮನುಜನಿಗೆ ಶರಣು ಬರುವುದಕ್ಕಿಂತ ಭಗವಾನ್ ಬುದ್ಧನಿಗೆ ಶರಣು ಬಂದರೆ ಸರ್ವತಾಪಗಳೂ ಪರಿಹಾರವಾಗುತ್ತವೆ."

"ಸ್ವಾಮಿ, ನಾನು ತಮ್ಮನ್ನು ಬಡಕುಟೀರಕ್ಕೆ ಆಹ್ವಾನಿಸುತ್ತಿರುವುದು ಸಂನ್ಯಾಸ ಸ್ವೀಕರಿಸುವುದಕ್ಕಲ್ಲ—ತಮ್ಮ ಪಾದಸೇವೆ ಮಾಡಲು !" ಎಂದು ನಕ್ಕಳು.

"ತಾಯಿ, ಎಂತಹ ಮಾತು ! ಇನ್ನೊಮ್ಮೆ ಇಂತಹ ಮಾತು ಆಡದಿರಿ !" ಎಂದು ಉಪಗುಪ್ತ ಕಿವಿ ಮುಚ್ಚಿಕೊಂಡನು.

"ಸ್ವಾಮಿ, ತಾವು ಈ ಊರಿಗೆ ಹೊಸಬರು. ತಮಗೆ ರಾಗಿಣಿಯ ಸಂಗತಿ ತಿಳಿಯದು. ತಿಳಿದಿದ್ದರೆ ನನ್ನನ್ನು ಈ ರೀತಿಯಲ್ಲಿ ತಿರಸ್ಕರಿಸುತ್ತಿರಲಿಲ್ಲ. ನನ್ನನ್ನು ತಾವು ಸಾಮಾನ್ಯ ಗಣಿಕೆ ಎಂದು ತಿಳಿಯಬಾರದು. ಈ ರಾಗಿಣಿ, ಇದುವರೆಗೂ ಯಾರ ಮುಂದೆಯೂ ಹೀಗೆ ನಿಂತು ಪ್ರಣಯಭಿಕ್ಷೆ ಬೇಡಿರಲಿಲ್ಲ. ಆ ಭಾಗ್ಯ ತಮ್ಮದು. ತಾವು ಈ ಹೂವನ್ನು ತಿರಸ್ಕರಿಸಬಾರದು. ಅದನ್ನು ಆಘ್ರಾಣಿಸಿ ಮುಂದೆ ಹೋಗಬೇಕು !" ಎಂದು ದೈನ್ಯವಾಗಿ ಪ್ರಾರ್ಥಿಸಿದಳು.

"ತಾಯಿ, ನೀವು ನನ್ನಲ್ಲಿ ಎಂತಹ ಪ್ರಾರ್ಥನೆ ಮಾಡುತ್ತಿದ್ದೀರಿ. ತಿಳಿದೂ ತಿಳಿದೂ ನನ್ನನ್ನು ಇಂತಹ ಪಾಪದ ಪಂಕಕ್ಕೆ ಎಳೆಯುತ್ತಿರುವಿರಾ ? ಇದರಿಂದ ತಮಗೆ ಬರುವ ಲಾಭವಾದರೂ ಏನು ?"

"ಸ್ವಾಮಿ, ಇಲ್ಲಿ ಲಾಭನಷ್ಟಗಳ ಪ್ರಶ್ನೆಯಿಲ್ಲ. ಕೇವಲ ಸಮರ್ಪಣೆ ಅಷ್ಟೆ."

"ಅದು ಏನಿದ್ದರೂ, ಭಗವಾನನಿಗೆ ಸಮರ್ಪಿತವಾಗಲಿ ತಾಯಿ."

"ಹಾಗಾದರೆ ನೀವು ನನ್ನನ್ನು ತಿರಸ್ಕರಿಸುವಿರಾ ?" ಕಳವಳದಿಂದ ಕೇಳಿದಳು.

"ನಾನು ಯಾರನ್ನೂ ತಿರಸ್ಕರಿಸುವುದಿಲ್ಲ ತಾಯಿ. ಆದರೆ ಪಾಪದ ದಾರಿ ತುಳಿದ ಪತಿತರನ್ನು ಭಗವಾನರ ಮಾರ್ಗಕ್ಕೆ ಹಚ್ಚುತ್ತಿದ್ದೇನೆ, ಅಷ್ಟೆ."

"ನಿಮ್ಮ ಧರ್ಮೋಪದೇಶ ನನಗೆ ಬೇಕಿಲ್ಲ."

"ತಾಯಿ, ನಾನು ಕಡ್ಡಾಯವಾಗಿ ಯಾರಿಗೂ ಧರ್ಮೋಪದೇಶ ಮಾಡುವುದಿಲ್ಲ. ಸದ್ಧರ್ಮವನ್ನು ಅರಿಯಲು, ಅರಿತುದನ್ನು ಅನುಷ್ಠಾನಕ್ಕೆ ತರಲು, ಜನ್ಮಾಂತರದ ಸಂಸ್ಕಾರ ಅಗತ್ಯ ತಾಯಿ. ಇದಕ್ಕೆ ಬೋಧಿಸತ್ವನ ವಿಷಯವೇ ಸಾಕ್ಷಿ. ಆ ಮಹಾಜೀವ ಬುದ್ಧನಾಗಲು ಎಷ್ಟು ಜನ್ಮಾಂತರಗಳನ್ನು ಪಡೆಯಬೇಕಾಯಿತೆಂಬುದನ್ನು ತಿಳಿಸುವ ಜಾತಕದ ಕತೆಗಳನ್ನು ತಾವು ಕೇಳಿಲ್ಲವೇ ತಾಯಿ."

"ಸ್ವಾಮಿ, ನನಗೆ ನಿಮ್ಮ ಧರ್ಮೋಪದೇಶ ಬೇಕಿಲ್ಲ—ನನಗೆ ಬೇಕಾಗಿರುವುದು, ಕಾಮದಗ್ಧವಾಗಿರುವ ಈ ದೇಹಕ್ಕೆ ಪ್ರೇಮಸಂಜೀವನಿ. ತಮ್ಮ ದರ್ಶನ ಮಾತ್ರದಿಂದಲೇ ಪ್ರಣಯೋನ್ಮಾದದಿಂದ ಕಂಗೆಟ್ಟಿರುವ ಈ ದೇಹ ಮನಸ್ಸುಗಳಿಗೆ ತಮ್ಮ ಸಹವಾಸದ ಅಮೃತವರ್ಷ. ತಾವು ನನ್ನನ್ನು ತಿರಸ್ಕರಿಸಬಾರದು. ಸೆರಗೊಡ್ಡಿ ಬೇಡುತ್ತೇನೆ. ತಾವು ತಿರಸ್ಕರಿಸಿದರೆ, ನನ್ನ ಪ್ರಾಣ ಹಾರುತ್ತದೆ. ತಾವು ನನಗಾಗಿ ಕೃಪೆಮಾಡಿ, ಉದ್ಧರಿಸಬೇಕು."

"ತಾಯಿ, ತಮಗೆ ಉಪಗುಪ್ತನ ವಿಷಯ ತಿಳಿದಿರಲಾರದು. ಹಿಂದೊಮ್ಮೆ ಈ ಕ್ಷಣಿಕಸುಖವನ್ನೇ ನಿತ್ಯವೆಂದು ಅವನು ತಿಳಿದಿದ್ದ ಕಾಲವೊಂದಿತ್ತು. ಆದರೆ ಇಂದು ಆ ಬಯಕೆಗಳೆಲ್ಲವೂ ಸುಟ್ಟು ಭಸ್ಮವಾಗಿವೆ. ನನ್ನ ಮನಸ್ಸಿನಲ್ಲಿ ಈಗ ಯಾವುದೇ ಆಸೆ ಆಕಾಂಕ್ಷೆಗಳಿಲ್ಲ. ಆಸೆಯೇ ದುಃಖಕ್ಕೆ ಮೂಲವೆಂಬುದನ್ನು ತಿಳಿದುಕೊಂಡೇ ಈ ಬಾಳನ್ನು ಹುತಾತ್ಮರ ಉದ್ಧಾರಕ್ಕೆ ಮೀಸಲಿಟ್ಟಿದ್ದೇನೆ. ಪಾಪಿಗಳನ್ನು ಅವರ ಪಾಪಕೂಪದಿಂದ ಉದ್ಧರಿಸಲು ಹೊರಟ್ಟಿದ್ದೇನೆ. ನೀವು ನನ್ನನ್ನು ಮತ್ತೆ ಪಾಪಪಂಕಕ್ಕೆ ಎಳೆಯುವಿರಾ ? ಇಲ್ಲ ತಾಯಿ. ಉಪಗುಪ್ತನೆಂದಿಗೂ ಇಂತಹ ಹೇಯಕಾರ್ಯಕ್ಕೆ ಮನಸ್ಸು ಕೊಡಲಾರ. ಈಗ ನಿಮಗೆ ಹೇಳಬೇಕೆಂದಿರುವ ಒಂದು ಮಾತಿದೆ: ಮನಸ್ಸು ಪಕ್ವವಾಗದೆ, ಮಾಡುವ ಉಪದೇಶದಿಂದ ಯಾವ ಕಾರ್ಯ ಸಾಧಿಸುವುದಿಲ್ಲ. ಇಂದು ರೂಪ, ಯೌವ್ವನ

ಗಳ ಮದದಲ್ಲಿರುವ ತಮಗೆ ನನ್ನ ಮಾತಿನ ಮಹತ್ವ ತಿಳಿಯುವುದಿಲ್ಲ. ಆದರೂ ನಿಮ್ಮ ದರ್ಶನ ಮಾತ್ರದಿಂದ, ಒಳಗಿನ ಅಧ್ಯಾತ್ಮದ ಹಸಿವನ್ನು ಗುರುತಿಸಿಕೊಂಡಿದ್ದೇನೆ. ಅದು ಬೆಳೆದಾಗ, ಅದನ್ನು ಹಿಂಗಿಸಲು ನಾನು ಎಲ್ಲಿದ್ದರೂ ಬರುತ್ತೇನೆ. ಆಗ ನಾನು ನಿಮ್ಮನ್ನು ಸೇವಿಸುತ್ತೇನೆ. ಈಗ ಅದಕ್ಕೆ ಕಾಲ ಪಕ್ವವಾಗಿಲ್ಲ" ಎಂದು ಹೇಳಿ ರಾಗಿಣಿಯಿಂದ ಭಿಕ್ಷೆಯನ್ನು ಸ್ವೀಕರಿಸದೆ, ಅವಳನ್ನು ಹಿಂದಿರುಗಿ ನೋಡದೆ ಹೊರಟುಹೋದ. ಅವನು ಹೊರಟುಹೋದರೂ, ರಾಗಿಣಿ ಮಾತ್ರ ಜಡವಿಗ್ರಹವಾಗಿ ನಿಂತೇ ಇದ್ದಳು. ಉಪಗುಪ್ತ ಕಣ್ಮರೆಯಾದಾಗ "ಅಯ್ಯೋ ಅವರು ಹೊರಟು ಹೋದರೇ" ಎಂದು ಚೀರಿ ನೆಲಕ್ಕೆ ನಿಶ್ಚೇಷ್ಟಿತೆಯಾಗಿ ಬಿದ್ದಳು.

ದಾಸಿಯರು ಅವಳನ್ನು ಹೊತ್ತುಕೊಂಡು ಮನೆಗೆ ಬಂದು ಶೈತ್ಯೋಪಚಾರ ಮಾಡಿದ ಎಷ್ಟೋ ಹೊತ್ತಿನಮೇಲೆ ಅವಳಿಗೆ ಪ್ರಜ್ಞೆ ಮರುಕಳಿಸಿತು.

"ಅವರು ಹೋಗಿಬಿಟ್ಟರೆ? ನನ್ನನ್ನು ತಿರಸ್ಕರಿಸಿ ಹೋಗಿಬಿಟ್ಟರೆ?" ಎಂದು ರಾಗಿಣಿ ಉದ್ಗಾರ ತೆಗೆದಳು.

ಅಂದು ಅವಳ ಜೀವನದಲ್ಲಿ ಉಂಟಾಗಿದ್ದ ಪರಾಭವದಿಂದ ಅವಳು ಚೇತರಿಸಿಕೊಳ್ಳಲಾಗಲಿಲ್ಲ. ಅದು ಅವಳ ಬಾಳಿನಲ್ಲಿ ಮರೆಯಲಾಗದ ನೆನಪಾಯಿತು.

ಕಾಲಚಕ್ರ ಉರುಳಿತು. ಕನ್ಯಾಕುಬ್ಜದಲ್ಲೇ ಶ್ರೀಮಂತಳೂ, ರೂಪವತಿಯೂ ಆಗಿದ್ದ ರಾಗಿಣಿ ಇಂದು ದೀನಳೂ ದರಿದ್ರಳೂ ಆಗಿದ್ದ ಗಣಿಕೆಯಾಗಿದ್ದಳು. ಅವಳು ತನ್ನ ಸಂಪತ್ತಿನ ಒಡತಿಯಾಗಿ ಉಳಿದಿದ್ದರೆ, ಈಗ ಯಾರಲ್ಲೂ ಕೈಚಾಚುವ ಪ್ರಸಂಗ ಬರುತ್ತಿರಲಿಲ್ಲ. ಆದರೆ ದೈವೇಚ್ಛೆ ಹಾಗಿರಲಿಲ್ಲ. ಅವಳ ಕಾರಣದಿಂದ ಮನೆಮಠಗಳನ್ನು ಕಳೆದುಕೊಂಡಿದ್ದ ಒಬ್ಬ ಪ್ರಣಯಿ, ಅವಳ ಮೇಲೆ ಸೇಡು ತೀರಿಸಿಕೊಳ್ಳಲು ಕಳ್ಳರನ್ನು ಅವಳ ಮೇಲೆ ಬಿಟ್ಟು ನಡುರಾತ್ರಿಯಲ್ಲಿ ಅವಳ ಸರ್ವಸ್ವವನ್ನೆಲ್ಲಾ ಸೂರೆ ಮಾಡಿಸಿ ಅವಳನ್ನು ನಿರ್ಗತಿಕಳಾಗಿ ಮಾಡಿದ್ದನು. ಹಿಂದಣ ರಾತ್ರಿ ಶ್ರೀಮಂತಳಾಗಿದ್ದ ರಾಗಿಣಿ ಬೆಳಿಗ್ಗೆ ದಾರಿದ್ರ್ಯವನ್ನು ಅಪ್ಪಿದಳು. ಅವಳು ದೊರೆಗೆ ದೂರು ಕೊಟ್ಟಳು. ಆದರೆ ಕಳೆದುಕೊಂಡ ನಗನಾಣ್ಯಗಳು ಕೈವಶವಾಗಲಿಲ್ಲ.

ಅವಳು ತನ್ನ ಮೊದಲಿನ ರೂಪಯೌವ್ವನಗಳಿಂದ ಜನರನ್ನು ಆಕರ್ಷಿಸಲು

ಸಾಧ್ಯವಿರಲಿಲ್ಲ. ಆವಳ ಕೈಲಿ ಅಪಮಾನ ಹೊಂದಿದ ಅವಳ ವೃತ್ತಿಬಾಂಧವರೂ ಅವಳನ್ನು ಹೊರಕ್ಕೆ ಹಾಕಿದ್ದರು. ಎಲ್ಲೆಡೆಯಲ್ಲೂ ದ್ವೇಷಿಗಳು, ಎಲ್ಲೆಡೆಯಲ್ಲೂ ಭರ್ತ್ಸನೆ, ಎಲ್ಲೆಡೆಯಲ್ಲೂ ಹಿಡಿಕೂಳಿಗಾಗಿ ಅಪಮಾನ. ಈ ಹೇಯಬಾಳನ್ನು ಮುಗಿಸಲಾರದೆ, ಜೀವನದ ಹೊರೆಹೊತ್ತು ಹೊರಟ ಯಾತ್ರಿಕಳಂತೆ ಅವಳು ನಿಂತಿದ್ದಳು. ಅವಳ ಬಗ್ಗೆ ಯಾರಿಗೂ ಕರುಣೆ ಇರಲಿಲ್ಲ. ಯಾರೂ ಅವಳ ಬಗ್ಗೆ ಸಹಾನುಭೂತಿ ತೋರಿಸುತ್ತಿರಲಿಲ್ಲ.ಎಲ್ಲರಿಂದ ತಿರಸ್ಕೃತಳಾಗಿ, ಅಪಮಾನಿತ ಳಾಗಿ, ಹಿಡಿ ಕೂಳಿಗಾಗಿ ಅನ್ಯರನ್ನು ಆಶ್ರಯಿಸುವ ಈ ಕಾಲದಲ್ಲಿ ಅವಳು ಹಿಂದೆ ನಡೆಸಿದ ಸ್ವೈರವೃತ್ತಿಯಿಂದಾಗಿ, ವಿಚಿತ್ರವಾದ ಬೇನೆಗೆ ಬಲಿಯಾದಳು. ಈಗ ಅವಳನ್ನು ವಿಚಾರಿಸಿ, ವೈದ್ಯೋಪಚಾರ ಮಾಡುವವರು ಇಲ್ಲವಾಯಿತು. ತಾಯಿಯ ಬಳಿ ಕುಳಿತು ಕೈಯಲ್ಲಿ ಮುಖವಿಟ್ಟು, ರೋದಿಸುವ ಹನ್ನೆರಡು ವರ್ಷದ ಬಾಲೆ ನಾಗಶ್ರೀಯ ಹೊರತು ಆ ಮಹಾನಗರದಲ್ಲಿ ಅವಳಿಗಾಗಿ ಶೋಕಿಸುವವರು ಯಾರೂ ಇರಲಿಲ್ಲ.

ಇಂತಹ ದಾರುಣವಾದ ಸಮಯದಲ್ಲಿ, ಉಪಗುಪ್ತ ಅವಳನ್ನು ಹುಡುಕಿ ಕೊಂಡು ಬಂದಿದ್ದ. ಅವನು ಈ ಹತ್ತು ವರ್ಷಗಳ ಅವಧಿಯಲ್ಲಿ ಅನೇಕ ನಾಡು ಗಳನ್ನು ಸುತ್ತಿ ಮತ್ತೆ ಕನ್ಯಾಕುಬ್ಜಕ್ಕೆ ಬಂದಿದ್ದ. ಅವನು ಜೀವನದ ಏರು ಪೇರುಗಳನ್ನು ನೋಡಿದ್ದ; ಕಷ್ಟ ಸುಖಗಳನ್ನು ಕಂಡಿದ್ದ. ತಾನು ತಕ್ಷಶಿಲೆ ಯಲ್ಲಿ ಗುರುಗಳಡಿಯಲ್ಲಿ ಕಲಿತಿದ್ದ ಪಾಠ–ಎಲ್ಲ ದುಃಖಕ್ಕೂ ಆಸೆಯೇ ಮೂಲ– ಎಂಬುದನ್ನು ಜೀವನದಲ್ಲಿ ಒರೆ ಹಚ್ಚಿನೋಡಿ, ಅನುಭವದ ಮೂಸೆಯಲ್ಲಿ ಪರಿ ಷ್ಕರಿಸಿದ್ದ. ಅದರ ಅನುಭವಸಾರವನ್ನು ಇಂದು ರಾಗಿಣಿಗೆ ನೀಡಲು ಅವಳನ್ನು ಹುಡುಕಿಕೊಂಡು ಬಂದಿದ್ದ.

ಈಗಿದ್ದ ರಾಗಿಣಿಗೂ ಅಂದಿನ ರಾಗಿಣಿಗೂ ಅಜಗಜಾಂತರ ವ್ಯತ್ಯಾಸವಿತ್ತು. ಆಗ ಅವಳು ಅಧಿಕಾರ, ಸಂಪತ್ತು, ರೂಪ, ಯೌವ್ವನಗಳ ಮದದಲ್ಲಿ ಅಂಧ ಳಾಗಿದ್ದಳು. ಈಗ ಅವಳು ದುಃಖ ದಾರಿದ್ರ್ಯಗಳಲ್ಲಿ ಜರ್ಝರಿಸಿ ವೃದ್ಧಾಪ್ಯ ರೋಗರುಜಿನಗಳಿಂದ ತೊಳಲಿ, ಅಸ್ಥಿಪಂಜರವಾಗಿದ್ದಳು. ತನ್ನ ಅನುಭವಾ ಮೃತ ಹೇಳಲು ಇದೀಗ ತಕ್ಕ ಸಮಯವೆಂದು ಅರಿತ ಉಪಗುಪ್ತ. ರಾಗಿಣಿಯ ಹೊಲಸು ನಾರುತ್ತಿದ್ದ ಮನೆಯನ್ನು ತಾನಾಗಿ ಪ್ರವೇಶಿಸಿ, ಕೀವು ರಕ್ತಗಳಿಂದ, ರೂಪಗೆಟ್ಟ ರಾಗಿಣಿಯ ಮೈಯನ್ನು ಪ್ರೀತಿಯಿಂದ ನೇವರಿಸಿ, "ತಾಯಿ, ಕಣ್ಣು

ತೆರೆ. ನೋಡು, ನಾನಾರೆಂಬುದು ತಿಳಿಯಿತೆ?" ಎಂದು ಪ್ರೀತಿಯಿಂದ ಕೇಳಿದನು.

ರಾಗಿಣಿ ಮರಣೋತ್ಕ್ರಮಣ ಸ್ಥಿತಿಯಲ್ಲಿದ್ದವಳು, ಉಪಗುಪ್ತನ ಅಮೃತ ಸದೃಶ ನುಡಿಯನ್ನು ಕೇಳಿ ಕಣ್ತೆರೆದಳು.

"ಭಗವಾನ್, ತಾವು....!"

"ಹೌದು ರಾಗಿಣಿ. ನಾನು ಉಪಗುಪ್ತ. ಆ ದಿನ ನೀನು ನನ್ನನ್ನು ಮನೆಗೆ ಬರಲು ಆಹ್ವಾನಿಸಿದೆ. ಇಂದು ಅದನ್ನು ಮನ್ನಿಸಿ ಇಲ್ಲಿಗೆ ಬಂದಿದ್ದೇನೆ. ಎಲ್ಲಿ ಕಣ್ಣು ತೆರೆ. ನನ್ನನ್ನು ಚೆನ್ನಾಗಿ ನೋಡು.

"ಭಗವಾನ್, ತಾವು ಉಪಗುಪ್ತರೇ! ಅಯ್ಯೊ, ನಾನು ಎಂತಹ ಪಾಪಿ. ತಮ್ಮಂತಹ ವ್ಯಕ್ತಿಗಳನ್ನು ಕಾಮುಕ ದೃಷ್ಟಿಯಿಂದ ನೋಡಿದೆ. ನನಗೆ ದೇವರು ತಕ್ಕ ಶಿಕ್ಷೆ ಕೊಟ್ಟಿದ್ದಾನೆ. ಇನ್ನು ಸಾಕು ಸ್ವಾಮಿ, ಈ ದೇಹ ಇದುವರೆಗೆ ಅನುಭವಿಸಿದ, ನರಕಯಾತನೆ ಸಾಕು. ನನ್ನನ್ನು ಈ ಯಾತನೆಯಿಂದ ಪಾರು ಮಾಡಿ, ಪುಣ್ಯ ಕಟ್ಟಿಕೊಳ್ಳಿ ತಂದೆ!" ರಾಗಿಣಿ ನೋವಿನ ಧ್ವನಿಯಲ್ಲಿ ಚೀರಿದಳು. ಅವಳಿಗೆ ಇಷ್ಟೆಲ್ಲ ಹೇಳಲು ಶಕ್ತಿ ಎಲ್ಲಿತ್ತೋ ಎಂದು ನಾಗಶ್ರೀ ಅಚ್ಚರಿಪಟ್ಟಳು.

"ಅಮ್ಮ, ಮಾತನಾಡಿ ಆಯಾಸಪಟ್ಟುಕೊಳ್ಳಬೇಡ" ಎಂದು ಅವಳು ತಾಯಿಯನ್ನು ಸಮಾಧಾನಗೊಳಿಸಿದಳು.

"ಕಂದ ನಾಗಶ್ರೀ! ಈಗ ನೀನು ನನ್ನನ್ನು ತಡೆಯಬಾರದು. ನನ್ನ ಬಾಳಿನ ಕೊನೆಯ ಅಂಕ ಇದು. ಇದರಲ್ಲಿ ನನ್ನ ಪಾತ್ರವನ್ನು ನಾನು ಯಶಸ್ವಿಯಾಗಿ ಅಭಿನಯಿಸಲೇಬೇಕು. ನೀನು ನನ್ನನ್ನು ತಡೆಯಬಾರದು. ಸ್ವಾಮಿ, ನನ್ನ ಮಾತನ್ನು ಕರುಣೆಯಿಟ್ಟು ಕೇಳಿ. ಅಂದು ರೂಪಯೌವ್ವನ, ಅಧಿಕಾರ ಶ್ರೀಮಂತಿಕೆಗಳ ಮದದಲ್ಲಿ ನಾನು ಸೊಕ್ಕಿ ಮೆರೆದೆ. ಈ ದೇಹ ಸುಖವನ್ನೇ ಅಮರವೆಂದು ತಿಳಿದು ತಮ್ಮಂತಹ ತಪಸ್ವಿಗಳನ್ನು ತಿರಸ್ಕಾರದಿಂದ ಕಂಡೆ. ತಮ್ಮ ಉಪದೇಶಾಮೃತಕ್ಕೆ ಕಿವಿಗೊಡದಾದೆ. ಈಗ ಅದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಿದ್ದೇನೆ. ಯಾವ ದೇಹ ಸುಖದ ಮಂದಿರವಾಗಿತ್ತೋ ಅದೇ ಇಂದು ಯಾತನೆಯ ನರಕವಾಗಿದೆ. ಅಂದು ಅದರ ಸಲುವಾಗಿ ನಾನು ಮಾಡಬಾರದ ಕೆಲಸ ಮಾಡಿದೆ. ನಾನು ಒಡ್ಡಿದ ಬಲೆಗೆ ಬಿದ್ದು, ಈ ದೇಹ ಕೊಡುವ ಸುಖ

ವನ್ನು ಬಯಸಿ, ನಾನು ಬಯಸಿದ ಬೆಲೆಯನ್ನು ಕೊಟ್ಟ ಎಷ್ಟೊಂದು ಜನರ ಸಂಸಾರ ನನ್ನಿಂದ ಹಾಳಾಯಿತೆಂಬುದನ್ನು ನೆನೆದರೆ, ನನಗೆ ಬಂದ ಶಿಕ್ಷೆ ಸಾಲ ದೆನಿಸುತ್ತದೆ. ಆದರೆ, ನಾನು ಇಂದು ಈ ದೇಹದ ಶಿಕ್ಷೆಗಿಂತಲೂ, ಅಂತರಂಗದ ಶಿಕ್ಷೆಯಿಂದ ನೊಂದಿದ್ದೇನೆ. ತಾವು ಅಂದು ನನ್ನ ಮನೆಯ ಬಾಗಿಲಿಗೆ ಬಂದು, ದೇಹದ ಅನಿಶ್ಚತೆಯ ಬಗ್ಗೆ ಬೋಧಿಸಿದಿರಿ. ನಾನು ತಮ್ಮ ಅಮೃತವಾಣಿಯನ್ನು ತಿರಸ್ಕರಿಸಿದೆ. ಇಂದು ತಾವು ಸಾಕ್ಷಾತ್ ದೈವದಂತೆ ನನ್ನ ಉದ್ಧಾರಕ್ಕೆ ಇಲ್ಲಿಗೆ ಆಗಮಿಸಿದ್ದೀರಿ. ನಾನು ಈಗ ತಮ್ಮ ಪಾದಗಳ ಮೇಲೆ ತಲೆ ಇಟ್ಟು ನಿಶ್ಚಿಂತೆ ಯಿಂದ ಪ್ರಾಣಬಿಡಬಲ್ಲೆ. ಈ ಮುಗ್ಧ ಮಗು ನಾಗಶ್ರೀಯನ್ನು ತಮ್ಮ ಉಡಿಗೆ ಹಾಕಿ ನಿಶ್ಚಿಂತೆಯಿಂದ ಸಾಯಬಲ್ಲೆ" ಎಂದು ಹೇಳುತ್ತಿದ್ದಂತೆ, ಗಂಟಲು ಕಟ್ಟಿತು. ಕಣ್ಣೀರು ಧಾರೆಯಾಗಿ ಹರಿಯಿತು. ಅವಳು ಹಾಗೇ ಕಣ್ಣು ಮುಚ್ಚಿದಳು. ಇದನ್ನೆಲ್ಲಾ ಮೂಕವಾಗಿ ನೋಡುತ್ತಿದ್ದ ನಾಗಶ್ರೀ ಅಮ್ಮಾ ಎಂದು ಚೀತ್ಕಾರಮಾಡಿದಳು. ಆದರೆ ರಾಗಿಣಿ ಮಗಳ ಕರೆ ಕೇಳದೆ ಇದ್ದ ಲೋಕಕ್ಕೆ, ಸುಖದುಃಖಗಳು ಇಲ್ಲದೇ ಇದ್ದ ಲೋಕಕ್ಕೆ ಹೊರಟುಹೋಗಿದ್ದಳು. "ಅಯ್ಯೋ, ಅಮ್ಮಾ!" ಎಂದು ನಾಗಶ್ರೀ ಉದ್ಗಾರ ತೆಗೆದು ತಾಯಿಯ ದೇಹದ ಮೇಲೆ ತಲೆ ಇಟ್ಟು ಅತ್ತಳು.

"ನೊಂದ ಜೀವ ತಣ್ಣಗಾಯಿತು ! ಏಳು ಮಗಳೇ. ಹಿಂದಿರುಗಿ ಬಾರದ ತಾಯಿಗಾಗಿ ಅತ್ತು ಕರೆಯುವುದರಲ್ಲಿ ಪ್ರಯೋಜನವಿಲ್ಲ. ಎಲ್ಲ ಸುಖದುಃಖ ಗಳನ್ನು ಭಗವಾನ್ ಬುದ್ಧನ ಪಾದಪದ್ಮಗಳಲ್ಲಿ ಅರ್ಪಿಸಿ, ಜೀವಕ್ಕೆ ಶಾಂತಿ ಪಡೆ ತಾಯಿ !" ಎಂದು ಹೇಳಿ ಉಪಗುಪ್ತನು ನಾಗಶ್ರೀಯ ತಲೆಯನ್ನು ಪ್ರೀತಿ ಯಿಂದ ಸವರಿ, ದುಃಖಿಸುತ್ತಿದ್ದ ನಾಗಶ್ರೀಯನ್ನು ಸಂತೈಸಿದನು.

"ಸ್ವಾಮಿ, ಈಗ ನನಗೆ ಯಾರು ಗತಿ ? ನಾನೆಲ್ಲಿಗೆ ಹೋಗಲಿ !" ಎಂದು ನಾಗಶ್ರೀ ಉದ್ಗರಿಸಿದಳು.

"ಎಲ್ಲ ಜೀವರಾಶಿಗಳನ್ನು ರಕ್ಷಿಸುವ ದೈವವೇ ನಿನ್ನನ್ನು ರಕ್ಷಿಸುತ್ತದೆ, ಮಗಳೇ. ನೀನು ಆ ಬಗ್ಗೆ ಆತಂಕಪಡಬೇಡ. ನಿನ್ನ ಜೀವವನ್ನು ಭಗವದರ್ಪಣ ಮಾಡಿ, ಸುಖದುಃಖಗಳನ್ನು ಅವನ ಉಡಿಗೆ ಹಾಕು. ಅವನ ಇಚ್ಛೆಯಂತೆ ನಡೆ ! ಇದರಿಂದ ನಿನಗೆ ಕಲ್ಯಾಣವಾಗುತ್ತದೆ ಮಗಳೆ !" ಎಂದು ಹೇಳಿ ಮೆಲ್ಲನೆ ಆವಳ ಕಿವಿಯಲ್ಲಿ 'ಬುದ್ಧಂ ಶರಣಂ ಗಚ್ಛಾಮಿ' ಎಂಬ ದಿವ್ಯ ಮಂತ್ರವನ್ನು

ಉಪದೇಶಿಸಿದನು.

ಅದನ್ನು ನಾಗಶ್ರೀ ತಪ್ಪಿಲ್ಲದೆಯೇ ಪುನರುಚ್ಚರಿಸಿದಳು. ಈ ಮಂತ್ರ ಪಠಿಸುತ್ತಿದ್ದಂತೆ, ಅವಳ ಆತ್ಮದಪಕ್ಷಿ ದೇಹಬಂಧನವನ್ನು ಕಳೆದುಕೊಂಡು ದೂರ ಹೋದಂತೆ, ಮನಸ್ಸಿನ ಆವೇಗವೆಲ್ಲ ಕರಗಿ, ಯಾವುದೋ ಶಾಂತಿ ಮನೆಮಾಡಿ ಕೊಂಡಂತೆ ಭಾಸವಾಯಿತು. ಅವಳು ಭಿಕ್ಷು ಉಪಗುಪ್ತನನ್ನು ಹಿಂಬಾಲಿಸಿದಳು.

ಉಪಗುಪ್ತನು ಅವಳನ್ನು ಕರೆದುಕೊಂಡು ನೇರ ಹರ್ಷವರ್ಧನನ ರಾಜಾಂತಃಪುರಕ್ಕೆ ಬಂದನು. ಅಲ್ಲಿದ್ದ ಸೇವಕರ ಮೂಲಕ ರಾಜ್ಯಶ್ರೀದೇವಿಗೆ ಸುದ್ದಿಯನ್ನು ಮುಟ್ಟಿಸಿದನು. ಮಹಾರಾಜ್ಞಿ ರಾಜ್ಯಶ್ರೀದೇವಿಯು ಮಹಾ ರಾಣಿಯಾದರೂ ಆಡಂಬರ ರಹಿತವಾದ ಜೀವನ ನಡೆಸುತ್ತಿದ್ದಳು. ಆಕೆ ನೋಟಕ್ಕೆ ಒಬ್ಬ ತಪಸ್ವಿನಿಯಂತೆ ಕಾಣುತ್ತಿದ್ದಳು. ರಾಜ್ಯಶ್ರೀ ಬಂದವಳೇ ಉಪಗುಪ್ತನಿಗೆ ನಮಸ್ಕರಿಸಿ,

"ಭಗವಾನ್, ನನ್ನಿಂದ ತಮಗೆ ಯಾವ ಕೆಲಸವಾಗಬೇಕು. ಆಜ್ಞಾಪಿ ಸಿರಿ !" ಎಂದಳು.

ಉಪಗುಪ್ತನು ನಾಗಶ್ರೀಯ ಕರುಣಕತೆಯನ್ನು ಆದ್ಯಂತವಾಗಿ ಹೇಳಿ, "ತಾಯಿ, ಈ ಮಗು ತಾಯಿ ಇಲ್ಲದ ತಬ್ಬಲಿ. ಇನ್ನು ಮೇಲೆ ನೀವೇ ಇವಳ ತಾಯಿ ತಂದೆ, ಬಂಧು ಬಳಗ. ಅವಳನ್ನು ಪೋಷಿಸುವ ಭಾರ ನಾಡಿನ ತಾಯಿಯಾದ ತಮಗೆ ಹೊರಿಸುತ್ತಿದ್ದೇನೆ. ಈ ಕಂದನನ್ನು ತಮ್ಮ ಉಡಿಗೆ ಹಾಕುತ್ತಿದ್ದೇನೆ" ಎಂದು ಹೇಳಿದನು.

ಈ ಮಾತು ಕೇಳಿ ಮಹಾರಾಣಿ ರಾಜ್ಯಶ್ರೀದೇವಿ,

"ಭಗವಾನ್, ಈ ಮಗು ದೈವಾನುಗ್ರಹದಿಂದ ದೊರೆತಿದೆ. ಅವಳ ಬಗ್ಗೆ ತಾವು ಚಿಂತಿಸಬಾರದು. ಈ ಗಳಿಗೆಯಿಂದ ಅವಳು ನಮ್ಮ ಮಗಳು" ಎಂದು ಹೇಳಿದಳು.

"ಮಗು, ನಿನ್ನ ತಾಯಿಗೆ ನಮಸ್ಕರಿಸು ಕಂದ!" ಎಂದು ಉಪಗುಪ್ತ ನಾಗಶ್ರೀಗೆ ಹೇಳಿದಾಗ, ಅವಳು ಎಳೆಯ ಮಗುವಿನಂತೆ ಅಳುತ್ತಾ, ರಾಜ್ಯಶ್ರೀಯ ಕಾಲುಗಳ ಮೇಲೆ ಬಿದ್ದಳು. ಅವಳನ್ನು ಮೇಲಕ್ಕೆತ್ತಿ, ಪ್ರೀತಿಯಿಂದ ಆಲಂಗಿ ಸುತ್ತಾ, ರಾಜ್ಯಶ್ರೀ,

"ಮಗು ! ಇದುವರೆಗೆ ಆದುದು ದುಃಸ್ವಪ್ನವೆಂದು ತಿಳಿದು, ಮರೆತು

ಬಿಡು. ಈ ಗಳಿಗೆಯಿಂದ ನೀನು ವೇಶ್ಯಾಪುತ್ರಿಯಲ್ಲ—ನನ್ನ ಸಾಕು ಮಗಳು! ನೀನು ಪುಣ್ಯಶಾಲಿ. ಇಲ್ಲದೆ ಇದ್ದರೆ ಉಪಗುಪ್ತರಂಥ ಭಗವಾನರ ಅನುಗ್ರಹ ಉಂಟಾಗುತ್ತಿರಲಿಲ್ಲ. ಏಳು ಕಂದ! ಭಗವಾನರಿಗೆ ನಮಸ್ಕರಿಸು!" ಎಂದು ಹೇಳಿದಳು.

ನಾಗಶ್ರೀ ಉಪಗುಪ್ತನ ಪಾದಗಳನ್ನು ಹಿಡಿದುಕೊಂಡು ಅಶ್ರುಬಾಷ್ಪ ಸುರಿಸಿದಳು.

"ಮಗು, ಇದುವರೆಗೆ ಅಳುವ ಪ್ರಕರಣವಾಯಿತು. ಈಗ ನಗುವ ಪ್ರಕರಣ ನಡೆಯಲಿ!" ಎಂದು ಹೇಳಿ ನಾಗಶ್ರೀಯನ್ನು ಉಪಗುಪ್ತ ಮೇಲೆತ್ತಿದನು.

## ೨೧

ನಾಗಶ್ರೀ ಮಹಾರಾಣಿ ರಾಜಶ್ರೀದೇವಿಯ ಆಶ್ರಯಕ್ಕೆ ಬಂದ ಮೇಲೆ ಸಾಮ್ರಾಟ್ ಹರ್ಷವರ್ಧನನಿಗೆ ಅವಳು ಸಾಕುಮಗಳಾದಳು. ರಾಜ್ಯಶ್ರೀ ಜೀವನ ದಲ್ಲಿ ತುಂಬ ನೊಂದವಳು. ಬಂಧನ, ದುಃಖ, ದಾರಿದ್ರ್ಯಗಳೆಂಬುದೇನೆಂದು ತಿಳಿ ದಿದ್ದಳು. ಗೌಡಾಧಿಪತಿ ಶಶಾಂಕನು ಅವಳ ಪತಿ ಗ್ರಹವರ್ಮನನ್ನು ಮೋಸ ದಿಂದ ಕೊಲೆಮಾಡಿ, ಅವಳನ್ನು ಸೆರೆ ಹಿಡಿದಮೇಲೆ ಆ ದುರುಳನ ಕೈಯಲ್ಲಿ ಅವಳು ಪರಿಪರಿಯಾಗಿ ನರಳಿದ್ದಳು. ಕಡೆಗೆ ಉಪಾಯಾಂತರದಿಂದ ಅವನ ಸೆರಮನೆಯಿಂದ ತಪ್ಪಿಸಿಕೊಂಡು, ನಿಲ್ಲಲು ನೆಲೆಯಿಲ್ಲದೆ, ಬೇಡಲು ಆಶ್ರಯ ಕಾಣದೆ ನಿರ್ಜನವಾದ ವಿಂಧ್ಯಾಟವಿಯಲ್ಲಿ ತಲೆಮರಿಸಿಕೊಂಡಿದ್ದಳು. ಜೀವನ ದಲ್ಲಿ ಬೇಸತ್ತು ಅಲ್ಲಿ ಅಗ್ನಿಪ್ರವೇಶ ಮಾಡಬೇಕೆಂದಿದ್ದಾಗ, ದಿವಾಕರಮಿತ್ರನೆಂಬ ಬೌದ್ಧ ಸಂನ್ಯಾಸಿಯು ಅವಳ ರಕ್ಷಣೆಗೆ ಬಂದಿದ್ದನು. ಅವನ ಸಹಾಯದಿಂದ ಹರ್ಷವರ್ಧನನು ಸಕಾಲದಲ್ಲಿ ಬಂದು ರಾಜ್ಯಶ್ರೀಯನ್ನು ಉಳಿಸಿದ್ದನು.

ಅಲ್ಲಿಂದಾಚೆಗೆ ರಾಜ್ಯಶ್ರೀಗೆ ಬಂದಿದ್ದ ವಿಪತ್ಪರಂಪರೆಗಳು ಪರಿಹಾರ ವಾಗಿದ್ದರೂ, ರಾಜ್ಯಶ್ರೀಯ ಜೀವನ ಮೊದಲಿನಂತೆ ಆಗಲಿಲ್ಲ. ಅವಳಿಗೆ ಮೇಲಿಂದ ಮೇಲೆ ಬಿದ್ದ ಪೆಟ್ಟಿನಿಂದ ಜೀವನದಲ್ಲಿ ವೈರಾಗ್ಯ ಹುಟ್ಟಿತ್ತು. ಅವಳ

ಮನಸ್ಸು ಭಗವಾನ್ ಬುದ್ಧನ ದಿವ್ಯಸಂದೇಶವ ಕಡೆ ಒಲಿದಿತ್ತು. ಅವಳು ಸಾಮ್ರಾಜ್ಞಿಯಾಗಿದ್ದರೂ ಎಲ್ಲ ಐಹಿಕ ಸೌಖ್ಯಗಳಿಗೆ ತಿಲಾಂಜಲಿ ಇತ್ತು, ಸಂನ್ಯಾಸಿಯಂತೆ ಜೀವಿಸುತ್ತಿದ್ದಳು.

ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗಿ ಉಪಗುಪ್ತನ ಆಶ್ರಯಕ್ಕೆ ಬಂದ ನಾಗಶ್ರೀಯ ಬಗ್ಗೆ ಅವಳಿಗೆ ಸಹಜವಾಗಿಯೇ ಅನುಕಂಪ ಉಂಟಾಗಿತ್ತು. ಅವಳನ್ನು ತನ್ನ ಆಶ್ರಯಕ್ಕೆ ತೆಗೆದುಕೊಂಡು ಮಗಳಂತೆ ನೋಡಿಕೊಂಡಳು. ಅವಳನ್ನು ಯಾವ ರಾಜಪುತ್ರಿಗೂ ಕಡಿಮೆ ಇಲ್ಲದಂತೆ, ರಾಜೋಚಿತವಾದ ಶಿಕ್ಷಣ ಕೊಟ್ಟು, ಬೆಳೆಸಿದಳು. ನಾಗಶ್ರೀಯ ಮನಸ್ಸು ಎಲ್ಲ ವಿದ್ಯೆಗಿಂತ ನಾಟ್ಯದ ಕಡೆ ಒಲಿದಿರುವುದನ್ನು ಅರಿತು, ಅವಳಿಗೆ ಯೋಗ್ಯ ನಾಟ್ಯಾಚಾರ್ಯರಿಂದ ಶಿಕ್ಷಣ ಕೊಡಿಸಿದಳು. ನಾಗಶ್ರೀ ನರ್ತನವಲ್ಲಿ ಪರಿಣತಿಯನ್ನು ಪಡೆದು ನಾಟ್ಯ ರಾಣಿ ಎಂಬ ಕೀರ್ತಿಗೆ ಪಾತ್ರಳಾದಳು. ಸಾಮ್ರಾಟ್ ಹರ್ಷವರ್ಧನನು ಅವಳನ್ನು ತನ್ನ ಆಸ್ಥಾನದ ರಾಜನರ್ತಕಿಯಾಗಿ ಮಾಡಿಕೊಂಡು, ಗೌರವಿಸಿದ್ದನು. ನಾಗಶ್ರೀ ತಾನು ವೇಶ್ಯಾಪುತ್ರಿಯಾಗಿದ್ದರೂ, ತನಗೆ ದೊರೆತ ಶಿಕ್ಷಣ ಹಾಗೂ ಸಹವಾಸದಿಂದ ಅವಳು ಕುಲೀನ ಮನೆತನದ ಹೆಣ್ಣುಮಗಳಂತೆ ಬೆಳೆದಿದ್ದಳು. ಅವಳಿಗೆ ತಾನು ಮದುವೆಯಾಗಿ ಗೃಹಸ್ಥಜೀವನವನ್ನು ನಡೆಸಬೇಕೆಂಬ ಆದರ್ಶವಿತ್ತು.

ಅವಳಿಗೆ ತನ್ನ ತಾಯಿಯ ಹೆದ್ದಾರಿಯಲ್ಲಿ ಹೋಗುವುದು ಬೇಕಿರಲಿಲ್ಲ. ಅದು ಪಾಪದ ಮಾರ್ಗವೆಂದು ಅವಳು ತಿಳಿದಿದ್ದಳು. ಭೋಗಕಾಂತೆಯಾಗಿ ಬಾಳುವುದು ಅವಳಿಗೆ ಅಸಹ್ಯವಾಗಿತ್ತು. ಮದುವೆಯಾಗಿ ಕುಲೀನ ಸ್ತ್ರೀಯಂತೆ ಬಾಳಿ ಬದುಕಬೇಕು—ಇಲ್ಲದೆ ಇದ್ದರೆ ತನ್ನ ಜೀವನವನ್ನು ಕಲಾರಾಧನೆಗೆ ಮೀಸಲಾಗಿಟ್ಟು, ಕಡೆತನಕ ತಾನು ಕುಮಾರಿಯಾಗಿ ಉಳಿಯಬೇಕು ಎಂಬ ಉಚ್ಚ ಆದರ್ಶ ಅವಳದು. ಯಾವುದೇ ಪ್ರಸಂಗದಲ್ಲಿ ಇದನ್ನು ಬಿಟ್ಟುಕೊಡಲೂ ಅವಳು ಸಿದ್ಧಳಿರಲಿಲ್ಲ. ಆದರೆ ವೇಶ್ಯಾಪುತ್ರಿಯೂ ರಾಜನರ್ತಕಿಯೂ ಆದ ಅವಳನ್ನು ಶಾಸ್ತ್ರೋಕ್ತವಾಗಿ ವಿವಾಹವಾಗಿ ಗೃಹಿಣಿ ಪಟ್ಟಕ್ಕೇರಿಸಲು ಯಾವ ರಾಜಪುತ್ರನೂ ಸಿದ್ಧನಿರಲಿಲ್ಲ. ಅವಳ ಕೈಹಿಡಿಯಲು ಅನೇಕ ಶ್ರೀಮಂತ ಯುವಕರು ಬಂದಿದ್ದರೂ ರಾಜ್ಯಶ್ರೀಗೆ ಹೂವಿನಂತೆ ಕೋಮಲವಾಗಿ ಬೆಳೆದ ಅವಳ ಬದುಕನ್ನು ದುಷ್ಟ ಶ್ರೀಮಂತರ ಕಾಮತೃಪ್ತಿಗೆ ಬಲಿಕೊಡುವುದು ಇಷ್ಟ

ವಿರಲಿಲ್ಲ. ಅವಳಿಗೆ ಅನುರೂಪನಾದ ವರನು ದೊರೆತರೆ ಮಾತ್ರ—ನಾಗಶ್ರೀ ಪ್ರೇಮಿಸಿದ ವ್ಯಕ್ತಿಗೆ—ಅವಳನ್ನು ವಿವಾಹ ಮಾಡಿಕೊಡಬೇಕೆಂಬುದೇ ಅವಳ ಆಕಾಂಕ್ಷೆಯಾಗಿತ್ತು. ಅದು ಈಡೇರುವ ಮುನ್ನವೇ ಸಾಮ್ರಾಟ್ ಹರ್ಷ ವರ್ಧನನು ಅವಳನ್ನು ಪುಲಿಕೇಶಿಗೆ ವಿಜಯವಧುವಾಗಿ ಅರ್ಪಿಸಿದ್ದ. ತಮ್ಮೆರಡು ರಾಷ್ಟ್ರಗಳ ಸಾಂಸ್ಕೃತಿಕ ರಾಯಭಾರಿಯಾಗಿ ಅವಳನ್ನು ನೇಮಿಸಿ, ರಾಜಧಾನಿಗೆ ಹಿಂತಿರುಗಿದ್ದ. ಇದರಿಂದ ರಾಜ್ಯಶ್ರೀಗೆ ವ್ಯಥೆಯಾದರೂ, ತನ್ನ ಸಾಕುಮಗ ಳಾದ ನಾಗಶ್ರೀಯಿಂದ ಎರಡು ರಾಷ್ಟ್ರಗಳ ಕಲ್ಯಾಣ ಸಾಧಿಸುವುದೆಂಬ ಸಂಗತಿ ಹೆಮ್ಮೆಯುಂಟುಮಾಡಿತ್ತು.

ನಾಗಶ್ರೀ ತನಗೆ ವಿಜಯವಧುವಾಗಿ ದೊರೆತರೂ ಪುಲಿಕೇಶಿಯು ಅವ ಳನ್ನು ಗೌರವವಾಗಿ ನಡೆಸಿಕೊಂಡು, ತನ್ನ ಆಸ್ಥಾನದಲ್ಲಿ ರಾಜನರ್ತಕಿಯಾಗಿ ನೇಮಿಸಿದ್ದನು. ಅವಳನ್ನು ಸಾಮಾನ್ಯ ಕಲಾವಿದರಂತೆ ಪರಿಗಣಿಸದೆ ಅವಳಿಗೆ ರಾಜೋಚಿತವಾದ ಪ್ರಾಸಾದವನ್ನು ಕೊಟ್ಟಿದ್ದನು. ಅಲ್ಲಿ ಅವಳಿಗೆ ಯಾವು ದಕ್ಕೂ ಕೊರತೆಯಾಗದಂತೆ ನೋಡಿಕೊಂಡಿದ್ದನು. ಇಂತಹ ನಾಗಶ್ರೀ ಚಂದ್ರೋಜನಲ್ಲಿ ಅನುರಕ್ತಳಾಗಿದ್ದಳು.

ಚಂದ್ರೋಜನಾದರೋ, ನಾಗಶ್ರೀಯ ರೂಪುಲಾವಣ್ಯಗಳಿಗಿಂತಲೂ ಅವಳ ಕಲೆಗೆ ಮಾರುಹೋಗಿದ್ದನು. ಅವನ ಪಾಲಿಗೆ ಅವಳು ಸ್ವರ್ಗಲೋಕದ ಅಪ್ಸರೆಯಂತೆ ಕಂಡಿದ್ದಳು. ಇಂಥವಳು ತನಗೆ ದೊರೆಯಬಹುದೆಂದು ಅವನು ಕನಸು ಮನಸ್ಸಿನಲ್ಲೂ ಎಣಿಸಿರಲಿಲ್ಲ. ಅವಳನ್ನು ಬಯಸಿ, ಅವಳಿಗಾಗಿ ಹಂಬ ಲಿಸಿ ಜೀವನವನ್ನು ಅಸಹ್ಯ ಮಾಡಿಕೊಳ್ಳುವುದಕ್ಕಿಂತ, ದೊರೆಯದ ಅವಳನ್ನು ದೂರದಿಂದ ನೋಡಿ ಆರಾಧಿಸಿ, ಅಷ್ಟರಿಂದಲೇ ಸಂತೋಷಗೊಳ್ಳಬೇಕೆಂಬ ಸಮಾಧಾನ ಚಂದ್ರೋಜನದು. ಅವನು ನಾಗಶ್ರೀಯನ್ನು ದೇವಿಯಂತೆ ಆರಾಧಿಸಿದ್ದರೂ, ಅವಳಿಗಾಗಿ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧನಿದ್ದರೂ ತನ್ನ ಹೃದ್ಗತವನ್ನು ಅವಳಲ್ಲಿ ತೋಡಿಕೊಳ್ಳುವಷ್ಟು ಧೈರ್ಯವಿರಲಿಲ್ಲ. ಅವನು ಅನಾಶಕ್ತ ಪ್ರಣಯಿಯಂತೆ ನಿಷ್ಕಾಮಭಾವನೆಯಿಂದ ಅವಳನ್ನು ಹೃದಯ ಸಿಂಹಾಸನದಲ್ಲಿ ಇಟ್ಟು ಪೂಜಿಸುತ್ತಿದ್ದ.

ಆಸ್ಥಾನದ ಶ್ರೇಷ್ಠವರ್ಣಶಿಲ್ಪಿ ಎಂದು ಪರಿಗಣಿತನಾಗಿದ್ದ ಚಂದ್ರೋಜನ ಹೃದಯಾಂತರಾಳದಲ್ಲಿ ಇದ್ದ ಭಾವನೆಗಳು ನಾಗಶ್ರೀಯ ಗಮನಕ್ಕೆ ಬೀಳದೆ

ಇರಲಿಲ್ಲ. ಅವಳು ಭಕ್ತನನ್ನು ಪರೀಕ್ಷಿಸುವ ದೇವಿಯ ಸೋಗಿನಲ್ಲಿ ಈ ಬಗ್ಗೆ ಮೊದಲು ನಿರ್ಲಕ್ಷ್ಯವಹಿಸಿದಳು. ಆದರೆ ಚಂದ್ರೋಜನ ಪ್ರೇಮ ಮಾತ್ರ ಯಾವುದೇ ಪ್ರತಿಫಲಾಪೇಕ್ಷೆಯನ್ನೂ ನಿರೀಕ್ಷಿಸದೆ ಮೊದಲಿನಂತೆ ಅಚಲ ವಾಗಿತ್ತು. ಇದುವರೆಗೆ ತನ್ನ ಆರಾಧ್ಯದೇವಿಯ ಕೃಪಾಕಟಾಕ್ಷ ತನ್ನ ಮೇಲೆ ಬೀಳಬಹುದೆಂಬ ದೂರದ ಆಸೆ ಇತ್ತು. ಆದರೆ ನಾಗಶ್ರೀಯ ನಿರ್ಲಕ್ಷ್ಯದಿಂದ ಅವನು ಆ ಆಸೆಗೆ ತಿಲಾಂಜಲಿಯನ್ನು ಇತ್ತು, ಈ ಜನ್ಮದಲ್ಲಿ ಅವಳನ್ನು ಪಡೆ ಯುವ ಯೋಗವಿಲ್ಲವೆಂದು ಕೇವಲ ಚಿತ್ರದಲ್ಲಿ ಅವಳನ್ನು ಎರಕ ಹೊಯ್ಯುವುದ ರಲ್ಲಿ ತನ್ನ ಅಭೀಷ್ಟವನ್ನು ಈಡೇರಿಸಿಕೊಂಡಿದ್ದ.

ಇದು ಚಾಣಾಕ್ಷಳಾದ ನಾಗಶ್ರೀಗೆ ತಿಳಿಯದೆ ಹೋಗಲಿಲ್ಲ. ಇನ್ನು ಭಕ್ತನ ಪರೀಕ್ಷೆ ಸಾಕೆಂದು ಅವಳು ತನ್ನ ಪೀಠದಿಂದ ಇಳಿದುಬಂದಳು. ಒಂದು ದಿನ ಅನಿರೀಕ್ಷಿತವಾಗಿ ಅಭಿಸಾರಿಕೆಯಂತೆ, ಚಂದ್ರೋಜನ ಮನೆಗೆ ಬಂದಳು.

ರಾತ್ರಿ ಹನ್ನೆರಡು ಗಂಟೆಯಾಗಿದ್ದರೂ ಇನ್ನೂ ಅವನ ಮನೆಯಲ್ಲಿ ದೀಪ ಉರಿಯುತ್ತಿತ್ತು. ಚಂದ್ರೋಜನು ತನ್ನ ದೇವಿಯ ಆರಾಧನೆಯಲ್ಲಿ ತೊಡಗಿದ್ದ. ಅವನು ನಾಗಶ್ರೀಯ ಭಾವಚಿತ್ರಕ್ಕೆ ಗುಲಾಬಿಯ ಹೂಗಳಿಂದ ಅಲಂಕರಿಸಿ, ತನ್ನ ಪ್ರಣಯೋನ್ಮಾದದಲ್ಲಿ, ಭಾವದಶ್ರುಗಳನ್ನು ಸುರಿಸುತ್ತಿದ್ದ. ಈ ಸಮಯ ದಲ್ಲಿ ದೇವಿಯು ಅನುಗ್ರಹಿಸಿದಂತೆ, ನಾಗಶ್ರೀ ತನ್ನ ಆಪ್ತಸಖಿ ವಿನತೆಯೊಡನೆ ಬಂದಿದ್ದಳು. ಈ ಸರಿರಾತ್ರಿಯಲ್ಲಿ ತನ್ನನ್ನು ಅರಸಿಕೊಂಡು ಬಂದ ಆಗುಂತಕ ರಾರೆಂದು ಅವನು ನೋಡುತ್ತಾನೆ—ಎದುರಿಗೆ ನಾಗಶ್ರೀ ! ತಾನು ಯಾರನ್ನು ಇದುವರೆಗೆ ದೇವಿ ಎಂದು ಆರಾಧಿಸುತ್ತಾ ಬಂದಿದ್ದನೋ ಆ ದೇವಕನ್ಯೆ ಇಂದು ಸ್ವರ್ಗಲೋಕದಿಂದ ಇಳಿದು ಬಂದಿದ್ದಳು. ತನ್ನ ಮೇಲೆ ಅನುಗ್ರಹಿಸಿ, ತನ್ನ ಪೀಠದಿಂದ ಕೆಳಗಿಳಿದು ಬಂದಿದ್ದಳು. ಅದೇನಾಶ್ಚರ್ಯ ?

ಚಂದ್ರೋಜನು ಅವರನ್ನು ವಿಶ್ವಾಸದಿಂದ ಬರಮಾಡಿಕೊಂಡು ಸತ್ಕರಿಸಿ ದನು. ಅವನಿಗೆ ತನ್ನ ದೇವಿ ಸಾಕಾರವಾಗಿ ಬಂದು ಎದುರಿಗೆ ನಿಂತಾಗ ಹೇಗೆ ಸತ್ಕರಿಸುವುದೆಂದು ತಿಳಿಯದೆ ಹೋಗಿತ್ತು. ದಿಙ್ಮೂಢನಾಗಿ ನಿಂತ ಅವನನ್ನು ನಾಗಶ್ರೀಯೇ ನೋಡಿ ತುಂಟನಗೆ ನಗುತ್ತಾ,

"ಚಿತ್ರಕಾರರೇ;ಸರಿರಾತ್ರಿಯಲ್ಲಿ ಕುಳಿತುಕೊಂಡು ಏನುಮಾಡುತ್ತಿದ್ದೀರಿ?" ಎಂದಳು.

ವಿರಲಿಲ್ಲ. ಅವಳಿಗೆ ಅನುರೂಪನಾದ ವರನು ದೊರೆತರೆ ಮಾತ್ರ—ನಾಗಶ್ರೀ ಪ್ರೇಮಿಸಿದ ವ್ಯಕ್ತಿಗೆ—ಅವಳನ್ನು ವಿವಾಹ ಮಾಡಿಕೊಡಬೇಕೆಂಬುದೇ ಅವಳ ಆಕಾಂಕ್ಷೆಯಾಗಿತ್ತು. ಅದು ಈಡೇರುವ ಮುನ್ನವೇ ಸಾಮ್ರಾಟ್ ಹರ್ಷ ವರ್ಧನನು ಅವಳನ್ನು ಪುಲಿಕೇಶಿಗೆ ವಿಜಯವಧುವಾಗಿ ಅರ್ಪಿಸಿದ್ದ. ತಮ್ಮೆರಡು ರಾಷ್ಟ್ರಗಳ ಸಾಂಸ್ಕೃತಿಕ ರಾಯಭಾರಿಯಾಗಿ ಅವಳನ್ನು ನೇಮಿಸಿ, ರಾಜಧಾನಿಗೆ ಹಿಂತಿರುಗಿದ್ದ. ಇದರಿಂದ ರಾಜ್ಯಶ್ರೀಗೆ ವ್ಯಥೆಯಾದರೂ, ತನ್ನ ಸಾಕುಮಗ ಳಾದ ನಾಗಶ್ರೀಯಿಂದ ಎರಡು ರಾಷ್ಟ್ರಗಳ ಕಲ್ಯಾಣ ಸಾಧಿಸುವುದೆಂಬ ಸಂಗತಿ ಹೆಮ್ಮೆಯುಂಟುಮಾಡಿತ್ತು.

ನಾಗಶ್ರೀ ತನಗೆ ವಿಜಯವಧುವಾಗಿ ದೊರೆತರೂ ಪುಲಿಕೇಶಿಯು ಅವ ಳನ್ನು ಗೌರವವಾಗಿ ನಡೆಸಿಕೊಂಡು, ತನ್ನ ಆಸ್ಥಾನದಲ್ಲಿ ರಾಜನರ್ತಕಿಯಾಗಿ ನೇಮಿಸಿದ್ದನು. ಅವಳನ್ನು ಸಾಮಾನ್ಯ ಕಲಾವಿದರಂತೆ ಪರಿಗಣಿಸದೆ ಅವಳಿಗೆ ರಾಜೋಚಿತವಾದ ಪ್ರಾಸಾದವನ್ನು ಕೊಟ್ಟಿದ್ದನು. ಅಲ್ಲಿ ಅವಳಿಗೆ ಯಾವು ದಕ್ಕೂ ಕೊರತೆಯಾಗದಂತೆ ನೋಡಿಕೊಂಡಿದ್ದನು. ಇಂತಹ ನಾಗಶ್ರೀ ಚಂದ್ರೋಜನಲ್ಲಿ ಅನುರಕ್ತಳಾಗಿದ್ದಳು.

ಚಂದ್ರೋಜನಾದರೋ, ನಾಗಶ್ರೀಯ ರೂಪುಲಾವಣ್ಯಗಳಿಗಿಂತಲೂ ಅವಳ ಕಲೆಗೆ ಮಾರುಹೋಗಿದ್ದನು. ಅವನ ಪಾಲಿಗೆ ಅವಳು ಸ್ವರ್ಗಲೋಕದ ಅಪ್ಸರೆಯಂತೆ ಕಂಡಿದ್ದಳು. ಇಂಥವಳು ತನಗೆ ದೊರೆಯಬಹುದೆಂದು ಅವನು ಕನಸು ಮನಸ್ಸಿನಲ್ಲೂ ಎಣಿಸಿರಲಿಲ್ಲ. ಅವಳನ್ನು ಬಯಸಿ, ಅವಳಿಗಾಗಿ ಹಂಬ ಲಿಸಿ ಜೀವನವನ್ನು ಅಸಹ್ಯ ಮಾಡಿಕೊಳ್ಳುವುದಕ್ಕಿಂತ, ದೊರೆಯದ ಅವಳನ್ನು ದೂರದಿಂದ ನೋಡಿ ಆರಾಧಿಸಿ, ಅಷ್ಟರಿಂದಲೇ ಸಂತೋಷಗೊಳ್ಳಬೇಕೆಂಬ ಸಮಾಧಾನ ಚಂದ್ರೋಜನದು. ಅವನು ನಾಗಶ್ರೀಯನ್ನು ದೇವಿಯಂತೆ ಆರಾಧಿಸಿದ್ದರೂ, ಅವಳಿಗಾಗಿ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧನಿದ್ದರೂ ತನ್ನ ಹೃದ್ಗತವನ್ನು ಅವಳಲ್ಲಿ ತೋಡಿಕೊಳ್ಳುವಷ್ಟು ಧೈರ್ಯವಿರಲಿಲ್ಲ. ಅವನು ಅನಾಶಕ್ತ ಪ್ರಣಯಿಯಂತೆ ನಿಷ್ಕಾಮಭಾವನೆಯಿಂದ ಅವಳನ್ನು ಹೃದಯ ಸಿಂಹಾಸನದಲ್ಲಿ ಇಟ್ಟು ಪೂಜಿಸುತ್ತಿದ್ದ.

ಆಸ್ಥಾನದ ಶ್ರೇಷ್ಠವರ್ಣಶಿಲ್ಪಿ ಎಂದು ಪರಿಗಣಿತನಾಗಿದ್ದ ಚಂದ್ರೋಜನ ಹೃದಯಾಂತರಾಳದಲ್ಲಿ ಇದ್ದ ಭಾವನೆಗಳು ನಾಗಶ್ರೀಯ ಗಮನಕ್ಕೆ ಬೀಳದೆ

ಇರಲಿಲ್ಲ. ಅವಳು ಭಕ್ತನನ್ನು ಪರೀಕ್ಷಿಸುವ ದೇವಿಯ ಸೋಗಿನಲ್ಲಿ ಈ ಬಗ್ಗೆ ಮೊದಲು ನಿರ್ಲಕ್ಷ್ಯವಹಿಸಿದಳು. ಆದರೆ ಚಂದ್ರೋಜನ ಪ್ರೇಮ ಮಾತ್ರ ಯಾವುದೇ ಪ್ರತಿಫಲಾಪೇಕ್ಷೆಯನ್ನೂ ನಿರೀಕ್ಷಿಸದೆ ಮೊದಲಿನಂತೆ ಅಚಲ ವಾಗಿತ್ತು. ಇದುವರೆಗೆ ತನ್ನ ಆರಾಧ್ಯದೇವಿಯ ಕೃಪಾಕಟಾಕ್ಷ ತನ್ನ ಮೇಲೆ ಬೀಳಬಹುದೆಂಬ ದೂರದ ಆಸೆ ಇತ್ತು. ಆದರೆ ನಾಗಶ್ರೀಯ ನಿರ್ಲಕ್ಷ್ಯದಿಂದ ಅವನು ಆ ಆಸೆಗೆ ತಿಲಾಂಜಲಿಯನ್ನು ಇತ್ತು, ಈ ಜನ್ಮದಲ್ಲಿ ಅವಳನ್ನು ಪಡೆ ಯುವ ಯೋಗವಿಲ್ಲವೆಂದು ಕೇವಲ ಚಿತ್ರದಲ್ಲಿ ಅವಳನ್ನು ಎರಕ ಹೊಯ್ಯುವುದ ರಲ್ಲಿ ತನ್ನ ಅಭೀಷ್ಟವನ್ನು ಈಡೇರಿಸಿಕೊಂಡಿದ್ದ.

ಇದು ಚಾಣಾಕ್ಷಳಾದ ನಾಗಶ್ರೀಗೆ ತಿಳಿಯದೆ ಹೋಗಲಿಲ್ಲ. ಇನ್ನು ಭಕ್ತನ ಪರೀಕ್ಷೆ ಸಾಕೆಂದು ಅವಳು ತನ್ನ ಪೀಠದಿಂದ ಇಳಿದುಬಂದಳು. ಒಂದು ದಿನ ಅನಿರೀಕ್ಷಿತವಾಗಿ ಅಭಿಸಾರಿಕೆಯಂತೆ, ಚಂದ್ರೋಜನ ಮನೆಗೆ ಬಂದಳು.

ರಾತ್ರಿ ಹನ್ನೆರಡು ಗಂಟೆಯಾಗಿದ್ದರೂ ಇನ್ನೂ ಅವನ ಮನೆಯಲ್ಲಿ ದೀಪ ಉರಿಯುತ್ತಿತ್ತು. ಚಂದ್ರೋಜನು ತನ್ನ ದೇವಿಯ ಆರಾಧನೆಯಲ್ಲಿ ತೊಡಗಿದ್ದ. ಅವನು ನಾಗಶ್ರೀಯ ಭಾವಚಿತ್ರಕ್ಕೆ ಗುಲಾಬಿಯ ಹೂಗಳಿಂದ ಅಲಂಕರಿಸಿ, ತನ್ನ ಪ್ರಣಯೋನ್ಮಾದದಲ್ಲಿ, ಭಾವದಶ್ರುಗಳನ್ನು ಸುರಿಸುತ್ತಿದ್ದ. ಈ ಸಮಯ ದಲ್ಲಿ ದೇವಿಯು ಅನುಗ್ರಹಿಸಿದಂತೆ, ನಾಗಶ್ರೀ ತನ್ನ ಆಪ್ತಸಖಿ ವಿನತೆಯೊಡನೆ ಬಂದಿದ್ದಳು. ಈ ಸರಿರಾತ್ರಿಯಲ್ಲಿ ತನ್ನನ್ನು ಅರಸಿಕೊಂಡು ಬಂದ ಆಗುಂತಕ ರಾರೆಂದು ಅವನು ನೋಡುತ್ತಾನೆ—ಎದುರಿಗೆ ನಾಗಶ್ರೀ! ತಾನು ಯಾರನ್ನು ಇದುವರೆಗೆ ದೇವಿ ಎಂದು ಆರಾಧಿಸುತ್ತಾ ಬಂದಿದ್ದನೋ ಆ ದೇವಕನ್ಯೆ ಇಂದು ಸ್ವರ್ಗಲೋಕದಿಂದ ಇಳಿದು ಬಂದಿದ್ದಳು. ತನ್ನ ಮೇಲೆ ಅನುಗ್ರಹಿಸಿ, ತನ್ನ ಪೀಠದಿಂದ ಕೆಳಗಿಳಿದು ಬಂದಿದ್ದಳು. ಅದೇನಾಶ್ಚರ್ಯ?

ಚಂದ್ರೋಜನು ಅವರನ್ನು ವಿಶ್ವಾಸದಿಂದ ಬರಮಾಡಿಕೊಂಡು ಸತ್ಕರಿಸಿ ದನು. ಅವನಿಗೆ ತನ್ನ ದೇವಿ ಸಾಕಾರವಾಗಿ ಬಂದು ಎದುರಿಗೆ ನಿಂತಾಗ ಹೇಗೆ ಸತ್ಕರಿಸುವುದೆಂದು ತಿಳಿಯದೆ ಹೋಗಿತ್ತು. ದಿಙ್ಮೂಢನಾಗಿ ನಿಂತ ಅವನನ್ನು ನಾಗಶ್ರೀಯೇ ನೋಡಿ ತುಂಟನಗೆ ನಗುತ್ತಾ,

"ಚಿತ್ರಕಾರರೇ;ಸರಿರಾತ್ರಿಯಲ್ಲಿ ಕುಳಿತುಕೊಂಡು ಏನುಮಾಡುತ್ತಿದ್ದೀರಿ?" ಎಂದಳು.

"ನನ್ನ ದೇವಿಯ ಆರಾಧನೆಯಲ್ಲಿ ತೊಡಗಿದ್ದೆ !"

"ಯಾರು ನಿಮ್ಮ ದೇವಿ ?"

"ಯಾವ ದೇವಿ ಈ ನನ್ನ ಹೃದಯ ಸಿಂಹಾಸನದಲ್ಲಿ ಮಂಡಿಸಿ ನನ್ನಿಂದ ಪೂಜೆ ಸಲ್ಲಿಸಿಕೊಳ್ಳುತ್ತಿರುವಳೋ ಆ ದೇವಿಯ ಆರಾಧನೆಯಲ್ಲಿ ತೊಡಗಿದ್ದೆ."

"ಅವಳನ್ನು ನಾನು ನೋಡಬಹುದೇ ?" ಎಂದು ಹೇಳಿ ಅವಳು ಭಾವ ಚಿತ್ರವಿದ್ದ ಕಡೆಗೆ ಹೊರಟಳು. ಅವಳನ್ನು ಚಂದ್ರೋಜ ಅಡ್ಡಗಟ್ಟುತ್ತಾ,

"ಆ ದೇವಿಯನ್ನು ತಾವು ನೋಡಬಾರದು ದೇವಿ !" ಎಂದನು.

"ಏಕೆ ?"

"ಈ ದೇವಿಗೆ ಅಪಚಾರವಾಗುತ್ತದೆ !" ಎಂದು ಹೇಳಿ ನಾಗಶ್ರೀಯನ್ನು ಬೇರೆ ಕಡೆ ಕರೆದೊಯ್ಯಲು ನೋಡಿದನು.

"ನನಗೆ ಅಪಚಾರವೆ ?" ಅವಳು ಪ್ರಶ್ನಿಸಿದಳು ನಗುತ್ತಾ.

"ಹೌದು ದೇವಿ, ನಾನು ಒಬ್ಬ ಕ್ಷುಲ್ಲಕ ಕಲಾವಿದ. ತಮ್ಮ ದಿವ್ಯ ಸೌಂದರ್ಯವನ್ನು ಸೆರೆಹಿಡಿಯುವ ಪ್ರಯತ್ನ ಮಾಡಿ, ತಮಗೆ ಅಪಚಾರವೆಸಗಿದ್ದೇನೆ !" ಎಂದು ಹೇಳಿ ಚಿತ್ರವನ್ನು ಮುಚ್ಚಿಟ್ಟುಕೊಳ್ಳಲು ಪ್ರಯತ್ನಿಸಿದನು.

"ಅಷ್ಟೇತಾನೇ, ಇದರಿಂದ ನನಗೆ ಅಪಚಾರವಿಲ್ಲ. ಎಲ್ಲಿ ಆ ಚಿತ್ರವನ್ನು ನನ್ನ ಕಡೆಗೆ ಕೊಡಿ !" ಎಂದು ಚಂದ್ರೋಜನಿಂದ ಬಲವಂತವಾಗಿ, ಚಿತ್ರವನ್ನು ಕಸಿದುಕೊಂಡು ನೋಡಿದಳು. ನಾಗಶ್ರೀ ನೋಡುತ್ತಿದ್ದಂತೆ ಅವಳು ದಂಗು ಬಡಿದು ನಿಂತಳು ! ಏನಿದು ಆಶ್ಚರ್ಯ ! ತಾನು ಯಾರ ಹೃದಯಸಿಂಹಾಸನದಲ್ಲಿ ಸಾಮ್ರಾಜ್ಞಿಯಾಗುವ ಬದಲು ಚರಣದಾಸಿಯಾಗಲು ಬಯಸಿದ್ದಳೋ, ಯಾರ ನಾಮಮಂತ್ರದಿಂದ ಅವಳಿಗೆ ಮೈ ರೋಮಾಂಚನವಾಗುತ್ತಿತ್ತೋ, ಯಾರ ಸಲುವಾಗಿ ಅವಳು, ತನ್ನ ಸರ್ವಸ್ವ ಧಾರೆ ಎರೆಯಲು ಸಿದ್ಧಳಿದ್ದಳೋ ಆ ಪ್ರೇಮಿ–ಮನೋವಲ್ಲಭ–ಇಂದು ತನ್ನ ಭಾವಚಿತ್ರವನ್ನು ಪೂಜಿಸುತ್ತಿದ್ದಾನೆ ! ನಡುರಾತ್ರಿಯಲ್ಲಿ ತನ್ನ ಭಾವಚಿತ್ರದ ಆರಾಧನೆಯಲ್ಲಿ ತೊಡಗಿದ್ದಾನೆ. ಹೃದಯಾಂತರಾಳದಿಂದ ಪ್ರೀತಿಸುತ್ತಿದ್ದಾನೆ ! ಇದನ್ನು ನೆನೆದು ಅವಳು ಪುಳಕಿತಳಾದಳು. ಮೈರೋಮಾಂಚನಗೊಂಡಿತು.

"ಪ್ರಭು, ಈ ಚರಣದಾಸಿಯ ಮೇಲೆ ಇಷ್ಟು ಅನುಗ್ರಹವೆ ?" ಎಂದು ಉದ್ಗಾರ ತೆಗೆದಳು.

"ದೇವಿ, ನೀನು ನನ್ನ ದಾಸಿಯಲ್ಲ, ಆರಾಧ್ಯ ದೇವತೆ. ನೀನು ಮರ್ತ್ಯ ಲೋಕದ ಕನ್ಯೆಯಲ್ಲ–ದೇವಲೋಕದ ಅಮೃತಪುತ್ಥಳಿ. ನಂದನವನದಲ್ಲಿ ಅರಳಿದ ಸುಂದರಪುಷ್ಪ ನಿನ್ನನ್ನು ಬಯಸದವರಾರು? ಆದರೆ, ನೀನು ನನಗೆ ಒಲಿದಿರುವುದು ನನ್ನ ಪಾಲಿನ ಪುಣ್ಯ! ನನಗಿಂತಲೂ ಭಾಗ್ಯಶಾಲಿ ಉಂಟೆ?" ಎಂದನು.

"ನಿಮಗೆ ನನ್ನಲ್ಲಿ ಪ್ರೇಮವಿದೆಯೆ?"

"ದೇವಿ, ಎಂತಹ ಮಾತು ನಿನ್ನದು! ನನಗೆ ನಿನ್ನಲ್ಲಿ ಪ್ರೇಮವಿದೆಯೋ ಇಲ್ಲವೋ ಈ ಭಾವಚಿತ್ರವನ್ನು ಕೇಳು."

"ಹಾಗಾದರೆ ನಾನು ನಿಜವಾಗಿಯೂ ಭಾಗ್ಯಶಾಲಿ."

"ಈ ಮಾತು ನಾನು ಹೇಳಿಕೊಳ್ಳಬೇಕು."

"ಏಕೆ?"

"ನಿನ್ನ ಕೃಪಾಕಟಾಕ್ಷಕ್ಕೆ ಹಂಬಲಿಸುವವರು ಅನೇಕರಿರುವಾಗ, ನೀನು ನನ್ನಂತಹ ಸಾಮಾನ್ಯ ಕಲಾವಿದನ ಮೇಲೆ ಅನುಗ್ರಹಿಸಿರುವೆ!"

"ಆ ದಿನ ನೀವು ನನ್ನ ಕೋರಿಕೆಯಂತೆ ನನ್ನ ಭವನವನ್ನು ಸಿಂಗರಿಸಲು ಬಂದಿರಲ್ಲ–ಆ ದಿನವೇ ನೀವು ನನ್ನ ಹೃದಯವನ್ನು ಕದ್ದು ಹಿಂದಿರುಗಿದಿರಿ."

"ಹಾಗಿದ್ದರೆ ಇದುವರೆಗೆ ನನ್ನನ್ನೇಕೆ ಕೊರಗಿಸಿದೆ?"

"ನಿಮ್ಮನ್ನು ಪರೀಕ್ಷಿಸದೆ ನಿಮಗೆ ಹೃದಯವನ್ನು ಸಂಪೂರ್ಣವಾಗಿ ಒಪ್ಪಿಸಬಾರದೆಂದು."

"ಏಕೆ?"

"ನನ್ನ ಇತಿಹಾಸ ಅಂತಹುದು."

"ಅಂದರೆ?"

"ನಾನು ವೇಶ್ಯಾಪುತ್ರಿ."

"ಅದು ನನಗೆ ತಿಳಿದಿದೆ."

"ನಾನು ಒಬ್ಬ ಅನಾಥೆ, ಇಂದು ರಾಜನರ್ತಕಿ."

"ನಾನೂ ನಿನ್ನಂತೆಯೇ ಅನಾಥ ಕಲಾವಿದ."

"ನಿಮಗೆ ನನ್ನ ಪೂರ್ವ ಇತಿಹಾಸ ತಿಳಿದಿದ್ದರೂ ನೀವು ನನ್ನನ್ನು ಪ್ರೀತಿಸುತ್ತಿದ್ದೀರಾ?"

"ಹೌದು."

"ಪ್ರೀತಿಸಲು ನನಗಿಂತಲೂ ಬೇರೆ ವ್ಯಕ್ತಿ ದೊರೆಯಲಿಲ್ಲವೆ ?"

"ನಾಗಶ್ರೀ, ನಿನ್ನ ಮಾತು ಕೇಳಿ ಸಿಟ್ಟಾಗಬೇಕೋ, ನಗಬೇಕೋ ತಿಳಿಯದಾಗಿದೆ! ಪ್ರೀತಿ ಎಂಬುದು, ಕಂಡಕಡೆ ಬೆಳೆಯುವ ಕಣಿಗಲೆ ಎಂದು ತಿಳಿಯುವೆಯಾ ? ಅದು ಒಂದು ಮಂದಾರಕುಸುಮ. ಸ್ವರ್ಗಲೋಕದಲ್ಲಿ ಮಾತ್ರ ಅರಳುವ ಹೂ."

"ಹಾಗಾದರೆ ನಿಮಗೆ ನನ್ನಲ್ಲಿ ನಿಜವಾದ ಪ್ರೀತಿ ಇದೆ."

"ಇನ್ನೂ ನಿನಗೆ ಸಂಶಯವೆ ?"

"ಸಂಶಯವಲ್ಲ. ಆದರೆ ನಾನು ವೇಶ್ಯಾಪುತ್ರಿ ಎಂಬುದನ್ನು ತಿಳಿದಾಗ, ಈ ಬಗ್ಗೆ ಸಮಾಜದ ಪ್ರತಿಕ್ರಿಯೆ ಅರಿತಾಗ, ನೀವೂ ಇತರರಂತೆ ಹಿಮ್ಮೆಟ್ಟಬಹುದೆಂದು ತಿಳಿದಿದ್ದೆ."

"ನೀನು ಕನಸುಮನಸುಗಳಲ್ಲಿ ಅಂತಹ ಅವಿಚಾರಗಳಿಗೆ ಎಡೆಕೊಡಬಾರದು."

"ಚಂದ್ರೋಜರೇ ನೀವು ಸತ್ಕುಲಪ್ರಸೂತರಾದ ಶ್ರೇಷ್ಠ ಕಲಾವಿದರೆಂಬುದನ್ನು ಮರೆಯಬಾರದು. ನನ್ನ ಸುಂದರ ಮುಖ ಕಂಡು ಮರುಳಾಗಬಾರದು. ನಾಳೆ ಲೋಕ ಈ ಬಗ್ಗೆ ಏನು ಹೇಳುವುದೆಂದು ಆಲೋಚಿಸಿ, ನಿರ್ಧಾರ ಕೈಗೊಳ್ಳಬೇಕು."

"ಲೋಕ ಏನೇ ಅನ್ನಲಿ; ನೀನು ಒಪ್ಪುವುದಾದರೆ, ನಿನ್ನನ್ನು ಶಾಸ್ತ್ರೋಕ್ತವಾಗಿ ವಿವಾಹವಾಗಿ, ಗೃಹಿಣಿಯಾಗಿ ಸ್ವೀಕರಿಸಲು ಸಿದ್ಧನಾಗಿದ್ದೇನೆ."

"ಚಂದ್ರೋಜರೇ, ನೀವು ದುಡುಕದೆ ವಿಚಾರಮಾಡಿ. ನಾನು ಶುಭ್ರ ಜೀವನ ನಡೆಸಿದ್ದರೂ, ಲೋಕದ ಕಣ್ಣಿನಲ್ಲಿ ಇನ್ನೂ ವೇಶ್ಯಾಪುತ್ರಿ. ಇದುವರೆಗೆ ನನ್ನನ್ನು ಬಯಸಿ ಬಂದವರೆಲ್ಲರೂ ನಾನು ವೇಶ್ಯಾಪುತ್ರಿ ಎಂದೇ ನನ್ನನ್ನು ಬಯಸಿದ್ದಾರೆ."

"ನಾಗಶ್ರೀ, ಈ ಎಲ್ಲ ಮಾತುಗಳಿಂದ ನೀನು ನನ್ನ ಮನಸ್ಸಿಗೆ ಎಂತಹ ಆಘಾತ ಉಂಟುಮಾಡುತ್ತಿರುವೆ ಎಂಬುದು ನಿನಗೆ ತಿಳಿದಿದ್ದರೆ, ಹೀಗೆ ನುಡಿಯುತ್ತಿರಲಿಲ್ಲ. ನಾಗಶ್ರೀ, ಇಲ್ಲಿ ಕೇಳು. ನೀನು ಜಗತ್ತಿನ ಪಾಲಿಗೆ, ಸಮಾಜದ ಪಾಲಿಗೆ ಏನೇ ಆಗಿರು. ವ್ಯಕ್ತಿಯ ಯೋಗ್ಯತೆಯನ್ನು ಅಳೆಯುವ ಒರೆಗಲ್ಲು—

ಅವರು ನಡೆಸುವ ಜೀವನ. ಅದು ಶುಭ್ರವಾಗಿದ್ದರೆ, ಋಜುತನದಿಂದ ಕೂಡಿದ್ದರೆ, ಅವರು ಶುಭ್ರಚರಿತರು, ಸಭ್ಯರು, ಗುಣಾಢ್ಯರು. ನಾನು ನಿನ್ನಲ್ಲಿ ಇದುವರೆಗೆ ಯಾವುದೇ ಕಳಂಕವನ್ನು ಕಂಡಿಲ್ಲ—ನಾನು ನಿನ್ನ ಸೌಂದರ್ಯಕ್ಕೆ ಮಾರು ಹೋಗಿಲ್ಲ; ನಿನ್ನ ಕಲೆಗೂ ಮರುಳಾಗಿಲ್ಲ. ನಾನೂ ಮರುಳಾಗಿರುವುದು ನಿನ್ನ ಸಾತ್ವಿಕ ತೇಜಸ್ಸಿಗೆ, ಶುಭ್ರಚಾರಿತ್ರ್ಯಕ್ಕೆ. ಅದರ ಆಕರ್ಷಣೆಯಿಂದಾಗಿ, ನಾನು ನಿನ್ನಲ್ಲಿ ದೈವತ್ವವನ್ನು ಗುರುತಿಸಿದೆ. ಆದಕ್ಕೆ ಸರ್ವಸ್ವವನ್ನು ಸಮರ್ಪಿಸಿದೆ. ನಿನ್ನನ್ನು ನನ್ನ ಆರಾಧ್ಯದೈವವಾಗಿ ಮಾಡಿಕೊಂಡು ನಿಷ್ಕಲ್ಮಷ ಪ್ರಣಯಪೂಜೆ ಸಲ್ಲಿಸಿದೆ. ಇದು ನನ್ನ ದೇವಿಯನ್ನು ಸಂತುಷ್ಟಗೊಳಿಸಿದೆ–ಅವಳು ಇಂದು ನನ್ನ ಮೇಲೆ ಅನುಗ್ರಹಿಸಿದ್ದಾಳೆ. ನನಗೆ ಇಷ್ಟು ಸಾಕು. ಇದಕ್ಕಿಂತ ಬೇರೆ ನನಗೆ ಏನೂ ಬೇಡ ! ನಾನು ಈಗ ಸುಖಿ."

"ಸ್ವಾಮಿ ! ನಿಮ್ಮಂತಹ ಶ್ರೇಷ್ಠ ಕಲಾವಿದರ ಆರಾಧ್ಯ ದೈವವಾಗುವ ಅರ್ಹತೆ ನನಗೆ ಇದೆಯೆ ? ನಾನು ತಮ್ಮ ಕೈಹಿಡಿಯುವಷ್ಟು ಪುಣ್ಯ ಮಾಡಿದ್ದೇನೆಯೇ ?"

"ಏಕೆ ದೇವಿ ?"

"ತಮಗೆ ಈ ಸಂಗತಿ ತಿಳಿದಿರಬಹುದು. ನಾನು ಸ್ವತಂತ್ರಳಲ್ಲ— ಇಲ್ಲಿಗೆ ವಿಜಯವಧುವಾಗಿ ಬಂದವಳು. ಸಾಂಸ್ಕೃತಿಕ ರಾಯಭಾರಿಯಾಗಿ ಉಳಿದಿರುವವಳು. ನನಗೆ ನನ್ನದೆಂಬ ಸ್ವತಂತ್ರ ವ್ಯಕ್ತಿತ್ವವಿಲ್ಲ. ನಾನು ಸಾಮ್ರಾಟರ ಚರಣದಾಸಿ. ಆವರ ಅಪ್ಪಣೆಯಿಲ್ಲದೆ ನಾನು ನಿಮ್ಮನ್ನು ವಿವಾಹವಾಗಲಾರೆ."

"ಇಷ್ಟುತಾನೇ, ನಾನು ಸಾಮ್ರಾಟರನ್ನು ಒಲಿಸಿಕೊಂಡು ನಿನ್ನನ್ನು ವಧುವಾಗಿ ಸ್ವೀಕರಿಸುತ್ತೇನೆ."

"ಇದು ನೀವು ತಿಳಿದಿರುವಷ್ಟು ಸುಲಭವಲ್ಲ."

"ಏಕೆ ?"

"ನಾನು ಸಾಮ್ರಾಟ್ ಹರ್ಷವರ್ಧನ ಹಾಗೂ ಮಹಾರಾಣಿ ರಾಜ್ಯಶ್ರೀ ದೇವಿಯರ ಪಾಲಿತಪುತ್ರಿ. ಅವರ ಅನುಮತಿ ಇಲ್ಲದೆ ಸಾಮ್ರಾಟರು ನನ್ನ ಬಗ್ಗೆ ನಿರ್ಣಯ ಕೈಗೊಳ್ಳಲು ಅಸಮರ್ಥರು."

"ನೀನು ನನ್ನವಳಾಗಲು, ನಾನು ನರಕಕ್ಕೆ ಬೇಕಾದರೂ ಹೋಗಬಲ್ಲೆ !

ಯಾವ ಸಾಹಸ ಕೃತ್ಯಕ್ಕಾದರೂ ಸಿದ್ಧನಿದ್ದೇನೆ. ನೀನು ಈ ಬಗ್ಗೆ ಅಂಜುವ ಕಾರಣವಿಲ್ಲ."

"ನಿಮ್ಮ ಪ್ರಯತ್ನದಲ್ಲಿ ದೇವರು ಯಶಸ್ಸು ಕೊಡಲಿ!" ಎಂದು ಹೇಳಿ ನಾಗಶ್ರೀ ಅಲ್ಲಿ ನಿಲ್ಲದೆ ತನ್ನ ಸೇವಕಿ ವಿನತೆಯೊಡನೆ ಹೊರಟುಹೋದಳು. ಚಂದ್ರೋಜನು ಮಾತ್ರ ಮಿಂಚಿನಂತೆ ಹೊಳೆದು, ಮಿಂಚಿನಂತೆಯೇ ಕರಗಿ ಹೋದ ನಾಗಶ್ರೀ ಹೋದ ದಿಕ್ಕನ್ನೇ ನೋಡುತ್ತಾ ಬಹಳ ಹೊತ್ತು ಹಾಗೆಯೇ ಕುಳಿತಿದ್ದನು. ಅವನಿಗೆ ರಾತ್ರಿಕಳೆದು ಬೆಳಗಾದುದೂ ತಿಳಿಯಲಿಲ್ಲ.

## ೨೨

ಇಂದು ಚಂದ್ರೋಜನ ಅಭೀಷ್ಟ ಈಡೇರಿತ್ತು. ಸಾಮ್ರಾಟ್ ಪುಲಿಕೇಶಿಯು ಚಂದ್ರೋಜನ ಕಲೆಯನ್ನು ಮೆಚ್ಚಿಕೊಂಡು ಅವನು ಬಯಸಿದ ನಾಗಶ್ರೀಯನ್ನು ಅವನಿಗೆ ಅನುಗ್ರಹಿಸಲು ಒಪ್ಪಿದ್ದನು. ಅಷ್ಟೇ ಅಲ್ಲ, ಚಂದ್ರೋಜ-ನಾಗಶ್ರೀ ಇವರ ಪ್ರೇಮ ವಿವಾಹದಲ್ಲಿ ಪರ್ಯವಸಾನವಾಗಲು ಹಾರೈಸಿದ್ದನು. ಅವರಿಬ್ಬರೂ ಪರಸ್ಪರ ಪ್ರೀತಿಸುತ್ತಿರುವ ವಿಷಯ ಪುಲಿಕೇಶಿಗೆ ಸಂತೋಷವನ್ನುಂಟುಮಾಡಿತ್ತು. ಅವನು ಎಂದೂ ವಿರಹಿಯಾಗಿಲ್ಲದಿದ್ದರೂ, ಪ್ರಣಯಿಗಳ ಮನಸ್ಸನ್ನು ಅರಿತುಕೊಳ್ಳಲು ಸಮರ್ಥನಾಗಿದ್ದ. ಅವನ ಯೌವ್ವನದ ಬಹುಪಾಲು ರಣರಂಗದಲ್ಲಿ ದಂಡನಾಯಕರ, ಸೈನಿಕರ ಸಹವಾಸದಲ್ಲಿ ಕಳೆದಿದ್ದರೂ, ಕವಿಹೃದಯ ಹೊಂದಿದ್ದನು. ರವಿಕೀರ್ತಿಯಂತಹ ಮಿತ್ರ, ಗುರುವಿನ ಸಹವಾಸದಲ್ಲಿ ಅವನು ಅನೇಕ ಕಾವ್ಯಗಳನ್ನೂ, ಸಾಹಿತ್ಯಗ್ರಂಥಗಳನ್ನೂ ವ್ಯಾಸಂಗ ಮಾಡಿದ್ದನು. ಅವನಿಗೆ ದಂಡನಾಯಕರಷ್ಟೇ ಸಾಹಿತಿಗಳು, ಕಲಾವಿದರು, ವಿದ್ವಜ್ಜನರು ಪ್ರಿಯರಾಗಿದ್ದರು. ಅವನು ತನ್ನ ವಿರಾಮವನ್ನೆಲ್ಲ ವಿಚಾರ ಗೋಷ್ಠಿಯಲ್ಲೂ, ಪಂಡಿತರೊಡನೆ ಮಾಡುವ ಚರ್ಚೆಯಲ್ಲೂ, ಸಾಹಿತ್ಯ ಸಂಗೀತ ನರ್ತನಗಳಲ್ಲೂ ಕಳೆಯುತ್ತಿದ್ದನು.

ಅವನಿಗೆ ಚಂದ್ರೋಜ, ನಾಗಶ್ರೀಯರ ಇತಿಹಾಸವೆಲ್ಲ ತಿಳಿದಿತ್ತು. ಇಬ್ಬರೂ ಶ್ರೇಷ್ಠ ಕಲಾವಿದರು, ತರುಣ ಪ್ರಣಯಿಗಳು. ಇವರನ್ನು ವಿವಾಹ ದಿಂದ ಒಂದುಗೂಡಿಸಿದರೆ ಅದು ಅದ್ಭುತ ಕಾವ್ಯವಾಗುವುದೆಂದು ಅರಿತಿದ್ದನು. ಅಂತಲೇ ಅವರನ್ನು ಸತಿಪತಿಗಳಾಗಲು ಹೃತ್ಪೂರ್ವಕವಾಗಿ ಹಾರೈಸಿದ್ದನು. ಆದರೆ ಇದಕ್ಕೆ ಒಂದು ಪ್ರತಿಬಂಧಕ ವಿಧಿಸಿದ್ದನು. ಚಂದ್ರೋಜನು ಅರಮನೆಯ ಅಂತಃಪುರದ ಸ್ತ್ರೀಯರ ಸಲುವಾಗಿ ಚಿತ್ರಗಳನ್ನು ಚಿತ್ರಿಸಿದಂತೆ, ಜನ ಸಾಮಾನ್ಯರಿಗೆ ಪರ್ಶಿಯಾ ದೇಶದ ಜನಜೀವನದ ಪರಿಚಯ ಮಾಡಿಕೊಳ್ಳಲು ಅನುಕೂಲವಾಗುವಂತೆ, ಖುಸ್ರು ದೊರೆಯ ಹಾಗೂ ಅವನ ಆಸ್ಥಾನ, ರಾಜಧಾನಿಗಳ ಚಿತ್ರಗಳನ್ನು ಅಜಂತೆಯ ಗೋಡೆಗಳ ಮೇಲೂ ಚಿತ್ರಿಸಲು ಕೋರಿದ್ದನು. ಈ ಕಾರ್ಯ ಪೂರ್ಣವಾದೊಡನೆಯೇ ನಾಗಶ್ರೀಯನ್ನು ಅವನಿಗೆ ವಧುವಾಗಿ ಅರ್ಪಿಸುವುದಾಗಿ ಆಶ್ವಾಸನವಿತ್ತಿದ್ದನು.

ಪುಲಿಕೇಶಿಯ ಆಶಯದಂತೆ, ಚಂದ್ರೋಜನು ಸಂತೋಷದಿಂದಲೇ ಅಜಂತೆಗೆ ಪ್ರಯಾಣ ಬೆಳೆಸಿದನು.

ಅಜಂತೆಯ ಗುಡ್ಡದ ಗವಿಗಳು ವಾಘೋರ ನದಿಯ ದಂಡೆಯಲ್ಲಿ ಇರುವ ಗುಹಾಂತರ್ದೇವಾಲಯಗಳು. ಇವು ಲೋಕಪ್ರಸಿದ್ಧವಾದ ಕಲೆಯ ಆಗರ ವಾಗಿವೆ. ಹಿಂದಿನಿಂದಲೂ ಇಲ್ಲಿ ಅನೇಕ ಬೌದ್ಧ ಭಿಕ್ಷುಗಳು ವಾಸಿಸುತ್ತಿದ್ದರು. ಅವರಲ್ಲಿ ಅನೇಕರು ಶ್ರೇಷ್ಠ ಚಿತ್ರಕಾರರೂ, ಶಿಲ್ಪಿಗಳೂ ಇದ್ದರು. ಅವರು ತಮ್ಮ ವಿರಾಮವನ್ನು ಭಗವಾನ್ ಬುದ್ಧನ ಗತಜೀವನದ ಘಟನೆಗಳನ್ನು ಗೋಡೆಗಳ ಮೇಲೆ ವರ್ಣಗಳಲ್ಲಿ ಚಿತ್ರಿಸಿ, ತಮ್ಮ ಕಲೆಯ ಅಭಿವ್ಯಕ್ತಿಗೊಳಿಸುದರ ಜೊತೆಗೆ, ಅವನ್ನು ನೋಡಲು ಬರುವ ಬಾವುಕ ವ್ಯಕ್ತಿಗಳ ಮನಃಪರಿವರ್ತನೆಗೂ ಕಾರಣರಾಗುತ್ತಿದ್ದರು. ಜನ ತಂಡೋಪತಂಡವಾಗಿ ಈ ಬೌದ್ಧಭಿಕ್ಷುಗಳು ನಿರ್ಮಿಸಿದ್ದ ಕಲಾ ಭಂಡಾರವನ್ನು ಮನತಣಿಯೆ ನೋಡಿ, ಆನಂದಿಸಲು ಬರುತ್ತಿದ್ದರು. ಇದನ್ನು ತಿಳಿದಿದ್ದ ಪುಲಿಕೇಶಿಯು ಜನಸಾಮಾನ್ಯರಿಗೆ ಪರ್ಶಿಯಾ ದೇಶದ ಜನ ಜೀವನದ ಪರಿಚಯಮಾಡಿಕೊಡಲು ಚಂದ್ರೋಜನನ್ನು ನೇಮಿಸಿದ್ದ.

ಅವನು ಅಜಂತೆಗೆ ಬಂದು ಅಲ್ಲಿ ಚಿತ್ರ ಬರೆಯಲು ಯೋಗ್ಯವಾದ ಗೋಡೆಯನ್ನು ಆರಿಸಿ, ತನ್ನ ಮೊದಲನೆಯ ಚಿತ್ರ–ಪರ್ಶಿಯಾದೇಶದ ರಾಯಭಾರಿ

ಗಳು ಪುಲಿಕೇಶಿಯ ಆಸ್ಥಾನಕ್ಕೆ ಆಗಮಿಸಿ ಕಾಣಿಕೆಯನ್ನು ಅರ್ಪಿಸುತ್ತಿರುವ ಚಿತ್ರವನ್ನು ಬರೆಯಲು ಮೊದಲಿಟ್ಟು ಅತ್ಯಲ್ಪ ಕಾಲದಲ್ಲಿ ಪೂರೈಸಿದನು. ಅನಂತರ ಖುಸ್ರು ದೊರೆಯು ತನ್ನ ಪತ್ನಿಯೊಡನೆ ಮದ್ಯಸೇವಿಸುತ್ತಿರುವ ಚಿತ್ರವನ್ನು ಬರೆಯಲುಪಕ್ರಮಿಸಿದನು. ಅದನ್ನು ಮುಗಿಸಲು ಒಂದುವಾರ ಬೇಕಾಯಿತು. ಇನ್ನು ಕೆಲವು ವಾರಗಳು ಸಂತತವಾಗಿ ದುಡಿದರೆ, ತಾನು ಬರೆಯಬೇಕೆಂದಿದ್ದ ಹತ್ತು ಚಿತ್ರಗಳು ಮುಗಿಯುತ್ತಿದ್ದವು. ಅಷ್ಟರೊಳಗಾಗಿ, ವಾತಾಪಿಯಿಂದ ಭಯಂಕರ ವಾರ್ತೆ ಆಗಮಿಸಿತು. ಚಂದ್ರೋಜನು ತಾನು ಕೈಗೊಂಡಿದ್ದ ಕಾರ್ಯವನ್ನು ಅರ್ಧಕ್ಕೇ ನಿಲ್ಲಿಸಿ, ವಾತಾಪಿಗೆ ಓಡಿಬಂದನು. ಅವನು ಬರುವುದರೊಳಗಾಗಿ ನಡೆಯಬಾರದಿದ್ದ ದುರಂತ ವಾತಾಪಿಯಲ್ಲಿ ನಡೆದು ಹೋಗಿತ್ತು !

ಸಾಮ್ರಾಟ್ ಪುಲಿಕೇಶಿಯ ಸಹೋದರ ಕುಬ್ಜವಿಷ್ಣುವರ್ಧನನಿಗೆ ನಾಗಶ್ರೀಯು ಸಾಂಸ್ಕೃತಿಕ ರಾಯಭಾರಿಯಾಗಿ ವಾತಾಪಿಗೆ ಬಂದಲಾಗಾಯ್ತು ಒಂದು ಕಣ್ಣಿತ್ತು. ಹೇಗಾದರೂ ಮಾಡಿ ಅವಳನ್ನು ತನ್ನ ವಶಪಡಿಸಿಕೊಳ್ಳಬೇಕೆಂಬ ಹಂಬಲವಿತ್ತು. ವೇಶ್ಯಾಪುತ್ರಿಯೂ, ರಾಜನರ್ತಕಿಯೂ ಆಗಿದ್ದ ಅವಳು ಸುಲಭವಾಗಿ ತನ್ನ ಚರಣದಾಸಿಯಾಗುವಳೆಂದು ಅವನು ತಿಳಿದಿದ್ದನು. ಆದರೆ ನಾಗಶ್ರೀ ಅವನನ್ನು ಕಣ್ಣೆತ್ತಿ ನೋಡಲು ಹೇಸುತ್ತಿದ್ದಳು.

ವಿಷ್ಣುವರ್ಧನನ ಬಗ್ಗೆ ಅವಳಿಗೆ ತಿರಸ್ಕಾರವಿತ್ತು. ಅವನು ಪುಲಿಕೇಶಿಯ ಸಹೋದರನೆಂದು ಅವನ ಪ್ರೇಮಾಲಾಪವನ್ನೂ, ಕಿರುಕುಳವನ್ನೂ ಸಹಿಸಿಕೊಂಡಿದ್ದಳು. ಅವನ ಧೂರ್ತತನದಿಂದ ಪಾರಾಗಲೆಂದೇ ಅವಳು ಚಂದ್ರೋಜನನ್ನು ಆದಷ್ಟು ಬೇಗ ಮದುವೆಯಾಗಿ ಗೃಹಿಣಿ ಎನಿಸಿಕೊಳ್ಳಲು ಹಾತೊರೆದಿದ್ದಳು. ತಾನು ವೇಶ್ಯಾಪುತ್ರಿಯಾಗಿದ್ದುದೇ ಗರತಿಯಾಗಿ ಬಾಳಲು ಶಾಪವಾಗಬಹುದೆಂದು ಅವಳು ಕನಸುಮನಸಿನಲ್ಲಿ ತಿಳಿದಿರಲಿಲ್ಲ. ಅವಳೊಂದು ನೆನೆದಿದ್ದರೆ ದೈವವೊಂದು ನೆನೆಯಿತು.

ವಿಷ್ಣುವರ್ಧನನು ಮಂಗಳೇಶನ ಮಾತು ಕೇಳಿಕೊಂಡು ಪುಲಿಕೇಶಿಯ ವಿರುದ್ಧ ಕತ್ತಿ ಕಟ್ಟಿದ್ದರೂ, ವಿದ್ರೋಹಿಯಾಗಿದ್ದ ಅವನನ್ನು ಪುಲಿಕೇಶಿಯು ಉದಾರವಾಗಿ ಕ್ಷಮಿಸಿ ಒಡಹುಟ್ಟಿದ ಸಹೋದರನಂತೆಯೇ ನಡೆಸಿಕೊಂಡಿದ್ದನು. ತಾನು ಸಾಮ್ರಾಟನಾದಮೇಲೆ ಅವನಿಗೆ ಯುವರಾಜ ಪದವಿಯನ್ನು ಅನುಗ್ರಹಿ

ಸಿದ್ದನು. ತಮ್ಮಿಬ್ಬರ ನಡುವೆ ಉಂಟಾಗಿದ್ದ ವೈಷಮ್ಯವನ್ನು ತನ್ನ ನಿರ್ಮಲ ಪ್ರೀತಿಯಿಂದ ತೊಳೆದಿದ್ದನು. ಇಷ್ಟಾದರೂ ವಿಷ್ಣುವರ್ಧನನು ತನ್ನ ಧೂರ್ತ ತನವನ್ನು ಸಂಪೂರ್ಣವಾಗಿ ತೊರೆದಿರಲಿಲ್ಲ. ಅದು ನಾಗಶ್ರೀಯ ಪ್ರಸಂಗದಲ್ಲಿ ಚೆನ್ನಾಗಿ ಪ್ರಕಟವಾಯಿತು.

ಕುಬ್ಜ ವಿಷ್ಣುವರ್ಧನನಿಗೆ ವಿವಾಹ ವಯಸ್ಸಾಗಿದ್ದರೂ ಅವನ ಕುರೂಪ ವನ್ನು ಕಂಡು ಯಾವ ರಾಜಪುತ್ರಿಯೂ ಅವನ ಕೈಹಿಡಿಯಲು ಮುಂದೆ ಬಂದಿರ ಲಿಲ್ಲ. ಅವನು ಶ್ರೇಷ್ಠವಾದ ಚಾಲುಕ್ಯವಂಶದಲ್ಲಿ ಹುಟ್ಟಿ ಸಾಮಾನ್ಯ ಸ್ತ್ರೀಯನ್ನು ಮದುವೆಯಾಗಲು, ವಂಶದ ಹೆಗ್ಗಳಿಕೆ ಅಡ್ಡ ಬಂದಿತ್ತು. ಅವನು ಗೂನು ಬೆನ್ನಿನ, ದುರ್ಬಲ ವ್ಯಕ್ತಿಯಾಗಿದ್ದ. ಇದುವರೆಗೆ ಯಾರೂ ಅವನಿಗೆ ಒಲಿದು ಬಂದಿರಲಿಲ್ಲ. ಎಲ್ಲರೂ ಅವನನ್ನು ಹೊರಗೆ ಗೌರವಿಸುತ್ತಿದ್ದರೂ, ಒಳಗೆ ಅಪ ಹಾಸ್ಯ ಮಾಡುತ್ತಿದ್ದರು. ಇದನ್ನು ತಿಳಿದಿದ್ದ ವಿಷ್ಣುವರ್ಧನನು ಯಾರನ್ನೂ ಪ್ರೀತಿಸಲು ಹೋಗಿರಲಿಲ್ಲ. ಇದರಿಂದ ತಾನು ಅಪಮಾನಿತವಾಗುವುದು ಸಿದ್ಧ ವೆಂದು ತಿಳಿದಿದ್ದ ಅವನು ಯಾರನ್ನೂ ಒಲಿಸಿಕೊಳ್ಳುವ ಪ್ರಯತ್ನ ಮಾಡಿರಲಿಲ್ಲ.

ಆದರೆ ಅವನು ನಾಗಶ್ರೀಯನ್ನು ನೋಡಿದಲಾಗಾಯಿತು, ಮನಸ್ಸು ಚಂಚಲವಾಗಿತ್ತು. ಮೇಲಿಂದ ಮೇಲೆ ಅವಳನ್ನು ತನ್ನವಳಾಗಿ ಮಾಡಿಕೊ ಳ್ಳುವ ಬಯಕೆ ಮೂಡಿತ್ತು. ಅವಳನ್ನು ಎಷ್ಟು ನೋಡಿದರೂ ಮನಸ್ಸಿಗೆ ತೃಪ್ತಿ ಇರಲಿಲ್ಲ. ಅವಳ ಹೆಸರನ್ನು ಕೇಳಿದರೆ ಹೃದಯ ಹಿಗ್ಗುತ್ತಿತ್ತು. ಅವಳ ಸಲು ವಾಗಿ ಅವನು ಯಾವ ತ್ಯಾಗಕ್ಕೂ ಸಿದ್ಧನಾಗಿದ್ದನು. ಆದರೆ ನಾಗಶ್ರೀ ಮಾತ್ರ ಅವನ ಕಡೆ ಕತ್ತೆತ್ತಿ ನೋಡಿರಲಿಲ್ಲ. ಇದರಿಂದ ಅವನ ಸ್ವಾಭಿಮಾನಕ್ಕೆ ಬರೆ ಇಟ್ಟಂತೆ ಆಗಿತ್ತು.

ನಾಗಶ್ರೀಯ ಬಗ್ಗೆ ವಿಷ್ಣುವರ್ಧನನಿಗೆ ಇದ್ದ ಅಭಿಪ್ರಾಯವೇ ಬೇರೆ ರೀತಿಯಾಗಿತ್ತು. ಅವಳು ಕುಲಾಂಗನೆಯಲ್ಲ—ವೇಶ್ಯಾಪುತ್ರಿ; ರಾಜನರ್ತಕಿ ಯಾದರೂ ಇನ್ನೂ ಅನಾಘ್ರಾಣಿತ ಕುಸುಮ. ಅವಳು ಒಳ್ಳೆ ಕಲಾವಿದಳಾದ ಕುಲೀನ ಮನೆತನದ ಹೆಣ್ಣು ಮಗಳಂತೆ ಶುಭ್ರಚಾರಿತ್ರ್ಯದಲ್ಲಿ ಜೀವಿಸುತ್ತಿ ದ್ದರೂ ಅವಳನ್ನು ತಾನು ಬಯಸುವುದರಲ್ಲಿ ಯಾವ ಅಪರಾಧವೂ ಕಾಣಲಿಲ್ಲ.

ಆದರೆ ನಾಗಶ್ರೀ ಪಾಲಿಗೆ ಇದೆಲ್ಲ ಅಸಹಜವರ್ತನೆಯಾಗಿತ್ತು. ಮಾತ್ರವಲ್ಲ– ಸಾಮ್ರಾಟ್ ಪುಲಿಕೇಶಿಯ ಸಹೋದರನಿಂದ ನಿರೀಕ್ಷಿಸದೆ ಇದ್ದ ಅಸಭ್ಯ ವರ್ತನೆಯಾಗಿ ತೋರಿತ್ತು. ಅವಳು ಪುಲಿಕೇಶಿಯ ಮುಖ ನೋಡಿಕೊಂಡು ವಿಷ್ಣುವರ್ಧನನ ಕಾಮಚೇಷ್ಟೆಯನ್ನೂ, ಪೀಡನೆಯನ್ನೂ ಸಹಿಸಿಕೊಂಡಿದ್ದಳು. ಅವಳ ಮೌನವನ್ನು ವಿಷ್ಣುವರ್ಧನನು ಸಮ್ಮತಿ ಎಂದು ತಿಳಿಯುವಂತೆ ಆಗಿತ್ತು.

ಆ ದಿನ ಅವನು ತನ್ನ ಪ್ರೇಮಸಾಫಲ್ಯ ಪಡೆಯಬೇಕೆಂದು ನಾಗಶ್ರೀಯ ಮನೆಗೆ ವಿಟಪುರುಷನಂತೆ ಸಿಂಗರಿಸಿಕೊಂಡು ಬಂದಿದ್ದನು.

ನಾಗಶ್ರೀ ರಾಜಬಂಧುವೂ, ಯುವರಾಜ ಕುಮಾರನೂ ಆಗಿದ್ದ ಅವನನ್ನು ವಿಶ್ವಾಸದಿಂದಲೇ ಬರಮಾಡಿಕೊಂಡಳು. ಆದರೆ ಅವನ ಸೇವಕರಿಂದ ಹೊರಿಸಿ ಕೊಂಡು ಬಂದಿದ್ದ ಬೆಲೆಬಾಳುವ ಒಡವೆವಸ್ತುಗಳನ್ನು ಮಾತ್ರ ಅವಳು ಸ್ವೀಕ ರಿಸಲಿಲ್ಲ. ಅವುಗಳ ಬಗ್ಗೆ ಕೂತೂಹಲವನ್ನೂ ವ್ಯಕ್ತಪಡಿಸಲಿಲ್ಲ. ವಿಷ್ಣುವರ್ಧ ನನು ಸೇವಕರು ತಂದಿತ್ತ ತಟ್ಟೆಗಳನ್ನು ಒಂದೊಂದಾಗಿ ಹೊರಹೊದಿಕೆಯನ್ನು ತೆರೆದು, ಅವುಗಳಲ್ಲಿದ್ದ ಬೆಲೆಬಾಳುವ ಮುತ್ತು ರತ್ನಗಳ ಒಡವೆ ವಸ್ತುಗಳನ್ನೂ, ರತ್ನಹಾರಗಳನ್ನೂ, ಪೀತಾಂಬರಗಳನ್ನೂ, ರೇಷ್ಮೆವಸ್ತ್ರಗಳನ್ನೂ ತೋರಿಸಿ ದನು. ಇನ್ನೊಂದು ತಟ್ಟೆಯಲ್ಲಿ ಅತ್ತರು, ಚಂದನ, ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳನ್ನು ಇಡಲಾಗಿತ್ತು. ಇವುಗಳನ್ನು ತನ್ನ ಪ್ರೀತಿಯ ಕಾಣಿಕೆಯಂತೆಯೇ ತನ್ನ ಶ್ರೀಮಂತಿಕೆ, ಅಧಿಕಾರ ವೈಭವಗಳನ್ನು ಪ್ರದರ್ಶಿಸಲು ತಂದಿದ್ದನು. ನಾಗಶ್ರೀ ಮಾತ್ರ ಇವುಗಳೊಂದನ್ನೂ ಅಪೇಕ್ಷಿಸಲಿಲ್ಲ. ಎಲ್ಲವನ್ನೂ ತಿರಸ್ಕಾರದಿಂದಲೇ ನೋಡಿದಳು.

"ನಾಗಶ್ರೀ, ನೀನು ಇಷ್ಟರಿಂದಲೇ ನನ್ನ ಔದಾರ್ಯವನ್ನು ಅಳೆಯ ಬಾರದು. ನೀನು ನನ್ನವಳಾದರೆ, ಈ ನಾಡಿನ ಮಹಾರಾಜ್ಞಿಯಾಗಿ ಮಾಡು ತ್ತೇನೆ, ನಿನ್ನನ್ನು ಸ್ವರ್ಗಸುಖದಲ್ಲಿ ಮುಳುಗಿಸುತ್ತೇನೆ" ಎಂದು ಹೇಳಿದನು.

"ದಾಸಿಯ ಮೇಲೆ ಯುವರಾಜಕುಮಾರರ ಅನುಗ್ರಹ ಹೆಚ್ಚಾಯಿತು. ನಾನು ಇವುಗಳಿಗೆ ಸರ್ವಥಾ ಪಾತ್ರಳಲ್ಲ. ತಾವು ದಯವಿಟ್ಟು ಇವುಗಳನ್ನು ಹಿಂದಕ್ಕೆ ತೆಗೆದುಕೊಂಡು ಹೋಗಬೇಕು."

"ಏನು, ನಾನು ಪ್ರೀತಿಯಿಂದ ಕೊಟ್ಟ ಕಾಣಿಕೆಯನ್ನು ತಿರಸ್ಕರಿಸುವೆಯಾ ?" ಅಸಮಾಧಾನದಿಂದ ವಿಷ್ಣುವರ್ಧನ ಹೇಳಿದ.

"ಇಲ್ಲ, ಯುವರಾಜಕುಮಾರರೇ, ಇಷ್ಟೊಂದು ಕೃಪೆಗೆ ನಾನು ಸರ್ವಥಾ ಬಾಧ್ಯಳಲ್ಲವೆಂದಷ್ಟೇ ಹೇಳಿದೆ. ಇದರಲ್ಲಿ ತಮಗೆ ಅಪಚಾರವೆಸಗುವ ಸಂಗತಿ ಎಳ್ಳಷ್ಟೂ ಇಲ್ಲ."

"ಹಾಗಾದರೆ ನಾನು ಪ್ರೀತಿವಿಶ್ವಾಸಗಳಿಂದ ತಂದಿತ್ತಿರುವ ಈ ಒಡವೆ ವಸ್ತುಗಳನ್ನು ನೀನೇಕೆ ತಿರಸ್ಕರಿಸುತ್ತಿರುವೆ ?"

"ಸಾಮ್ರಾಟರು ಇಲ್ಲಿ ನನಗೆ ಯಾವುದಕ್ಕೂ ಕಡಿಮೆಮಾಡಿಲ್ಲ ! ನನ್ನನ್ನು ತಮ್ಮ ಮಗಳೆಂಬಂತೆ ನೋಡಿಕೊಂಡಿದ್ದಾರೆ. ಅಲ್ಲದೆ ನನಗೆ ಇವುಗಳ ಅವಶ್ಯಕತೆಯೂ ಇಲ್ಲ–ಇವುಗಳಲ್ಲಿ ನನಗೆ ಆಸಕ್ತಿಯೂ ಇಲ್ಲ !"

"ನಾಗಶ್ರೀ, ನೀನು ರಾಜನರ್ತಕಿ—ಎಂಬುದನ್ನು ಮರೆತಿರುವಂತಿದೆ!"

"ಇಲ್ಲ ಪ್ರಭು, ಮರೆತಿಲ್ಲ. ನಾನು ಸಾಮ್ರಾಟರ ಚರಣದಾಸಿ ಎಂಬುದನ್ನು ಚೆನ್ನಾಗಿ ನೆನಪಿನಲ್ಲಿ ಇಟ್ಟಿದ್ದೇನೆ. ಈ ದೇಹ ಬೆಳೆಯುತ್ತಿರುವುದಾದರೂ ಅವರ ಋಣದಿಂದಲೇ. ಇದನ್ನು ನಾನು ಹೇಗೆ ಮರೆಯಲಿ ?"

"ಆ ಋಣವನ್ನು ನೆನೆಯುತ್ತಿದ್ದರೆ ನೀನು ನನ್ನನ್ನು ಇಷ್ಟು ಉಪೇಕ್ಷೆಯಿಂದ ನೋಡುತ್ತಿರಲಿಲ್ಲ. ನಾನು ಪ್ರೀತಿ ವಿಶ್ವಾಸಗಳ ದ್ಯೋತಕವಾಗಿ ತಂದ ಈ ಬೆಲೆಬಾಳುವ ವಸ್ತುಗಳನ್ನೂ ತಿರಸ್ಕಾರದಿಂದ ನೋಡುತ್ತಿರಲಿಲ್ಲ."

"ನನ್ನಿಂದ ಅಪಚಾರವಾಗಿದ್ದರೆ ಕ್ಷಮಿಸಬೇಕು. ನನಗೆ ಇದಾವುದರ ಅವಶ್ಯಕತೆಯಿಲ್ಲ. ಇದ್ದಿದ್ದರೆ ಸ್ವೀಕರಿಸುತ್ತಿದ್ದೆ.

"ನೀನು ರಾಜನರ್ತಕಿ ಎಂಬುದನ್ನು ಮರೆಯಬಾರದು. ಅದನ್ನು ಮರೆತರೂ ನೀನು ವೇಶ್ಯಾಪುತ್ರಿ ಎಂಬುದನ್ನು ಮರೆಯಬಾರದು."

"ನಾನು ವೇಶ್ಯಾಪುತ್ರಿಯಾದರೇನು ? ಗರತಿಯಂತೆ ಬಾಳುತ್ತಿದ್ದೇನೆ. ನನಗೆ ಯಾವುದೇ ವಿಲಾಸ ಭೋಗಗಳಲ್ಲಿ ಮನಸ್ಸಿಲ್ಲ. ನನಗೆ ಇವುಗಳನ್ನೆಲ್ಲ ಕಂಡರೆ ಅಸಹ್ಯವಾಗುತ್ತದೆ. ನನ್ನನ್ನು ವೇಶ್ಯಾಪುತ್ರಿ ಎಂದು ತಿಳಿದು ಇವುಗಳನ್ನೆಲ್ಲ ತರುವ ವ್ಯಕ್ತಿಗಳನ್ನು ಕಂಡರೆ ಆಪಾದಮಸ್ತಕ ಮೈಉರಿಯುತ್ತದೆ."

"ಹಾಗಾದರೆ ನೀನು ವೇಶ್ಯಾಪುತ್ರಿಯಾಗಿರುವುದು ಸುಳ್ಳೆ ? ರಾಜನರ್ತಕಿ ಯಾಗಿರುವುದು ಸುಳ್ಳೆ ?"

ಈ ಮಾತಿಗೆ ನಾಗಶ್ರೀ ಉತ್ತರ ಹೇಳದೆ ವಿಷ್ಣುವರ್ಧನನನ್ನು ನುಂಗುವಂತೆ ದುರುದುರನೆ ನೋಡಿದಳು.

"ಯುವರಾಜಕುಮಾರರೇ, ನಾನು ವೇಶ್ಯೆಯ ಹೊಟ್ಟೆಯಲ್ಲಿ ಹುಟ್ಟಿದವಳೆಂಬುದೇನೋ ನಿಜ. ಆದರೆ ನಾನು ವೇಶ್ಯೆಯಲ್ಲ. ನಾನು ರಾಜನರ್ತಕಿಯಾಗಿರಬಹುದು. ಆದರೆ ದೇವದಾಸಿಯಲ್ಲ. ನಾನು ಗಣಿಕೆಯಲ್ಲ—ಗರತಿ ಈ ಮಾತನ್ನು ತಾವು ಮರೆಯಬಾರದು."

"ವೇಶ್ಯೆ ಎಷ್ಟೇ ಋಜುಜೀವನ ನಡಸಲಿ, ವೇಶ್ಯೆಯಾದಮೇಲೆ ಅವಳು ವೇಶ್ಯೆಯೇ, ಅವಳು ಗೃಹಣಿಯಾಗಲು ಸಾಧ್ಯವಿಲ್ಲ. ನಾಗಶ್ರೀ, ನೀನು ನಿನ್ನ ರೂಪ, ಯೌವ್ವನಗಳಿಗೆ ಸಲ್ಲದ ಆದರ್ಶಗಳನ್ನು ನೆಚ್ಚಿ ಏಕೆ ಕಂಗೆಡುವೆ ! ನೀನು ನನ್ನ ಮಾತು ಕೇಳು. ನನ್ನ ಪ್ರೀತಿಯನ್ನು ತಿರಸ್ಕರಿಸಬೇಡ. ನೀನು ನನ್ನವಳಾದರೆ ನಿನಗೆ ಈ ರಾಜ್ಯದಲ್ಲಿ ಹಿಂದೆ ಯಾವ ಹೆಣ್ಣೂ ಅನುಭವಿಸದ ಸಿರಿ ಸಂಪತ್ತು ವಿಲಾಸ ವೈಭವಗಳಲ್ಲಿ ನಿನ್ನನ್ನು ಮುಳುಗಿಸುತ್ತೇನೆ. ನೀನು ನಾಡಿನ ಸಾಮ್ರಾಜ್ಞಿಯಾಗಿ ಬಾಳಬಹುದು. ನನ್ನ ಮಾತನ್ನು ತಿರಸ್ಕರಿಸಬೇಡ ಚೆನ್ನಾಗಿ ಯೋಚಿಸು. ಇದು ದುಡುಕುವ ವಿಷಯವಲ್ಲ" ಎಂದು ಗಂಭೀರ ಧ್ವನಿಯಲ್ಲಿ ಹೇಳಿದನು.

"ಯುವರಾಜಕುಮಾರರೇ, ಬೇರೊಂದು ಪ್ರಸಂಗದಲ್ಲಿ ತಮ್ಮ ಸಲಹೆಗೆ ನಾನು ಕೃತಜ್ಞಳಾಗಿರುತ್ತಿದ್ದೆ. ಆದರೆ ಈಗ ನಿಮ್ಮ ಕೋರಿಕೆಯನ್ನು ತಿರಸ್ಕರಿಸಬೇಕಾಗಿದೆ. ಏಕೆಂದರೆ ನನಗೆ ವಿವಾಹ ಗೊತ್ತಾಗಿದೆ. ನಾನು ವರ್ಣಶಿಲ್ಪಿ ಚಂದ್ರೋಜರ ಕೈಹಿಡಿದು ಇಷ್ಟರಲ್ಲಿಯೇ ಗೃಹಿಣಿಯಾಗಲಿದ್ದೇನೆ !" ಎಂದು ಶಾಂತವಾಗಿ ಹೇಳಿದಳು ನಾಗಶ್ರೀ.

"ಏನು, ಆ ಚಿತ್ರಕಾರರನ್ನು ಮದುವೆಯಾಗುವೆಯಾ ?"

—ಆಶ್ಚರ್ಯದಿಂದ ವಿಷ್ಣುವರ್ಧನ ಕೇಳಿದ.

"ಹೌದು, ಯುವರಾಜಕುಮಾರರೇ. ನಾವಿಬ್ಬರೂ ಪರಸ್ಪರರು ಪ್ರೀತಿಸುತ್ತಿದ್ದೇವೆ. ಇದಕ್ಕೆ ಸಾಮ್ರಾಟರೂ ಸಮ್ಮತಿಸಿ ಆಶೀರ್ವದಿಸಿದ್ದಾರೆ."

"ಹಾಗಾದರೆ....ಹಾಗಾದರೆ, ನೀನು...." ಮುಂದೆ ಮಾತು ಹೊರಡದಾಯಿತು ವಿಷ್ಣುವರ್ಧನನಿಗೆ.

"ಹೌದು, ನಾನು ಚಂದ್ರೋಜರ ಧರ್ಮಪತ್ನಿ—ನಾಗಶ್ರೀ."

ನಾಗಶ್ರೀ ತುಂಟನಗೆ ನಗುತ್ತಾ ಉತ್ತರಕೊಟ್ಟಳು.

"ನಾಗಶ್ರೀ, ಇದು ನಕ್ಕು ಮರೆಸುವ ವಿಷಯವಲ್ಲ. ಚೆನ್ನಾಗಿ ನೆನಪಿನಲ್ಲಿಡು." ವಿಷ್ಣುವರ್ಧನ ಕೆರಳಿ ಹೇಳಿದ.

"ನನ್ನನ್ನು ಹೆದರಿಸಿದ ಮಾತ್ರಕ್ಕೆ ನಿಮ್ಮ ವಶವಾಗುವ ಹೆಣ್ಣು ನಾನೆಂದು ತಿಳಿದಿದ್ದರೆ ಅದು ನಿಮ್ಮ ತಪ್ಪುಕಲ್ಪನೆ."

"ನಾಗಶ್ರೀ, ಸಾಕುಮಾಡು. ನಿನ್ನ ವ್ಯರ್ಥಾಲಾಪ ! ನೀನು ವೇಶ್ಯಾಪುತ್ರಿ. ಈ ಜನ್ಮದಲ್ಲಿ ಗರತಿಯಾಗಲಾರೆ."

"ನಾನು ಈಗ ವೇಶ್ಯಾಪುತ್ರಿ ನಾಗಶ್ರೀಯಲ್ಲ–ಚಂದ್ರೋಜರ ಧರ್ಮಪತ್ನಿ ನಾಗಶ್ರೀ! ನನ್ನನ್ನು ಪೀಡಿಸಲು ಬಂದವರಿಗೆ ಪರಸ್ತ್ರೀಯರನ್ನು ಕಾಮಿಸಿ ಬಂದವರ ಪಾಡಾಗುವುದೆಂಬುದನ್ನು ನಾನು ತಮಗೆ ತಿಳಿಸಿಕೊಡಬೇಕಾಗಿದೆ."

"ಹಾಗಾದರೆ ಇದೇ ನಿನ್ನ ಅಂತಿಮ ನಿರ್ಧಾರವೆ ?"

"ಹೌದು. ಸಾಮ್ರಾಟ್ ಹರ್ಷವರ್ಧನ–ಮಹಾರಾಣಿ ರಾಜ್ಯಶ್ರೀ ದೇವಿಯವರ ಪಾಲಿತ ಪುತ್ರಿ ಎಂದೂ ಸುಳ್ಳಾಡುವುದಿಲ್ಲ."

"ಹಾಗಾದರೆ ಈ ಮಾತನ್ನು ನೀನು ಈಗಲೇ ಸೆರಗಿಗೆ ಕಟ್ಟಿಕೋ. ವೇಶ್ಯಾಪುತ್ರಿ ಎಂದಿಗೂ ಗೃಹಿಣಿಯಾಗಲಾರಳು. ಸಮಾಜ ಒಪ್ಪದ ನಿಮ್ಮ ದಾಂಪತ್ಯದ ಸಮಾಜದಲ್ಲಿ ಸ್ಥಾನವಿಲ್ಲ. ಎಂದಿದ್ದರೂ ನೀನು ವೇಶ್ಯೆ ! ಕಂಡವರ ಭೋಗಕ್ಕೆ ಹೆಣ್ಣು ! ನಾನು ಬದುಕಿದ್ದರೆ ನಿನ್ನನ್ನು ನನ್ನ ಭೋಗದ ಕಾಂತೆಯನ್ನಾಗಿ ಮಾಡಿಕೊಳ್ಳದೆ ಬಿಡುವುದಿಲ್ಲ. ನಿನ್ನನ್ನು ಕೈಹಿಡಿದು, ನನ್ನ ಅಂತಃಪುರದ ದಾಸಿಯಾಗಿ ಮಾಡಿಕೊಳ್ಳದೆ ಇದ್ದರೆ ನಾನು ಕುಬ್ಜ ವಿಷ್ಣುವರ್ಧನನಲ್ಲ ! ಈ ಮಾತು ಚೆನ್ನಾಗಿ ನೆನಪಿನಲ್ಲಿಡು ! ಈಗಲೂ ಕಾಲ ಮಿಂಚಿಲ್ಲ. ನಿನ್ನ ನಿರ್ಧಾರವನ್ನು ನಾಳೆಗೆ ತಿಳಿಸು" ಎಂದು ಹೇಳಿ ವಿಷ್ಣುವರ್ಧನನು ಬಿರುಗಾಳಿಯ ವೇಗದಲ್ಲಿ ಅಲ್ಲಿಂದ ಹೊರಟು ಹೋದನು. ಅವನ ಹಿಂದೆ ಸೇವಕರು ತಾವು ತಂದಿದ್ದ ವಸ್ತುಗಳನ್ನೆಲ್ಲ ಹೊತ್ತುಕೊಂಡು ಹೊರಟರು. ಅವರಿಗೆ ಈ ಎಲ್ಲ ಆಗಮನ ನಿರ್ಗಮನಗಳು, ಅಚ್ಚರಿಯನ್ನುಂಟುಮಾಡಿದ್ದವು. ಅವರು ಮನ್ಮೂಕರಾಗಿ ಹಿಂದಿರುಗಿದರು.

ನಾಗಶ್ರೀಗೆ ವಿಷ್ಣುವರ್ಧನನ ಮಾತು ಪೊಳ್ಳುಬೆದರಿಕೆಯಲ್ಲವೆಂಬುದು

ತಿಳಿದಿತ್ತು. ತಾನು ಅವನನ್ನು ತಿರಸ್ಕರಿಸಿ, ಅವನ ದ್ವೇಷವನ್ನು ಸೆರಗಿಗೆ ಕಟ್ಟಿಕೊಂಡಂತಾಯಿತೆಂದು ತಿಳಿದಳು. ಆದರೆ ನಿರ್ವಾಹವಿರಲಿಲ್ಲ. ಇಂದಲ್ಲ ನಾಳೆ ಅವನನ್ನು ತಿರಸ್ಕರಿಸಬೇಕಾಗಿತ್ತು. ಅವನ ಉಪಟಳಕ್ಕೆ ಕೊನೆ ತರಬೇಕಾಗಿತ್ತು. ಇಂದು ಅದು ನೆರವೇರಿತೆಂದು ಅವಳು ಭಾರವಾದ ನಿಟ್ಟುಸಿರುಬಿಟ್ಟಳು.

ಇದರಿಂದ ಅವಳಿಗೆ ಸಮಾಧಾನ ಮಾತ್ರವಾಗಲಿಲ್ಲ. ಇದುವರೆಗೆ ಇದ್ದ ಒಂದು ಚಿಂತೆ–ಇಂದು ನೂರುಚಿಂತೆಯಾಗಿ ಮಾರ್ಪಟ್ಟಿತ್ತು. ಇದುವರೆಗೆ ವಿಷ್ಣುವರ್ಧನನು ತನ್ನ ಕಾಮಚೇಷ್ಟೆಯಿಂದ ಪೀಡಿಸುತ್ತಿರುವನೆಂಬ ಒಂದು ಚಿಂತೆ ಇತ್ತು. ಈಗ ಅವನು ತನ್ನಿಂದ ಪರಾಜಿತನಾದ ಮೇಲೆ, ಅಪಮಾನಗೊಂಡ ಮೇಲೆ, ತನ್ನ ಮೇಲೆ ಸೇಡುತೀರಿಸಿಕೊಳ್ಳದೆ ಇರುವುದಿಲ್ಲ. ಜೊತೆಗೆ ತನ್ನ ಕಾರಣದಿಂದ ಚಂದ್ರೋಜನನ್ನು ತೊಂದರೆಗೊಳಪಡಿಸುವುದೂ ಸಹಜ. ತನ್ನ ಮೇಲಿನ ಸಿಟ್ಟನ್ನು ವಿಷ್ಣುವರ್ಧನನು ನಿರಪರಾಧಿಯಾದ ಚಂದ್ರೋಜನ ಮೇಲೆ ತೀರಿಸಿಕೊಳ್ಳುವುದು ಯಾವ ನ್ಯಾಯ? ತಾನು ಈ ಬಗ್ಗೆ ದುಡುಕಿದೆನೆ? ನಾಗಶ್ರೀಗೆ ತುಂಬಾ ಉಮ್ಮಳವಾಯಿತು. ಅವಳು ವಿಷ್ಣುವರ್ಧನನು ಹೊರಟು ಹೋದ ಮೇಲೆ ಹಾಸಿಗೆಯ ಮೇಲೆ ಉರುಳಿ ಗಳಗಳನೆ ಅತ್ತಳು.

ನಾಗಶ್ರೀಯಿಂದ ತಿರಸ್ಕೃತನಾಗಿ ಅರಮನೆಗೆ ಹಿಂದಿರುಗಿದ ವಿಷ್ಣುವರ್ಧನನಿಗೂ ಮನಸ್ಸಮಾಧಾನವಿರಲಿಲ್ಲ. ಅವನು ಮೆಟ್ಟಿದ ಫಣಿರಾಜನಂತೆ ಕೋಪದಿಂದ ಬುಸುಗುಟ್ಟುತ್ತಿದ್ದನು. ನಾಗಶ್ರೀ ಅವನನ್ನು ಧಿಕ್ಕರಿಸಿ ನುಡಿದಿದ್ದಳು. ಅವನು ತಂದಿತ್ತ ಒಡವೆ ವಸ್ತುಗಳನ್ನೆಲ್ಲಾ ತಿರಸ್ಕರಿಸಿದ್ದಳು. ಇದು ಯುವರಾಜಕುಮಾರನಾಗಿದ್ದ ವಿಷ್ಣುವರ್ಧನನಿಗೆ ಅಪಮಾನವಾಗಿತ್ತು. ಹಿಂದೆಂದೂ ಅವನಿಗೆ ಈ ಬಗೆಯ ಅಪಮಾನ–ಪರಾಭವಗಳು ಆಗಿರಲಿಲ್ಲ. ಅವನು ನಾಗಶ್ರೀಯ ಮೇಲೆ ಕಿಡಿಕಿಡಿಯಾಗಿ ಹಲ್ಲುಕಡಿದನು, ಮುಷ್ಟಿಬಿಗಿದನು. ತನಗಾದ ಅಪಮಾನಕ್ಕೆ ನಾಗಶ್ರೀಯ ಮೇಲೆ ಸೇಡು ಬಗೆಯದೆ ಇದ್ದರೆ ತಾನು ವಿಷ್ಣುವರ್ಧನನಲ್ಲ ಎಂದು ಹೇಳಿಕೊಂಡು ಔಡುಕಚ್ಚಿದನು. ಕೂಡಲೇ ಆ ದುರುಳನ ತಲೆಯಲ್ಲಿ ಒಂದು ಕಾರಾಸ್ಥಾನ ಸಿದ್ಧವಾಯಿತು. ಅವನು ಉಪಾಯಾಂತರದಲ್ಲಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳಲು ಪ್ರಧಾನ ಅಮಾತ್ಯನಾದ ಸಮಂತಭದ್ರನನ್ನು ಕಾಣಲು ಹೊರಟನು.

ಅಮಾತ್ಯ ಸಮಂತಭದ್ರನು ಆಗಷ್ಟೇ ಅರಮನೆಯಿಂದ ಹಿಂತಿರುಗಿ ತನ್ನ

ದೇವತಾರ್ಚನೆಗೆ ಸಿದ್ಧನಾಗುತ್ತಿದ್ದನು. ಅದಾದ ಮೇಲೆ ಭೋಜನ. ಅನಂತರ ವಿಶ್ರಾಂತಿ. ಈ ಅವಧಿಯಲ್ಲಿ ಅವನನ್ನು ಯಾರೂ ನೋಡಲೂ ಸಾಧ್ಯವಿರಲಿಲ್ಲ. ಆದರೆ ತನ್ನನ್ನು ನೋಡಲು ಯುವರಾಜಕುಮಾರ ವಿಷ್ಣುವರ್ಧನನು ಬಂದಿರುವನೆಂದು ತಿಳಿದೊಡನೆಯೇ ಸಮಂತಭದ್ರನೇ ಹೊರಗೆ ಬಂದು ಅವನನ್ನು ವಿಶ್ವಾಸದಿಂದ ಬರಮಾಡಿಕೊಂಡು ಅಂತರಗೃಹಕ್ಕೆ ಕರೆದೊಯ್ದನು.

"ಕುಮಾರರು ಇದ್ದಕ್ಕಿದ್ದಂತೆ ಇತ್ತ ದಯಮಾಡಿಸೋಣವಾಗಿದೆ. ನನ್ನಿಂದೇನಾಗಬೇಕೋ ನಿಸ್ಸಂಕೋಚದಿಂದ ತಿಳಿಸುವ ಕೃಪೆಮಾಡಬೇಕು!" ಎಂದು ಹೇಳಿದ ಸಮಂತಭದ್ರ, ವಿಷ್ಣುವರ್ಧನ ಆಸನದಲ್ಲಿ ಕುಳಿತಮೇಲೆ.

"ಅಮಾತ್ಯರೇ, ತಮ್ಮಲ್ಲಿ ಒಂದು ಆಪ್ತಾಲೋಚನೆ ಮಾಡುವುದಿತ್ತು. ನೀವೇನೂ ತಿಳಿಯದಿದ್ದರೆ ನಿವೇದಿಸಿಕೊಳ್ಳುತ್ತೇನೆ."

"ಕುಮಾರರೇ, ನನಗೆ ನೀವು ಬೇರೆಯಲ್ಲ, ಸಾಮ್ರಾಟರು ಬೇರೆಯಲ್ಲ. ಅವರು ನನ್ನನ್ನು ತಮ್ಮ ಅಂತರಂಗಕ್ಕೆ ತೆಗೆದುಕೊಂಡಿರುವಂತೆ ನೀವೂ ನನ್ನನ್ನು ಅಂತರಂಗಕ್ಕೆ ತೆಗೆದುಕೊಳ್ಳಬಹುದು."

"ಇದು ಅತ್ಯಂತ ಗಹನವೂ ಸೂಕ್ಷ್ಮವೂ ಆದ ಸಂಗತಿ. ಆದರೂ ನೀವು ನಮ್ಮ ಭಾಗಕ್ಕೆ ಹಿರಿಯರಂತೆ ಇದ್ದೀರಿ. ನಮ್ಮ ಹಿತೈಷಿಗಳಾಗಿದ್ದೀರಿ. ಅಂತಲೇ ನನ್ನ ಹೃದ್ಗತವನ್ನು ತಮ್ಮಲ್ಲಿ ತೋಡಿಕೊಳ್ಳುತ್ತಿದ್ದೇನೆ" ಎಂದು ಹೇಳಿ ತಾನು ರಾಜನರ್ತಕಿ ನಾಗಶ್ರೀಯಲ್ಲಿ ಅನುರಕ್ತನಾಗಿರುವ ಸಂಗತಿಯನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿದನು.

"ಅಮಾತ್ಯರೇ, ನೀವು ನನ್ನ ಬಗ್ಗೆ ಯಾವ ಅಭಿಪ್ರಾಯ ತಳೆದರೂ ಸರಿ. ನನ್ನ ಮನಸ್ಸು ಅವಳಲ್ಲಿ ನೆಟ್ಟಿದೆ. ಅವಳಿಲ್ಲದೆ ನನ್ನ ಬದುಕು ಪೂರ್ಣವಾಗದೆಂದು ಅನಿಸುತ್ತಿದೆ. ಈ ಬಗ್ಗೆ ಸಾಮ್ರಾಟರಲ್ಲಿ ಹೇಳಿಕೊಂಡು ಅವಳನ್ನು ಪಡೆಯಬೇಕೆಂಬ ಇಚ್ಛೆ ಅನೇಕ ಬಾರಿ ಉಂಟಾಗಿದ್ದರೂ, ಅವರೆದುರಿಗೆ ನಿಂತಾಗ ಏಕೋ ನಾಲಿಗೆ ಏಳುವುದಿಲ್ಲ. ಅವರನ್ನು ಕಂಡರೆ ನನಗೆ ಹೆದರಿಕೆಯಾಗುತ್ತದೆ. ಆದರೆ ನಿಮ್ಮ ಮುಂದೆ ಹೇಳಿಕೊಳ್ಳಲು ನನಗೆ ಯಾವ ಭಯವೂ ಇಲ್ಲ—ನೀವು ನಮ್ಮನ್ನು ಸಾಕಿಸಲುಹಿದ್ದೀರಿ. ನೀವು ನಮ್ಮ ಭಾಗಕ್ಕೆ ತಂದೆಯಂತೆ ಇದ್ದೀರಿ!" ಎಂದು ಹೇಳಿ ಸಮಂತಭದ್ರನ ಪ್ರತಿಕ್ರಿಯೆಯನ್ನು ನೋಡುತ್ತಾ ಕುಳಿತನು.

ಸಮಂತಭದ್ರನು ಎಲ್ಲ ಸಂಗತಿಯನ್ನೂ ಅತ್ಯಾಸಕ್ತಿಯಿಂದ ಕೇಳಿಸಿಕೊಂಡಿದ್ದರೂ, ಮುಖಭಾವದಲ್ಲಿ ಯಾವುದೇ ಪ್ರತಿಕ್ರಿಯೆಯನ್ನು ತೋರಿಸದೆ, ಶಿಲಾಮೌನದಲ್ಲಿ ಕುಳಿತಿದ್ದನು. ಇದರಿಂದ ವಿಷ್ಣುವರ್ಧನನಿಗೆ ತೀರಾ ನಿರಾಶೆಯಾಯಿತು. ಅವನ ಆತಂಕಗೊಂಡ ಮುಖವನ್ನು ನೋಡಿ ಕಡೆಗೆ ಸಮಂತಭದ್ರನು ಹೇಳಿದ.

"ಕುಮಾರರೇ, ಇಷ್ಟು ಅಲ್ಪ ಸಂಗತಿಗಾಗಿ ನೀವು ಇಷ್ಟು ಕೊರಗುವುದೆ? ನಿಮಗೆ ನಾಗಶ್ರೀಯಲ್ಲಿ ಅನುರಾಗ ಉಂಟಾಗಿದ್ದರೆ, ಅವಳನ್ನು ನಿಮ್ಮ ಬಂಗಾರದವಳಾಗಿ ಮಾಡಿಕೊಳ್ಳಿ! ಆದರೆ ಅಜ್ಞಾತಕುಲಗೋತ್ರದ ವೇಶ್ಯಾಪುತ್ರಿಯಾದ ಅವಳನ್ನು ಪವಿತ್ರ ಚಾಲುಕ್ಯವಂಶದಲ್ಲಿ ಹುಟ್ಟಿದ ತಾವು ವಿವಾಹವಾಗುವುದು ನನಗೆ ಇಷ್ಟವಿಲ್ಲ."

"ಅಮಾತ್ಯರೇ, ನಾಗಶ್ರೀಯನ್ನು ಶಾಸ್ತ್ರೋಕ್ತವಾಗಿ ವಿವಾಹವಾಗಬೇಕೆಂದು ನಾನು ಹಠ ಹಿಡಿಯುತ್ತಿಲ್ಲ. ಹೇಗಾದರೂ ಅವಳು ನನ್ನವಳಾದರೆ ಸರಿ. ಅವಳ ಸಲುವಾಗಿ ನಾನು ಯಾವ ತ್ಯಾಗಕ್ಕೂ ಸಿದ್ಧನಾಗಿದ್ದೇನೆ! ಅವಳ ಸಲುವಾಗಿ ಈ ರಾಜ್ಯಕೋಶಗಳನ್ನಾದರೂ ಬಿಡಬಲ್ಲೆನೇ ಹೊರತು ಅವಳನ್ನು ಬಿಡಲಾರೆ!" ಉನ್ಮತ್ತಪ್ರಣಯಿಯಂತೆ ಹೇಳಿದ ವಿಷ್ಣುವರ್ಧನ.

"ಕುಮಾರರೇ, ನೀವು ಒಬ್ಬ ಸಾಮಾನ್ಯ ನರ್ತಕಿಯ ಸಲುವಾಗಿ ರಾಜ್ಯಕೋಶಗಳನ್ನು ತೊರೆಯುವ ಆವಶ್ಯಕವಿಲ್ಲ. ನಾನು ಸಾಮ್ರಾಟರೊಡನೆ ಮಾತನಾಡಿ ತಮ್ಮ ಕೋರಿಕೆಯನ್ನು ಈಡೇರಿಸಿಕೊಡುತ್ತೇನೆ!" ಎಂದು ಸಮಂತಭದ್ರನು ಆಶ್ವಾಸನವಿತ್ತು ವಿಷ್ಣುವರ್ಧನನನ್ನು ಬೀಳ್ಕೊಟ್ಟನು.

ಅದರಂತೆ ಸಮಂತಭದ್ರನು ದೈನಂದಿನ ಪೂಜೆ, ಭೋಜನಗಳು ತೀರಿದ ಮೇಲೆ ವಿಶ್ರಾಂತಿಯನ್ನೂ ತೆಗೆದುಕೊಳ್ಳದೆ, ನೇರ ಅರಮನೆಗೆ ಹೋದನು.

ಪುಲಿಕೇಶಿಯನ್ನು ಅಂತರಂಗದಲ್ಲಿ ಕಂಡು ವಿಷ್ಣುವರ್ಧನನು ತನ್ನ ಬಳಿಗೆ ಬಂದು ಹೋದ ಎಲ್ಲ ವೃತ್ತಾಂತವನ್ನು ಆದ್ಯಂತವಾಗಿ ತಿಳಿಸಿದನು. ಇದನ್ನೆಲ್ಲಾ ಸಮಾಧಾನದಿಂದ ಕೇಳಿದನಂತರ ಪುಲಿಕೇಶಿಯು "ಅಮಾತ್ಯರೇ, ಆ ವಿಷ್ಣುವರ್ಧನನಿಗೆ ವಯಸ್ಸಾಯಿತೇ ಹೊರತು, ಬುದ್ಧಿ ಮಾತ್ರ ಬರಲಿಲ್ಲ" ಎಂದು ಉದ್ಗಾರ ತೆಗೆದನು.

"ಏಕೆ ಪ್ರಭು ? ಇದರಲ್ಲಿ ಅಸಹಜವಾದುದು ಏನಿದೆ ? ವಯಸ್ಸಿಗೆ ತಕ್ಕಂತೆ ವಿಷ್ಣುವರ್ಧನಕುಮಾರರು ಗೃಹಸ್ಥರಾಗಲು ಬಯಸುತ್ತಿದ್ದಾರೆ. ಈ ಮೊದಲೇ ನಾವು ಅವರಿಗೊಂದು ಯೋಗ್ಯ ಕನ್ಯೆಯನ್ನು ತಂದು ಮದುವೆ ಮಾಡಬೇಕಾಗಿತ್ತು. ನಮ್ಮ ಕರ್ತವ್ಯದಲ್ಲಿ ನಾವು ತಪ್ಪಿದೆವು. ಈಗ ಸರಿಪಡಿಸಿ ಕೊಳ್ಳುವ ಕಾಲ ಬಂದಿದೆ."

"ಕುಮಾರನು ನಾಗಶ್ರೀ ಹೊರತು ಬೇರೆ ಹೆಣ್ಣಿನಲ್ಲಿ ಅನುರಕ್ತನಾಗಿದ್ದರೆ ನಾನು ಚಿಂತಿಸುತ್ತಿರಲಿಲ್ಲ, ಅಮಾತ್ಯರೆ. ಆದರೆ ಅವನು ತನ್ನ ವಂಶದ ಹೆಗ್ಗಳಿಕೆ ಯನ್ನು ಅರಿತು, ಸಾಮಾನ್ಯ ವೇಶ್ಯಾಪುತ್ರಿಯಲ್ಲಿ ಮನಸ್ಸು ಕೊಟ್ಟಿರುವುದನ್ನು ನೋಡಿದರೆ ಮನಸ್ಸಿಗೆ ಖೇದವಾಗುತ್ತದೆ. ಪ್ರೇಮಕ್ಕೂ ಅಂತಸ್ತು ಗೌರವಗಳು ಬೇಡವೆ ? ಇದು ಅವನಂತಹ ವ್ಯಕ್ತಿಗಳು ಮಾಡುವ ಕಾರ್ಯವೆ ?"

"ಪ್ರಭು, ಕುಮಾರರಿಗೆ ನಾನೂ ಇದೇ ಮಾತನ್ನು ಹೇಳಿದೆ. ಆದರೆ ಕುಮಾರರು ಒಂದೇ ಸಮನೆ ಹಠ ಹಿಡಿದಿದ್ದಾರೆ. ನಾಗಶ್ರೀ ಇಲ್ಲದೆ ತಮ್ಮ ಬದುಕೇ ಇಲ್ಲವೆಂದು ತಿಳಿದಿದ್ದಾರೆ. ಅವಳ ಸಲುವಾಗಿ ಯಾವ ತ್ಯಾಗಕ್ಕೂ ಸಿದ್ಧವಾಗಿದ್ದಾರೆ."

"ಇದೊಂದು ಮಾತು ಮಾತ್ರ ಸಾಧ್ಯವಿಲ್ಲ ಅಮಾತ್ಯರೇ !" ನಿರ್ಧಾರ ಧ್ವನಿಯಲ್ಲಿ ಪುಲಿಕೇಶಿ ಹೇಳಿದ.

"ಏಕೆ ಪ್ರಭು ?"

"ನಾನು ನಾಗಶ್ರೀಯನ್ನು ಆಸ್ಥಾನದ ವರ್ಣಶಿಲ್ಪಿ ಚಂದ್ರೋಜನಿಗೆ ಕಾಣಿಕೆಯಾಗಿ ಅರ್ಪಿಸಿದ್ದೇನೆ. ಅವರು ಪರಸ್ಪರ ವಿವಾಹವಾಗಲು ಸಮ್ಮತಿಸಿ ದ್ದಾರೆ."

"ಏನು, ನಾಗಶ್ರೀಯನ್ನು ಚಂದ್ರೋಜರು ವಿವಾಹವಾಗುವರೆ ?"

"ಹೌದು. ಅವರು ಮೊದಲಿನಿಂದಲೂ ಪರಸ್ಪರ ಪ್ರೀತಿಸುತ್ತಿದ್ದಾರೆ."

"ಹಾಗಾದರೆ ಕುಮಾರರ ಅಭೀಷ್ಟ ಈಡೇರುವುದಿಲ್ಲ."

"ಇಲ್ಲ ಅಮಾತ್ಯರೆ, ನಾನು ಚಂದ್ರೋಜರಿಗೆ ವಚನ ಕೊಟ್ಟಿದ್ದೇನೆ. ಎಂತಹ ಪ್ರಸಂಗದಲ್ಲೂ ಚಾಲುಕ್ಯ ಸಾಮ್ರಾಟರು ಕೊಟ್ಟ ವಚನವನ್ನು ಪಾಲಿ ಸುವರೇ ಹೊರತು ಮುರಿಯುವುದಿಲ್ಲ ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ಇದಕ್ಕೆ ನಾನು ಹೊರತಾಗಲೆ ?"

ಸಮಂತಭದ್ರನಿಗೆ ಇದನ್ನು ಕೇಳಿ ಬೇರೆ ಏನೂ ಹೇಳಲು ತೋರಲಿಲ್ಲ. ಅವನು ಪುಲಿಕೇಶಿಯನ್ನು ಬೀಳ್ಕೊಂಡು ಹೊರಟನು. ಮನೆಯಲ್ಲಿ ವಿಷ್ಣು ವರ್ಧನನು ಅವನಿಗಾಗಿ ಎದುರುನೋಡುತ್ತಿದ್ದನು. ಪುಲಿಕೇಶಿಯ ಅಭಿಪ್ರಾಯ ತಿಳಿಯಲು ಕಾತರನಾಗಿದ್ದನು.

ಸಮಂತಭದ್ರನು ನಡೆದ ಸಂಗತಿಯನ್ನು ವಿಷ್ಣುವರ್ಧನನಿಗೆ ತಿಳಿಸಿ, "ಕುಮಾರರೇ, ನಿಮ್ಮನ್ನು ನಿರಾಶೆಗೊಳಿಸಿದುದಕ್ಕೆ ನನಗೆ ವ್ಯಥೆಯಾಗುತ್ತಿದೆ. ಆದರೆ ಪ್ರಭುಗಳು ಕೊಟ್ಟ ವಚನ ಪಾಲಿಸುವಂತೆ ನೋಡಿಕೊಳ್ಳಬೇಕಾದುದು ನಮ್ಮೆಲ್ಲರ ಧರ್ಮವಾಗಿದೆ" ಎಂದು ಹೇಳಿ ನಿಟ್ಟುಸಿರುಬಿಟ್ಟನು.

ಇದನ್ನು ಕೇಳಿ ವಿಷ್ಣುವರ್ಧನನು ಸಿಡಿಮಿಡಿಗೊಂಡು ಹೇಳಿದ :

"ಅಮಾತ್ಯರೆ, ಈಗಲಾದರೂ ತಿಳಿಯಿತೆ, ನಿಮಗೆ ನನ್ನ ಮೇಲೆ ಇರುವ ಪ್ರೀತಿ ವಿಶ್ವಾಸಗಳು ಸಾಮ್ರಾಟರಾದ ಪುಲಿಕೇಶಿಗೆ ಇಲ್ಲವೆಂದು. ಅವರಿಗೆ ನನಗಿಂತಲೂ ಆ ಅನಾಮಧೇಯ ವರ್ಣಶಿಲ್ಪಿ ಪ್ರಿಯನಾದನು. ಅವರಿಗೆ ನನ್ನ ಮೇಲೆ ಪ್ರೀತಿ ವಿಶ್ವಾಸಗಳಿದ್ದರೆ ಅವರು ನನ್ನನ್ನು ಹೀಗೆ ಅಪಮಾನಿಸುತ್ತಿದ್ದರೆ?" ಅವನ ಮುಖದಲ್ಲಿ ಅಸಮಾಧಾನ ಹೆಪ್ಪುಗಟ್ಟಿತ್ತು.

"ಕುಮಾರರೇ, ನೀವು ಇಷ್ಟು ಅಲ್ಪ ಸಂಗತಿಗಾಗಿ ಸಾಮ್ರಾಟರ ಬಗ್ಗೆ ಅಸಮಾಧಾನಗೊಳ್ಳಬಾರದು. ನಾಗಶ್ರೀಯಲ್ಲಿ ನೀವು ಅನುರಕ್ತರಾಗಿರುವ ಸಂಗತಿ ತಿಳಿದಿದ್ದರೆ ಪ್ರಭುಗಳು ಅವಳನ್ನು ಚಂದ್ರೋಜರಿಗೆ ಕಾಣಿಕೆಯಾಗಿ ಅರ್ಪಿಸುತ್ತಿರಲಿಲ್ಲ. ಈಗ ಕಾರ್ಯ ಮಿಂಚಿಹೋಗಿದೆ. ಅದಕ್ಕಾಗಿ ವ್ಯಥೆಪಟ್ಟು ಪ್ರಯೋಜನವಿಲ್ಲ. ನಿಮಗೆ ವಿವಾಹವಾಗುವ ಇಚ್ಛೆ ಇದ್ದರೆ ಹೇಳಿ. ಅನೇಕ ಸುಂದರ ರಾಜಕನ್ಯೆಯರನ್ನು ತಂದು ನಿಮಗೆ ವಿವಾಹಮಾಡುತ್ತೇನೆ."

"ನಾನು ಪ್ರೀತಿಸಿದ ಹೆಣ್ಣು ದೊರೆಯದಿದ್ದಮೇಲೆ ಯಾರು ದೊರೆತರೆ ಏನು ಪ್ರಯೋಜನ ? ಪ್ರಭುಗಳಿಗೆ ನನ್ನ ಮೇಲೆ ಪ್ರೀತಿ ಇದ್ದರೆ, ಈಗಲೂ ನಾಗಶ್ರೀಯನ್ನು ನನಗೆ ದಯಪಾಲಿಸಬಹುದು. ಆದರೆ ಅವರಿಗೆ ನಾನು ನೆಮ್ಮದಿಯಾಗಿರುವುದು ಬೇಕಿಲ್ಲ. ಮೊದಲಿನಿಂದಲೂ ಅವರು ನನ್ನನ್ನು ದಾಯಾದಿಯಂತೆ ನೋಡುತ್ತಿದ್ದಾರೆ. ಇದನ್ನು ನಾನು ಹೊಸದಾಗಿ ತಿಳಿಯ ಬೇಕೆ ?" ವಿಷ್ಣುವರ್ಧನ ನಿಟ್ಟುಸಿರುಬಿಟ್ಟ.

"ಒಂದು ಸಾಮಾನ್ಯ ಹೆಣ್ಣಿನ ಸಲುವಾಗಿ ನೀವು ಧರ್ಮಾವತಾರರಾದ

ಸಾಮ್ರಾಟರನ್ನು ಶಂಕಿಸುತ್ತೀರಾ ?"

"ನಿಮ್ಮ ಧರ್ಮಾವತಾರರ ನಿಜವಾದ ಸ್ವರೂಪ ನನಗೆ ತಿಳಿದಿದೆ. ನೀವು ತಿಳಿಸಿಕೊಡಬೇಕಾಗಿಲ್ಲ. ಮಂಗಳೇಶರು ಎಂದು ತೀರಿಕೊಂಡರೋ ಅಂದೇ ನನ್ನ ಸೌಭಾಗ್ಯ ಹರಣವಾಯಿತು. ಅವರು ಇದ್ದಿದ್ದರೆ ನಾನು ಯಾರ ಹಂಗಿಗೂ ಬೀಳುತ್ತಿರಲಿಲ್ಲ. ಹೆಸರಿಗೆ ಯುವರಾಜಪದವಿ ! ಒಲಿದ ಹೆಣ್ಣನ್ನು ಕೈಹಿಡಿಯುವ ಸ್ವಾತಂತ್ರ್ಯಸಹ ಇಲ್ಲ !" ಕಟುವಾಗಿ ಹೇಳಿದ ವಿಷ್ಣುವರ್ಧನ.

"ಕುಮಾರರೇ, ನೀವು ಹಿಂದಣ ವೈರವನ್ನು ಇನ್ನೂ ಮನಸ್ಸಿನಲ್ಲಿ ಹೆಪ್ಪಿಟ್ಟುಕೊಂಡು ಸಾಮ್ರಾಟರ ವಿಷಯದಲ್ಲಿ ವೃಥಾ ಶಂಕಿಸುತ್ತಿದ್ದೀರಿ. ಅವರಿಗೆ ನಿಮ್ಮ ವಿಷಯದಲ್ಲಿ ಎಂತಹ ಸದ್ಭಾವನೆ–ಪ್ರೀತಿ ವಿಶ್ವಾಸಗಳಿವೆ ಎಂದು ತಿಳಿದಿದ್ದರೆ ನೀವು ಅವರನ್ನು ಹೀಗೆ ನಿಂದಿಸುತ್ತಿರಲಿಲ್ಲ. ಒಂದು ವೇಳೆ ನೀವು ನಾಗಶ್ರೀಯನ್ನೇ ಮದುವೆಯಾಗಲು ಹಠ ಹಿಡಿದರೆ ಪ್ರಭುಗಳನ್ನು ಧರ್ಮಸಂಕಟಕ್ಕೆ ನೂಕುತ್ತೀರಿ, ಅಷ್ಟೆ."

"ನಾನು ಹಠ ಹಿಡಿದರೆ, ಧರ್ಮಸಂಕಟವೆ ? ಸಾಮ್ರಾಟರೇಕೆ ತಮ್ಮ ಮಾತೇ ನಡೆಯಬೇಕೆಂದು ಹಠ ಹಿಡಿಯಬೇಕು ? ನನಗಿಂತಲೂ ಚಂದ್ರೋಜನು ಹೆಚ್ಚಾದನೆ ?"

"ಈ ಬಗ್ಗೆ ನಾನು ಏನೂ ಹೇಳಲಾರೆ ಕುಮಾರರೇ. ಪರಿಸ್ಥಿತಿಯಿಂದ ನಮ್ಮನ್ನು ನಾಗಶ್ರೀಯೊಬ್ಬಳೇ ಪಾರುಮಾಡಬಲ್ಲಳು. ಅವಳು ಚಂದ್ರೋಜನನ್ನು ತಿರಸ್ಕರಿಸಿದರೆ ಮಾತ್ರ–ಈ ಧರ್ಮಸಂಕಟದಿಂದ ನಾವು ಪಾರಾಗಬಹುದು"

ಎಂದು ಹೇಳಿ ಸಮಂತಭದ್ರನು ನಾಗಶ್ರೀಯನ್ನು ನೋಡಲು ಹೊರಟನು.

ನಾಗಶ್ರೀಯು ಅಪರೂಪಕ್ಕೆ ಬಂದ ಸಮಂತಭದ್ರನನ್ನು ವಿಶ್ವಾಸದಿಂದಲೇ ಬರಮಾಡಿಕೊಂಡು ಸತ್ಕರಿಸಿದಳು. ಕುಶಲ ಪ್ರಶ್ನೆ ಮುಗಿದ ಮೇಲೆ ಸಮಂತಭದ್ರನೇ ಮಾತಿಗೆ ಮೊದಲಿಟ್ಟನು. "ತಾಯಿ, ನಿಮ್ಮ ಬಗ್ಗೆ ಒಂದು ಸುದ್ದಿ ಕೇಳಿದೆ ನಿಜವೆ ?" ಎಂದ.

"ಯಾವ ಸುದ್ದಿ ಅಮಾತ್ಯರೆ ?"

"ನೀವು ಚಿತ್ರಕಾರ ಚಂದ್ರೋಜರನ್ನು ವಿವಾಹವಾಗುವಿರಂತೆ ಹೌದೆ ?"

"ಹೌದು ಅಮಾತ್ಯರೆ, ನಿಮಗೆ ಈ ಸಂಗತಿಯನ್ನು ಯಾರು ಹೇಳಿದರು ?"

"ಹೀಗೆಯೇ ತಿಳಿಯಿತು ತಾಯಿ. ಇದನ್ನು ಕೇಳಿ ನನಗೆ ವ್ಯಥೆ

ಯಾಯಿತು."

"ಯಾಕೆ ಅಮಾತ್ಯರೇ!"

"ತಾಯಿ, ನೀವು ನನ್ನ ಮಾತನ್ನು ಅನ್ಯಥಾ ತಿಳಿಯಬಾರದು. ನೀವು ಕುಲದಲ್ಲಿ ವೇಶ್ಯೆ, ಹುಟ್ಟನಿಂದ ವೇಶ್ಯೆ; ನೀವು ನಿಮ್ಮ ವರ್ಣಾಶ್ರಮ ಧರ್ಮಕ್ಕೆ ಅನುಚಿತವಾಗಿ ಗೃಹಸ್ಥಧರ್ಮ ಸ್ವೀಕರಿಸಲು ಹೊರಟರೆ....?"

"ಅಮಾತ್ಯರೇ ನಾನು ವೇಶ್ಯಾಪುತ್ರಿ ಇರಬಹುದು—ಆದರೆ ನಡತೆಯಿಂದ ಗರತಿಯಾಗಿರುವ ಸಂಗತಿ ತಮಗೆ ತಿಳಿದಿರಬೇಕು. ಇನ್ನೊಮ್ಮೆ ಇಂತಹ ಮನ ನೋಯಿಸುವ ಮಾತನ್ನು ನನ್ನೊಡನೆ ಎತ್ತಬಾರದು."

"ಅದು ಒಳ್ಳೆಯ ಆದರ್ಶ ಮಗಳೇ, ವೇಶ್ಯೆಯಾದ ನಿನ್ನನ್ನು ಸಮಾಜ ಗೃಹಿಣಿಯಾಗಿ ಸ್ವೀಕರಿಸುವುದೇ ?"

"ಚಂದ್ರೋಜರು ಸ್ವೀಕರಿಸುತ್ತಾರೆ—ಇನ್ನೊಬ್ಬರ ಗೊಡವೆ ನನಗೇಕೆ?"

"ಹಾಗಲ್ಲ ತಾಯಿ. ನೀವು ಬದುಕಬೇಕಾದರೆ ಸಮಾಜದಲ್ಲಿ ಬಾಳಬೇಕು—ಅದರೊಂದಿಗೇ ಬದುಕಬೇಕು. ಅದನ್ನು ತಿರಸ್ಕರಿಸಿ, ಬೇರೆಯಾಗಿ ನಿಲ್ಲಲು ಬಂದೀತೆ ?"

"ನನಗೆ ಸಮಾಜದಲ್ಲಿ ಗೃಹಿಣಿಯ ಪಟ್ಟ—ಮನ್ನಣೆ—ದೊರೆಯದಿದ್ದರೆ ಬೇಡ ಅಮಾತ್ಯರೇ. ನಾನು ಒಲಿದವನನ್ನು ಕೂಡಿಕೊಂಡು ಮರ್ಯಾದೆಯಾಗಿ ಬಾಳಿ ಅಂತರಾತ್ಮನೊಬ್ಬನನ್ನು ಮೆಚ್ಚಿಸಿದರೆ ಸಾಕಾಗಿದೆ. ನಾನು ಆತ್ಮಕಲ್ಯಾಣದ ದಾರಿಯಲ್ಲಿ ಹೊರಟವಳೇ ಹೊರತು ಸಮಾಜವನ್ನು ಮೆಚ್ಚಿಸಲು ಹೊರಟವಳಲ್ಲ."

"ನಿನ್ನದು ಉಚ್ಚ ಆದರ್ಶ ಮಗಳೆ. ಆದರೆ ಸಮಾಜ ನೀನು ತಿಳಿದಷ್ಟು ನಿಸ್ಪೃಹವಾಗಿಲ್ಲ; ಸರಳವಾಗಿಲ್ಲ. ನೀನು ಗರತಿಯಾಗಿ ಬಾಳಿದರೂ ಸೂಳೆ ಎಂಬ ಹೆಸರು ಹೋಗುವುದಿಲ್ಲ. ಇದರಿಂದ ನೀನು ಸಾಧಿಸಿದುದಾದರೂ ಏನು ?"

"ಅಮಾತ್ಯರೇ, ನಾನು ಜೀವನದಲ್ಲಿ ಸಾಧಿಸಬೇಕಾದುದು ಏನೂ ಇಲ್ಲ. ಆದರೆ ಜಗತ್ತಿನ ಪಾಲಿಗೆ ನಾನು ವೇಶ್ಯಾಪುತ್ರಿಯಾದರೂ ವೇಶ್ಯೆಯಲ್ಲವೆಂಬ ಸತ್ಯವನ್ನು ತೋರಿಸುವುದು. ನನಗೆ ಬೇಕಾಗಿರುವುದು ಪ್ರೀತಿಸುವ ನಲ್ಲನೊಡನೆ ಮಾಡುವ ಸಂಸಾರವೇ ಹೊರತು, ಕಂಡವರಿಗೆಲ್ಲ ಸೆರಗು ಹಾಸುವ ವೇಶ್ಯೆಯ ಬೇಟವಲ್ಲ. ನನ್ನ ಆದರ್ಶ ದೊಡ್ಡದಿರಬಹುದು. ಅವರ ಸಾಧನೆಯಲ್ಲಿ ನಾನು

ವಿಫಲಳಾಗಬಹುದು. ನನಗೆ ಬೇಕಾಗಿರುವುದು ಆತ್ಮೋನ್ನತಿಯೇ ಹೊರತು ದೈಹಿಕ ಸುಖವಲ್ಲ."

"ಹಾಗಾದರೆ ನೀನು ಯಾವುದೇ ಪ್ರಸಂಗದಲ್ಲಿ ಚಂದ್ರೋಜನನ್ನು ಬಿಟ್ಟು ಬೇರೆಯವರನ್ನು ಮದುವೆಯಾಗುವುದಿಲ್ಲವೆ ?"

"ಇಲ್ಲ."

"ಒಂದು ವೇಳೆ ನೀನು ಸಾಮ್ರಾಜ್ಯದ ಹಿತಕ್ಕಾಗಿ ಬೇರೊಬ್ಬರನ್ನು ವಿವಾಹವಾಗಬೇಕಾಗಿ ಬಂದರೆ...."

"ಅಂತಹ ಪ್ರಸಂಗದಲ್ಲಿ ನಾನು ನನ್ನನ್ನೇ ಬಲಿಕೊಡುತ್ತೇನೆಯೇ ಹೊರತು ನನ್ನ ಪತಿಗೆ ದ್ರೋಹ ಬಗೆಯಲಾರೆ."

"ಏಕೆ ಈ ಬಲಿದಾನ ?"

"ಚಂದ್ರೋಜನಿಲ್ಲದ ಮೇಲೆ ನನಗೆ ಬದುಕಿಲ್ಲ."

ಈ ಮಾತಿನಿಂದ ಸಮಂತಭದ್ರನಿಗೆ ನಾಗಶ್ರೀಯ ಪ್ರೀತಿಯ ಆಳ, ಉಚ್ಚ ಜೀವನಾದರ್ಶಗಳು ಅರಿವಾದವು; ಇಂತಹವಳನ್ನು ಒತ್ತಾಯಮಾಡಿ ಪ್ರಯೋಜನ ವಿಲ್ಲವೆಂದು ಬೇರೆ ಮಾತನಾಡದೆ ಅಲ್ಲಿಂದ ಹೊರಟನು. ಹೊರಡುವಾಗ ಅವನು ತುಂಬ ಹೃದಯದಿಂದ ಆಶೀರ್ವದಿಸಿದ.

"ಮಗಳೇ, ನೀನು ಎಲ್ಲಾದರೂ ಸುಖವಾಗಿ ಬಾಳು."

## ೨೩

ವಿಷ್ಣುವರ್ಧನನಿಗೆ ಇಷ್ಟು ಜನ ಹೇಳಿದರೂ ನಾಗಶ್ರೀ ಮೇಲಣ ಮೋಹ ಕಡಮೆಯಾಗಲಿಲ್ಲ. ಸಮಂತಭದ್ರನಂತೂ ಸ್ಪಷ್ಟವಾಗಿ ಹೇಳಿದ್ದನು."ಕುಮಾರರೇ ನಾಗಶ್ರೀಯನ್ನು ನೀವು ಮರೆಯುವುದು ಲೇಸು. ಅವಳು ನಿಮಗೆ ದುರ್ಲಭ ವಾದ ಹೆಣ್ಣು. ಈಗಾಗಲೇ ಅವಳು ತಾನು ತ್ರಿಕರಣ ಪೂರ್ವಕವಾಗಿ ಚಂದ್ರೋಜನ ಪತ್ನಿ ಎಂದು ತಿಳಿದಿದ್ದಾಳೆ. ಅವಳ ಈ ಮನೋಭಾವವನ್ನು ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. ಚಂದ್ರೋಜನೂ ಅವಳನ್ನು ಹೃದಯಾಂತರಾಳ

ದಿಂದ ಪ್ರೀತಿಸುತ್ತಿದ್ದಾನೆ. ಅವರಿಬ್ಬರ ಪ್ರೇಮಬಂಧನಕ್ಕೆ ಸಾಕ್ಷಾತ್ ಪ್ರಭುಗಳೇ ಹಿರಿಯರಾಗಿ ನಿಂತು ಆಶೀರ್ವದಿಸಿದ್ದಾರೆ. ಇನ್ನು ತಾವು ಅವಳ ವಿಷಯವನ್ನು ಮರೆಯುವುದು ಒಳಿತು !”

ಆದರೆ ವಿಷ್ಣುವರ್ಧನ ಮಾತ್ರ ತನ್ನ ಹಠವನ್ನು ಬಿಡಲಿಲ್ಲ. ಸಮಾಧಾನ ದಿಂದ ನಾಗಶ್ರೀಯನ್ನು ಪಡೆಯಲು ಸಾಧ್ಯವಿಲ್ಲದೆ ಹೋದರೆ ಮೋಸದಿಂದ ಲಾದರೂ ಅವಳನ್ನು ತನ್ನವಳಾಗಿ ಮಾಡಿಕೊಳ್ಳಬೇಕು. ಏನೇ ಆಗಲಿ ಅವಳ ಸತೀತ್ವವನ್ನು ಹರಣಮಾಡಿ, ಗೃಹಿಣಿಯಾಗುವ ಅವಳ ಆಸೆಗೆ ಕೊಳ್ಳಿ ಇಡ ಬೇಕೆಂದು ನಿಶ್ಚಯಿಸಿದನು. ಅವನು ತನ್ನದೇ ಆದ ಕಾಲಾಸ್ಥಾನವನ್ನು ಸಿದ್ಧ ಪಡಿಸಿದನು.

ಆ ದಿನ ಅರಮನೆಯ ಸ್ತ್ರೀಯರೆಲ್ಲರೂ ವನವಿಹಾರಕ್ಕೆ ಹೋಗಲು ನಿಶ್ಚ ಯಿಸಿದ್ದರು. ಸಾಕ್ಷಾತ್ ಪುಲಿಕೇಶಿಯ ರಾಣಿಯರೂ ಇದರಲ್ಲಿ ಭಾಗವಹಿಸಿದ್ದರು. ಅವರ ಸಲುವಾಗಿ ರಾಜಧಾನಿಗೆ ನಾಲ್ಕು ಮೈಲಿ ದೂರವಿದ್ದ ಮಲಪ್ರಭೆಯ ದಂಡೆಯಲ್ಲಿ ಒಂದು ಪ್ರಶಸ್ತವಾದ ಶಿಬಿರವನ್ನು ನಿರ್ಮಿಸಲಾಗಿತ್ತು. ಅಲ್ಲಿ ಅವರಿಗೆ ಊಟ ಉಪಚಾರಗಳಿಗಾಗಲೀ ಮನೋರಂಜನೆಗಾಗಲೀ ಯಾವುದಕ್ಕೂ ಕಡಮೆ ಯಾಗದಂತೆ ವ್ಯವಸ್ಥೆ ಮಾಡಲಾಗಿತ್ತು. ಈಗಾಗಲೇ ನೂರಾರು ಜನ ದಾಸ ದಾಸಿ ಪರಿಜನರು ಅವರಿಗೆ ಬೇಕಾಗುವ ವ್ಯವಸ್ಥೆ ಮಾಡಲು ಪೂರ್ವಭಾವಿಯಾಗಿ ತೆರಳಿದ್ದರು. ಈ ವನವಿಹಾರದಲ್ಲಿ ಸಾಮ್ರಾಟ್ ಪುಲಿಕೇಶಿ, ಯುವರಾಜ ಕುಮಾರ ವಿಷ್ಣುವರ್ಧನ ಭಾಗವಹಿಸಿದ್ದರು. ಇದರಲ್ಲಿ ಪಾಲುಗೊಳ್ಳಲು ಪುಲಿ ಕೇಶಿಯು ರಾಜನರ್ತಕಿ ನಾಗಶ್ರೀಗೆ ವಿಶೇಷ ಆಮಂತ್ರಣವಿತ್ತಿದ್ದನು. ರಾಜಾಜ್ಞೆ ಯನ್ನು ತಿರಸ್ಕರಿಸುವ ಧೈರ್ಯವಿಲ್ಲದೆ ನಾಗಶ್ರೀಯು ಪರಿವಾರದವರೊಂದಿಗೆ ಹೊರಟಿದ್ದಳು.

ಆ ಮೂರು ದಿನಗಳ ವನವಿಹಾರ, ವನಭೋಜನಗಳು ಕ್ಷಣಗಳಂತೆ ಕಳೆದಿದ್ದವು. ಪುಲಿಕೇಶಿಯು ತನ್ನ ರಾಣಿಯರ ಜೊತೆಯಲ್ಲಿ ನದಿಯ ನೀರಿಗೆ ಇಳಿದು ರಾಜಹಂಸದಂತೆ ಜಲಕ್ರೀಡೆಯಾಡಿದನು. ರವಿಕೀರ್ತಿ, ನಾಗಶ್ರೀ ಮುಂತಾದ ಕಲಾವಿದರ ಸಾನ್ನಿಧ್ಯದಲ್ಲಿ ಕಾವ್ಯ, ಸಂಗೀತ, ನೃತ್ಯಗಳನ್ನು ನೋಡಿ, ಕೇಳಿ ಆನಂದಿಸಿದನು. ಅವನಿಗೆ ಈ ಮೂರು ದಿನಗಳು ರಾಜಕೀಯ ಜೀವನದ ಜಂಜಡದಿಂದ ಹೊರಗೆ ಬಂದಂತೆ ಆಗಿತ್ತು. ದೇಹಮನಸ್ಸುಗಳಿಗೆ

ಉಂಟಾಗಿದ್ದ ಆಯಾಸ ಪರಿಹಾರವಾಗಿ, ಅವನು ಉತ್ಸಾಹದ ಪುತ್ಥಳಿಯಾದನು. ವಿಷ್ಣುವರ್ಧನನಿಗೆ ಮಾತ್ರ ಬಾರಿಬಾರಿಗೂ ತಾನು ಏಕಾಂಗಿ, ಯಾರಿಗೂ ಬೇಡವಾದವನು ಎಂಬ ಭಾವನೆ ಬರುತ್ತಿತ್ತು. ಅವನಿಗೆ ನಾಗಶ್ರೀ ಕಣ್ಣಿಗೆ ಬಿದ್ದಾಗಲೆಲ್ಲಾ ಪ್ರಣಯದ ಉರಿ ಪ್ರಜ್ವಲಿಸುತ್ತಿತ್ತು. ಅವನು ಭಗ್ನಪ್ರೇಮಿಯಾಗಿ ಕಾಮವಿಹ್ವಲನಾಗಿ ಪರಿತಪಿಸುತ್ತಿದ್ದನು.

ವನವಿಹಾರ ಮುಗಿಯಿತು. ಎಲ್ಲರೂ ತಮ್ಮ ಮನೆಗಳಿಗೆ ತೆರಳಿದರು. ರಾಜಕುಟುಂಬಕ್ಕೆ ಸೇರಿದ ವ್ಯಕ್ತಿಗಳು ತಮಗೆ ಉಚಿತವಾದ ಮೇನೆಗಳಲ್ಲೂ ರಥಗಳಲ್ಲೂ, ಅರಮನೆಗೆ ಹಿಂದಿರುಗಿದರು. ಉಳಿದ ಪರಿವಾರದವರು ನಡೆದು ಇಲ್ಲವೇ ಗಾಡಿಗಳಲ್ಲಿ ಹೊರಟರು. ನಾಗಶ್ರೀಯು ತನ್ನದೇ ಆದ ಮೇನೆಯಲ್ಲಿ ಹೊರಟಳು. ಅವಳನ್ನು ವಿಷ್ಣುವರ್ಧನ ಕುದುರೆಯ ಮೇಲೆ ಹಿಂಬಾಲಿಸುತ್ತಾ ನಡೆದ.

ಸಂಜೆಯ ಹೊಂಬಣ್ಣದ ಕಿರಣಗಳು ವಾತಾಪಿಯನ್ನು ಇಂದ್ರನ ಅಮರಾವತಿಯನ್ನಾಗಿ ಮಾಡಿದ್ದವು. ದೂರದಲ್ಲಿದ್ದ ತಟಾಕದ ನೀರು ಮುಳುಗುತ್ತಿದ್ದ ಸಂಜೆಯ ಸೂರ್ಯನ ಹೊಂಗಿರಣಗಳಲ್ಲಿ ಸುವರ್ಣ ಫಲಕದಂತೆ ಹೊಳೆಯುತ್ತಿತ್ತು. ಗಗನಚುಂಬಿಯಾಗಿದ್ದ ಗುಡಿಗೋಪುರಗಳೂ, ಉಪ್ಪರಿಗೆಗಳೂ ಸೂರ್ಯನ ಕಿರಣಗಳಲ್ಲಿ ಥಳಥಳಿಸುತ್ತಿದ್ದವು. ಎಲ್ಲೆಡೆಯಲ್ಲೂ ಆಹ್ಲಾದಕರವಾದ ತಂಗಾಳಿ ಬೀಸುತ್ತಿತ್ತು. ಇಂತಹ ವೇಳೆಯಲ್ಲಿ ನಾಗಶ್ರೀ ಪ್ರಯಾಣದ ಆಯಾಸದಿಂದ ದಣಿದು ತನ್ನ ಮನೆಯನ್ನು ತಲುಪಿದ್ದಳು.

ಅವಳ ಮನಸ್ಸು ಮಾತ್ರ ವನಭೋಜನದ ಸವಿನೆನಪಿನಿಂದ ಉತ್ಸಾಹಗೊಂಡಿತ್ತು. ಹರಿಣಿಯಂತೆ ಅವಳು ತಾನು ಹಿಂದೆ ಕಲಿತ ಹಾಡೊಂದನ್ನು ಗೊಣಗಿಕೊಳ್ಳುತ್ತಾ, ತನ್ನ ಬಟ್ಟೆಗಳನ್ನೆಲ್ಲಾ ಬದಲಾಯಿಸಿದಳು. ಕೈಕಾಲು ಮುಖ ತೊಳೆದುಕೊಂಡು, ತಲೆಕೂದಲನ್ನು ಬಾಚಿ ಕಟ್ಟಿ ಮುಖಕ್ಕೆ ಅಲಂಕಾರ ಮಾಡಿಕೊಂಡಳು. ಬಳುಕುವ ಲತೆಯಂತೆ, ಕುಣಿಯುವ ಮಿಂಚಿನ ಬಳ್ಳಿಯಂತೆ, ತನ್ನ ಮನೆಯ ಮುಂದೆ ಇದ್ದ ಕೈತೋಟದ ಶಿಲಾಸನದಮೇಲೆ ಕುಳಿತಳು. ಆಗಷ್ಟೇ ಸೂರ್ಯಾಸ್ತವಾಗಿ ಚಂದ್ರೋದಯವಾಗಿತ್ತು. ಅದರೊಡನೆ ಅವಳ ಮನಸ್ಸು ತನ್ನ ಪ್ರಿಯತಮ ಚಂದ್ರೋಜನನ್ನು ನೆನೆಯಿತು.

ಅವನು ತನ್ನನ್ನು ಶಾಸ್ತ್ರೋಕ್ತವಾಗಿ ಮದುವೆಯಾಗಲು ಆಶ್ವಾಸನ

ವಿತ್ತಿದ್ದಾನೆ. ಇನ್ನೇನು ಕೆಲವೇ ವಾರಗಳು ಕಳೆದುವೆಂದರೆ, ಅವನು ಅಜಂತೆ ಯಿಂದ ಹಿಂದಿರುಗಿ ಬರುತ್ತಾನೆ. ಪ್ರಣಯ ಬಂಧನದಲ್ಲಿ ಕೂಡಿದ ತಾವು ವಿವಾಹದ ಎರಕದಲ್ಲಿ ಒಂದಾಗಿ, ಸತಿಪತಿಗಳಾಗುತ್ತೇವೆ. ತಮ್ಮನ್ನು ಜಗತ್ತಿನ ಯಾವ ಶಕ್ತಿಯೂ ಬೇರ್ಪಡಿಸಲಾರದು....

ಅವಳು ಬೆಳುದಿಂಗಳಲ್ಲಿ ಕನಸು ಕಾಣುತ್ತಾ ಕುಳಿತಿದ್ದಳು.

ಇದ್ದಕ್ಕಿದ್ದಂತೆ ಅವಳ ಕನಸಿಗೆ ಭಂಗ ಬಂದಂತೆ ಏನೋ ಶಬ್ದವಾಯಿತು. ಕತ್ತೆತ್ತಿದಳು. ಯಾರೋ ಅವಳ ಕಡೆಗೆ ಬರುತ್ತಿರುವಂತೆ ಭಾಸವಾಯಿತು. ಅವಳು ಅದಾರೆಂದು ನೋಡುವುದರೊಳಗೆ ಆ ವ್ಯಕ್ತಿ ಅಲ್ಲಿನ ಗಿಡಮರಗಳಲ್ಲಿ ಮರೆಯಾಯಿತು. ನಾಗಶ್ರೀಗೆ ಗಾಬರಿಯಾಯಿತು. ಅವಳು ತನ್ನ ಸಖಿಯ ಹೆಸರು ಹಿಡಿದು ಗಟ್ಟಿಯಾಗಿ ಕೂಗಿದಳು.

ಯಾರೂ ಮನೆಯಿಂದ ಬರಲಿಲ್ಲ. ತಾನು ನೋಡಿದ ವ್ಯಕ್ತಿ ಕೇವಲ ತನ್ನ ಭ್ರಮೆಯೇ? ಅಥವಾ ಮರಗಿಡಗಳ ಚಲನೆಯೇ? ಅವಳು ತನ್ನಲ್ಲಿಯೇ ಆತಂಕದಿಂದ ಪ್ರಶ್ನಿಸಿಕೊಂಡಳು. ಮತ್ತೆ ಆಸನದಲ್ಲಿ ಕುಳಿತುಕೊಳ್ಳಲು ನೋಡಿದಳು. ಅಷ್ಟರಲ್ಲಿಯೇ ಯಾರೋ ಮುಸುಕು ಹಾಕಿಕೊಂಡು ತನ್ನ ಕಡೆಗೇ ಬರುತ್ತಿರುವುದು ಕಾಣಿಸಿತು. ನಾಗಶ್ರೀಗೆ ಗಾಬರಿಯಾಯಿತು. ಅವಳು ಗಟ್ಟಿಯಾಗಿ ಚೀರುತ್ತಾ ಮನೆಯ ಕಡೆ ಓಡಿದಳು. ಈ ಪ್ರಯತ್ನದಲ್ಲಿ ಅವಳು ಏನನ್ನೊ ಎಡವಿ ಬಿದ್ದಳು.ಅವಳು ಏಳುವುದರೊಳಗಾಗಿ ನಾಗಶ್ರೀ, ಆ ವ್ಯಕ್ತಿಯ ಬಂಧನದಲ್ಲಿದ್ದಳು.

ಅವನು ನಾಗಶ್ರೀ ಏಳುವ ಮೊದಲೇ ಅವಳ ಮೇಲೆ ಬಿದ್ದು ಅವಳನ್ನು ನೆಲಕ್ಕೆ ಕೆಡವಿ ಬಾಯಿಗೆ ಬಟ್ಟೆ ತುರುಕಿ, ಕೈಕಾಲುಗಳಿಗೆ, ಕಣ್ಣಿಗೆ ಪಟ್ಟಿಗಳನ್ನು ಬಿಗಿದು ಅವಳನ್ನು ಹೊತ್ತುಕೊಂಡು ಉಪವನದ ದ್ವಾರದ ಕಡೆಗೆ ಬಂದು ಒಂದು ಶಿಳ್ಳೆಹಾಕಿದನು. ಒಂದು ಮೇನೆಯು ಬಾಗಿಲಲ್ಲಿ ಬಂದು ನಿಂತಿತು. ಆಗಂತುಕನು ನಾಗಶ್ರೀಯನ್ನು ಮೇನೆಯಲ್ಲಿ ಹಾಕಿದನು. ಬೋಯಿಗಳು ಲಗುಬಗೆಯಿಂದ ಅದನ್ನು ಹೊತ್ತು ಮುನ್ನಡೆದರು.

ನಾಗಶ್ರೀಯ ಪಾಲಿಗೆ ಇದೆಲ್ಲವೂ ಒಂದು ದುಃಸ್ವಪ್ನದಂತೆ ಆಗಿತ್ತು. ಅವಳಿಗೆ ತನ್ನ ಮೇಲೆ ಹಠಾತ್ತನೆ ಆಕ್ರಮಣ ಮಾಡಿದವರು ಯಾರೆಂದು ತಿಳಿಯಲಿಲ್ಲ. ಅವರು ತನ್ನನ್ನು ಕೈಕಾಲುಕಟ್ಟಿ ಮೇನೆಯಲ್ಲಿ ಎಲ್ಲಿಗೆ ಸಾಗಿಸುತ್ತಿರುವ

ದೆಂಬುದೂ ತಿಳಿಯಲಿಲ್ಲ. ಅವಳು ಹೆದರಿ ಪ್ರಜ್ಞಾಶೂನ್ಯಳಾಗಿದ್ದಳು. ಉಸಿರಾಡಲು ಅವಕಾಶವಿಲ್ಲದೆ ನರಕಯಾತನೆಯನ್ನು ಅನುಭವಿಸುತ್ತಿದ್ದಳು. ಅವಳ ಭಾಗಕ್ಕೆ ಇದೆಲ್ಲವೂ ವಿಚಿತ್ರಸಂವೇದನೆಯನ್ನುಂಟು ಮಾಡುತ್ತಿತ್ತು. ತಾನು ದೇಹದಿಂದ ದೂರ ಸಿಡಿಸಿದ ಆತ್ಮವೆಂಬ ಭಾವನೆ ಬಂದಿತ್ತು.

ಅವಳಿಗೆ ಮತ್ತೆ ಪ್ರಜ್ಞೆಮರುಕಳಿಸಿದಾಗ ಅವಳು ಒಂದು ಭವ್ಯವಾದ ಅರಮನೆಯ ಅಂತಃಪುರದಲ್ಲಿದ್ದಳು. ತಾನು ಮಲಗಿರುವುದು ಸುಪ್ಪತ್ತಿಗೆಯ ಮೇಲೆ ಎಂದು ತಿಳಿಯಿತು. ಇದೆಲ್ಲದರ ಅರ್ಥವೇನೆಂದು ಚಣಕಾಲದಲ್ಲಿ ತಿಳಿದು ಹೋಯಿತು.

ಅವಳು ಕೆಣಕಿದ ಸರ್ಪದಂತೆ ಹಾಸಿಗೆಯಿಂದ ಎದ್ದು ಕುಳಿತಳು. ಎಲ್ಲಿಂದಲೋ ಯಾರೋ ಗಹಗಹಿಸಿ ನಗುವಂತೆ ಕೇಳಿಸಿತು. ನಾಗಶ್ರೀ ಆ ವಿಕಟನಗು ಬರುವ ದಿಕ್ಕನ್ನೇ ದಿಟ್ಟಿಸಿದಳು. ಎದುರಿಗೆ ಕುಬ್ಜವಿಷ್ಣುವರ್ಧನನು ತನ್ನ ಕೆಲಸಕ್ಕಾಗಿ ಹಿಗ್ಗಿ ನಗುತ್ತಾ ನಿಂತಿದ್ದಳು. ಅವರನ್ನು ನಾಗಶ್ರೀ ನೋಡಿ ದಾಗ ಎದೆಯಲ್ಲಿ ಶೂಲ ನೆಟ್ಟಂತೆ ಆಯಿತು. ತನ್ನಿಂದ ತಿರಸ್ಕೃತನಾಗಿದ್ದ ವಿಷ್ಣು ವರ್ಧನನು ಕಾಮಕ್ಕೆ ತನ್ನನ್ನು ಬಲಿಗೊಡಲು ಈ ರೀತಿಯಲ್ಲಿ ಮೋಸದಿಂದ ಅಪಹರಿಸಿಕೊಂಡು ಬಂದಿರುವನೆ?

ಅವಳ ಮೈ ರೋಷದಿಂದ ಕುದಿಯಿತು. ಅವಳು ಅಸಹಾಯಳಾಗಿ ಚೀರಿದಳು. ತನ್ನನ್ನು ಬಿಟ್ಟುಕೊಡಲು ದೈನ್ಯದಿಂದ ಪ್ರಾರ್ಥಿಸಿದಳು. ಇದಾವುದೂ ದುಷ್ಟಬುದ್ಧಿಯ ವಿಷ್ಣುವರ್ಧನನ ಮೇಲೆ ಪರಿಣಾಮ ಮಾಡಲಿಲ್ಲ. ಅವನು ನಾಗಶ್ರೀಯನ್ನು ಆಲಿಂಗಿಸಲು ವಿಟಪುರುಷನಂತೆ ಹತ್ತಿರ ಬಂದನು. ಹೆದರಿದ ಹರಿಣಿಯಂತೆ ಕಂಗಾಲಾಗಿದ್ದ ನಾಗಶ್ರೀ ಚೀರಿದಳು.

"ನೀಚ, ದೂರ ಸರಿ. ನನ್ನನ್ನು ಮುಟ್ಟಲು ಬಂದರೆ ನಿನಗೆ ಒಳ್ಳೆಯದಾಗುವುದಿಲ್ಲ! ನನ್ನನ್ನು ಬಿಟ್ಟು ದೂರ ಸರಿ."

"ಅಯ್ಯೋ ಹುಚ್ಚಿ. ನೀನು ನನ್ನ ಅಂತಃಪುರದಲ್ಲಿ ಸೆರೆಯಾಗಿರುವೆ. ನೀನು ಎಷ್ಟು ಕೂಗಿದರೂ ಯಾರೂ ನಿನ್ನ ಸಹಾಯಕ್ಕೆ ಬರಲಾರರು. ಏಕೆ ವೃಥಾ ದಣಿಯುವೆ? ನಾನು ಹೇಳಿದಂತೆ ಕೇಳು. ಇದರಿಂದ ನಿನಗೂ ಸುಖವಿದೆ!" ಎಂದು ಅವಳ ಕೈಹಿಡಿಯಲು ಹೋದನು.

"ಪಾಪಿ, ಪರಸ್ತ್ರೀಯರ ಮಾನಹರಣಮಾಡಲು ನಿನಗೆ ಅದೆಷ್ಟು ಧೈರ್ಯ? ನನ್ನನ್ನು ಮುಟ್ಟುವ ಧೈರ್ಯವಿದ್ದರೆ, ಹತ್ತಿರ ಬಾ! ನಾನು ನಿನ್ನ ಭಾಗದ ದೇವಿಯಲ್ಲ–ಮೃತ್ಯುವೆಂದು ತಿಳಿ" ಎಂದು ನಾಗಶ್ರೀ ಗರ್ಜಿಸಿದಳು.

"ನೀನೇನು ತಾನೇ ಮಾಡಬಲ್ಲೆ?"

"ಸಾಮ್ರಾಟರಿಗೆ ಹೇಳಿ ನಿನ್ನನ್ನು ಶಿಕ್ಷಿಸುತ್ತೇನೆ."

"ಅಯ್ಯೋ ಹುಚ್ಚಿ! ಒಳ್ಳೆಯ ಮನಸ್ಸಿನಿಂದ ನನ್ನವಳಾಗು! ನೀನು ನನ್ನ ವಿರುದ್ಧ ಸಾಮ್ರಾಟರಿಗೆ ಹೇಳಿದರೂ ಅವರೇನೂ ಮಾಡಲಾರರು. ನೀನು ವೇಶ್ಯಾಪುತ್ರಿ–ವೇಶ್ಯೆ! ಎಂಬುದನ್ನು ಮರೆಯಬೇಡ. ನೀನೂ ಎಷ್ಟು ಹೆಣಗಿದರೂ ಗರತಿಯಾಗಲಾರೆ. ಒಳ್ಳೆಯ ಮಾತಿನಲ್ಲಿ ನೀನು ನನ್ನವಳಾಗು. ಇದರಿಂದ ನಿನಗೆ ಕಲ್ಯಾಣವಿದೆ. ಸಕಲೈಶ್ವರ್ಯಭೋಗಗಳಿಗೆ ನೀನು ಅಧಿಕಾರಿಣಿಯಾಗುತ್ತೀಯೆ."

"ಪಾಪಿ, ನಿನ್ನ ಅಧಿಕಾರ ವೈಭವಗಳಿಗೆ ಬೆಂಕಿ ಇಡು. ನೀನು ಸಾಮ್ರಾಟರ ಸೋದರನಾಗಿ ಎಂತಹ ನೀಚನಾಗಿದ್ದೀಯೆಂಬುದು ತಿಳಿದಿರಲಿಲ್ಲ. ನಿನ್ನಂತಹ ಪಶುವಿನ ಭೋಗಕಾಂತೆಯಾಗಿರುವುದಕ್ಕಿಂತಲೂ ಸಾಯುವುದು ಲೇಸು. ನೀಚ, ದೂರ ಸರಿ. ಹತ್ತಿರ ಬಂದರೆ ಜೋಕೆ! ಅದಕ್ಕಾಗಿ ಪಶ್ಚಾತ್ತಾಪಪಡಬೇಕಾದ ಪ್ರಸಂಗ ಬರಬಹುದು."

"ನಿನ್ನಿಂದೇನು ಆದೀತು? ನೀನು ಪಂಜರದ ಪಕ್ಷಿ ಎಂಬುದನ್ನು ನೆನಪಿನಲ್ಲಿಡು."

"ನಾನು ಪಂಜರದಪಕ್ಷಿ ಇರಬಹುದು. ಆದರೆ ನಾನು ವಿಷಕನ್ಯೆ ಎಂಬುದನ್ನು ನೀನು ಮರೆಯಬಾರದು. ನನ್ನ ಹತ್ತಿರ ಬಂದರೆ ನಿನಗೆ ಸಾವು ಸಿದ್ಧ."

"ನನಗೆ ಸಾವೇ? ಅಹ್ಹಹ್ಹಾ! ಚೆನ್ನಾಗಿದೆ ನಾಗಶ್ರೀ. ನಿನ್ನ ಕೋಪಕ್ಕೆ ನಾನು ಹೆದರುವುದಿದ್ದರೆ ಈ ಕೆಲಸಕ್ಕೆ ಕೈಹಾಕುತ್ತಿದ್ದೆನೆ? ಇದೆಲ್ಲ ನನ್ನ ಮೇಲೆ ಹುಸಿಮುನಿಸು–ಪ್ರಣಯ ಕಲಹ, ನಾ ಬಲ್ಲೆ. ಸಾಕು ನಿಲ್ಲಿಸು ಈ ಕಪಟನಾಟಕ. ದೇವಿ! ಕಾಮಾತುರನಾಗಿರುವ ನನಗೆ ಸ್ವರ್ಗಸುಖವನ್ನು ಕರುಣಿಸು. ನಾನು ಈ ವಿರಹವನ್ನು ತಾಳಲಾರೆ!" ಎಂದು ಹೇಳಿ ಅವಳ ಮೇಲೆ ಬಿದ್ದನು.

"ಪಾಪಿ! ದೂರ ತೊಲಗು!" ಎಂದು ಹೇಳಿ ನಾಗಶ್ರೀ ಅವನನ್ನು ದೂರ ತಳ್ಳಿ ಸಿಂಹಿಣಿಯಂತೆ ಗರ್ಜಿಸಿದಳು.

"ನನ್ನ ಬಳಿಗೆ ಬಂದು ನೋಡು, ಅಲ್ಲೇ ದಗ್ಧವಾದೀಯಾ ! ನೀನು ಸಾಮ್ರಾಟರ ಸೋದರನಿರಬಹುದು, ಆದರೆ ಅವರು ಸತ್ಯವಂತರು. ಇಂತಹ ನಡುವಳಿಕೆಯನ್ನು ಅವರು ಸಹಿಸಲಾರರು."

"ಸಾಮ್ರಾಟರು ನನ್ನನ್ನು ಏನೂ ಮಾಡಲಾರರು. ಅವರು ನಿನ್ನನ್ನು ನನಗೆ ಅನುಗ್ರಹಿಸಿದ್ದಾರೆ."

"ಸುಳ್ಳು."

"ನಿನ್ನಾಣೆಗೂ ಸತ್ಯ. ಇಲ್ಲದಿದ್ದರೆ ನಾನು ನಿನ್ನನ್ನು ನನ್ನ ಅಂತಃಪುರಕ್ಕೆ ಕರೆಸಿಕೊಳ್ಳುತ್ತಿದ್ದೇನೇ ?"

"ಸುಳ್ಳು! ಸುಳ್ಳು!! ಸುಳ್ಳು!!! ಸಾಮ್ರಾಟರೆಂದಿಗೂ ನನ್ನನ್ನು ನಿನಗೆ ಅನುಗ್ರಹಿಸಿಲ್ಲ. ಅವರು ನನ್ನನ್ನು ಚಿತ್ರಕಾರ ಚಂದ್ರೋಜರಿಗೆ ಧಾರೆ ಎರೆದಿದ್ದಾರೆ. ಈಗ ನಾನು ಅವರ ವಧು. ಕಾಯೇನ ವಾಚಾ, ಮನಸಾ ನಾನು ಅವರ ಧರ್ಮಪತ್ನಿಯಾಗಿದ್ದೇನೆ. ನನ್ನನ್ನು ಮುಟ್ಟಲು ಯಾರಿಗೂ ಅಧಿಕಾರವಿಲ್ಲ."

"ನೀನು ತಪ್ಪು ತಿಳಿದಿದ್ದೀಯೆ ದೇವಿ. ಸಾಮ್ರಾಟರು ತಮ್ಮ ನಿರ್ಧಾರವನ್ನು ಬದಲಿಸಿ, ನಿನ್ನನ್ನು ನನಗೆ ದಯಪಾಲಿಸಿದ್ದಾರೆ. ನನ್ನ ಮಾತನ್ನು ನಂಬು."

"ನೀಚ, ನನ್ನನ್ನು ನೀನು ಸವಿಮಾತುಗಳಿಂದ ವಂಚಿಸಲಾರೆ. ನಿನಗೆ ಸಾಮ್ರಾಟರ ಭೀತಿ ಇಲ್ಲದಿದ್ದರೆ ದೈವಭೀತಿಯಾದರೂ ಬೇಡವೆ ?"

"ದೈವ ನಿನ್ನನ್ನು ನನ್ನ ಉಡಿಗೆ ಹಾಕಿರುವಾಗ ನನಗೆ ಯಾತರ ಭೀತಿ ?"

"ನೀನು ಕಾಮಾಂಧಪಶು. ನೀನು ನನ್ನನ್ನು ವಶಪಡಿಸಿಕೊಳ್ಳಲಾರೆ. ನೀನು ಏನು ಮಾಡಿದರೂ ನಾನು ನಿನಗೆ ವಶವಾಗಲಾರೆ."

"ನಿನಗಿನ್ನೂ ಭ್ರಮೆ. ನೀನು ನನ್ನ ಕೈಯಿಂದ ಪಾರಾಗಲಾರೆ. ಪಾರಾಗಿ ಹೋದರೂ ನಿನ್ನ ಕೌಮಾರ್ಯವನ್ನು ಉಳಿಸಿಕೊಳ್ಳಲಾರೆ. ನೀನು ನನ್ನ ವಧು, ನೀನು ನನ್ನನ್ನು ತಿರಸ್ಕರಿಸಲಾರೆ !" ಎಂದು ಹೇಳಿ ಅವನು ದೈತ್ಯಾವೇಶದಲ್ಲಿ ಬಂದು ನಾಗಶ್ರೀಯನ್ನು ಆಲಿಂಗಿಸಿದನು: ಈ ಅಪ್ಪುಗೆಯಿಂದ ನಾಗಶ್ರೀ ಬೇಟೆಗಾರನ ಕೈಗೆ ಸಿಕ್ಕಿಬಿದ್ದ ಮಿಗದಂತೆ ತತ್ತರಿಸಿದಳು. ಅವಳಿಗೆ ಹೆದರಿಕೆಯಿಂದ ತಲೆ ಸುತ್ತಿಕೊಂಡು ಬಂತು. ಕಣ್ಣಿಗೆ ಕತ್ತಲೆ ಕವಿಯಿತು. ಅಯ್ಯೋ ಎಂದು ಚೀರಿ ನೆಲಕ್ಕೆ ಬಿದ್ದಳು.

ವಿಷ್ಣುವರ್ಧನನಿಗೆ ಅವಳ ಮೇಲೆ ದಯೆಯುಂಟಾಗಲಿಲ್ಲ. ಅವನು ಪ್ರಜ್ಞೆ ತಪ್ಪಿದ ನಾಗಶ್ರೀಯನ್ನು ಹಂಸತೂಲಿಕಾತಲ್ಪಕ್ಕೆ ಹೊತ್ತುಕೊಂಡು ಹೋದನು.

ನಾಗಶ್ರೀಗೆ ಮತ್ತೆ ಪ್ರಜ್ಞೆಮರಳಿದಾಗ ಅವಳು ಅಸ್ತವ್ಯಸ್ತಳಾಗಿ ಹಾಸಿಗೆಯ ಮೇಲೆ ಮಲಗಿದ್ದಳು. ದೇಹ ಜಡವಾಗಿತ್ತು. ಅಲ್ಲಲ್ಲಿ ಗಾಯವಾಗಿತ್ತು. ಎಲ್ಲಕ್ಕಿಂತಲೂ ಹೆಚ್ಚಿಗೆ, ಅವಳು ತನ್ನ ಸರ್ವಸ್ವವೆಂದು ತಿಳಿದಿದ್ದಳೋ ಆ ಶೀಲಧನದ ಸೂರೆಯಾಗಿತ್ತು.

ಇದನ್ನು ನೆನಸಿಕೊಂಡು ನಾಗಶ್ರೀ ಅತ್ತಳು. ಹೃದಯ ಬಿರಿಯುವಂತೆ ಅತ್ತಳು. ಆ ಸಮಯದಲ್ಲಿ ಅವಳನ್ನು ಸಮಾಧಾನಪಡಿಸಲು ಯಾರೂ ಬರಲಿಲ್ಲ. ಅವಳು ರೋದಿಸುವಷ್ಟು ರೋದಿಸಿ ಕಡೆಗೆ ಸುಮ್ಮನಾದಳು.

ಒಂದೆರಡು ದಿನಗಳು ತನಗಾದ ನಿರಾಶೆ ದುಃಖಗಳಲ್ಲಿ ಅವಳು ಅನ್ನ ನಿದ್ರೆಗಳನ್ನು ತೊರೆದು ಚಿಂತಿಸುತ್ತಾ ಕುಳಿತಿದ್ದಳು. ಅವಳಿಗೆ ಜೀವನ ಅಸಹ್ಯವಾಗಿತ್ತು. ಬದುಕು ಬೇಡವಾಗಿತ್ತು. ಅವಳು ಎಂಜಲಾದ ತನ್ನ ದೇಹವನ್ನು ತನ್ನ ಆರಾಧ್ಯದೈವವಾಗಿದ್ದ ಚಂದ್ರೋಜನಿಗೆ ಅರ್ಪಿಸಲು ಇಷ್ಟಪಡಲಿಲ್ಲ. ಈ ದೇಹಕ್ಕೆ ಕೊನೆತಂದುಕೊಳ್ಳುವುದೊಂದೇ ಶ್ರದ್ಧಾಂಜಲಿ. ಸಾಯುವುದೇನೋ ಸರಿ. ಆದರೆ ವ್ಯರ್ಥವಾಗಿ ಸಾಯುವುದಕ್ಕೆ ಅವಳು ಸಿದ್ಧಳಿರಲಿಲ್ಲ. ತನ್ನನ್ನು ಈ ಸ್ಥಿತಿಗೆ ತಂದ, ತನ್ನ ಜೀವನವನ್ನು ಹಾಳುಮಾಡಿದ ವಿಷ್ಣುವರ್ಧನನ ಮೇಲೆ ಸೇಡು ತೀರಿಸಿಕೊಳ್ಳದೆ ತಾನು ಸಾಯಬಾರದೆಂದು ನಿಶ್ಚಯಿಸಿದಳು. ವಿಷ್ಣುವರ್ಧನನ ಮೇಲೆ ಸೇಡು...? ಅದನ್ನು ಅವನ ಸೆರೆಯಲ್ಲಿರುವ ತಾನು ಹೇಗೆ ತೀರಿಸಬಲ್ಲೆ? ಈ ಯೋಚನೆಗಳಲ್ಲಿ ತಲೆ ಕಾದು ಕೆಂಡವಾಯಿತು. ತಲೆ ಸಿಡಿಯುವಂತೆ ಭಾಸವಾಯಿತು. ಅವಳು ಹುಚ್ಚಿಯಂತೆ ಚೀರಿದಳು. ಅದು ಅರಣ್ಯ ರೋದನವಾಗಿತ್ತು. ಈ ಸ್ಥಿತಿಯಲ್ಲಿ ಅವಳು ಅದೆಷ್ಟು ದಿನ ಕಳೆದಳೋ ಅವಳಿಗೇ ತಿಳಿಯದು. ಅವಳು ತನ್ನ ವಿಷನ್ನಾವಸ್ಥೆಯಿಂದ ಎಚ್ಚೆತ್ತಾಗ ಅವಳು ವಿಷ್ಣುವರ್ಧನನ ಅಂತಃಪುರದಲ್ಲಿ ಸೆರೆಯಾಗಿ ಒಂದು ವಾರವೇ ಕಳೆದಿತ್ತು. ಈ ಕಾಲದಲ್ಲಿ ಒಂದೆರಡು ಗುಟುಕು ಹಾಲು ಕುಡಿದಿದ್ದಳು. ತನ್ನನ್ನು ಮಾತನಾಡಿಸಲು ಬಂದವರ ಪಾಲಿಗೆ ಶಿಲಾವಿಗ್ರಹವಾಗಿದ್ದಳು; ಶೋಕದ ಮೂರ್ತಿಯಾಗಿದ್ದಳು. ಕಡೆಗೆ ಅವಳು ಒಂದು ನಿರ್ಧಾರ ಮುಟ್ಟಿದಳು. ಮೊದಲು ಅಲ್ಲಿಂದ ಉಪಾಯ

ವಾಗಿ ಪಾರಾಗಬೇಕು. ಅನಂತರ ಪುಲಿಕೇಶಿಯ ಬಳಿಗೆ ಹೋಗಿ, ಎಲ್ಲವನ್ನೂ ತಿಳಿಸಬೇಕು. ಸಾಮ್ರಾಟರಿಂದ ಈ ದುಷ್ಟನಿಗೆ ತಕ್ಕ ದಂಡನೆ ವಿಧಿಸಬೇಕು. ಆ ಮೂಲಕ ಸೇಡು ಬಗೆಯಬೇಕು. ಅನಂತರ ಹೇಯವಾದ ತನ್ನ ಬದುಕಿಗೆ ಕೊನೆ ತಂದುಕೊಳ್ಳಬೇಕು.

ಈ ನಿರ್ಧಾರ ಮುಟ್ಟಿದುದೇ ತಡ, ನಾಗಶ್ರೀ ಕಾರ್ಯಗತಳಾದಳು. ಅವಳು ತಾನಾಗಿ ವಿಷ್ಣುವರ್ಧನನಿಗೇ ಒಲಿದು ಬಂದವಳಂತೆ ನಟಿಸಿ ಅವನನ್ನು ಸುಲಭವಾಗಿ ತನ್ನ ಸವಿಮಾತುಗಳಿಂದ ವಂಚಿಸಿದಳು. ಒಮ್ಮೆ ಅರಮನೆಯಲ್ಲಿ ತನ್ನ ಬಗ್ಗೆ ನಂಬಿಕೆಯುಂಟಾಗಿ ಸ್ವಾತಂತ್ರ್ಯ ದೊರೆತುದೇ ತಡ, ಅವಳು ವಿಷ್ಣು ವರ್ಧನನ ಕಣ್ಣಿಗೆ ಮಣ್ಣೆರಚಿ ಅವನ ಅಂತಃಪುರದಿಂದ ಪಾರಾದಳು.

ನೇರ ಅವಳು ಪುಲಿಕೇಶಿಯ ಅರಮನೆಗೆ ಹೋದಳು. ಪುಲಿಕೇಶಿಯು ಆಗಷ್ಟೇ ದಿನದ ಕೆಲಸವನ್ನು ಮುಗಿಸಿಕೊಂಡು ವಿಶ್ರಾಂತಿ ಪಡೆಯುತ್ತಿದ್ದನು. ಅವಳು ತಾನು ಬಂದ ಸಂಗತಿಯನ್ನು ಪಸಾಯಿತನ ಮೂಲಕ ಪುಲಿಕೇಶಿಗೆ ತಿಳಿಸಿದಳು. ಪುಲಿಕೇಶಿಯು ವಿಶ್ರಾಂತಿಯನ್ನು ಬಿಟ್ಟೆದ್ದು, ತಾನೇ ಹೊರಗೆ ಬಂದು ನಾಗಶ್ರೀಯನ್ನು ತನ್ನ ಅಂತರ್‌ಗೃಹಕ್ಕೆ ಕರೆದೊಯ್ದನು.

"ನಾಗಶ್ರೀ, ಇದೇನಿದು ನಿನ್ನ ಈ ರೂಪ. ಏಕೆ ಆರೋಗ್ಯವಾಗಿಲ್ಲವೆ?" ಎಂದು ಕಳವಳಗೊಂಡು ಕೇಳಿದ, ನಾಗಶ್ರೀಯ ಮ್ಲಾನವಾದ ಮುಖವನ್ನು ಕಂಡು, ಅನೇಕ ದಿನಗಳಿಂದ ಅವಳು ದುಃಖ ನಿರಾಶೆಗಳಿಂದ ಕಂಗೆಟ್ಟಿದ್ದಳು. ಅವಳಲ್ಲಿ ನೂರು ವರ್ಷಗಳ ವೃದ್ಧಾಪ್ಯ ಎದ್ದು ಕಾಣುತ್ತಿತ್ತು. ಅವಳ ಮೊದಲಿನ ನಗೆ ಮುಖವನ್ನು ಕಂಡಿದ್ದ ಪುಲಿಕೇಶಿಗೆ ನಾಗಶ್ರೀಯ ಇಂದಿನ ರೂಪ ಗಾಬರಿ ಯನ್ನುಂಟುಮಾಡಿತ್ತು.

"ಪ್ರಭು, ನನ್ನ ಆರೋಗ್ಯದ ಕತೆ ಏನು ಕೇಳುತ್ತೀರಿ! ನಾನು ಇದುವರೆಗೆ ಬದುಕೀ ಉಳಿದುದೇ ಒಂದು ಪವಾಡ! ನಾನು ಉಳಿದುದಾದರೂ ತಮ್ಮಲ್ಲಿ ನನ್ನ ಕರುಣಕತೆಯನ್ನು ನಿವೇದಿಸಿಕೊಂಡು, ಆ ನೀಚನಿಗೆ ತಕ್ಕ ದಂಡನೆಯನ್ನು ವಿಧಿಸಲು; ಅವನು ತನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ ಹೊಂದುವಂತೆ ಮಾಡುವ ಸಲುವಾಗಿ ಈ ದೇಹ ಹೊತ್ತಿದ್ದೇನೆ. ಇಲ್ಲದಿದ್ದರೆ ಈ ನಾಯಿ ಮುಟ್ಟಿದ ಮಡಿಕೆಯನ್ನು ಒಡೆದು ನೀರಿನಲ್ಲಿ ಚೆಲ್ಲುತ್ತಿದ್ದೆ."

"ನಾಗಶ್ರೀ ಅಂತಹ ಸಂಗತಿ ಏನಾಯಿತು ಈಗ? ನಡೆದುದನ್ನು

ನಿಸ್ಸಂಕೋಚದಿಂದ ಹೇಳು!" ಎಂದು ಸಮಾಧಾನಪಡಿಸುತ್ತಾ ಹೇಳಿದ ಪುಲಿಕೇಶಿ.

"ಪ್ರಭು, ಇದನ್ನು ನಾನು ಯಾವ ನಾಲಗೆಯಿಂದ ಹೇಳಲಿ. ನನ್ನ ಸರ್ವಸ್ವವನ್ನು ಅಪಹರಿಸಿ, ಈ ಸ್ಥಿತಿಗೆ ತಂದ ದ್ರೋಹಿಯ ಹೆಸರನ್ನು ಉಚ್ಚರಿಸಿ ಯಾವ ನರಕಕ್ಕೆ ಹೋಗಲಿ? ಆದರೂ ಆ ನೀಚನ ನೀಚತನವನ್ನು ಬಯಲು ಮಾಡಬೇಕಾಗಿದೆ. ಇದನ್ನು ಕೇಳಿ ಆನಂದಪಡಿ! ನನ್ನನ್ನು ಈ ಸ್ಥಿತಿಗೆ ತಂದ ವನು ಬೇರೆ ಯಾರೂ ಅಲ್ಲ—ಆ ನಿಮ್ಮ ಸೋದರ... ನೀಚ ವಿಷ್ಣುವರ್ಧನ!" ಎಂದು ಹೇಳಿ ದುಃಖದ ಭಾರದಿಂದ ನೆಲಕ್ಕೆ ಕುಸಿದಳು. ಪುಲಿಕೇಶಿಯು ಕೂಡಲೇ ಪರಿಚಾರಕಳನ್ನು ಕರೆದು ಶೈತ್ಯೋಪಚಾರ ಮಾಡಲು ಹೇಳಿ, ರಾಜ ವೈದ್ಯರನ್ನೂ ಅಮಾತ್ಯ ಸಮಂತಭದ್ರರನ್ನೂ ಕೂಡಲೇ ಕರೆದುತರಲು ದೂತ ರನ್ನು ಅಟ್ಟಿದನು.

ಅವರು ಬರುವುದರೊಳಗೆ ನಾಗಶ್ರೀ ಮೂರ್ಛೆಯಿಂದ ಎಚ್ಚೆತ್ತಿದ್ದಳು. ಅವಳು ಕೆಲವೇ ಮಾತುಗಳಲ್ಲಿ ತನ್ನ ಕರುಣ ಕತೆಯನ್ನು ಹೇಳಿದಳು. ಇದನ್ನು ಕೇಳಿ ಪುಲಿಕೇಶಿಯು ಹೌಹಾರಿದನು. ನಾಗಶ್ರೀ ಸಾಮ್ರಾಟ್ ಹರ್ಷವರ್ಧನನ ಸಾಕುಪುತ್ರಿ—ಸಾಂಸ್ಕೃತಿಕ ರಾಯಭಾರಿ, ಆಸ್ಥಾನದ ನರ್ತಕಿ, ಚಂದ್ರೋಜನ ಪ್ರೇಯಸಿ... ಇಂತಹವಳನ್ನು ಆ ವಿಷ್ಣುವರ್ಧನನು ತನ್ನ ಕಾಮಕ್ಕೆ ಬಲಿ ಕೊಟ್ಟನೆ? ನೆನೆದಂತೆ ಅವನ ದಮನಿದಮನಿಯಲ್ಲಿ ಕ್ರೋಧ ಉಕ್ಕಿತು. ಅವನು ತನ್ನ ತಮ್ಮನ ನಡತೆಯಿಂದ ಪ್ರಕ್ಷುಬ್ಧನಾದನು. ಕೂಡಲೇ ದೂತರನ್ನು ಕರೆದು ವಿಷ್ಣುವರ್ಧನನನ್ನು ಕರೆತರಲು ಆಜ್ಞೆ ಮಾಡಿದನು.

ದೂತರು ಕಣ್ಮರೆಯಾಗುತ್ತಿದ್ದಂತೆ ಪುಲಿಕೇಶಿಯ ಆತುರದ ಕರೆಯನ್ನು ಕೇಳಿ ಸಮಂತಭದ್ರ, ರಾಜವೈದ್ಯರು ಓಡಿಬಂದರು. ಅವರನ್ನು ಕುಳಿತುಕೊಳ್ಳಲು ಹೇಳುವಷ್ಟು ವ್ಯವಧಾನ ಉಳಿಯದೆ ಪುಲಿಕೇಶಿ, ನಾಗಶ್ರೀಯ ದಾರುಣಕತೆ ಯನ್ನು ತಿಳಿಸಿದನು.

"ಇದಕ್ಕೆಲ್ಲ ಕಾರಣನಾದ ಆ ನೀಚನನ್ನು ಏನು ಮಾಡಲಿ ಅಮಾತ್ಯರೇ? ಈ ಹೆಣ್ಣುಮಗಳ ಬಾಳನ್ನು ಕಿತ್ತ ಆ ಘಾತುಕನನ್ನು ಯಾವ ರೀತಿಯಲ್ಲಿ ಶಿಕ್ಷಿ ಸಲಿ. ಏನು ಮಾಡಿದರೆ ತಾನೇ ಈ ಹೆಣ್ಣುಮಗಳಿಗಾಗಿರುವ ಅನ್ಯಾಯಕ್ಕೆ ಪ್ರತಿ ದಂಡನೆಯಾದೀತು?"

ಎಂದು ಪುಲಿಕೇಶಿಯು ಉದ್ಗಾರ ತೆಗೆದನು.

ಎಲ್ಲವನ್ನೂ ಶಾಂತಚಿತ್ತದಿಂದ ಕೇಳಿದ ಪ್ರಧಾನಿ ಸಮಂತಭದ್ರನು,

"ಪ್ರಭು, ಇದು ಅತ್ಯಂತ ಸೂಕ್ಷ್ಮವೂ ಜಟಿಲವೂ ಆಗಿರುವ ವಿಷಯ. ನಾಗಶ್ರೀಯು ಹೇಳುವುದು ನಿಜವಾಗಿದ್ದರೆ, ವಿಷ್ಣುವರ್ಧನನ ನಡತೆಯಿಂದ ನಾವೆಲ್ಲ ತಲೆತಗ್ಗಿಸಬೇಕಾಗುತ್ತದೆ. ಏಕೆಂದರೆ ಈ ಅತ್ಯಾಚಾರ ಪ್ರಭುಗಳ ಸೋದರರೂ ಯುವರಾಜಕುಮಾರರೂ ಆಗಿರುವ ವಿಷ್ಣುವರ್ಧನರಿಂದ ನಡೆದಿದೆ. ಅವರ ಮೇಲೆ ಬಂದಿರುವ ಆರೋಪ ಭಯಂಕರವಾದುದು. ಇದನ್ನು ಹೊರಿಸುತ್ತಿರುವ ವ್ಯಕ್ತಿ ಬೇರಾರೂ ಅಲ್ಲ—ಆಸ್ಥಾನದ ರಾಜನರ್ತಕಿ ನಾಗಶ್ರೀ! ಈ ಪ್ರಕರಣವನ್ನು ಬಹಿರಂಗಗೊಳಿಸಿದರೆ ನಾವು ಜನಸಾಮಾನ್ಯರ ಕಣ್ಣಿನಲ್ಲಿ ತೀರ ಸಣ್ಣವರಾಗಿ ಕಾಣಿಸುತ್ತೇವೆ. ಇತರರಿಗೆ ಆದರ್ಶ ಪ್ರಭುಗಳಾಗಬೇಕಾಗಿದ್ದ ನಾವು ಅವರ ಕಣ್ಣಿನಲ್ಲಿ ಕೀಳಾಗಿ ಕಾಣಿಸುತ್ತೇವೆ. ಆದುದರಿಂದ ಈ ವಿಷಯವನ್ನು ಗೋಪ್ಯವಾಗಿರಿಸಬೇಕು. ಆದರೆ ವಿಚಾರಣೆ ನಡೆಯಬೇಕು. ಆರೋಪಿಗಳು ಯಾರೇ ಇರಲಿ, ತಪ್ಪಿತಸ್ಥರಾಗಿದ್ದರೆ ಅವರಿಗೆ ತಕ್ಕ ದಂಡನೆಯಾಗಲೇಬೇಕು. ನ್ಯಾಯ ತೀರ್ಮಾನದಲ್ಲಿ ಸಹೋದರರೆನ್ನುವ ಭಾವನೆಯಾಗಲೀ, ಯುವರಾಜಪದವಿಯಾಗಲಿ ಅಡ್ಡಬರಬಾರದು. ಆದರೆ ಈ ವಿಚಾರಣೆಯು ಅಂತರಂಗದಲ್ಲಿ ನಡೆಯುವುದು ಸಿಂಹಾಸನದ ಘನತೆ ಗೌರವಗಳಿಗೆ ಅಗತ್ಯ. ಇಷ್ಟರ ಮೇಲೆ ಸನ್ನಿಧಾನದ ಚಿತ್ತ !" ಎಂದನು.

"ಹೌದು ಪ್ರಭು, ಸಮಂತಭದ್ರರು ಹೇಳುವ ಮಾತು ನಿಜ. ತುಂಬಿದ ಸಭೆಯಲ್ಲಿ ನಾಗಶ್ರೀ ಮಾನಹೋದರೆ ನಮ್ಮ ಮಾನಹೋದಂತೆ ಅಲ್ಲವೆ ? ನಾವೆಲ್ಲ ಅರಮನೆಯ ಉಪ್ಪುಂಡು ಬೆಳೆದಿದ್ದೇವೆ. ಇಂದು ಅರಮನೆಯ ಗೌರವವನ್ನು ಕಾಯ್ದುಕೊಳ್ಳಬೇಕಾಗಿದ್ದು ನಮ್ಮ ಕರ್ತವ್ಯ. ಅಲ್ಲದೆ ನಾಗಶ್ರೀಗೆ ಆಗಿರುವ ಅತ್ಯಾಚಾರದ ದೃಷ್ಟಿಯಿಂದಲೂ ಇದಕ್ಕೆ ಅಂತರಂಗ ವಿಚಾರಣೆ ಬೇಕೆನಿಸುತ್ತದೆ. ಹೆಣ್ಣುಮಗಳು ಅವಳು ಯಾರೇ ಇರಲಿ, ತುಂಬಿದ ಸಭೆಯಲ್ಲಿ ತನ್ನ ಶೀಲಹರಣವಾಯಿತೆಂದು ಹೇಳಿಕೊಳ್ಳಲು ಹಿಂಜರೆಯುವಳು. ಇದರಿಂದ ನ್ಯಾಯ ತೀರ್ಮಾನಕ್ಕೆ ಧಕ್ಕೆ ಬರುವುದು. ದ್ರೋಹಿಗಳು ಯಾರೇ ಇರಲಿ, ಅಪರಾಧಕ್ಕೆ ತಕ್ಕ ಶಿಕ್ಷೆ ನಡೆಯಲೇಬೇಕು. ಇದರ ಸಲುವಾಗಿ ಅಂತರಂಗ ವಿಚಾರಣೆ ಅಗತ್ಯ!" ಎಂದು ರಾಜವೈದ್ಯರು ಹೇಳಿದರು.

ಇದನ್ನೆಲ್ಲ ಚೆನ್ನಾಗಿ ಪರ್ಯಾಲೋಚಿಸಿದ ಅನಂತರ ಪುಲಿಕೇಶಿಯು ನಾಗಶ್ರೀಯ ಆರೋಪವನ್ನು ಅಂತರಂಗದಲ್ಲಿ ವಿಚಾರಿಸಬೇಕೆಂದು ನಿಶ್ಚಯಿಸಿ ದನು. ಅಷ್ಟರಲ್ಲಿ ದೂತನೊಬ್ಬನು ಕಾಣಿಸಿಕೊಂಡು ವಿಷ್ಣುವರ್ಧನನು ಬರುತ್ತಿ ರುವ ಸಂಗತಿ ತಿಳಿಸಿದನು. ಅದರ ಬೆನ್ನಿಗೇ ವಿಷ್ಣುವರ್ಧನನು ಆಗಮಿಸಿದನು. ನಾಗಶ್ರೀ ತನ್ನ ಮನೆಯಿಂದ ತಪ್ಪಿಸಿಕೊಂಡು ಕಣ್ಮರೆಯಾದ ಬೆನ್ನ ಹಿಂದೆಯೇ ಸಾಮ್ರಾಟರಿಂದ ತನಗೆ ಆತುರದ ಕರೆ ಕೇಳಿ ನಡೆದಿರಬಹುದಾದುದನ್ನು ಊಹಿಸಿ ತಿಳಿದು ಅವಳು ಗಾಬರಿಯಿಂದ ಓಡಿಬಂದಿದ್ದನು. ಅವನನ್ನು ಕುಳಿತುಕೊಳ್ಳಲು ಸಹ ಹೇಳದೆ, ಪುಲಿಕೇಶಿಯು ಅವನನ್ನು ಆಪಾದಮಸ್ತಕ ನೋಡಿ ಮುಖ ಗಂಟಿಕ್ಕಿ ಹೇಳಿದನು :

"ವಿಷ್ಣುವರ್ಧನ, ನೀನು ನನ್ನ ಒಡಹುಟ್ಟಿದ ಸಹೋದರನಾಗಿ ಇಂತಹ ಹೀನಕೃತ್ಯ ಎಸಗುವೆ ಎಂದು ನಾನು ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲ. ನೋಡು. ಆ ಹೆಣ್ಣುಮಗಳಿಗೆ ಆಗಿರುವ ಅನ್ಯಾಯಕ್ಕೆ ನೀನು ಏನು ಉತ್ತರ ಕೊಡುತ್ತೀಯಾ" ಎಂದು ಹೇಳಿ ಅಲ್ಲಿ ಮೂಲೆಯೊಂದರಲ್ಲಿ ಮುದುಡಿ ಕುಳಿತಿದ್ದ ನಾಗಶ್ರೀಯನ್ನು ತೋರಿಸಿದನು. ವಿಷ್ಣುವರ್ಧನನಿಗೆ ಆಗ ತನ್ನ ಅಪರಾಧದ ಕಲ್ಪನೆಯಾಯಿತು. ಆದರೂ ಅವನು ಅಧೀರನಾಗದೆ, ಗಂಭೀರ ಸ್ವರದಲ್ಲಿ ಹೇಳಿದ :

"ಪ್ರಭು, ತಾವು ಧರ್ಮಾವತಾರರು ! ಸತ್ಯಾಶ್ರಯರು ! ಇಂದು ನ್ಯಾಯ ಮೂರ್ತಿಯಾಗಿ ಇಲ್ಲಿ ಮಂಡಿಸಿದ್ದೀರಿ. ನನ್ನ ಮೇಲಿನ ಆರೋಪವೇನೆಂದು ವಿಚಾರಿಸಿರಿ. ನನ್ನ ಅಪರಾಧ ಸಿದ್ಧವಾದರೆ, ಈ ನೀಚನು ತಮ್ಮ ಸಹೋದರ ನೆಂಬುದನ್ನೂ ನೋಡದೆ ಪಾಪಿಗೆ ತಕ್ಕ ಶಿಕ್ಷೆಯನ್ನು ವಿಧಿಸಿ. ನಾನು ಬೇಡ ವೆನ್ನುವುದಿಲ್ಲ ಪ್ರಭು."

"ಹಾಗಾದರೆ ರಾಜನರ್ತಕಿ ನಾಗಶ್ರೀ ಮೇಲೆ ನೀನು ಅತ್ಯಾಚಾರ ನಡೆಸಿರುವುದು ಸುಳ್ಳೆ ?"

"ಇದನ್ನು ತಮಗೆ ಯಾರು ತಿಳಿಸಿದರು ಪ್ರಭು ?"

"ಸ್ವಯಂ ನಾಗಶ್ರೀಯೇ ತಿಳಿಸಿದ್ದಾಳೆ."

"ಇದನ್ನು ತಾವು ನಿಜವೆಂದು ನಂಬುವಿರಾ ಪ್ರಭು ?"

"ಏಕೆ ನಂಬಬಾರದು ? ಈ ಅತ್ಯಾಚಾರಕ್ಕೆ ಒಳಗಾದ ವ್ಯಕ್ತಿಯೇ ಬಂದು

ಹೇಳಿರುವಾಗ ನಂಬದಿರುವುದಾದರೂ ಎಂತು ?"

"ಪ್ರಭು, ತಮ್ಮಲ್ಲಿ ನನ್ನದೊಂದು ಕೋರಿಕೆ ಇದೆ. ನಾನು ಹೇಳುವುದನ್ನೆಲ್ಲಾ ತಾವು ಪೂರ್ವಾಗ್ರಹವಿಲ್ಲದೆ ವಿಚಾರಿಸಬೇಕು. ನಾನು ನಾಗಶ್ರೀಯಲ್ಲೂ ಅನುರಕ್ತನಾಗಿರುವುದು ದಿಟ. ಈ ಬಗ್ಗೆ ಸಮಂತಭದ್ರರು ಸನ್ನಿಧಾನವಲ್ಲಿ ಅರಿಕೆ ಮಾಡಿಕೊಂಡಿದ್ದಾರೆ. ಇದನ್ನು ನಾನು ಅಲ್ಲಗಳೆಯುವುದಿಲ್ಲ. ಆದರೆ ನಾನು ಅಲ್ಲಗಳೆಯುತ್ತಿರುವುದು ನಾಗಶ್ರೀ ಹೊರಿಸುತ್ತಿರುವ ಅತ್ಯಾಚಾರದ ಆರೋಪವನ್ನು !"

"ಹಾಗಾದರೆ ಅವಳು ನಿನ್ನ ಅಂತಃಪುರಕ್ಕೆ ಹೇಗೆ ಬಂದಳು ?"

"ಅವಳು ಸ್ವಯಿಚ್ಛೆಯಿಂದ ಒಲಿದು ಬಂದಳು ಪ್ರಭು."

"ಅವಳು ನಿನ್ನನ್ನು ತಿರಸ್ಕರಿಸಿ ಚಿತ್ರಕಲಾವಿದ ಚಂದ್ರೋಜರಲ್ಲಿ ಅನುರಕ್ತಳಾದ ಸಂಗತಿ ಕೇಳಿದ್ದೇನೆ. ಅವರ ವಿವಾಹವೂ ನಡೆಯಲಿದೆ. ಹೀಗಿರುವಲ್ಲಿ ಅವಳು ತಾನಾಗಿ ಒಲಿದು ನಿನ್ನ ಅಂತಃಪುರಕ್ಕೆ ಬಂದಳೇ, ಆಶ್ಚರ್ಯ !"

"ಪ್ರಭು, ನಾಗಶ್ರೀ ತನ್ನ ಅಂತಃಪುರಕ್ಕೆ ಹೇಗೆ ಬಂದಳೆಂಬುದೇ ದೊಡ್ಡ ಕತೆ. ಅವಳು ನನ್ನ ಪ್ರೇಮವನ್ನು ಮೊದಲು ತಿರಸ್ಕರಿಸಿದಳೆಂಬುದೇನೋ ದಿಟ, ಆದರೆ ಅವಳು ನನ್ನನ್ನು ಸಂಪೂರ್ಣವಾಗಿ ತಿರಸ್ಕರಿಸಿರಲಿಲ್ಲ. ಅವಳು ನಮ್ಮೊಡನೆ ವನವಿಹಾರಕ್ಕೆ ಬಂದಿದ್ದಾಗ ನನ್ನಲ್ಲಿ ಅನುರಕ್ತಳಾದಳು. ನನ್ನನ್ನು ವಿವಾಹವಾದರೆ ತಾನು ಸುಖವಿಲಾಸ ವೈಭವಗಳಲ್ಲಿ ಬಾಳಬಹುದೆಂದು ನನ್ನನ್ನು ಪ್ರೇಮಿಸಿದಳು. ಅವಳು ರಾಜಧಾನಿಗೆ ಬಂದಕೂಡಲೇ ತಾನಾಗಿ ನನ್ನ ಅರಮನೆಗೆ ಅಭಿಸಾರಿಕೆಯಾಗಿ ಬಂದಳು. ಅವಳ ಮೇಲೆ ಮೊದಲಿನಿಂದಲೂ ಅಭಿಮಾನ ತಳೆದಿದ್ದ ನನಗೆ ಅವಳನ್ನು ಆ ಸ್ಥಿತಿಯಲ್ಲಿ ತಿರಸ್ಕರಿಸುವ ಮನವಾಗದೆ, ಅವಳ ಪ್ರೇಮವನ್ನು ಸ್ವೀಕರಿಸಿದೆ. ಪತ್ನಿಯಾಗಿ ಸ್ವೀಕರಿಸಿದೆ. ಅಂತಃಪುರದಲ್ಲೂ ಅವಳಿಗೆ ಯಾವ ಮಹಾರಾಣಿಗೂ ಕಡಿಮೆಯಿಲ್ಲದಂತೆ ನೋಡಿಕೊಂಡೆ. ಇಂದು ವೇಶ್ಯಾಪುತ್ರಿಯಾದ ಅವಳು ತನ್ನ ಚಂಚಲ ಮನಸ್ಸನ್ನು ಮತ್ತೆ ಬದಲಾಯಿಸಿ, ತಮ್ಮಲ್ಲಿಗೆ ಬಂದು ನನ್ನ ಮೇಲೆ ಅತ್ಯಾಚಾರದ ಆರೋಪ ಹೊರಿಸುತ್ತಿದ್ದಾಳೆ. ಇದನ್ನು ನಂಬುವುದು, ಬಿಡುವುದು ಸನ್ನಿಧಾನದ ಚಿತ್ತ."

ಇದನ್ನು ಕೇಳಿ ಪುಲಿಕೇಶಿಯು ನಾಗಶ್ರೀಯ ಕಡೆ ನೋಡಿದ.

ನಾಗಶ್ರೀ ಉತ್ತರ ಕೊಡದೆ ತಿರಸ್ಕಾರದಿಂದ ನೋಡಿದಳು.

"ನಾಗಶ್ರೀ, ಕುಮಾರರು ತಾವು ತಪ್ಪಿತಸ್ಥರಲ್ಲವೆಂದು ಹೇಳುತ್ತಿದ್ದಾರೆ. ನೀನು ಒಲಿದು ಅವರ ಅಂತಃಪುರಕ್ಕೆ ಅಭಿಸಾರಿಕೆಯಂತೆ ಬಂದು ಪ್ರಣಯಭಿಕ್ಷೆ ಬೇಡಿದೆ ಎಂದು ಕುಮಾರರು ಹೇಳುತ್ತಾರೆ. ಇದಕ್ಕೆ ನೀನು ಏನು ಹೇಳುವೆ?" ಎಂದು ಸಮಂತಭದ್ರ ಹೇಳಿದ.

"ಇದರಲ್ಲಿ ಪ್ರತಿಯೊಂದು ಸಂಗತಿಯೂ ಸುಳ್ಳು ಪ್ರಭು."

"ಹಾಗಾದರೆ ಇದೆಲ್ಲ ಸ್ವಕಲ್ಪಿತ ಕತೆಯೆಂದು ನಿನ್ನ ಅಭಿಪ್ರಾಯವೋ!"

"ಹೌದು! ನಿಮ್ಮನ್ನು ವಂಚಿಸಲು ಆ ನೀಚನು ಹೂಡಿರುವ ಕಪಟ ನಾಟಕ."

"ಪ್ರಭು! ನಾಗಶ್ರೀ ನನ್ನಲ್ಲಿ ಬಂದು ಪ್ರಣಯಭಿಕ್ಷೆ ಬೇಡಿದಳೇ ಇಲ್ಲವೇ ಎಂಬುದಕ್ಕೆ ಅವಳು ನನ್ನ ಅರಮನೆಗೆ ಬಂದುದಕ್ಕಿಂತಲೂ ಬೇರೆ ಸಾಕ್ಷಿ ಬೇಕೆ?"

"ಹೌದೇ?"

"ಪ್ರಭು, ಇದು ದೊಡ್ಡ ಸುಳ್ಳು. ನಾನು ಆ ಪಾಪಿಯ ಮುಖಾವಲೋಕನ ಮಾಡಲು ಹೇಸುತ್ತಿರುವಾಗ ನಾನಾಗಿ ನಾನು ಅವನ ಮನೆಯ ಹೊಸ್ತಿಲನ್ನು ತುಳಿಯುವೆನೆ?"

"ಹಾಗಾದರೆ ನೀನು ಅರಮನೆಗೆ ಹೋದುದು ಹೇಗೆ?"

"ಆ ನೀಚನು ನನ್ನನ್ನು ಕಳ್ಳನಂತೆ ಕದ್ದೊಯ್ದು ಸೆರೆಯಲ್ಲಿಟ್ಟನು."

"ಹೌದೇ ಕುಮಾರ?" ಸಮಂತಭದ್ರನೆಂದ.

"ಇಲ್ಲ ಅಮಾತ್ಯರೇ, ಆ ದಿನ ಅವಳು ತಾನಾಗಿ ಅಭಿಸಾರಿಕೆಯಾಗಿ ಬಂದಳು. ಆದರೆ ಮದ್ಯದ ಅಮಲಿನಲ್ಲಿ ಅವಳು ಇದನ್ನು ಮರೆತಿದ್ದಾಳೆ. ಬೇಕಿದ್ದರೆ ನಾನು ಹೇಳುವುದು ನಿಜವೋ ಸುಳ್ಳೋ ಸಾಕ್ಷಿಗೆ ಅವಳು ಆ ದಿನ ಎಷ್ಟು ಮದ್ಯವನ್ನು ಸೇವಿಸಿದ್ದಳೆಂಬುದಕ್ಕೆ ಮೇನೆಯನ್ನು ಹೊತ್ತಿದ್ದ ಬೋಯಿಗಳನ್ನು ವಿಚಾರಿಸಬಹುದು."

"ನಾಗಶ್ರೀ, ಅಂದು ನೀನು ಅತಿಯಾಗಿ ಮದ್ಯಪಾನ ಮಾಡಿದ್ದೆ ಎಂದು ಕುಮಾರರು ಹೇಳುತ್ತಾರೆ. ಹೌದಾ ತಾಯಿ!"

"ಆ ದಿನ ನಾನು ಮದ್ಯಸೇವಿಸಿದ್ದುದೇನೋ ನಿಜ ಅಮಾತ್ಯರೇ. ಆದರೆ ನಾನೆಂದಿಗೂ ಅತಿ ಮದ್ಯ ಸೇವನೆ ಮಾಡುವುದಿಲ್ಲ. ಆ ದಿನ ನಾನು ಕೊಂಚ ಮಾತ್ರ ಮದ್ಯ ಸೇವಿಸಿದ್ದೆ. ಈ ಘಾತುಕನ ಕಾರ್ಯವೆಲ್ಲವೂ ಇನ್ನೂ ಮನಸ್ಸಿ

ನಲ್ಲಿ ಅಚ್ಚಳಿಯದೆ ನಿಂತಿದೆ."

"ಹಾಗಿದ್ದರೆ ನನ್ನನ್ನು ಒಲಿದು ಬಾರದಿದ್ದರೆ ನಮ್ಮ ಅರಮನೆಯಲ್ಲಿ ಇಷ್ಟು ದಿನಗಳು ಹೇಗೆ ವಾಸವಾಗಿರುತ್ತಿದ್ದಳು ಅಮಾತ್ಯರೇ ? ನಾಗಶ್ರೀ ನನ್ನನ್ನು ವಂಚಿಸಿದಂತೆ, ನಿಮ್ಮನ್ನೂ ತನ್ನ ಕಟ್ಟುಕತೆಯಲ್ಲಿ ವಂಚಿಸಿದ್ದಾಳೆ ಪ್ರಭು ! ತಾವು ಈ ಎಲ್ಲ ಮಾತುಗಳಿಗೆ ಮರುಳಾಗಬಾರದು."

"ಹೌದು. ನಾಗಶ್ರೀ, ತಾನಾಗಿ ಒಲಿದು ಬಾರದಿದ್ದರೆ ಅವಳು ಅತ್ಯಾಚಾರವನ್ನು ಸಹಿಸಿಕೊಂಡು ಅಂತಃಪುರದಲ್ಲಿ ಹೇಗೆ ಇರುತ್ತಿದ್ದಳು. ತನಗೆ ನಿಜವಾಗಿಯೂ ಅನ್ಯಾಯವಾಗಿದ್ದರೆ ಈ ಮೊದಲೇ ಏಕೆ ತಿಳಿಸದೆ ಇರುತ್ತಿದ್ದಳು ? ಇದನ್ನು ವಿಚಾರಮಾಡಬೇಕಾಗಿದೆ ಪ್ರಭು." ಸಮಂತಭದ್ರ ಹೇಳಿದ.

"ಈ ಮಾತಿಗೆ ನಿನ್ನ ಉತ್ತರವೇನು ನಾಗಶ್ರೀ ?"

ಗಂಭೀರವಾಗಿ ಪುಲಿಕೇಶಿ ಕೇಳಿದ.

"ಪ್ರಭೂ, ಆ ನೀಚನ ಮಾತನ್ನು ತಾವು ನಂಬಬಾರದು. ಅವನು ಪಾಪಿ ! ನನ್ನಂತಹ ಎಷ್ಟೋ ಜನ ಅಬಲೆಯರನ್ನು ಹಾಳುಮಾಡಿರುವನೋ ! ಇಲ್ಲದಿದ್ದರೆ ಅವನಿಗೆ ಈ ನಾಟಕ ಹೇಗೆ ಸಾಧ್ಯವಾಗುತ್ತಿತ್ತು. ನನ್ನನ್ನು ಕಾಮಿಸಿದ ಈ ನೀಚನನ್ನು ನಾನು ಮನೆಯಿಂದ ಹೊರಗಟ್ಟಿದುದೇ ನಾನು ಮಾಡಿದ ಮಹಾ ಅಪರಾಧ ! ಇವನನ್ನು ತಿರಸ್ಕರಿಸಿ ಚಿತ್ರಕಾರ ಚಂದ್ರೋಜರನ್ನು ಒಲಿದುದೇ ನನ್ನ ಇನ್ನೊಂದು ಅಪರಾಧ ! ಈಗ ತಮ್ಮ ಬಳಿಗೆ ನಾನು ದೂರು ಹೊತ್ತು ಬಂದು, ನ್ಯಾಯದಾನ ಬೇಡುತ್ತಿರುವುದು ಮೂರನೆಯ ಅಪರಾಧ ! ಇದಕ್ಕೆ ನನಗೆ ಈ ಶಿಕ್ಷೆಯನ್ನು ಭಗವಂತನು ವಿಧಿಸಬೇಕೆ ? ಪ್ರಭು, ಧರ್ಮಾವತಾರರಾಗಿ ತಾವು ಕೇಳುತ್ತಿದ್ದೀರಿ. ನನ್ನ ಹೇಳಿಕೆಯಲ್ಲಿ ನಂಬಿಕೆಯಿದ್ದರೆ ಈ ನೀಚನಿಗೆ ಶಿಕ್ಷೆ ವಿಧಿಸಿರಿ. ಇಲ್ಲದಿದ್ದರೆ, ನನ್ನನ್ನು ಇಲ್ಲಿಂದ ಕಳುಹಿಸಿಕೊಡಿ, ಇಲ್ಲಿ ದೊರೆಯದ ನ್ಯಾಯದಾನವನ್ನು ಪರಲೋಕದಲ್ಲಿ ಪಡೆಯುತ್ತೇನೆ" ನೊಂದು ನಿರಾಶೆಯಿಂದ ನುಡಿದಳು ನಾಗಶ್ರೀ. ಅವಳು ಸಾಮ್ರಾಟ್ ಪುಲಿಕೇಶಿ ಸಮಂತಭದ್ರರು ಈ ಬಗೆಯಲ್ಲಿ ಹೇಳುವರೆಂದು ಕನಸು ಮನಸಿನಲ್ಲಿಯೂ ತಿಳಿದಿರಲಿಲ್ಲ. ತಾನು ನಿಂತ ನೆಲವೇ ಕುಸಿದು ಬಿದ್ದಮೇಲೆ ಇನ್ನು ತನ್ನನ್ನು ಉದ್ಧರಿಸುವರಾದರೂ ಯಾರು ?"

"ನಾಗಶ್ರೀ, ನೀನು ಯುವರಾಜಕುಮಾರರ ಮೇಲೆ ಹೊರಿಸಿರುವ

ಆರೋಪ ಯಥಾರ್ಥವಾದುದೇ ಇಲ್ಲವೇ ಎಂಬುದನ್ನು ತೀರ್ಮಾನಿಸುವುದು ಕಠಿಣವಾಗಿದೆ. ಕುಮಾರರು ನೀನು ಅಭಿಸಾರಿಕೆಯಾಗಿ ತಮ್ಮಲ್ಲಿಗೆ ಬಂದು ಪ್ರಣಯಭಿಕ್ಷೆ ಬೇಡಿದುದಾಗಿ ಹೇಳುತ್ತಿದ್ದಾರೆ. ನೀನು ಕುಮಾರರು ಒತ್ತಾಯ ದಿಂದ ಕರೆದೊಯ್ದು ಅತ್ಯಾಚಾರಮಾಡಿರುವುದಾಗಿ ತಿಳಿಸುತ್ತಿದ್ದೀ. ನಿಮ್ಮಿಬ್ಬ ರಲ್ಲಿ ಯಾರು ಸತ್ಯಾಂಶವನ್ನು ತಿಳಿಸುತ್ತಾರೆಂಬುದು ತಿಳಿಯದಾಗಿದೆ. ಆದರೆ ವಸ್ತು ಪರಿಸ್ಥಿತಿಯಿಂದ ಹೇಳುವುದಾದರೆ, ನೀನು ವೇಶ್ಯಾಪುತ್ರಿ. ಮೇಲಾಗಿ ರಾಜನರ್ತಕಿ. ನೀನು ಅಭಿಸಾರಿಕೆಯಾಗಿ ಕುಮಾರರ ಅರಮನೆಗೆ ಬಂದುದರಲ್ಲಿ ಅಚ್ಚರಿಪಡಬೇಕಾದ ಸಂಗತಿಯಿಲ್ಲ, ನಿನಗೆ ಚಂದ್ರೋಜರೊಡನೆ ವಿವಾಹ ವಾಗಲು ಮನಸ್ಸು ಇದ್ದರೂ, ಕುಮಾರರ ಅಧಿಕಾರ ಪದವಿ, ಶ್ರೀಮಂತಿಕೆಗಳಿಗೆ ಮರುಳಾಗಿ ಈ ಕಾರ್ಯಕ್ಕೆಳಸಿರಬೇಕೆನಿಸುತ್ತಿದೆ. ಇದಕ್ಕೆ ನಿನ್ನ ಮದ್ಯದ ಅಮಲು ಸಾಕಷ್ಟು ಪ್ರಚೋದಕವಾಗಿರಬೇಕು. ಒಂದು ವೇಳೆ ನಿನ್ನ ಶೀಲ ಹರಣದಂತಹ ಹೇಯ ಕಾರ್ಯಕ್ಕೆ ಯುವರಾಜಕುಮಾರರು ಎಳೆಸಿದ್ದರೆ, ಇದು ಅಂತಹ ಮಹಾಪರಾಧ ಅಲ್ಲ. ಏಕೆಂದರೆ ನೀನು ವೇಶ್ಯಾಪುತ್ರಿ. ನಿನ್ನನ್ನು ಅವರು ಭೋಗಕಾಂತೆಯಾಗಿ ತಿಳಿದುದರಲ್ಲಿ ತಪ್ಪೇನಿದೆ ?"

ಎಂದು ಸಮಂತಭದ್ರನು ಹೇಳಿದ.

ಪುಲಿಕೇಶಿಯು, "ಅಮಾತ್ಯ ಸಮಂತಭದ್ರರು ಹೇಳುವ ಮಾತು ನಿಜ. ವಾಸ್ತವ ಸಂಗತಿಯನ್ನು ಅರಿಯದೆ ನಾವು ಅಪರಾಧಿಗಳು ಯಾರೆಂದು ಸ್ಪಷ್ಟ ವಾಗಿ ಹೇಳುವುದು ಸಾಧ್ಯವಿಲ್ಲ. ಆದರೆ, ವಾಸ್ತವಾಂಶವೇನೆಂಬುದಕ್ಕೆ ನಮಗೆ ಪ್ರಮಾಣವಿಲ್ಲ—ನಿಮ್ಮಿಬ್ಬರ ಪರಸ್ಪರ ಹೇಳಿಕೆಗಳು ವಿರೋಧವಾಗಿವೆ. ನಮಗೆ ಇಷ್ಟು ಹೇಳಲು ಆಧಾರವಿದೆ. ನೀನು ಚಂದ್ರೋಜರ ವಧು ದಿಟ. ಆದರೆ ಮದ್ಯದ ಅಮಲಿನಲ್ಲಿ ನಿನ್ನ ವಯಸ್ಸಿಗೆ ಸಹಜವಾದ ಚಿತ್ತಚಾಂಚಲ್ಯದಿಂದ ನೀನು ಅಭಿಸಾರಿಕೆಯಾಗಿ ಕುಮಾರನ ಅರಮನೆಗೆ ಹೋಗಿರಬಹುದು. ನೀನೇನು ಮಾಡುತ್ತಿರುವೆಯೆಂಬ ಕಲ್ಪನೆ ನಿನಗೆ ಇಲ್ಲದೆ ಇರಲೂಬಹುದು. ಹೇಗೇ ಇರಲಿ, ನೀನು ಇದುವರೆಗೆ ಅವರ ಅಂತಃಪುರದಲ್ಲಿ ಕಳೆದಿರುವುದನ್ನು ನೋಡಿದರೆ, ನಿನ್ನ ಇಷ್ಟದ ವಿರುದ್ಧ ಶೀಲಹರಣವಾಗಿದೆ ಎನ್ನುವುದಕ್ಕಿಂತಲೂ, ನೀನಾಗಿ ನೀನು ಅವರ ಅಭಿಸಾರಿಕೆಯಾಗಿ ಹೋದೆ ಎಂದು ಕಲ್ಪಿಸಲು ಅವಕಾಶವಿದೆ. ಆದುದ ರಿಂದ ಈ ವಿಷಯದಲ್ಲಿ ಹೆಚ್ಚಿನ ಪ್ರಮಾಣ ದೊರೆಯದ ಹೊರತು—ಕುಮಾರ

ರನ್ನು ಅಪರಾಧಿಗಳೆಂದು ಶಿಕ್ಷಿಸಲು ಸಾಧ್ಯವಿಲ್ಲವೆಂದು ವಿಷಾದದಿಂದ ತಿಳಿಸಬೇಕಾಗಿದೆ" ಎಂದು ಹೇಳಿದ.

ಇದನ್ನು ಕೇಳಿ ನಾಗಶ್ರೀ ಸಿಂಹಿಣಿಯಂತೆ ಗರ್ಜಿಸಿದಳು.

"ಸಾಮ್ರಾಟರೇ, ಇದುವರೆಗೆ ನಾನು ನಿಮ್ಮನ್ನು ಧರ್ಮಾವತಾರರೆಂದು ತಿಳಿದಿದ್ದೆ. ನ್ಯಾಯಪಕ್ಷಪಾತಿಗಳೆಂದು ಭಾವಿಸಿದ್ದೆ. ಆದರೆ ನಿಮ್ಮ ನಿಜವಾದ ಸ್ವರೂಪ ಇಂದು ತಿಳಿಯಿತು. ಕಡೆಗೂ ನೀವು ನಿಮ್ಮ ಸಹೋದರನ ಪಕ್ಷವನ್ನೇ ಕಟ್ಟಿ, ನನ್ನನ್ನೇ ಅಪರಾಧಿಯನ್ನಾಗಿ ಮಾಡಿದಿರಿ. ಇದು ನಿಮ್ಮ ನ್ಯಾಯದಾನ! ನಿಮ್ಮ ನ್ಯಾಯದಾನಕ್ಕೆ ತಿರಸ್ಕಾರವಿರಲಿ! ನಾನು ನಿಮ್ಮನ್ನು ಧರ್ಮಾತ್ಮರೆಂದು ಮೋಸಹೋದೆ. ನಿಮಗೂ ಆ ನಿಮ್ಮ ಸಹೋದರನಿಗೂ ಯಾವ ವ್ಯತ್ಯಾಸವಿಲ್ಲ. ಅವನು ಪಾಪಿಯಾಗಿ, ಯಾರ ಹೆದರಿಕೆ ಇಲ್ಲದೆ ಇಂತಹ ಹೇಯಕೃತ್ಯಕ್ಕೆ ಎಳಸಿದರೆ, ನೀವು ನ್ಯಾಯದ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ಸತ್ಯದ ಹೆಸರಿನಲ್ಲಿ–ಅನ್ಯಾಯಕ್ಕೆ ಮನ್ನಣೆ ಕೊಡುತ್ತಿದ್ದೀರಿ; ಪಾಪಿಗಳ ಪಕ್ಷ ಕಟ್ಟುತ್ತಿದ್ದೀರಿ, ನೀಚರಿಗೆ ಬೆಂಬಲವಾಗಿ ನಿಂತಿದ್ದೀರಿ. ನಿಮಗೆ ಧಿಕ್ಕಾರವಿರಲಿ!" ಇದಕ್ಕಾಗಿ ಇಂದಲ್ಲ ನಾಳೆ ನೀವು ಪಶ್ಚಾತ್ತಾಪಪಡಬೇಕಾಗುವುದು. ಎಲ್ಲವನ್ನೂ ನೋಡುತ್ತಿರುವ ಆ ದೇವರನ್ನು ನೀವು ನ್ಯಾಯದ ಹೆಸರಿನಲ್ಲಿ ವಂಚಿಸಲಾರಿರಿ!....

ಅಯ್ಯೋ ದೈವವೇ! ನಾನು ಮಾಡಿದ ಯಾವ ತಪ್ಪಿಗೆ ಈ ಶಿಕ್ಷೆ ವಿಧಿಸುತ್ತಿರುವೆ? ದೈವಾನುಗ್ರಹದಿಂದ ವಂಚಿತಳಾದ ನಾನೇ ನಿಜವಾಗಿಯೂ ಪಾಪಿ. ನನ್ನಂತಹವಳು ಈ ಜಗತ್ತಿನಲ್ಲಿ ಬದುಕಿರಬಾರದು. ಚಣಕಾಲ ಉಳಿದಿರಬಾರದು!" ಎಂದು ಹೇಳಿ ಅಲ್ಲಿಂದ ಹೊರಗೆ ಹೊರಟಳು. ಪುಲಿಕೇಶಿಯು ಉನ್ಮತ್ತಳಾಗಿ ಹೊರಟ ಅವಳನ್ನು ತಡೆಯಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಅವಳು ಬಿರುಗಾಳಿಯ ವೇಗದಲ್ಲಿ ಅಲ್ಲಿಂದ ಹಠಾತ್ತನೆ ಕಣ್ಮರೆಯಾಗಿದ್ದಳು.

ಅವಳನ್ನು ಹಿಂದಕ್ಕೆ ಕರೆತರಲು ಹೊರಟ ದೂತರು ಅವಳ ನೆಲೆಯನ್ನು ತಿಳಿಯದೆ ಹಿಂದಿರುಗಿ ಬಂದರು. ಎಲ್ಲರಿಗೂ ಆಶ್ಚರ್ಯ. ಒಂದು ಗಳಿಗೆಯ ಹಿಂದೆ ಇದ್ದ ನಾಗಶ್ರೀ ಇನ್ನೊಂದು ಗಳಿಗೆಯಲ್ಲಿ ಎಲ್ಲಿ ಮಾಯವಾದಳು?

ಸಂಜೆಯವೇಳೆಗೆ ಸುದ್ದಿ ಬಂತು. ಯಾರೋ ರಾಜಧಾನಿಯ ನಡುವೆ ಇದ್ದ ತಟಾಕದಲ್ಲಿ ಬಿದ್ದು ಮಡಿದಿದ್ದಾರೆ ಎಂದು. ಹೆಣವನ್ನು ಹೊರಗೆ ತೆಗೆದಾಗ ಅದು ನಾಗಶ್ರೀಯ ಪಾರ್ಥಿವದೇಹವೆಂದು ತಿಳಿಯಿತು. ಅವಳು ನ್ಯಾಯವಂಚಿತ

ಳಾದ ಮೇಲೆ ಈ ಜಗತ್ತಿನಲ್ಲಿ ಉಳಿಯಲು ಸ್ಥಳವಿರಲಿಲ್ಲ. ಅವಳು ತನ್ನ ಪೂರ್ವದ ನಿರ್ಧಾರದಂತೆ ಸೇಡು ತೀರಿಸಿಕೊಳ್ಳುವೆ, ಗಂಗೆಯು ಆಶ್ರಯ ಬೇಡಿದ್ದಳು.

ಈ ಎಲ್ಲ ಸುದ್ದಿ ಮಿಂಚಿನ ವೇಗವಲ್ಲಿ ಅಜಂತೆಯನ್ನು ಮುಟ್ಟಿತ್ತು. ನಾಗಶ್ರೀ, ವಿಷ್ಣುವರ್ಧನನ ಅತ್ಯಾಚಾರದಿಂದ ಆತ್ಮಹತ್ಯೆ ಮಾಡಿಕೊಂಡಳೆಂಬ ವಾರ್ತೆ ಅವರಿವರ ಬಾಯಲ್ಲಿ ಬಿದ್ದು ನೂರಾರು ಮೈಲಿಗಳ ದೂರವಿದ್ದ ಅಜಂತೆಗೂ ಮುಟ್ಟಿತ್ತು. ಅಲ್ಲಿ ಚಿತ್ರದ ಕೆಲಸ ಮಾಡುತ್ತಿದ್ದ ಚಂದ್ರೋಜನು ಈ ಸುದ್ದಿಯನ್ನು ಕೇಳಿ ತಾನು ಬರೆಯುತ್ತಿದ್ದ ಚಿತ್ರವನ್ನು ಅರ್ಧಕ್ಕೇ ಬಿಟ್ಟು ವಾತಾಪಿಗೆ ಬಂದನು. ಅವನು ನಾಗಶ್ರೀಯ ಮನೆಗೆ ಧಾವಿಸಿ ಬಂದನು. ಅಷ್ಟರೊಳಗೆ ನಡೆಯಬಾರದ ದುರಂತವೆಲ್ಲ ನಡೆದುಹೋಗಿತ್ತು.

ಅಲ್ಲಿದ್ದ ನಾಗಶ್ರೀಯ ಆಪ್ತ ಸೇವಕರಿಂದ ನಡೆದಿದ್ದ ಎಲ್ಲ ಸಂಗತಿ ತಿಳಿದು ಮನಸ್ಸಿಗೆ ತುಂಬ ಖೇದವಾಯಿತು. ತಾನು ಯಾರನ್ನು ಧರ್ಮಾವತಾರ, ಸತ್ಯ ಪ್ರತಿಜ್ಞ, ಉದಾರಿ, ಸ್ನೇಹಪರನೆಂದು ತಿಳಿದಿದ್ದನೋ ಆ ಪುಲಿಕೇಶಿಯಿಂದಲೇ ಅವನು ಮಾಡಿದ ನ್ಯಾಯತೀರ್ಮಾನದಿಂದಲೇ ನಾಗಶ್ರೀ ಆತ್ಮಹತ್ಯ ಮಾಡಿ ಕೊಳ್ಳಬೇಕಾಯಿತೆಂಬುದನ್ನು ತಿಳಿದಾಗ, ಅವನು ದ್ವೇಷದಿಂದ ಕುದಿದನು. ಅವನಿಗೆ ವಿಷ್ಣುವರ್ಧನ, ಪುಲಿಕೇಶಿಯರು ರಾವಣ ಕುಂಭಕರ್ಣರಷ್ಟೇ ರಕ್ಕಸ ರಾಗಿ ಕಾಣಿಸಿದರು. ಅವರನ್ನು ಹೃದಯಾಂತರಾಳದಲ್ಲಿ ಶಪಿಸುತ್ತಾ, ದೈತ್ಯಾ ವೇಶದಲ್ಲಿ ಬಂದು, ಅರಮನೆಯ ಮುಂದೆ ನಿಂತನು.

ಅರಮನೆಯ ಅಧಿಕಾರಿಗಳಿಗೆ ಚಂದ್ರೋಜನ ಪರಿಚಯವಿದ್ದುದರಿಂದ ಅವನನ್ನು ಮರ್ಯಾದೆಯಿಂದಲೇ ಕರೆದುಕೊಂಡು ಹೋಗಿ ಪುಲಿಕೇಶಿಯ ಮುಂದೆ ನಿಲ್ಲಿಸಿದರು. ಪುಲಿಕೇಶಿಗೆ ಆಗಂತುಕನಂತೆ ನಿಂತ ಚಂದ್ರೋಜನನ್ನು ನೋಡಿ ಮೊದಲು ಗುರುತು ಸಿಕ್ಕಲಿಲ್ಲ. ಅವನ ಕೆದರಿದ ತಲೆ, ಕೆಂಡ ಕಾರು ತ್ತಿದ್ದ ಕಣ್ಣುಗಳು, ಉನ್ಮತ್ತನ ಆವೇಶ—ಇವೆಲ್ಲವೂ ಅವನಿಗೆ ಹೊಸದು. "ಇದೇನು ಚಂದ್ರೋಜರೇ, ನೀವು ಇಲ್ಲಿಗೆ ಯಾವಾಗ ಬಂದಿರಿ? ಕ್ಷೇಮವಷ್ಟೇ!" ಎಂದು ವಿಶ್ವಾಸದಿಂದಲೇ ಪ್ರಶ್ನಿಸಿದನು.

"ನನ್ನ ಕ್ಷೇಮದ ಮಾತು ಹಾಗಿರಲಿ ಪ್ರಭು! ನೀವು ನನ್ನ ಪ್ರಾಣ ಕ್ಕಿಂತಲೂ ಪ್ರಿಯಳಾಗಿದ್ದ ನಾಗಶ್ರೀಯನ್ನು ಏಕೆ ಕೊಂದಿರಿ ಎಂಬುದನ್ನು

ಹೇಳಿ. ಅವಳು ಮಾಡಿದ ಯಾವ ಪಾಪಕ್ಕೆ–ತಪ್ಪಿಗೆ–ಅವಳಿಗೆ ಈ ಘೋರ ಶಿಕ್ಷೆಯನ್ನು ವಿಧಿಸಿದಿರಿ ? ತಿಳಿಸಬೇಕು !”

“ಚಂದ್ರೋಜರೇ, ನಾನೂ ನಿಮ್ಮಷ್ಟೇ ನಾಗಶ್ರೀಯ ಮರಣದಿಂದ ವ್ಯಥೆ ಪಡುತ್ತಿದ್ದೇನೆ. ಆ ನಿರ್ಭಾಗ್ಯ ಹೆಣ್ಣುಮಗಳು ಒಮ್ಮೆ ಜೀವನದಲ್ಲಿ ಜಾರಿದಳು. ಇಷ್ಟು ಅಲ್ಪ ಸಂಗತಿಗಾಗಿ ಜೀವನವನ್ನೇ ತಿರಸ್ಕರಿಸುವಳೆಂದು ನಾನು ತಿಳಿದಿರ ಲಿಲ್ಲ. ಮುಖ್ಯ ನಾವೆಲ್ಲರೂ ದುರ್ದೈವಿಗಳು. ಅಂತಹ ಶ್ರೇಷ್ಠ ಕಲಾವಿದೆ ಯನ್ನು ಉಳಿಸಿಕೊಳ್ಳುವ ಪುಣ್ಯ ನಮಗೆ ಇಲ್ಲ.”

ವಿಷಾದ ವ್ಯಕ್ತಪಡಿಸುವ ಧ್ವನಿಯಲ್ಲಿ ಪುಲಿಕೇಶಿ ಹೇಳಿದ.

“ಪ್ರಭು ! ನೀವು ದುಡುಕಿ ತೀರ್ಪು ಕೊಟ್ಟು ನಾಗಶ್ರೀಯನ್ನು ಕೊಂದಿ ರೆಂದು ನನಗೆ ಚೆನ್ನಾಗಿ ತಿಳಿದಿದೆ. ಈಗ ಅವಳ ಮರಣಕ್ಕಾಗಿ ವ್ಯಥೆಪಡುವ ಸೋಗು ಹಾಕಿ ಪ್ರಯೋಜನವಿಲ್ಲ. ನೀವು ಅವಳನ್ನು ಉಳಿಸುವುದಿದ್ದರೆ ಅಂದೇ ಉಳಿಸಬಹುದಾಗಿತ್ತು. ಆದರೆ ನೀವು ನಿಮ್ಮ ಸಹೋದರ ಆ ಧೂರ್ತ ವಿಷ್ಣು ವರ್ಧನನ ಪಕ್ಷ ತೊಟ್ಟಿರಿ. ಇದರಿಂದ ಮನನೊಂದು ನಾಗಶ್ರೀ ಹತಾಶಳಾಗಿ ಆತ್ಮಹತ್ಯೆ ಮಾಡಿಕೊಂಡಳು. ಅವಳ ಸಾವಿಗೆ ಯಾರಾದರೂ ಹೊಣೆಗಾರರಿದ್ದರೆ, ಅದು ನೀವು–ಇನ್ನೊಬ್ಬ ವ್ಯಕ್ತಿ ಆ ನೀಚ ವಿಷ್ಣುವರ್ಧನ. ಇಂದಲ್ಲ ನಾಳೆ ನೀವು ದೇವರ ಸನ್ನಿಧಿಯಲ್ಲಾದರೂ ಇದಕ್ಕೆ ಉತ್ತರ ಹೇಳಲೇಬೇಕು.”

“ಹೌದು ಚಂದ್ರೋಜರೇ, ನನಗೆ ಈಗ ಅನಿಸುತ್ತಿದೆ, ನಾನು ಅಂದು ದುಡುಕಿದೆನೇನೋ ಎಂದು. ಆದರೆ ನಾನು ಯಾವುದೇ ನಿರ್ಣಯವನ್ನು ಅಂದು ಕೊಡಲಿಲ್ಲ. ಆರೋಪದ ಸಿದ್ಧತೆಗೆ ಪ್ರಮಾಣ ಸಾಲದೆಂದು ಹೇಳಿದೆ ಅಷ್ಟೇ. ಇಷ್ಟು ಮಾತ್ರದಿಂದಲೇ ಸೂಕ್ಷ್ಮಹೃದಯದ ನಾಗಶ್ರೀ ಮನಸ್ಸು ಕೆಡಿಸಿ ಕೊಂಡು, ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಇದು ನಮ್ಮೆಲ್ಲರಿಗೂ ನೋವುಂಟು ಮಾಡುವ ಸಂಗತಿ. ನೀವು ಹೇಳುವಂತೆ ನನ್ನ ದುಡುಕು ವರ್ತನೆಯೇ ಇದಕ್ಕೆ ಕಾರಣವಾಯಿತೇನೋ ಮನಸ್ಸಿಗೆ ಬಹಳ ಖೇದವಾಗುತ್ತಿದೆ. ಈಗ ನಾನು ಯಾರೂ ಏನೂ ಮಾಡಲಾಗದ ಅಸಹಾಯ ಸ್ಥಿತಿಯಲ್ಲಿದ್ದೇನೆ. ನನ್ನಿಂದ ಅಪರಾಧವಾಗಿದ್ದರೆ ದಯವಿಟ್ಟು ಕ್ಷಮಿಸಬೇಕು, ಚಂದ್ರೋಜರೇ !”

“ಪ್ರಭು, ನೀವು ಸಹೋದರನ ಬೆನ್ನು ಕಟ್ಟಿ, ಸತ್ಯದ ಮುಖಕ್ಕೆ ಮಸಿ ಬಳಿದಿದ್ದೀರಿ. ನಿಷ್ಪಕ್ಷಪಾತವಾಗಿ ವಿಚಾರಿಸಿದ್ದರೆ, ಆ ನಿರ್ಭಾಗ್ಯಳನ್ನು ಉಳಿಸ

ಬಹುದಿತ್ತು. ಆದರೆ ನಿಮ್ಮ ಆತುರದ ತೀರ್ಮಾನ ಆ ಹುತಾತ್ಮಳ ಬಾಳನ್ನು ಮಣ್ಣುಗೂಡಿಸಿತು! ಈಗ ಅದಕ್ಕಾಗಿ ವಿಷಾದಿಸಿದರೆ ಬಂದ ಭಾಗ್ಯವಾದರೂ ಏನು? ಈಗಲೂ ನಿಮಗೆ ಅವಳ ಆತ್ಮ ನೆಮ್ಮದಿಯಿಂದ ಇರಬೇಕೆಂದೆನಿಸಿದರೆ, ನೀವು ಅವಳ ಸಾವಿಗೆ ಕಾರಣನಾದ ಆ ನೀಚ ವಿಷ್ಣುವರ್ಧನನನ್ನು ಮತ್ತೆ ಬಹಿರಂಗ ವಿಚಾರಣೆಗೆ ಗುರಿಪಡಿಸಿ, ಅವನ ದ್ರೋಹಕ್ಕೆ ತಕ್ಕ ದಂಡನೆ ವಿಧಿಸಬೇಕು."

"ಇದೊಂದು ಮಾತು ಮಾತ್ರ ಸಾಧ್ಯವಿಲ್ಲ, ಚಂದ್ರೋಜರೇ."

"ಏಕೆ ಪ್ರಭು?"

"ಆ ಪ್ರಕರಣವನ್ನು ಎಂದೋ ಮುಗಿಸಿದ್ದೇನೆ. ಅದನ್ನು ಮತ್ತೆ ಕೆದಕಿ, ತೋಡುವ ಇಚ್ಛೆ ನನಗೆ ಇಲ್ಲ. ಏಕೆಂದರೆ, ಇದರಿಂದ ಪವಿತ್ರವಾದ ಚಾಲುಕ್ಯ ವಂಶದಲ್ಲಿ ಗೃಹಛಿದ್ರವಾಗುವ ಸಂಭವವಿದೆ. ನನಗೂ ವಿಷ್ಣುವರ್ಧನನಿಗೂ ವೈಮನಸ್ಸು ಉಂಟಾಗುವ ಪ್ರಸಂಗವಿದೆ. ಒಮ್ಮೆ ಸಮಾಪ್ತಿಗೊಳಿಸಿದ ಈ ಪ್ರಕರಣವನ್ನು ಮತ್ತೆ ತೋಡಿದರೆ, ಗೋರಿಯಿಂದ ಭೂತವನ್ನು ಎಬ್ಬಿಸಿದಂತೆ ಆಗುತ್ತದೆ. ಇದು ಸಾಮ್ರಾಜ್ಯದ ಹಿತದೃಷ್ಟಿಯಿಂದ ಮಾಡುವ ಕಾರ್ಯವಲ್ಲ."

"ಹಾಗಾದರೆ ನೀವು ಹೇಳುವುದಾದರೂ ಏನು?"

"ನನ್ನಿಂದ ತಿಳಿಯದೆ ಅಪರಾಧವಾಗಿದೆ. ನೀವು ಏನಾದರೂ ಶಿಕ್ಷೆ ವಿಧಿಸುವುದಾದರೆ ನನಗೆ ವಿಧಿಸಿ. ಅನುಭವಿಸುತ್ತೇನೆ!"

"ಇಂತಹ ಮಾತು ಕೇಳಲು ನಾನು ಇಲ್ಲಿಗೆ ಬರಲಿಲ್ಲ ಪ್ರಭು! ನನಗೆ ಬೇಕಾಗಿರುವುದು ನ್ಯಾಯತೀರ್ಮಾನ! ಮಡಿದು ಪ್ರೇತಾತ್ಮಳಾಗಿರುವ ನಾಗಶ್ರೀಗೆ ಶಾಂತಿ ದೊರಕುವುದು. ಅವಳು ಜೀವನದಲ್ಲಿ ಸಾಧಿಸಲಾರದ ಸೇಡನ್ನು ನನ್ನ ಜೀವನದಲ್ಲಿ ತೀರಿಸಿಕೊಳ್ಳುವುದು."

"ಅಂದರೆ!"

"ಆ ದ್ರೋಹಿ ವಿಷ್ಣುವರ್ಧನನನ್ನು ಕೊಂದಲ್ಲದೆ ಈ ಜೀವಕ್ಕೆ ನೆಮ್ಮದಿ ಇಲ್ಲ."

"ನಾನು ಬದುಕಿರುವತನಕ ಈ ಕಾರ್ಯ ಸಾಧ್ಯವಿಲ್ಲ."

"ಹಾಗಾದರೆ ನೀವು ಅಧರ್ಮಿಗಳ ಪಕ್ಷ ಕಟ್ಟುತ್ತಿರುವರೆಂದಾಯಿತು."

"ಇಲ್ಲ. ವಿಷ್ಣುವರ್ಧನನು ಮರಣದಂಡನೆಯನ್ನು ಅನುಭವಿಸುವ

ಅಪರಾಧ ಮಾಡಿದ್ದರೆ, ನಾನೇ ಸಂತೋಷದಿಂದ ವಿಧಿಸುತ್ತಿದ್ದೆ. ಆದರೆ ಅವನು ಅಂತಹ ಗುರುತರ ಅಪರಾಧ ಮಾಡಿದಂತೆ ನನಗನಿಸುವುದಿಲ್ಲ. ಅವನಿಂದ ಆಗಿ ರುವ ಅಪರಾಧವಿಷ್ಟು : ಅವನೂ ನಿನ್ನಂತೆಯೇ ನಾಗಶ್ರೀಯನ್ನು ಪ್ರೇಮಿಸಿದ. ನೀನು ಕೃತಾರ್ಥನಾದೆ. ಅವನು ತಿರಸ್ಕೃತನಾದ. ಮುಂದೆ ನಾಗಶ್ರೀ ಮದ್ಯದ ಅಮಲಿನಲ್ಲಿ ಅಭಿಸಾರಿಕೆಯಾಗಿ ಅವನ ಅರಮನೆಯನ್ನು ಪ್ರವೇಶಿಸಿದಳಂತೆ. ವೇಶ್ಯಾಪುತ್ರಿಯಾದ ಅವಳನ್ನು ಅವನು ಭೋಗದ ಹೆಣ್ಣನ್ನು ನಡೆಸಿಕೊಳ್ಳು ವಂತೆ ನಡೆಸಿಕೊಂಡ. ಇದೇ ಅವನು ಮಾಡಿದ ಮಹಾಪರಾಧ. ಇಷ್ಟು ಮಾತ್ರಕ್ಕೆ ಅವನಿಗೆ ಮರಣದಂಡನೆ ಶಿಕ್ಷೆಯೇ ? ಅವನನ್ನು ಯುವರಾಜ ಪದವಿಯಿಂದ ಕೆಳಗಿಳಿಸಿ ವೆಂಗಿ ಮಂಡಲಕ್ಕೆ ಮಾಂಡಲೇಶ್ವರನನ್ನಾಗಿ ನೇಮಿಸ ಬೇಕೆಂದಿದ್ದೇನೆ."

"ನೀವು ಆ ದ್ರೋಹಿಯನ್ನು ಯುವರಾಜ ಪದವಿಯಿಂದ ಕೆಳಗಿಳಿಸಿರಿ, ಬಿಡಿ, ನನಗೆ ಅದು ಬೇಕಿಲ್ಲ. ಹತ್ಯಾಕಾರಿಗಳಿಗೆ ನಾಗಶ್ರೀಗಾಗಿರುವ ಅನ್ಯಾ ಯಕ್ಕೆ ಶಿಕ್ಷೆ ದೊರಕಲೇಬೇಕು—ಇದರ ಹೊರತು ಬೇರಾವುದರಲ್ಲೂ ನನಗೆ ಇಚ್ಛೆಯಿಲ್ಲ."

"ಇದೊಂದು ಮಾತು ಮಾತ್ರ ಸಾಧ್ಯವಿಲ್ಲ, ಚಂದ್ರೋಜರೇ ?"

"ಈ ಮಾತು ಖಂಡಿತವೇ."

"ಹೌದು."

"ಹಾಗಾದರೆ, ನಾನು ಇನ್ನು ಬರುತ್ತೇನೆ. ನನಗೆ ಅಪ್ಪಣೆಯನ್ನು ನೀಡಿ."

"ಎಲ್ಲಿಗೆ ಹೋಗುತ್ತೀರಿ ?"

"ವಿಧಿ ಸೆಳೆದ ಕಡೆಗೆ ! ಈ ಗಳಿಗೆಯಿಂದ ನಾನು ನಿಮ್ಮ ಮಿತ್ರನಲ್ಲ— ನಿಮ್ಮ ದ್ವೇಷಿ. ನ್ಯಾಯದಾನದ ಹೆಸರಿನಲ್ಲಿ ನಾಗಶ್ರೀಯ ಕಗ್ಗೊಲೆಗೆ ಕಾರಣ ರಾದ ನಿಮ್ಮ ಪರಮಶತ್ರು. ಈ ಲೋಕದಿಂದ ನಿಮ್ಮನ್ನೂ ನಿಮ್ಮ ಸಹೋದರ ರನ್ನೂ ತೊಡೆದುಹಾಕದಿದ್ದರೆ ನಾನು ಚಂದ್ರೋಜನಲ್ಲ. ಈ ಕಾರ್ಯದಲ್ಲಿ ಈ ದೇಹ ಬಿದ್ದುಹೋದರೂ ಸರಿ. ನಾಗಶ್ರೀ ಮರಣಕ್ಕೆ ಕಾರಣರಾದ ನಿಮ್ಮ ಮೇಲೆ ಸೇಡು ತಿರಿಸಿಕೊಳ್ಳದೆ ಬಿಡುವುದಿಲ್ಲ. ಈ ಮಾತು ಖಂಡಿತ !"

ಎಂದು ಹೇಳಿ ಅವನು ಅಲ್ಲಿ ನಿಲ್ಲದೆ ಬಿರುಗಾಳಿಯ ವೇಗದಲ್ಲಿ ಹೊರಟು ಹೋದನು. ಪುಲಿಕೇಶಿಯು ಮಾತ್ರ ಇದೆಲ್ಲ ದುಃಸ್ವಪ್ನವೋ ಎಂಬಂತೆ ನೋಡುತ್ತ ನಿಂತಿದ್ದನು.

೨೪

ನಾಗಶ್ರೀ ಪ್ರಕರಣದಲ್ಲಿ ಇಷ್ಟೆಲ್ಲ ಹಗರಣವಾದ ಮೇಲೆ ವಿಷ್ಣುವರ್ಧನನ ಮೇಲೆ ಯಾವುದೇ ಕ್ರಮ ಕೈಗೊಳ್ಳದಿರುವುದು ಪುಲಿಕೇಶಿಯಿಂದ ಸಾಧ್ಯವಾಗ ಲಿಲ್ಲ. ಈಗಾಗಲೇ ರಾಜಧಾನಿಯ ಜನ ನಾಗಶ್ರೀ ಮರಣಕ್ಕೆ ವಿಷ್ಣುವರ್ಧನನೇ ಕಾರಣನೆಂದು ಆಡಿಕೊಳ್ಳಲು ತೊಡಗಿದ್ದರು. ಅವನ ಅತ್ಯಾಚಾರಕ್ಕೆ ಆ ಕಲಾವಿದೆ ಬಲಿಯಾದಳೆಂದು ಎಲ್ಲರೂ ಹೇಳುತ್ತಿದ್ದರು. ಇದು ಸಮಂತಭದ್ರನ ಕಿವಿಗೆ ಬೀಳದೆ ಇರಲಿಲ್ಲ.

"ಪ್ರಭೂ, ನಾಗಶ್ರೀ ಮರಣಕ್ಕೆ ಯುವರಾಜಕುಮಾರರೇ ಕಾರಣರೆಂದು ರಾಜಧಾನಿಯ ಜನ ಆಡಿಕೊಳ್ಳುತ್ತಿದ್ದಾರೆ. ಈ ವಿಷಯದಲ್ಲಿ ನಾವು ನಿಷ್ಪಕ್ಷ ಪಾತ ನ್ಯಾಯತೀರ್ಮಾನ ಮಾಡಲಿಲ್ಲವೆಂದು ಆರೋಪಿಸುತ್ತಿದ್ದಾರೆ. ಜನ ಹೇಳು ತ್ತಿರುವ ಸಂಗತಿ ನಿಜವಾಗಿದ್ದು, ನಾಗಶ್ರೀ ಮರಣಕ್ಕೆ ಯುವರಾಜಕುಮಾರರ ಅತ್ಯಾಚಾರವೇ ಕಾರಣವಾಗಿದ್ದರೆ, ನಾವು ಜನತೆಯ ಕಣ್ಣಿನಲ್ಲಿ ಅಪರಾಧಿ ಗಳಾಗಿ ನಿಲ್ಲಬೇಕಾಗುತ್ತದೆ. ಪ್ರಭುಗಳು ಈ ಬಗ್ಗೆ ವಿಚಾರಮಾಡುವುದು ಜನಸಾಮಾನ್ಯರ ದೃಷ್ಟಿಯಿಂದ ಯೋಗ್ಯವೆನಿಸುತ್ತದೆ" ಎಂದು ಸಮಂತಭದ್ರ ಹೇಳಿದ.

"ಅಮಾತ್ಯರೇ, ನನ್ನ ಅಂತರಾತ್ಮನೂ ಇದೇ ಮಾತನ್ನು ಹೇಳುತ್ತಿ ದ್ದಾನೆ. ನಾಗಶ್ರೀ ಪ್ರಕರಣದಲ್ಲಿ ನಮ್ಮಿಂದ ಅಪಚಾರವಾಯಿತೇನೋ ಎಂದು ಸಂದೇಹ ಬರುತ್ತಿದೆ. ಏಕೆಂದರೆ ನಾಗಶ್ರೀ ಸಾಮಾನ್ಯ ಕಾರಣಕ್ಕಾಗಿ ಆತ್ಮಹತ್ಯ ಮಾಡಿಕೊಳ್ಳುವ ಹೆಣ್ಣಲ್ಲ. ಅಲ್ಲದೆ ಚಂದ್ರೋಜರೂ ಈ ಮರಣಕ್ಕೆ ಕುಮಾ ರನು ಮಾಡಿದ ಅತ್ಯಾಚಾರವೇ ಕಾರಣವೆಂದು ಹೇಳುವುದನ್ನು ಕೇಳಿದಲಾಗಾ ಯಿತು ನನ್ನ ಮನಸ್ಸಿನಲ್ಲಿ ತಳಮಳ ಉಂಟಾಗುತ್ತಿದೆ. ಒಂದು ವೇಳೆ ಅವರು ಹೇಳುವುದು ನಿಜವಾದರೆ, ನಮ್ಮಿಂದ ಅನ್ಯಾಯ ಘಟಿಸಿದೆ" ಆತಂಕಗೊಂಡು ಪುಲಿಕೇಶಿ ಹೇಳಿದ.

"ಪ್ರಭೂ, ದೊರೆತ ಪ್ರಮಾಣಗಳ ಆಧಾರಗಳ ಮೇಲಿಂದ ನ್ಯಾಯ ತೀರ್ಮಾನ ಮಾಡಿದ್ದೀರಿ. ಸತ್ಯಾಶ್ರಯರೆಂದು ಬಿರುದು ಪಡೆದಿರುವ ತಾವೆಂ ದಿಗೂ ಅಧರ್ಮಪ್ರವರ್ತರಾಗುವುದಿಲ್ಲ. ನಿಮ್ಮಿಂದ ಯಾವುದೇ ಅನ್ಯಾಯ

ನಡೆದಿಲ್ಲ. ಆದರೂ ರಾಜಧಾನಿಯ ಜನತೆಯನ್ನು ಸಮಾಧಾನಗೊಳಿಸಲು ಈ ಬಗ್ಗೆ ನಾವು ಏನಾದರೂ ಕೆಲಸ ಮಾಡಬೇಕಾಗಿದೆ. ಸಾಮ್ರಾಜ್ಯದ ಹಿತದೃಷ್ಟಿ ಯಿಂದಲೂ ಈ ಕಾರ್ಯ ಅಗತ್ಯವಾಗಿದೆ. ಅಲ್ಲದೆ ಕುಮಾರ ವಿಷ್ಣುವರ್ಧನರಿಗೆ ನಾವು ಪ್ರೀತಿ ವಿಶ್ವಾಸಗಳನ್ನು ತೋರಿಸುವುದು ಹಾವಿಗೆ ಹಾಲೆರೆದಂತೆ. ಅವರ ಮನಸ್ಸಿನಲ್ಲಿ ತಮ್ಮ ಬಗ್ಗೆ ಇನ್ನೂ ಮತ್ಸರವಿದೆ. ಇದನ್ನು ನಾಗಶ್ರೀ ಪ್ರಕರಣ ದಲ್ಲಿ ಕಂಡುಕೊಂಡೆ. ಎಂದಿದ್ದರೂ ಅವರಿಂದ ಸಾಮ್ರಾಜ್ಯದ ಭದ್ರತೆಗೆ ಧಕ್ಕೆ ಇದೆ. ಆದುದರಿಂದ ಅವರನ್ನು ರಾಜಧಾಯಿಂದ ದೂರಮಾಡುವುದು ಯೋಗ್ಯ ವೆಂದು ಕಾಣುತ್ತದೆ."

"ಏನು ಕುಮಾರರಿಂದ ಸಾಮ್ರಾಜ್ಯಕ್ಕೆ ವಿಪತ್ತಿದೆಯೇ ?"

"ಹೌದು ಪ್ರಭೂ" ಎಂದು ಅಂದು ನಡೆದಿದ್ದ ಮಾತುಕತೆಯನ್ನೆಲ್ಲಾ ಪುಲಿಕೇಶಿಗೆ ವರದಿಮಾಡಿದ.

"ಪ್ರಭು, ಕುಮಾರರ ಸರ್ವಾಪರಾಧವನ್ನು ತಾವು ಉದಾರ ಮನಸ್ಸಿ ನಿಂದ ಮನ್ನಿಸಿ ಅವರನ್ನು ಮತ್ತೆ ಒಡಹುಟ್ಟಿದವರಂತೆಯೇ ನಡೆಸಿಕೊಳ್ಳು ತ್ತಿದ್ದೀರಿ. ಇಷ್ಟಾದರೂ ಅವರಿಗೆ ನಿಮ್ಮ ವಿಷಯದಲ್ಲಿ ಅಭಿಮಾನ, ಗೌರವಗಳು ಇಲ್ಲ. ಅವರು ನಿಮ್ಮನ್ನು ತಮ್ಮ ಹಗೆ ಎಂಬಂತೆ ತಿಳಿದಿದ್ದಾರೆ. ಇವರ ಮೇಲೆ ನಾವು ಉಗ್ರಕ್ರಮ ಕೈಗೊಳ್ಳುವಂತೆ ಇಲ್ಲ. ಅವರು ಸಾಮ್ರಾಟರಾದ ಕೀರ್ತಿ ವರ್ಮರ ತನಯರು, ತಮ್ಮ ಅನುಜರು. ಅವರನ್ನು ಸೆರೆಯಲ್ಲಿಟ್ಟರೆ ನಾವಾಗಿ ವಿಷದ ಮೊಟ್ಟೆಯನ್ನು ಒಡೆದಂತೆ ಆಗುತ್ತದೆ. ಸಾಮ್ರಾಜ್ಯದಲ್ಲಿ ಇನ್ನೂ ರಾಹ ಪ್ಪಯ್ಯನಂತಹ ವಿದ್ರೋಹಿಗಳು ಬದುಕಿರುವ ತನಕ, ಮಂಗಳೇಶನ ಹಿತೈಷಿ ಗಳು ಉಳಿದಿರುವ ತನಕ ಸಾಮ್ರಾಜ್ಯಕ್ಕೆ ವಿಷ್ಣುವರ್ಧನರಿಂದ ತೊಂದರೆ ಇದೆ. ಆದುದರಿಂದ ಅವರನ್ನು ಯಾವುದಾದರೊಂದು ಪ್ರದೇಶಕ್ಕೆ ಮಾಂಡಲೇಶ್ವರ ರನ್ನಾಗಿ ನೇಮಿಸಿ, ದೂರ ಇರಿಸುವುದು ಎಲ್ಲರ ದೃಷ್ಟಿಯಿಂದ ಯೋಗ್ಯವೆನಿ ಸುತ್ತದೆ."

"ನನಗೂ ತಮ್ಮ ಸಲಹೆ ಯೋಗ್ಯವೆನಿಸುತ್ತದೆ. ಆದರೆ ಆಡಳಿತದಲ್ಲಿ ಲವಲೇಶವೂ ಆಸಕ್ತಿ ಇಲ್ಲದ, ದುರ್ಬಲಮನಸ್ಸಿನ ಅವನಿಂದ ರಾಜ್ಯಾಡಳಿತ ಸಮರ್ಪಕವಾಗಿ ನಡೆಯುವುದೇ ?"

"ಪ್ರಭು, ಈ ಬಗ್ಗೆ ತಾವು ಚಿಂತಿಸುವ ಕಾರಣವಿಲ್ಲ. ಈಗ ತಮ್ಮ

ನೆರಳಿನಲ್ಲಿ ಎಲ್ಲ ಆಡಳಿತ ನೆಮ್ಮದಿಯಾಗಿ ಸಾಗಿದೆ. ನಾಳೆ ಜವಾಬ್ದಾರಿ ಹೊತ್ತರೆ ಆಡಳಿತದ ಅನುಭವ ತಾನಾಗಿ ಬರುತ್ತದೆ. ಆದುದರಿಂದ ಪ್ರಭುಗಳು ಅವರನ್ನು ವಿಲಾಸಿಗಳಾಗಿಮಾಡದೆ ಮಾಂಡಲೇಶ್ವರರನ್ನಾಗಿ ನೇಮಿಸಬೇಕು. ನನ್ನನ್ನು ಕೇಳಿದರೆ, ನಾವು ಪಲ್ಲವರಿಂದ ಇತ್ತೀಚೆಗೆ ಗೆದ್ದುಕೊಂಡ ವೆಂಗಿಮಂಡಲವನ್ನು ಅವರಿಗೆ ಕೊಡುವುದು ಒಳ್ಳೆಯದು. ಅವರು ಪಿಷ್ಟಪುರದಲ್ಲಿ ಇದ್ದರೆ ವಾತಾಪಿಗೆ ಅವರಿಂದ ಯಾವ ಬಾಧೆ ಇಲ್ಲ. ನಾವು ಸದಾ ಜಾಗ್ರತರಾಗಿರಬಹುದು !"

"ನಿಮ್ಮ ಸಲಹೆ ಯೋಗ್ಯವಾಗಿದೆ!" ಎಂದು ಪುಲಿಕೇಶಿಯು ಒಪ್ಪಿಕೊಂಡನು. ಅದರಂತೆ ವಿಷ್ಣುವರ್ಧನನನ್ನು ಬಳಿಗೆ ಕರೆಸಿ, ಅನುನಯದಲ್ಲಿ ಅವನಿಗೆ ತಾನು ವೆಂಗಿ ಮಂಡಲವನ್ನು ಕೊಟ್ಟಿರುವ ಸಂಗತಿಯನ್ನು ತಿಳಿಸಿದನು.

ಇದನ್ನು ಕೇಳಿ ವಿಷ್ಣುವರ್ಧನನಿಗೆ ಸಂತೋಷವೇ ಆಯಿತು. ಅವನಿಗೆ ನಾಗಶ್ರೀ ಪ್ರಕರಣದಿಂದ ಮನಸ್ಸು ಕೆಟ್ಟುಹೋಗಿತ್ತು. ಅವನು ನ್ಯಾಯವನ್ನು ವಂಚಿಸಲು ಸಮರ್ಥನಾಗಿದ್ದರೂ ಜನತೆಯ ಬಾಯನ್ನು ಮುಚ್ಚಿಸಲು ಸಾಧ್ಯವಾಗಲಿಲ್ಲ. ಜನ ನಾಗಶ್ರೀ ಕೊಲೆಗೆ ಅವನೇ ಕಾರಣನೆಂದು ಜರೆದು ಹೀಯಾಳಿಸುತ್ತಿದ್ದರು. ಇದನ್ನು ಕೇಳಿಕೊಂಡು ಸುಮ್ಮನಿರುವುದು ಅವನಿಂದ ಸಾಧ್ಯವಿರಲಿಲ್ಲ. ಅಲ್ಲದೆ ಪುಲಿಕೇಶಿಗೂ ತನಗೂ ಯಾವ ವಿಶ್ವಾಸವೂ ಇಲ್ಲವೆಂಬುದು ಈ ಪ್ರಕರಣದಿಂದ ತಿಳಿದಿತ್ತು. ಹೀಗಿರುವಲ್ಲಿ ತಾನು ವಿದ್ರೋಹಿಯಾಗಿ ಪುಲಿಕೇಶಿಯ ಬಳಿ ಇದ್ದರೆ, ಸಿಡಿಮದ್ದಿನ ಬಳಿ ವಾಸಿಸಿದಂತೆ ಅಪಾಯಕರವೆಂದು ತಿಳಿದಿತ್ತು. ಇದರ ಸಲುವಾಗಿ ಅವನು ಪುಲಿಕೇಶಿಯಿಂದ ಆದಷ್ಟು ದೂರ ಇರಲು ಬಯಸಿದ್ದನು. ಅದಕ್ಕೆ ತಕ್ಕಂತೆ ಪುಲಿಕೇಶಿಯು ಅವನಿಗೆ ವೆಂಗಿಮಂಡಲವನ್ನು ಕೊಟ್ಟಿದ್ದನು. ಪುಲಿಕೇಶಿಯ ಆಶ್ರಯದಲ್ಲಿ ಯುವರಾಜನಾಗಿ ಬದುಕುವುದಕ್ಕಿಂತಲೂ, ವೆಂಗಿಮಂಡಲದ ಮಾಂಡಲೇಶ್ವರನಾಗಿ ಮೆರೆಯುವುದು ಹೆಚ್ಚು ಶೋಭಿಸುತ್ತಿತ್ತು. ಇದರಿಂದ ಅವನಿಗೆ ಹೆಚ್ಚಿನ ವ್ಯಕ್ತಿ ಸ್ವಾತಂತ್ರ್ಯ ದೊರೆತಂತೆ ಆಗುತ್ತಿತ್ತು. ಅಂತಲೇ ವಿಷ್ಣುವರ್ಧನನು ಪುಲಿಕೇಶಿಯ ಸಲಹೆಯನ್ನು ತಿರಸ್ಕರಿಸದೆ ಪಿಷ್ಟಪುರಕ್ಕೆ ಪ್ರಯಾಣ ಬೆಳೆಸಿ, ಅಲ್ಲಿನ ಅಧಿಕಾರ ಸ್ವೀಕರಿಸಿದನು.

ವಿಷ್ಣುವರ್ಧನನನ್ನು ವೆಂಗಿಮಂಡಲಕ್ಕೆ ಮಾಂಡಲೇಶ್ವರನನ್ನಾಗಿ ನೇಮಿಸಿದ ಮೇಲೆ ನಾಗಶ್ರೀ ಪ್ರಕರಣದಿಂದ ಉಂಟಾಗಿದ್ದ ವಾತಾವರಣ ತಿಳಿಯಾಯಿತು. ಈಗ ಪುಲಿಕೇಶಿಯು ತಾನು ಪರ್ಶಿಯಾ ದೇಶದ ಖುಸ್ರು ದೊರೆಗೆ

ನೆರವೀಯಲು ಆಶಿಸಿದನು. ಅವನಿಗೆ ಪರ್ಶಿಯಾದೇಶದ ಸಿಂಹಾಸನವನ್ನು ದೊರಕಿಸಿಕೊಡಲು ಒಂದು ದಂಡಯಾತ್ರೆ ಕೈಗೊಳ್ಳಬೇಕೆಂದು ಯೋಚಿಸುತ್ತಿರುವಾಗಲೇ ಪರ್ಶಿಯಾದಿಂದ ಬಂದಿದ್ದ ಒಬ್ಬ ರಾಜದೂತನು ಭಯಂಕರ ವಾರ್ತೆಯೊಂದನ್ನು ತಂದನು. ಅವನು ಪರ್ಶಿಯಾ ದೇಶದಲ್ಲಿ ನಡೆದ ಇತ್ತೀಚಿನ ರಾಜ್ಯಕ್ರಾಂತಿಯನ್ನು ತಿಳಿಸಿದನು.

"ಪ್ರಭು, ಖುಸ್ರು ದೊರೆಗಳ ಮೇಲೆ ಅವರ ಶತ್ರುಗಳು ಕಡೆಗೂ ಸೇಡು ತೀರಿಸಿಕೊಂಡರು. ಶತ್ರುಗಳ ಕೈಬೊಂಬೆಯಾಗಿದ್ದ ಆಸ್ಥಾನಿಕರು ಒಮ್ಮೆಲೇ ದಂಗೆ ಎದ್ದು ಸಾಮ್ರಾಟರನ್ನು ಬಂಧಿಸಿ ಸೆರೆಮನೆಯಲ್ಲಿಟ್ಟರು. ಇಷ್ಟರಿಂದಲೇ ತೃಪ್ತಿಗೊಳ್ಳದೆ, ಆ ನೀಚರು ಧರ್ಮಾವತಾರರಾಗಿದ್ದ ದೊರೆಗಳನ್ನು ಚಿತ್ರಹಿಂಸೆ ಕೊಟ್ಟು ಕೊಂದರು. ಈ ಕೊರಗಿನಲ್ಲೇ ಮಹಾರಾಣಿ ಷಹಬದೀಜರು ತೀರಿ ಕೊಂಡರು !" ಎಂದು ಹೇಳಿದನು.

ಇದನ್ನೆಲ್ಲಾ ಕೇಳಿ ಪುಲಿಕೇಶಿಗೆ ತುಂಬ ದುಃಖವಾಯಿತು. ನಾಗಶ್ರೀ ಪ್ರಕರಣದಿಂದ ಉಂಟಾಗಿದ್ದ ದುಃಖವನ್ನು ಮರೆಯುತ್ತಿರುವಂತೆಯೇ, ತನ್ನ ಮಿತ್ರನಾದ ಖುಸ್ರು ದೊರೆಯ ವಿಯೋಗದ ವಾರ್ತೆ ಬಂದಿತ್ತು. ಈ ಸಮಯ ದಲ್ಲಿ ತಾನು ಏನು ಮಾಡಬೇಕು ? ತನ್ನ ಗೆಳೆಯನ ಸಾವಿಗೆ ಕಾರಣರಾದ ದ್ರೋಹಿಗಳ ಮೇಲೆ ಸೇಡು ತೀರಿಸಿಕೊಳ್ಳಬೇಕೆ ? ಅವರ ಆಂತರಿಕ ವ್ಯವಹಾರ ಗಳನ್ನು ಅವರಿಗೇ ಬಿಟ್ಟು ತನ್ನ ಪಾಡಿಗೆ ತಾನು ನೆಮ್ಮದಿಯಿಂದ ಇರಬೇಕೆ ? ಇವುಗಳಲ್ಲಿ ಯಾವುದನ್ನೂ ನಿರ್ಧರಿಸಲಾರದೆ ಪುಲಿಕೇಶಿಯು ತತ್ತರಿಸಿದನು.

ಖುಸ್ರು ದೊರೆಯ ಮರಣದಿಂದ ತಾವು ಪರ್ಶಿಯಾ ದೇಶದ ಮೇಲೆ ದಂಡೆತ್ತಿ ಹೋಗಬೇಕಾಗಿದ್ದ ಕಾರಣವೇ ತಪ್ಪಿಹೋಯಿತೆಂದೂ, ಈಗ ತಾವು ಕಷ್ಟಸಾಧ್ಯವಾದ ದಂಡಯಾತ್ರೆ ಕೈಗೊಂಡರೂ, ಯಾವುದೇ ಪ್ರಯೋಜನ ವಿಲ್ಲವೆಂದೂ ಸಮಂತಭದ್ರ ಮುಂತಾದ ಇತರ ಸಾಮ್ರಾಜ್ಯದ ಸೇವಕರು ಅಭಿ ಪ್ರಾಯಪಟ್ಟರು. ತಾನು ಅವನಿಗೆ ಕೊಟ್ಟಿದ್ದ ಆಶ್ವಾಸನದಂತೆ ಈಗಲೂ ದಂಡೆತ್ತಿ ಹೋಗಿ ಬೈಜಾಂತಿಯವರನ್ನು ಶಿಕ್ಷಿಸಿ, ಮಡಿದ ಖುಸ್ರುವಿನ ಆತ್ಮಕ್ಕೆ ಶಾಂತಿ ದೊರಕಿಸಿಕೊಡ ಬೇಕೆಂಬುದೇ ಪುಲಿಕೇಶಿಯ ಆಶಯವಾಗಿತ್ತು. ಇದ ರಿಂದ ಚಾಲುಕ್ಯರ ಕೀರ್ತಿ ದಿಗಂತ ವಿಶ್ರಾಂತವಾಗುವುದೆಂದು ಅವನು ಭಾವಿಸಿದ್ದನು.

ಆದರೆ ವಿಧಿಯ ಇಚ್ಛೆ ಬೇರೆಯಾಗಿತ್ತು. ಪುಲಿಕೇಶಿಯ ಗಮನವನ್ನು ಬೇರೆಕಡೆಗೆ ಸೆಳೆಯುವ ಘಟನೆಯೊಂದು ದಕ್ಷಿಣದಲ್ಲಿ ರೂಪುಗೊಳ್ಳುತ್ತಿತ್ತು. ಸಾಮ್ರಾಜ್ಯಕ್ಕೆ ಬೇರೊಂದು ಕಡೆಯಿಂದ ವಿಪತ್ತು ಬಂದೊದಗಿತ್ತು. ಚಾಲುಕ್ಯರ ಕುಲಶತ್ರುಗಳಾದ ಪಲ್ಲವರು ರಾಹಪ್ಪಯ್ಯನಿಂದ ಪ್ರೇರಿತರಾಗಿ ಪುಲಿಕೇಶಿಯ ಮೇಲೆ ದಂಡೆತ್ತಿ ಬರುವ ಸನ್ನಾಹದಲ್ಲಿ ಇರುವರೆಂಬ ವಾರ್ತೆ ಮಿಂಚಿನಂತೆ ಬಂದಿತ್ತು. ಇದರೊಂದಿಗೆ ಪುಲಿಕೇಶಿ ತಾನು ಖುಸ್ರು ದೊರೆಗೆ ಕೊಟ್ಟಿದ್ದ ವಚನ ಉಳಿಸಲು ಕೈಗೊಳ್ಳಬೇಕೆಂದಿದ್ದ ದಂಡಯಾತ್ರೆಯ ಉತ್ಸಾಹ ಆರಿ ತಣ್ಣಗಾಗಿ, ಈಗ ಸಾಮ್ರಾಜ್ಯ ರಕ್ಷಣೆಗಾಗಿ ಅವನು ಮನಸ್ಸು ಕೊಡಬೇಕಾಯಿತು. ಪರ್ಶಿಯಾ ದೇಶದ ದಂಡಯಾತ್ರೆ ಕಡೆಗೂ ಕನಸಾಗಿಯೇ ಉಳಿಯಿತು.

ಪಲ್ಲವರು ಪಿಷ್ಟಪುರವನ್ನು ಕಳೆದುಕೊಂಡ ಮೇಲೆ ಪುಲಿಕೇಶಿಯ ಮೇಲೆ ಯುದ್ಧಕ್ಕೆ ಬರಲು ಸಿದ್ಧತೆಮಾಡಿಕೊಳ್ಳುತ್ತಿರುವರೆಂಬ ವಾರ್ತೆಯನ್ನು ಗೂಢಚಾರರು ತರುತ್ತಿದ್ದರು. ಇದನ್ನು ಪುಲಿಕೇಶಿಯು ಅಷ್ಟಾಗಿ ಲಕ್ಷಿಸಿರಲಿಲ್ಲ. ಅವನಿಗೆ ಪಲ್ಲವರ ಬಗ್ಗೆ ಯಾವ ಭಯವೂ ಇರಲಿಲ್ಲ. ಪುಲಿಕೇಶಿಯ ಹಿಂದಣ ಎಲ್ಲಾ ದಂಡಯಾತ್ರೆಗಳೂ ಯಶಸ್ವಿಯಾಗಿತ್ತು. ಈಗ ದಕ್ಷಿಣಾಪಥದ ಚೇರ ಚೋಳ ಪಲ್ಲವರನ್ನು ಗೆದ್ದು ಸಾಮ್ರಾಜ್ಯವನ್ನು ಕನ್ಯಾಕುಮಾರಿಯವರೆಗೆ ವಿಸ್ತರಿಸಿ, ಹರ್ಷವರ್ಧನನು ಕೊಟ್ಟಿದ್ದ ಪರಮೇಶ್ವರನೆಂಬ ಬಿರುದನ್ನು ಸಾರ್ಥಕಪಡಿಸಿಕೊಳ್ಳಬೇಕೆಂದಿದ್ದನು. ಇಂದಲ್ಲ ನಾಳೆ ಪಲ್ಲವರಮೇಲೆ ಯುದ್ಧ ಸನ್ನಿಹಿತವಾಗುವುದೆಂಬು ತಿಳಿದಿದ್ದ ಪುಲಿಕೇಶಿಯು ಅದಕ್ಕೆ ಸಿದ್ಧನಾಗಿರುತ್ತಿದ್ದನು.

ಪಲ್ಲವ ಅರಸನಾದ ಮಹೇಂದ್ರವರ್ಮನು ಸಿಂಹವಿಷ್ಣುವಿನ ನಂತರ ಕಾಂಚಿಯ ಸಿಂಹಾಸನವನ್ನೇರಿದ್ದನು. ಇವನು ಅತ್ಯಂತ ಸಮರ್ಥನೂ ಮಹತ್ವಾಕಾಂಕ್ಷಿಯೂ ಆದ ದೊರೆಯಾಗಿದ್ದನು. ಸಿಂಹವಿಷ್ಣುವು ಮಲಯ, ಕಳಭ್ರ, ಮಾಳವ, ಚೋಳ, ಪಾಂಡ್ಯ ರಾಜ್ಯಗಳನ್ನು ಗೆದ್ದು ಸಿಂಹಳದವರೆಗೆ ರಾಜ್ಯವನ್ನು ಗೆದ್ದು ಸಿಂಹಳದವರೆಗೆ ರಾಜ್ಯವನ್ನು ವಿಸ್ತರಿದ್ದನು. ಅವನ ನಂತರ ಬಂದ ಮಹೇಂದ್ರವರ್ಮನು ಈ ವಿಸ್ತಾರವಾದ ಸಾಮ್ರಾಜ್ಯಕ್ಕೆ ಒಡೆಯನಾದನು. ಅವನಿಗೆ ಚೋಳರಿಂದ ಗೆದ್ದುಕೊಂಡ ಕಾವೇರಿ ತೀರದ ಫಲವತ್ತಾದ ನಾಲೆ ಪ್ರದೇಶವೆಲ್ಲಾ ವಶವಾಗಿತ್ತು. ರಾಜಭಂಡಾರದಲ್ಲಿ ಹೇರಳವಾಗಿ ಧನ,

ಧಾನ್ಯಗಳೂ ಇದ್ದವು. ಇವುಗಳಿಂದ ಸೊಕ್ಕಿ ಅವನು ಅಖಂಡ ಭೂಮಂಡಲದ ಸಾಮ್ರಾಟನಾಗಿ ಮೆರೆಯಲು ಆಶಿಸಿದನು. ಉತ್ತರದಲ್ಲಿ ಸಾಮ್ರಾಟ್ ಹರ್ಷವರ್ಧನನೂ, ವಾತಾಪಿಯಲ್ಲಿ ಪುಲಿಕೇಶಿಯೂ ಇದ್ದುದರಿಂದ ಮಹೇಂದ್ರವರ್ಮನ ಆಸೆ ಈಡೇರುವಂತಿರಲಿಲ್ಲ. ಆದರೂ ಅವನಿಗೆ ಹಿಂದೆ ಪಲ್ಲವರದಾಗಿದ್ದು ಈಗ ಕೈಬಿಟ್ಟು ಹೋಗಿದ್ದ ವಾತಾಪಿ ಪಿಷ್ಟಪುರಗಳನ್ನು ಗೆದ್ದು ತನ್ನದು ಮಾಡಿಕೊಳ್ಳಬೇಕೆಂಬ ಆಸೆ ಬಲವತ್ತರವಾಗಿತ್ತು.

ಮೊದಲಿನಿಂದಲೂ ಚಾಲೂಕ್ಯರಿಗೂ ಪಲ್ಲವರಿಗೂ ಅನೇಕ ಕಾರಣಗಳಿಂದ ಪರಸ್ಪರ ದ್ವೇಷವಿತ್ತು. ಇಬ್ಬರಿಗೂ ಮತೀಯ ಕಾರಣದಿಂದ ವೈಷಮ್ಯವಿತ್ತು. ಪಲ್ಲವರು ಶೈವರಾಗಿದ್ದು ಶೈವಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ಕೊಡುತ್ತಿದ್ದರು. ಚಾಲುಕ್ಯರು ವೈಷ್ಣವರಾಗಿದ್ದರು. ಪಲ್ಲವರಿಗೆ ನಂದಿಯು ಸಂಕೇತವಾಗಿದ್ದರೆ, ಚಾಲುಕ್ಯರಿಗೆ ವರಾಹನು ಸಂಕೇತವಾಗಿದ್ದನು. ಆದರೂ ಚಾಲುಕ್ಯದೊರೆಗಳು ಶೈವ, ಜೈನ, ಶಾಕ್ತಮತಗಳಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಇದಕ್ಕೆ ಬಾದಾಮಿ ಗುಡ್ಡದಲ್ಲಿ ಕೊರೆದಿದ್ದ ಜೈನ, ಬೌದ್ಧ, ವೈಷ್ಣವ ಗವಿಗಳೇ ಸಾಕ್ಷಿಯಾಗಿದ್ದವು. ಇದು ಹುಟ್ಟು ಶೈವನಾಗಿದ್ದ ಮಹೇಂದ್ರವರ್ಮನಿಗೆ ಸಹಿಸದ ಸಂಗತಿಯಾಗಿತ್ತು.

ಮಹೇಂದ್ರವರ್ಮನು ಸಮರ್ಥನಾದ ಸಾಮ್ರಾಟನಾಗಿದ್ದಂತೆ ಒಳ್ಳೇ ಕಲಾಭಿಮಾನಿಯಾದ ಸಾಮ್ರಾಟನೂ ಆಗಿದ್ದನು. ಅವನಿಗೆ ಶಿಲ್ಪಕಲೆಯಲ್ಲಿ ಅಸಾಧಾರಣ ಪಾಂಡಿತ್ಯವಿತ್ತು. ಪಲ್ಲಾವರಂ ಎಂಬಲ್ಲಿ ಇಂದಿಗೂ ಕಾಣುವ ಗುಹಾಂತರ್ದೇವಾಲಯಗಳನ್ನು ನಿರ್ಮಿಸಿದವನು ಅವನೇ. ಇದರಿಂದ ಅವನಿಗೆ ಚೈತ್ಯಾಕಾರಿ ಎಂಬ ಬಿರುದು ಬಂದಿತ್ತು. ಚಿತ್ರಕಲೆಯಲ್ಲೂ ಅವನಿಗೆ ಒಳ್ಳೇ ಪರಿಶ್ರಮವಿತ್ತು. ಅವನು ಚಿತ್ರಕಾರಪುಲಿ ಎಂಬ ಹೊಗಳಿಕೆಗೆ ಪಾತ್ರನಾಗಿದ್ದನು. ಅವನು ಜೈನನಾಗಿದ್ದು ಅನಂತರ ಶೈವಭಕ್ತನಾದ ಅಪ್ಪರರಿಂದ ಶಿವದೀಕ್ಷೆ ಪಡೆದಿದ್ದನು. ಸಾಹಿತ್ಯ ಸಂಗೀತಗಳಲ್ಲೂ ಅವನಿಗೆ ಆಸಕ್ತಿ ಇತ್ತು. ಅವನು ಸ್ವಯಂ ಕವಿಯಾಗಿದ್ದು ವಿಲಾಸ ಪ್ರಹಸನ, ದಂಡುಗ ಎಂಬ ಸಾಹಸ ಕೃತಿಗಳನ್ನು ರಚಿಸಿದ್ದನು. ಅಲ್ಲದೆ ಅವನು ಕವಿನಾಂಪ್ರಕಾಶನೆಂಬ ಬಿರುದನ್ನು ತಳೆದಿದ್ದನು. ಪರಮ ಮಹೇಶ್ವರನೆಂಬ ಧಾರ್ಮಿಕ ಬಿರುದೂ ಇತ್ತು. ಅವನಿಗೆ ಚಂದ್ರಲೇಖೆ ಎಂಬ [illegible] ಪತ್ನಿ ಇದ್ದಳು.

ಮಹೇಂದ್ರವರ್ಮನು ನೋಡಲು ಸುಂದರನೂ, ದೃಢಕಾಯನೂ ಆಗಿದ್ದನು. ಎತ್ತರವಾದ, ಭವ್ಯವಾದ ನಿಲುವು. ಬಲಶಾಲಿಯಾದ ತೋಳುಗಳು. ಮುಖದಲ್ಲಿ ಶ್ರೀಮದ್ಗಾಂಭೀರ್ಯ ಎದ್ದು ಕಾಣುತ್ತಿತ್ತು. ಕ್ಷಾತ್ರ ತೇಜಸ್ಸು ಉಕ್ಕುತ್ತಿತ್ತು. ಶತ್ರುಗಳ ಭಾಗಕ್ಕೆ ಯಮಸದೃಶನಂತೆ ಇದ್ದನು. ಇಂಥವನಿಗೆ ಪುಲಿಕೇಶಿಯು ಪ್ರತಿಸ್ಪರ್ಧಿಯಾಗಿದ್ದುದು ಅವನ ದೌರ್ಭಾಗ್ಯ.

ಪಲ್ಲವರನ್ನು ಚಾಲುಕ್ಯರ ಮೇಲೆ ಎತ್ತಿ ಕಟ್ಟುವುದರಲ್ಲಿ ರಾಹಪ್ಪಯ್ಯನ ಪಾತ್ರ ಕಡಿಮೆಯದಾಗಿರಲಿಲ್ಲ.

ರಾಹಪ್ಪಯ್ಯನು ಮಂಗಳೇಶನ ಕೊಲೆಯಾದ ಮೇಲೆ ವಾತಾಪಿಯಿಂದ ಓಡಿಹೋಗಿ ಅಪ್ಪಾಯಿಕನ ಬಳಿ ಆಶ್ರಯ ಪಡೆದನು. ಅಪ್ಪಾಯಿಕನೂ ಗೋವಿಂದನೂ ಪುಲಿಕೇಶಿಯ ಸ್ನೇಹಹಸ್ತವನ್ನು ಸ್ವೀಕರಿಸಿದ ಮೇಲೆ ಅವನು ನೇರ ಪಲ್ಲವರ ಆಶ್ರಯಕ್ಕೆ ಬಂದಿದ್ದನು. ಈಗ ಅವನಿಗೆ ಇದ್ದ ಒಂದೇ ಒಂದು ಆಶ್ರಯವೆಂದರೆ ಪಲ್ಲವರಾಗಿದ್ದರು. ಅವರು ಚಾಲುಕ್ಯರ ಕುಲಶತ್ರುಗಳಾಗಿದ್ದುದರಿಂದ ದ್ರೋಹಿಯಾದ ರಾಹಪ್ಪಯ್ಯನಿಗೆ ಆಶ್ರಯಕೊಟ್ಟಿದ್ದರು. ಈ ದ್ರೋಹಿಯ ಸಹಾಯದಿಂದ ವಾತಾಪಿಯನ್ನು ವಶಪಡಿಸಿಕೊಂಡು ಚಾಲುಕ್ಯರ ಬೆನ್ನಿನಲ್ಲಿ ಇರಿಯಬೇಕೆಂಬುದೇ ಅವರ ಆಶಯವಾಗಿತ್ತು. ಹೇಗಾದರೂ ಮಾಡಿ ಪಲ್ಲವರ ನೆರವಿನಿಂದ ಮಂಗಳೇಶನ ಮರಣಕ್ಕೆ ಕಾರಣನಾದ ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬುದೇ ಅವನ ಹೃದಯಾಂತರಾಳದ ಬಯಕೆಯಾಗಿತ್ತು. ಇದನ್ನು ಈಡೇರಿಸಿಕೊಳ್ಳಲು ಅವನು ಯಾವ ಹೇಯಕಾರ್ಯಕ್ಕೂ ಸಿದ್ಧನಿದ್ದನು. ಈ ಬಾರಿ ಚಾಲುಕ್ಯರಮೇಲೆ ಪಲ್ಲವರು ದಂಡೆತ್ತಿ ಬಂದರೆ, ವಾತಾಪಿಯನ್ನು ಸುಲಭವಾಗಿ ವಶಪಡಿಸುವುದಾಗಿ ಹೇಳಿ ಪಲ್ಲವ ಮಹೇಂದ್ರವರ್ಮನನ್ನು ದಂಡಯಾತ್ರೆಗೆ ಪ್ರೇರೇಪಿಸಿದ್ದನು. ಅದಕ್ಕೆ ತಕ್ಕಂತೆ ಪಿಷ್ಟಪುರವು ಪಲ್ಲವರ ಕೈಬಿಟ್ಟುಹೋದದ್ದು ಪುಲಿಕೇಶಿಯೇ ಕಾಲು ಕೆರೆದು ಸಮರಾಹ್ವಾನವಿತ್ತಂತೆ ಆಗಿತ್ತು. ಸ್ವಯಂ ಸಾಹಸಿಯಾದ ಮಹೇಂದ್ರವರ್ಮನು ಈಗ ಹೇಡಿಯಾಗಿ ಸುಮ್ಮನೆ ಕುಳಿತುಕೊಳ್ಳುವನೇ ? ಅವನು ಪುಲಿಕೇಶಿಯ ಮೇಲೆ ದಂಡೆತ್ತಿ ಬರಲು ಸಿದ್ಧತೆ ಮಾಡಿಕೊಳ್ಳಲು ತೊಡಗಿದ್ದನು.

ಇದೇ ಸಮಯದಲ್ಲಿ ಮಹೇಂದ್ರವರ್ಮನ ಬಹುದಿನದ ಬಯಕೆ ಈಡೇರು

ವಂತೆ ನಾಗಶ್ರೀಗಾದ ಅನ್ಯಾಯದಿಂದ ರೋಸಿ, ಪುಲಿಕೇಶಿ ಹಾಗೂ ವಿಷ್ಣುವರ್ಧನನ ಮೇಲೆ ಸೇಡು ತೀರಿಸಿಕೊಳ್ಳಲು ಚಂದ್ರೋಜನು ಕಾಂಚಿಗೆ ಬಂದಿದ್ದನು. ಅವನು ಮಹೇಂದ್ರವರ್ಮನಿಗೆ ನಡೆದ ಸಂಗತಿಯನ್ನೆಲ್ಲಾ ತಿಳಿಸಿ, ತನಗೆ ದ್ರೋಹ ಬಗೆದ ಪುಲಿಕೇಶಿಯಮೇಲೆ ಸೇಡು ಬಗೆದು, ಆ ಮೂಲಕ ನಾಗಶ್ರೀಯ ಆತ್ಮಕ್ಕೆ ಶಾಂತಿ ದೊರಕಿಸಿಕೊಡಬೇಕೆಂದು ಬೇಡಿದನು. ಅವನಿಗಾದ ಅನ್ಯಾಯಕ್ಕೆ ಮರುಗಿದ ಮಹೇಂದ್ರವರ್ಮನು ಅವನಿಗೆ ಆಶ್ರಯ ನೀಡಿ ಪುಲಿಕೇಶಿಯ ಮೇಲೆ ಪ್ರತೀಕಾರ ಬಗೆಯಲು ಪಲ್ಲವರ ದಂಡು ಸಿದ್ಧವಿರುವುದಾಗಿ ಆಶ್ವಾಸನಿತ್ತನು.

ಇದೇ ಸಮಯದಲ್ಲಿ ಪಿಷ್ಟಪುರದಿಂದ ಪಲ್ಲವರ ಗೂಢಚಾರರೂ ಆಗಮಿಸಿ, ಕುಬ್ಜ ವಿಷ್ಣುವರ್ಧನನು ವೆಂಗಿಮಂಡಲಕ್ಕೆ ಮಾಂಡಲೇಶ್ವರನಾಗಿರುವ ಸಂಗತಿಯನ್ನು ವರದಿಮಾಡಿದರು. ಈ ವಾರ್ತೆಯನ್ನು ಕೇಳಿ ಎಲ್ಲರಿಗಿಂತಲೂ ಹೆಚ್ಚು ಹಿಗ್ಗಿದವನೆಂದರೆ ರಾಹಪ್ಪಯ್ಯ.

ಅವನಿಗೆ ನಾಗಶ್ರೀ ಪ್ರಕರಣದಲ್ಲಿ ಪುಲಿಕೇಶಿ ಹಾಗೂ ವಿಷ್ಣುವರ್ಧನರಿಗೆ ವೈಮನಸ್ಸು ಉಂಟಾಗಿದ್ದ ಸಂಗತಿ ತಿಳಿದಿತ್ತು. ಇದನ್ನೇ ಮತ್ತಷ್ಟು ಬೆಳೆಸಿ, ಆ ಸಹೋದರರ ನಡುವೆ ಒಡಕು ಹುಟ್ಟಿಸಿ, ವಿಷ್ಣುವರ್ಧನನನ್ನು ಪುಲಿಕೇಶಿಯ ಮೇಲೆ ಎತ್ತಿಕಟ್ಟಿ ತನ್ನ ಸೇಡನ್ನು ಸಾಧಿಸಿಕೊಳ್ಳಬೇಕೆಂದು ಅವನು ಯೋಚಿಸಿದನು. ಮೊದಲಿನಿಂದಲೂ ಮಂಗಳೇಶನ ಅಭಿಮಾನಿಯಾಗಿದ್ದ ವಿಷ್ಣುವರ್ಧನನು ಈಗ ಪುಲಿಕೇಶಿಯ ಪ್ರಭಾವ ವಲಯದಿಂದ ದೂರ ಸಿಡಿದು ಬಂದಮೇಲೆ, ತನ್ನ ಕಡೆ ಒಲಿಯುವ ಬಗ್ಗೆ ಅವನಿಗೆ ಸಂದೇಹ ಉಳಿಯಲಿಲ್ಲ. ಇತ್ತ ಪಲ್ಲವರನ್ನು ಪುಲಿಕೇಶಿಯ ಮೇಲೆ ಎತ್ತಿ ಕಟ್ಟಿದಂತೆ ವಿಷ್ಣುವರ್ಧನನಿಗೆ ಸಿಂಹಾಸನದ ಆಸೆ ತೋರಿಸಿ, ಪುಲಿಕೇಶಿಯ ಮೇಲೆ ದಂಗೆ ಏಳುವಂತೆ ಮಾಡಿದರೆ, ತನ್ನ ಕೆಲಸ ಸುಲಭವಾಗುವುದೆಂದು ಅರಿತನು. ಅವನು ಕೂಡಲೇ ಈ ಬಗ್ಗೆ ಕಾರ್ಯ ಪ್ರವರ್ತಕನಾದನು.

ರಾಹಪ್ಪಯ್ಯನು ವೇಷಾಂತರದಲ್ಲಿ ಬಂದು ಪಿಷ್ಟಪುರದಲ್ಲಿ ವಿಷ್ಣುವರ್ಧನನನ್ನು ಭೇಟಿಮಾಡಿದನು. ವಿಷ್ಣುವರ್ಧನನು ರಾಹಪ್ಪಯ್ಯನನ್ನು ಗುರುತಿಸಿ, ಅವನನ್ನು ಗಾಢವಾಗಿ ಆಲಂಗಿಸಿ, ಅಂತರ್‌ಗೃಹಕ್ಕೆ ಕರೆದೊಯ್ದು "ಅಮಾತ್ಯತರೇ, ಇದುವರೆಗೆ ನೀವು ಎಲ್ಲಿ ಅಡಗಿದ್ದಿರಿ ? ಏನು ಮಾಡುತ್ತಿದ್ದಿರಿ ? ನಿಮ್ಮ ಸಲುವಾಗಿ ನಾನು ಎಷ್ಟೋ ಶೋಧಿಸಿದೆ, ನೀವು ದೊರೆಯಲಿಲ್ಲ. ನಿಮ್ಮ ಬಗ್ಗೆ ಯಾವ

ಸಂಗತಿಯೂ ತಿಳಿಯಲಿಲ್ಲ. ಈ ಸಮಯದಲ್ಲಿ ನೀವು ನನಗೆ ದೊರೆತದು ನನ್ನ ಭಾಗ್ಯವೇ ಸರಿ! ನಿಮಗೆ ಈಗಲಾದರೂ ನನ್ನ ನೆನಪಾಯಿತಲ್ಲ!" ಎಂದೂ ಒಮ್ಮೆಲೇ ನಾಲ್ಕಾರು ಪ್ರಶ್ನೆಗಳನ್ನು ಕೇಳಿದನು.

ನಾಗಶ್ರೀ ಪ್ರಕರಣದಲ್ಲಿ ಪುಲಿಕೇಶಿಯು ಬಗ್ಗೆ ಮನಸ್ಸು ಕೆಡಸಿಕೊಂಡಿದ್ದ ಅವನಿಗೆ ತನ್ನ ಹೃದ್ಗತ ತೋಡಿಕೊಳ್ಳಲು, ತನ್ನ ದುಸ್ಸಯೋಚನೆಗಳಲ್ಲಿ ಪಾಲು ಗೊಳ್ಳಲು ರಾಹಪ್ಪಯ್ಯನಂತಹ ದುರ್ಮಂತ್ರಿಗಳ ಅವಶ್ಯಕತೆ ಹೆಚ್ಚಾಗಿತ್ತು. ಈ ಸಮಯದಲ್ಲಿ ರಾಹಪ್ಪಯ್ಯನು ದೊರೆತುದು, ಕಳೆದುಕೊಂಡ ನಿಧಿ ಕೈ ಹತ್ತಿದಷ್ಟು ಅವನಿಗೆ ಹರ್ಷವಾಗಿತ್ತು.

ಇಬ್ಬರೂ ಬಹುಕಾಲ ಅಗಲಿದ ಮಿತ್ರರಂತೆ ಅನೇಕ ವಿಷಯಗಳನ್ನು ಕುರಿತು ಮಾತನಾಡಿದರು. ವಿಷ್ಣುವರ್ಧನನು ನಾಗಶ್ರೀ ಪ್ರಕರಣದಲ್ಲಿ ಪುಲಿಕೇಶಿಯು ನಡೆದುಕೊಂಡ ಪರಿಯನ್ನು ಉಗ್ರವಾಗಿ ಟೀಕಿಸಿ, ಅಂತಹ ಹಿತಶತ್ರುವಿನಿಂದ ದೂರ ಬಂದುದಕ್ಕೆ ಸಂತೋಷಿಸಿದನು.

"ಪ್ರಭು, ತಮಗೆ ಈಗಲಾದರೂ ತಿಳಿಯಿತಲ್ಲ, ನಿಮ್ಮ ನಿಜವಾದ ಹಿತೈಷಿಗಳು ಯಾರು, ಆಪ್ತರು ಯಾರು ಎಂಬುದು ನೀವು ಆ ದ್ರೋಹಿಗಳ ಬೆರಗುಮಾತಿಗೆ ಬೆರಗಾಗಿ, ಸಿಂಹಾಸನದ ಹಕ್ಕುದಾರಿಕೆಯನ್ನೂ ಬಿಟ್ಟು ಬಿಟ್ಟು ಸಾಮ್ರಾಟರ ಬಳಿ ಊಳಿಗಕ್ಕೆ ಟೊಂಕ ಕಟ್ಟಿದಿರಿ! ಯುವರಾಜಪದವಿಯ ಎಂಜಲಿಗೆ ಕೈಯೊಡ್ಡಿ, ಆತ್ಮವಂಚನೆ ಮಾಡಿಕೊಂಡಿರಿ! ನಿಮ್ಮನ್ನು ಪುತ್ರ ವಾತ್ಸಲ್ಯದಿಂದ ಸಲಹಿದ ಕೀರ್ತಿಶೇಷರಾದ ಮಂಗಳೇಶರಿಗೆ ದ್ರೋಹ ಬಗೆದಿರಿ. ನಿಮ್ಮನ್ನೇ ನಂಬಿ, ನಿಮ್ಮ ಸಲುವಾಗಿ ಯಾವ ತ್ಯಾಗ–ಬಲಿದಾನಗಳಿಗೂ ಸಿದ್ಧರಾದ ನನ್ನಂತಹ ಸಹಸ್ರಾರು ಸ್ವಾಮಿನಿಷ್ಠ ಸೇವಕರನ್ನು ಕೈಬಿಟ್ಟಿರಿ. ಈಗಲಾದರೂ ನಿಮಗೆ ಆ ವಿಶ್ವಾಸ ಘಾತುಕರ ನಿಜವಾದ ಸ್ವರೂಪ ತಿಳಿಯಿತಲ್ಲ. ಇದು ನಮ್ಮ ಪಾಲಿನ ಪುಣ್ಯವೇ ಸರಿ!" ಎಂದು ರಾಹಪ್ಪಯ್ಯನು ಹೇಳಿದನು.

"ಅಮಾತ್ಯರೇ, ಹಿಂದೆ ಆದುದನ್ನು ಮರೆತುಬಿಡಿ. ನಾನು ದುಡುಕಿದೆ. ತಂದೆಗಿಂತಲೂ ಅತಿಶಯವಾಗಿ ಪ್ರೀತಿಸಿದ ಮಂಗಳೇಶರನ್ನೂ ನಿಮ್ಮಂತಹ ಸ್ವಾಮಿನಿಷ್ಠ ಸೇವಕರನ್ನೂ ನಾನು ಮರೆಯಲೆತ್ನಿಸಿ ಮಹಾಪರಾಧ ಮಾಡಿದೆ. ಅದಕ್ಕಾಗಿ ಈಗ ಪಶ್ಚಾತ್ತಾಪಪಡುತ್ತಿದ್ದೇನೆ!" ಎಂದು ಗದ್ಗದ ಕಂಠದಲ್ಲಿ ಹೇಳಿದ ವಿಷ್ಣುವರ್ಧನ.

"ಪ್ರಭೂ, ತಾವು ಆ ಬಗ್ಗೆ ಚಿಂತಿಸುವ ಕಾರಣವಿಲ್ಲ. ತಾವು ಸಕಾಲದಲ್ಲಿ ಎಚ್ಚೆತ್ತುಕೊಂಡು ವಾತಾಪಿಯನ್ನು ತೊರೆದುದು ಒಳ್ಳೆಯದಾಯಿತು. ಇಲ್ಲದಿದ್ದರೆ ನೀವು ಪುಲಿಕೇಶಿಯ ಒಳ್ಳೆಯತನವನ್ನೇ ನಿಜವೆಂದು ನಂಬಿ, ತೊಂದರೆಗೊಳಗಾಗುತ್ತಿದ್ದೀರಿ. ಈಗಲೂ ನಿಮಗೆ, ಮಂಗಳೇಶರ ಕೊಲೆಪಾತಕರ ಮೇಲೆ ಸೇಡು ತೀರಿಸಿಕೊಳ್ಳುವ ಆಶೆ ಇದ್ದರೆ ಹೇಳಿ. ನನ್ನಂತಹ ಸಹಸ್ರಾರು ಸ್ವಾಮಿನಿಷ್ಠ ಸೇವಕರು ನಿಮ್ಮನ್ನು ಅನುಸರಿಸಿ, ಜವನದವಡೆಗಾದರೂ ಸಿದ್ಧರಾಗಿ ಬರುತ್ತಾರೆ. ನಿಮಗೆ ನಿಮ್ಮದಾದ ಪವಿತ್ರ ಚಾಲುಕ್ಯ ಸಿಂಹಾಸನವನ್ನು ಮತ್ತೆ ಪಡೆಯುವ ಆಸೆ ಇದ್ದರೆ ತಿಳಿಸಿ. ಪಲ್ಲವರು ನಿಮ್ಮ ನೆರವಿಗೆ ಬಂದು ದ್ರೋಹಿ ಪುಲಿಕೇಶಿಯನ್ನು ಸಿಂಹಾಸನದಿಂದ ತಳ್ಳಿ ತಮಗೆ ಸಾಮ್ರಾಟ ಪದವಿಯನ್ನು ಕಟ್ಟುತ್ತಾರೆ ! ಈಗ ನೀವು ಮನಸ್ಸು ಮಾಡಿದರೆ ಹೆಜ್ಜೆ ಹೆಜ್ಜೆಗೂ ದ್ರೋಹ ಬಗೆಯುತ್ತಿರುವ ಆ ಧೂರ್ತ ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಬಹುದು. ಸಾಮ್ರಾಜ್ಯದ ಜನತೆಯನ್ನು ಅವನ ನಿರಂಕುಶ ಆಳ್ವಿಕೆಯಿಂದ ಪಾರು ಮಾಡಬಹುದು !" ಎಂದು ವಿಷ್ಣುವರ್ಧನನನ್ನು ಹುರುದುಂಬಿಸಿದ ರಾಹಪ್ಪಯ್ಯ.

"ಸಾಮ್ರಾಟ್ ಹರ್ಷವರ್ಧನರನ್ನು ಸೋಲಿಸಿ, ದಕ್ಷಿಣಾಪಥೇಶ್ವರನೆಂಬ ಬಿರುದಿಗೆ ಪಾತ್ರನಾದ ಪುಲಿಕೇಶಿಯ ಮೇಲೆ ನಾವು ಕತ್ತಿ ಎತ್ತಿ ಬದುಕಬಲ್ಲೆವೆ? ಮಂಗಳೇಶನ ಕೊಲೆಗೆ ಅವನ ಮೇಲೆ ಸೇಡು ತೀರಿಸಿಕೊಳ್ಳಲು ಸಾಧ್ಯವೆ ?"

ವಿಷ್ಣುವರ್ಧನ ಶಂಕೆಯಿಂದ ನುಡಿದ.

"ಸಾಧ್ಯ, ಪ್ರಭು ! ಸಾಧ್ಯ !! ರಾಹಪ್ಪಯ್ಯನಂತಹ ವ್ಯಕ್ತಿಗಳು ಬದುಕಿರುವವರೆಗೆ ಇದು ಸಾಧ್ಯ ! ಈಗ ರಾಹಪ್ಪಯ್ಯ ಒಂದು ವ್ಯಕ್ತಿಯಲ್ಲ ಒಂದು ಶಕ್ತಿ ಎಂಬುದನ್ನು ತಾವು ಮರೆಯಬಾರದು ! ಇಂದು ಈ ರಾಹಪ್ಪಯ್ಯನ ಬೆಂಬಲಕ್ಕೆ ಮಂಗಳೇಶರ ಅಭಿಮಾನಿಗಳೆಲ್ಲರೂ ಇದ್ದಾರೆ. ಅವರ ಭೀಕರ ಕೊಲೆಯಿಂದ ಪ್ರಕ್ಷುಬ್ಧರಾದ ಸ್ವಾಮಿನಿಷ್ಠ ಸೇವಕರೆಲ್ಲರೂ ನನ್ನದೊಂದು ಆಜ್ಞೆಯನ್ನು ಎದುರು ನೋಡುತ್ತಾ ಸಿದ್ಧರಾಗಿದ್ದಾರೆ. ಅಷ್ಟೇ ಅಲ್ಲ, ಚಾಲುಕ್ಯರ ಕುಲಶತ್ರುಗಳಾದ ಪಲ್ಲವರು ಚಾಲುಕ್ಯ ಸಾಮ್ರಾಟರ ಸೊಕ್ಕು ಮುರಿಯಲು ಕಾದು ಕುಳಿತಿದ್ದಾರೆ. ಈಗ ನೀವು ನಮ್ಮವರಾದರೆ, ನಾಳೆಯೇ ಅಖಂಡ ಚಾಲುಕ್ಯ ಸಿಂಹಾಸನಕ್ಕೆ ಸಾಮ್ರಾಟರಾಗಿ ಮೆರೆಯಬಹುದು ! ಪಲ್ಲವರ ಸ್ನೇಹಹಸ್ತ ನಮ್ಮದಾದರೆ ಪುಲಿಕೇಶಿಯನ್ನು ಸಿಂಹಾಸನದಿಂದ ಉರುಳಿಸುವುದು ಎಷ್ಟು

ಹೊತ್ತು ? ನೀವು ಈ ಬಗ್ಗೆ ಅಧೀರರಾಗಬಾರದು ಪ್ರಭು ! ರಾಹಪ್ಪಯ್ಯನಿರುವ ವರೆಗೆ ನೀವು ಯಾವುದೇ ಚಿಂತೆಯಿಂದ ಕಂಗೆಡಬಾರದು" ಎಂದು ಅವನು ವಿಷ್ಣು ವರ್ಧನನನ್ನು ಸಮಾಧಾನಪಡಿಸಿದನು.

"ಆ ನಂಬಿಕೆ ನನಗೆ ಇಲ್ಲ ಅಮಾತ್ಯರೆ !"

"ಏಕೆ ಪ್ರಭು ?"

"ಚಾಲುಕ್ಯರ ಕುಲಶತ್ರುಗಳಾದ ಪಲ್ಲವರು ನಮಗೆ ನೆರವಾಗುತ್ತಾರೆಯೆ? ಚಾಲುಕ್ಯರ ಹೆಸರನ್ನು ಇತಿಹಾಸದಿಂದ ತೊಡೆದು ಹಾಕಲು ನಿಶ್ಚಯಿಸಿರುವ ಪಲ್ಲವರು ನನ್ನನ್ನು ಚಾಲುಕ್ಯ ಸಾಮ್ರಾಟನೆಂದು ಒಪ್ಪಿಕೊಳ್ಳುವರೇ ?"

"ಆ ಬಗ್ಗೆ ನೀವು ಚಿಂತಿಸುವ ಕಾರಣವಿಲ್ಲ ಪ್ರಭು ! ನಮಗೆ ಪಲ್ಲವರು ನೆರವಾಗುವುದರಲ್ಲಿ ಅವರದೇ ಆದ ಸ್ವಾರ್ಥವಿದೆ. ಪಲ್ಲವ ದೊರೆ ಮಹೇಂದ್ರ ವರ್ಮನೂ ಪುಲಿಕೇಶಿಯಂತೆಯೇ ಮಹತ್ವಾಕಾಂಕ್ಷಿ. ಅವನ ಮಗ ನರಸಿಂಹ ವರ್ಮನ ತಂದೆಗಿಂತಲೂ ಹೆಚ್ಚು ಪ್ರತಾಪಶಾಲಿ. ದಕ್ಷಿಣಾಪಥದಲ್ಲಿ ಪಲ್ಲವರ ಹೊರತು ಬೇರೆ ಸಾಮ್ರಾಟರು ಇರಬಾರದೆಂಬ ಮಹತ್ವಾಕಾಂಕ್ಷೆ ಅವನದು ! ಇದರ ಸಲುವಾಗಿ, ಚಾಲುಕ್ಯರ ಶಕ್ತಿಯನ್ನು ಮುರಿಯಲು ಅವರು ಯುದ್ಧ ಸನ್ನದ್ಧರಾಗಿದ್ದಾರೆ. ಅವರ ಸ್ನೇಹಹಸ್ತವನ್ನು ನಾವು ಯಾಚಿಸಿ, ಅವರ ಮಾಂಡಲೇಶ್ವರರಾಗಿ ಇರಲು 'ಒಪ್ಪಿಕೊಂಡರೆ, ಅವರು ನಮಗೆ ಖಂಡಿತ ನೆರ ವೀಯುತ್ತಾರೆ. ಪಲ್ಲವರು ತಮ್ಮ ಕೈಬಿಟ್ಟು ಹೋಗಿರುವ ವೆಂಗಿಮಂಡಲವನ್ನು ಮತ್ತೆ ಗೆಲ್ಲಲು ಸಿದ್ಧರಾಗಿದ್ದಾರೆ. ನೀವು ಅದನ್ನು ಯುದ್ಧವಿಲ್ಲದೆ ಬಿಟ್ಟುಕೊಡು ವುದಾದರೆ, ಪುಲಿಕೇಶಿಯ ವಿರುದ್ಧ ನಿಮ್ಮನ್ನು ರಕ್ಷಿಸಲು ಯಾವ ಸಾಹಸ ಕ್ಕಾದರೂ ಸಿದ್ಧರಿದ್ದಾರೆ !"

"ಇಷ್ಟು ಸುಲಭವಾಗಿ ನನಗೆ ಪಲ್ಲವರ ನೆರವು ದೊರೆಯುವುದಾದರೆ ನಾನು ನಾಳೆಯೇ ಪುಲಿಕೇಶಿಯ ವಿರುದ್ಧ ದಂಗೆ ಎದ್ದು, ಸ್ವತಂತ್ರ ಸಾಮ್ರಾಟ ನೆಂದು ಘೋಷಿಸಿಕೊಳ್ಳುತ್ತೇನೆ !" ಎಂದು ವಿಷ್ಣುವರ್ಧನ ಸಂತೋಷೋದ್ಗಾರ ತೆಗೆದ.

ಈ ಕಾರ್ಯವನ್ನು ಹೇಗೆ ಕಾರ್ಯಗತಗೊಳಿಸಬೇಕೆಂಬುದರ ಬಗ್ಗೆ ಇಬ್ಬರೂ ಬಹಳ ಹೊತ್ತು ಚರ್ಚಿಸುತ್ತಿದ್ದು, ಕಡೆಗೆ ರಾಹಪ್ಪಯ್ಯನು ತನ್ನ ರಾಯಭಾರ ಯಶಸ್ವಿಯಾದ ಹಿಗ್ಗಿನಲ್ಲಿ ಅಲ್ಲಿಂದ ಹೊರಬಿದ್ದನು. ಅವನು

ವೇಷಾಂತರದಲ್ಲಿ ಮತ್ತೆ ಕಾಂಚಿಗೆ ಹಿಂದಿರುಗಿ, ಪಲ್ಲವ ಮಹೇಂದ್ರವರ್ಮನಿಗೆ ಒಂದು ಮಹತ್ವದ ಪತ್ರವನ್ನು ತಲುಪಿಸಿದನು.

ಅದರಲ್ಲಿ ವಿಷ್ಣುವರ್ಧನನು ಪಲ್ಲವ ಮಹೇಂದ್ರವರ್ಮ ತನಗೆ ನೆರವಾಗುವುದಾದರೆ, ತಾನು ಪಲ್ಲವರ ಮಾಂಡಲೇಶ್ವರನಾಗಿರಲು ತಿಳಿಸಿದ್ದನು. ಈ ಪತ್ರವನ್ನು ಓದಿಕೊಂಡು ಮಹೇಂದ್ರವರ್ಮನ ಮುಖದ ಮೇಲೆ ಒಂದು ಕಿರುನಗೆ ಮೂಡಿತು. ಆದರೆ ಇದು ಬಹಳ ಕಾಲ ಉಳಿಯಲಿಲ್ಲ. ಇದೇ ಕಾಲದಲ್ಲಿ ವಾತಾಪಿಯಿಂದ ಒಂದು ರಾಯಸ ಬಂದಿತ್ತು. ಅದರಲ್ಲಿ ಪುಲಿಕೇಶಿಯು, ಪಲ್ಲವರು ವಿಶ್ವಾಸ ದ್ರೋಹಿಗಳಾದ ರಾಹಪ್ಪಯ್ಯ, ಚಂದ್ರೋಜರಿಗೆ ಆಶ್ರಯ ನೀಡಿರುವುದಾಗಿಯೂ, ಅವರನ್ನು ತನಗೆ ಒಪ್ಪಿಸದೆ ಇದ್ದರೆ, ಎರಡು ರಾಷ್ಟ್ರಗಳ ಸ್ನೇಹ ಸಂಬಂಧಕ್ಕೆ ಧಕ್ಕೆ ಬರುವುದೆಂತಲೂ ತಿಳಿಸಿದ್ದ.

ಈ ಪತ್ರ ಕಂಡು ಉದ್ರಿಕ್ತನಾದ ಮಹೇಂದ್ರವರ್ಮನು ಅಷ್ಟೇ ಉದ್ಧಟತನದ ಉತ್ತರವನ್ನು ಕೊಟ್ಟನು.

"ನೀವು ಉತ್ತರಾಪಥದ ಸಾಮ್ರಾಟ್ ಹರ್ಷವರ್ಧನರನ್ನು ಸೋಲಿಸಿರಬಹುದು. ನಮ್ಮ ಸಾಮ್ರಾಜ್ಯಕ್ಕೆ ಸೇರಿದ್ದ ಪಿಷ್ಟಪುರವನ್ನು ಬಲಾತ್ಕಾರದಲ್ಲಿ ಗೆದ್ದು ವಶಪಡಿಸಿಕೊಂಡಿರಬಹುದು. ಎಂದ ಮಾತ್ರಕ್ಕೆ, ನೀವು ದಕ್ಷಿಣಾಪಥದ ಅನಭಿಷಿಕ್ತ ಸಾಮ್ರಾಟರೆಂದು ತಿಳಿಯಬಾರದು! ಎಲ್ಲಿಯವರೆಗೆ ಪಲ್ಲವರು ಜೀವಂತವಿರುವರೋ ಅಲ್ಲಿಯವರೆಗೆ ಇಂತಹ ಕನಸನ್ನು ನೀವು ಬಿಟ್ಟುಕೊಡುವುದು ಒಳ್ಳೆಯದು. ನಿಮ್ಮ ಅಹಂಕಾರ ದರ್ಪಗಳು ಸ್ವತಂತ್ರ ಸಾಮ್ರಾಟರಾದ ನಮ್ಮ ಮುಂದೆ ನಡೆಯಲಾರದು. ನಿಮಗೆ ನಮ್ಮೆರಡು ರಾಜ್ಯಗಳ ನಿಜವಾದ ಸ್ನೇಹ ಬೇಕಾಗಿದ್ದರೆ, ನೀವು ನಮ್ಮದಾಗಿದ್ದ ವೆಂಗಿಮಂಡಲವನ್ನು ನಮಗೆ ಹಿಂದಿರುಗಿಸಿರಿ. ಅಲ್ಲದೆ ಸಿಂಹಾಸನಕ್ಕೆ ನಿಮ್ಮಷ್ಟೇ ಹಕ್ಕುದಾರರಾದ ವಿಷ್ಣುವರ್ಧನರಿಗೆ ಅರ್ಧರಾಜ್ಯವನ್ನು ಬಿಟ್ಟುಕೊಡಿ; ನಮ್ಮಲ್ಲಿ ಆಶ್ರಯಪಡೆದಿರುವ ನಿಮ್ಮ ಪ್ರಜೆಗಳನ್ನು ಹಿಂದಿರುಗಿಸಲು ಒತ್ತಾಯಮಾಡಬಾರದು. ಈ ಶರತ್ತುಗಳಿಗೆ ನೀವು ಒಪ್ಪುವದಾದರೆ ಮಾತ್ರ ಪಲ್ಲವರ ಸ್ನೇಹ ದೊರೆಯುತ್ತದೆ, ಇಲ್ಲದಿದ್ದರೆ, ಪಲ್ಲವರ ಕೂರ್ಗತ್ತಿ ನಿಮಗೆ ಉತ್ತರ ಹೇಳುತ್ತದೆ. ಇದನ್ನೇ ನೀವು ಸಮರದ ಆಹ್ವಾನವೆಂದು ತಿಳಿಯತಕ್ಕದ್ದು!"

## ೨೫

ಈ ಪತ್ರವನ್ನು ಓದಿಕೊಂಡು ಪರಮೇಶ್ವರ ಪುಲಿಕೇಶಿಯು ಪ್ರಕ್ಷುಬ್ಧ ನಾದನು. ಇದು ತಾನು ದಕ್ಷಿಣಾಪಥೇಶ್ವರನೆಂಬ ಅವನ ಅಹಂಕಾರಕ್ಕೆ ಪೆಟ್ಟು ಬಿದ್ದಿತು. ಅವನು ರೋಷದಿಂದ ಕುದಿದನು. ಕೆಣಕಿದ ವ್ಯಾಘ್ರದಂತೆ ಗರ್ಜಿಸಿದನು. ಆ ಮದೋನ್ಮತ್ತ ಪಲ್ಲವ ದೊರೆಗೆ ತಕ್ಕ ಶಾಸ್ತಿಮಾಡದೆ ಹೋದರೆ ತಾನು ಪುಲಿಕೇಶಿಯಲ್ಲವೆಂದು ಪ್ರತಿಜ್ಞೆಮಾಡಿ ಅಂದೇ ದಂಡನಾಯಕರ ಸಭೆಯೊಂದನ್ನು ಕರೆದು ಅವರಿಗೆ ರಣವೀಳ್ಯವನ್ನು ಇತ್ತನು.

ಮರುದಿನ ಸಮರ ದುಂದುಭಿಗಳು ಮೊಳಗಿದವು. ಸಮಸ್ತ ಸೇನಾಬಲ ಮಹಾಪೂರದಂತೆ ಹೊರಟಿತು. ಈ ಬಾರಿಯ ದಂಡಯಾತ್ರೆಯ ಸಮಸ್ತ ಜವಾಬ್ದಾರಿಯನ್ನು ಪ್ರಧಾನ ಅಮಾತ್ಯನೂ, ಮಹಾದಂಡನಾಯಕನೂ ಆಗಿದ್ದ ಸಮಂತಭದ್ರನೇ ಹೊತ್ತಿದ್ದನು.

ಈ ದಂಡಯಾತ್ರೆಯನ್ನು ತಾನೇ ಮುನ್ನಡೆಸಬೇಕೆಂದು ಪುಲಿಕೇಶಿಯು ಇಚ್ಛಿಸಿದ್ದರೂ, ಕಡೆಯ ಗಳಿಗೆಯಲ್ಲಿ ಅವನಿಗೆ ದೇಹಾಲಸ್ಯದಿಂದ ಹಾಸಿಗೆ ಹಿಡಿಯಬೇಕಾಗಿ ಬಂದುದರಿಂದ, ಈ ದಂಡಯಾತ್ರೆಯ ಹೊಣೆಗಾರಿಕೆ ಸಮಂತ ಭದ್ರನ ಪಾಲಿಗೆ ಬಂದಿತ್ತು.

“ಪ್ರಭು, ತಾವು ಈ ಬಾರಿ ಯುದ್ಧದ ಅಗ್ರತಾಂಬೂಲವನ್ನು ನನಗೆ ಕೊಟ್ಟು ತಾವು ಇಲ್ಲಿ ನಿಶ್ಚಿಂತೆಯಿಂದ ವಿಶ್ರಾಂತಿ ತೆಗೆದುಕೊಳ್ಳಬೇಕು. ವಿಜಯ ವಧುವನ್ನು ತಂದೊಪ್ಪಿಸುವ ಭಾರ ನನಗಿರಲಿ. ಆ ಮದೋನ್ಮತ್ತ ಪಲ್ಲವರನ್ನು ಶಿಕ್ಷಿಸಿ ಬರುವ ಹೊಣೆಗಾರಿಕೆ ನನ್ನದು. ಆ ದ್ರೋಹಿಗಳಾದ ರಾಹಪ್ಪಯ್ಯ, ಚಂದ್ರೋಜರನ್ನು ಸೆರೆಹಿಡಿದು ತಂದು, ತಮ್ಮ ಪಾದಗಳ ಮೇಲೆ ಉರುಳಿಸುತ್ತೇನೆ” ಎಂದು ಹೇಳಿ, ಪುಲಿಕೇಶಿಯಿಂದ ಒತ್ತಾಯದ ಅಗ್ರವೀಳ್ಯವನ್ನು ಪಡೆದು ಸಮಸ್ತ ಚಾಲುಕ್ಯ ದಂಡಿನೊಡನೆ ಅವನು ಹೊರಟಿದ್ದನು. ಕಾಂಚಿಗೆ ಸಮೀಪದಲ್ಲಿದ್ದ ಪೊಳ್ಳಲೂರಿನ ಬಳಿ ತನ್ನ ಸೈನ್ಯದೊಡನೆ ಬಂದು ಸೇರಿಕೊಳ್ಳಬೇಕೆಂದು ವೇಂಗಿಯ ಮಾಂಡಲೇಶ್ವರ ವಿಷ್ಣುವರ್ಧನನಿಗೆ ಆದೇಶ ಹೋಗಿತ್ತು. ಅದರಂತೆ ವಿಷ್ಣುವರ್ಧನನು ತನ್ನ ಸಮಸ್ತ ಬಲದೊಡನೆ ಹೊರಟು, ಪೊಳ್ಳಲೂರಿನ ಬಳಿ ಬೀಡುಬಿಟ್ಟಿದ್ದ ಚಾಲುಕ್ಯ ಸೈನ್ಯವನ್ನು ಕೂಡಿಕೊಂಡನು.

ಪ್ರೊಳ್ಳಲೂರಿನ ಬಳಿ ನೆರೆದ ಚಾಲುಕ್ಯ ಸೇನೆಯ ಮಹಾಸಮುದ್ರವನ್ನು ಕಂಡೇ ಪಲ್ಲವರು ಹೆದರಿದರು. ಸ್ವಯಂ ಮಹೇಂದ್ರವರ್ಮನಿಗೆ ಚಾಲುಕ್ಯರ ಅಸಂಖ್ಯಾತ ಸೈನ್ಯವನ್ನು ನೋಡಿ ಅಂಜಿಕೆಯಾಯಿತು. ಅವನಿಗೆ ತಾನು ಚಾಲುಕ್ಯರ ಮೇಲೆ ಯುದ್ಧಕ್ಕೆ ಹೊರಟರೆ ಖಂಡಿತ ಸೋಲಾಗುವುದೆಂದು ನಂಬಿಗೆಯಾಯಿತು. ಆದರೂ ಅವನು ತನ್ನ ಸೈನ್ಯವನ್ನು ಮುನ್ನಡೆಸಿಕೊಂಡು ಪೊಳ್ಳಲೂರಿನ ಬಳಿ ಬಂದು ಬೀಡುಬಿಟ್ಟನು. ಕಾಂಚಿಯ ಮೇಲೆ ಏರಿಬರುವ ಮೊದಲೇ ಚಾಲುಕ್ಯರನ್ನು ತಡೆಯಬೇಕೆಂಬುದೇ ಮಹೇಂದ್ರವರ್ಮನ ಅಭೀಷ್ಟ ವಾಗಿತ್ತು. ಈ ಕಾರ್ಯದಲ್ಲಿ ತನಗೆ ಯಶಸ್ಸು ದೊರಕುವ ಬಗ್ಗೆ ಅವನಿಗೆ ನಂಬಿಕೆ ಇರಲಿಲ್ಲ. "ರಾಹಪ್ಪಯ್ಯನವರೇ, ನಾವು ನಿಮ್ಮ ಮಾತು ಕೇಳಿಕೊಂಡು ಯುದ್ಧಕ್ಕೆ ಬಂದುದಾಯಿತು. ಈಗ ನೋಡಿದರೆ ಚಾಲುಕ್ಯರ ಕೈ ಮೇಲಾಗುವಂತೆ ಕಾಣುತ್ತದೆ. ಯುದ್ಧವಾದರೆ ನಮಗೆ ಸೋಲಾಗುವುದು ದಿಟ. ಏಕೆಂದರೆ ಚಾಲುಕ್ಯರ ಈ ಸೇನಾಸಮುದ್ರ ಮುಂದೆ ನಮ್ಮ ಸೈನ್ಯ ಕೊಚ್ಚಿಹೋಗುವುದು ಖಂಡಿತ!" ಎಂದನು ಖಿನ್ನವದನನಾಗಿ, ಮಹೇಂದ್ರವರ್ಮ ರಾಹಪ್ಪಯ್ಯ ನೊಡನೆ.

"ಪ್ರಭು, ತಾವು ಇಷ್ಟಕ್ಕೆಲ್ಲ ಹೆದರುವ ಕಾರಣವಿಲ್ಲ. ಚಾಲುಕ್ಯ ಸೈನ್ಯ ಅಸಂಖ್ಯಾತವಾಗಿದೆ ದಿಟ. ಆದರೆ, ಅವರಲ್ಲಿ ಅನೇಕರು ನಮ್ಮ ಪಕ್ಷಕ್ಕೆ ಸೇರಿ ದ್ದಾರೆ. ಸ್ವಯಂ ವಿಷ್ಣುವರ್ಧನರೂ ಅವರ ಸೈನ್ಯವೂ ಯಾವಗಳಿಗೆಯಲ್ಲಿ ಬೇಕಾದರೂ ರಣರಂಗದಿಂದ ಹಿಮ್ಮೆಟ್ಟಬಹುದು. ನಾವು ಅವರಿಗೆ ಆದೇಶ ನೀಡುವುದೇ ತಡ ಅವರ ಚಾಲಕ್ಯ ಸೈನ್ಯಕ್ಕೆ ದ್ರೋಹಬಗೆದು ನಮ್ಮ ಕಡೆ ಸೇರು ತ್ತಾರೆ. ನಮಗೇ ಖಂಡಿತ ಜಯವಾಗುತ್ತದೆ. ತಾವು ಈ ಬಗ್ಗೆ ಚಿಂತಿಸಬಾರದು!" ಎಂದು ಸಮಾಧಾನಪಡಿಸಿದ ರಾಹಪ್ಪಯ್ಯ.

ರಾಹಪ್ಪಯ್ಯನ ನಿರೀಕ್ಷೆ ವ್ಯರ್ಥವಾಗಲಿಲ್ಲ. ಮರುದಿನ ಯುದ್ಧ ಆರಂಭ ವಾದಾಗ ಚಾಲುಕ್ಯರ ಸೈನ್ಯ ಪಲ್ಲವರ ಸೈನ್ಯದ ಮೇಲೆ ಬಿದ್ದು, ಕೈಗೆ ಸಿಕ್ಕದವ ರನ್ನು ಕೊಂದು ಹಾವಳಿಮಾಡಿತು. ಅದರ ಹೊಡೆತಕ್ಕೆ ಪಲ್ಲವ ಸೈನ್ಯ ತತ್ತರಿಸಿ ಹಿಮ್ಮೆಟ್ಟಬೇಕಾಯಿತು. ಆದರೂ ಮಹೇಂದ್ರವರ್ಮನು ಧೈರ್ಯಗೆಡಲಿಲ್ಲ.

ಮೊದಲೆರಡು ದಿನ ನಡೆದ ಯುದ್ಧದಲ್ಲಿ ದೊರೆತ ವಿಜಯದಿಂದ ಚಾಲುಕ್ಯ ಸೈನಿಕರು ತಮಗೇ ಅಂತಿಮ ಜಯವೆಂದು ಹಿಗ್ಗಿ ಶತ್ರುಗಳು ಬಗ್ಗೆ ನಿರ್ಲಕ್ಷ್ಯ ಶಿ

ತಾಳಿದರು. ಅವರು ವೀರಾವೇಶದಿಂದ, ಪ್ರಾಣದ ಹಂಗು ತೊರೆದು ಯುದ್ಧ ಮಾಡಿದರೂ, ತಮ್ಮ ಕಣ್ಮುಂದೆ ಸಿದ್ಧವಾಗುತ್ತಿದ್ದ ಪಿತೂರಿ ಮಾತ್ರ ಅವರಿಗೆ ಅರಿವಾಗಲಿಲ್ಲ. ಮಾರನೆಯ ದಿನ ಕಾಳಗದ ಕರೆ ಮೊಳಗಿದಾಗ ಶತ್ರುಗಳಿಗೆ ಹೆದರಿ ಓಡಿದಂತೆ ನಟಿಸಿದ ಪಲ್ಲವ ಸೈನಿಕರು ಹಠಾತ್ತನೆ ಚಾಲುಕ್ಯರ ಮೇಲೆ ಬಿದ್ದು, ಕೈಗೆ ಸಿಕ್ಕಿದವರನ್ನೆಲ್ಲಾ ಕೊಚ್ಚಿ ಕೊಲ್ಲುತ್ತಾ ಬಂದರು. ಸೋತು ಓಡುತ್ತಿದ್ದ ಪಲ್ಲವರಿಗೆ ಇಷ್ಟು ಧೈರ್ಯ ಹೇಗೆ ಬಂದಿತೆಂದು ಚಾಲುಕ್ಯ ದಂಡು ಯೋಚಿಸುವ ಮೊದಲೇ, ಇನ್ನೊಂದು ಕಡೆಯಿಂದ ಚಾಲುಕ್ಯ ಸೈನ್ಯದಲ್ಲಿ ಇದ್ದು ಈಗ ಪಲ್ಲವರ ಕಡೆ ಸೇರಿಕೊಂಡಿದ್ದ ವಿಷ್ಣುವರ್ಧನನ ಕಡೆಯ ಸೈನಿಕರು ಮಾಡಿದ ಪಿತೂರಿಯಿಂದ ಎಲ್ಲೆಲ್ಲೂ ಅವರಿಗೆ ಪೆಟ್ಟೇ ಬೀಳಲಾರಂಭಿಸಿತು. ಅವರಿಗೆ ಇದೆಲ್ಲ ಏನೆಂದು ತಿಳಿಯದೆ ಗಾಬರಿಯಾಯಿತು.

ಚಾಲುಕ್ಯ ಸೈನಿಕರಿಗೆ ಶತ್ರುಗಳು ಯಾರು, ಮಿತ್ರರು ಯಾರೆಂದು ತಿಳಿಯದೆ ದಿಙ್ಮೂಢರಾದರು. ಈ ಸ್ಥಿತಿಯಲ್ಲಿ ಏನು ಮಾಡಬೇಕೆಂದು ತಿಳಿಯದೆ ಸೈನ್ಯದಲ್ಲಿ ಶಿಸ್ತು ಸಡಲಿ, ಸೈನಿಕರು ದಿಕ್ಕಾಪಾಲಾಗಿ ಓಡತೊಡಗಿದರು. ಅವರ ಅಸಹಾಯಕತೆಯನ್ನೂ ಅವ್ಯವಸ್ಥೆಯನ್ನೂ ಮನಗಂಡು, ಪಲ್ಲವರು ದೈತ್ಯಾವೇಶದಲ್ಲಿ ಅವರ ಮೇಲೆ ಬಿದ್ದು, ಸೋಲಿನಲ್ಲಿ ಪರ್ಯವಸಾನವಾಗಬೇಕಾಗಿದ್ದ ಕಾಳಗವನ್ನು ವಿಜಯದಲ್ಲಿದ್ದ ಪರ್ಯವಸಾನಗೊಳಿಸಿದರು.

ಹೀಗೆ ವಿಷ್ಣುವರ್ಧನನು ಮಾಡಿದ ದ್ರೋಹದಿಂದ ಪಲ್ಲವರಿಗೆ ಜಯಮಾಲಿಕೆ ಬಿತ್ತು. ಶತ್ರುಗಳ ಕೈಯಿಂದ ಸಂಪೂರ್ಣ ನಾಶವಾಗುವುದನ್ನು ತಪ್ಪಿಸಿಕೊಳ್ಳಲು, ಚಾಲುಕ್ಯ ದಂಡು ಹಿಮ್ಮೆಟ್ಟಬೇಕಾಗಿ ಬಂದಿತ್ತು. ಹೀಗೆ ಪೊಳ್ಳಲೂರಿನ ಕಾಳಗದಲ್ಲಿ ಪ್ರಥಮಬಾರಿಗೆ ಚಾಲುಕ್ಯರಿಗೆ ಸೋಲಾಗಿತ್ತು.

ಇದುವರೆಗೆ ಅಜೇಯ ಸೈನ್ಯವೆಂದು ಹೆಸರುಗಳಿಸಿದ್ದ ಚಾಲುಕ್ಯರಿಗೆ ಸೋಲಾಗಿತ್ತು. ಸಾಮ್ರಾಟ್ ಹರ್ಷವರ್ಧನನನ್ನು ಸೋಲಿಸಿದ ಕನ್ನಡಿಗರ ದಂಡು, ವಿಷ್ಣುವರ್ಧನನು ಮಾಡಿದ ದ್ರೋಹದಿಂದಾಗಿ, ಪಲ್ಲವರಿಗೆ ಸೋತು, ಹಿಮ್ಮೆಟ್ಟಬೇಕಾಯಿತು. ಪಲ್ಲವರ ಕೈಯಿಂದ ಚಾಲುಕ್ಯ ಸೈನ್ಯ ಸೋತು ಓಡಿದ ಮೇಲೆ ವಿಷ್ಣುವರ್ಧನನು ತನಗೆ ಇನ್ನು ಯಾರೂ ಇದಿರಿಲ್ಲವೆಂದು ಅರಿತು, ತಾನೇ ಸಾಮ್ರಾಟನೆಂದು ಘೋಷಿಸಿಕೊಂಡನು.

ರಾಜಧಾನಿಯಲ್ಲಿ ವಿಶ್ರಾಂತಿಯನ್ನು ಅನುಭವಿಸುತ್ತಿದ್ದ ಪುಲಿಕೇಶಿಗೆ ಈ

ಎರಡು ಸುದ್ದಿಗಳು ಸಿಡಿಲಿನಂತೆ ಬಂದೆರಗಿದವು. ಇತ್ತ ಪ್ರಥಮ ಬಾರಿಗೆ ಚಾಲುಕ್ಯ ಸೈನ್ಯಕ್ಕೆ ಉಂಟಾಗಿದ್ದ ಸೋಲು ಅವನನ್ನು ಖತಿಗೊಳಿಸಿದ್ದರೆ, ತನ್ನ ಒಡಹುಟ್ಟಿದ ಸೋದರನು ದ್ರೋಹ ಬಗೆದು, ತಾನೇ ಸಾಮ್ರಾಟನೆಂದು ಘೋಷಿಸಿಕೊಂಡ ಸಂಗತಿ ಅವನನ್ನು ಇನ್ನಷ್ಟು ಜರ್ಝರಿಸಿತ್ತು. ಇತ್ತ ಸೋಲಿನ ಅಪಮಾನ; ಅತ್ತ ವಿದ್ರೋಹದ ಆಘಾತ ಇವುಗಳ ನಡುವೆ ಸಿಕ್ಕ ಪುಲಿಕೇಶಿಯು ತತ್ತರಿಸಿದನು. ಹಿಂದೆಂದೂ ಅವನಿಗೆ ಇಂತಹ ಅಪಮಾನ ಒದಗಿರಲಿಲ್ಲ; ದಾರುಣ ಯಾತನೆ ಉಂಟಾಗಿರಲಿಲ್ಲ. ಈ ಎರಡು ಸುದ್ದಿಗಳು ಅವನ ಜೀವತಂತುವನ್ನು ಹಿಡಿದು ಅಲುಗಿಸಿದ್ದವು.

"ಪ್ರಭು, ಇಷ್ಟಕ್ಕೆಲ್ಲ ತಾವು ಚಿಂತಿಸಬಾರದು! ನಮ್ಮ ಸೈನ್ಯ ಪಲ್ಲವರಿಗೆ ಸೋತು ಹಿಮ್ಮೆಟ್ಟಬೇಕಾಯಿತು, ದಿಟ. ಇದು ನಮ್ಮ ಪರೀಕ್ಷೆಯಲ್ಲ. ಈ ದ್ರೋಹಿ ವಿಷ್ಣುವರ್ಧನಕುಮಾರನು ಮಾಡಿದ ಸಂಚಿನಿಂದ ನಮಗೆ ಸೋಲಾಯಿತು. ನಮ್ಮವರೇ ನಮಗೆ ದ್ರೋಹ ಬಗೆದರು. ಬೆನ್ನಿನಲ್ಲಿ ಇರಿದು ಶತ್ರುಪಕ್ಷ ಸೇರಿಕೊಂಡುದರಿಂದ ಹೀಗಾಯಿತು! ತಾವು ಇಷ್ಟಕ್ಕಾಗಿ ಹತಾಶರಾಗುವ ಕಾರಣವಿಲ್ಲ. ನನಗೆ ಅಪ್ಪಣೆಕೊಡಿ. ಆ ಮದೋನ್ಮತ್ತ ಮಹೇಂದ್ರವರ್ಮನನ್ನು ಸದೆಬಡಿದು, ಆ ದ್ರೋಹಿ ವಿಷ್ಣುವರ್ಧನನನ್ನು ಸೆರೆಹಿಡಿದು ತಂದು ತಮ್ಮ ಪಾದಗಳ ಮೇಲೆ ಉರುಳಿಸುತ್ತೇನೆ! ಈ ಮಾತಿಗೆ ನಾನು ತಪ್ಪಿದರೆ, ತಲೆ ದಂಡ ಕೊಡುತ್ತೇನೆ" ಎಂದು ರವಿಕೀರ್ತಿ ಹೇಳಿದ.

"ಕವಿಸಾರ್ವಭೌಮರೇ, ಬೇರೊಂದು ಪ್ರಸಂಗದಲ್ಲಾಗಿದ್ದರೆ, ತಮ್ಮ ಮಾತಿಗೆ ಕಿವಿಗೊಡುತ್ತಿದ್ದೆ. ಆದರೆ ಇಂದು ನನಗೆ ಆ ಧೈರ್ಯವಿಲ್ಲವಾಗಿದೆ. ಸಮಂತಭದ್ರರಂತಹ ಸಮರ್ಥ ದಂಡನಾಯಕರಿದ್ದು ನನಗೆ ಸೋಲುಂಟಾಗಿದೆ. ಇನ್ನು ಆ ಧೂರ್ತರನ್ನು ಸದೆಬಡಿಯುವುದು ಕವಿಕುಲತಿಲಕರಾದ ತಮ್ಮಿಂದ ಸಾಧ್ಯವೆ?.... ಇಲ್ಲ ಅಮಾತ್ಯರೇ, ಇಂದಿನ ಪರಾಭವಕ್ಕೆ ನಾನೇ ಕಾರಣ. ನನ್ನ ಆಲಸಿಕೆಯಿಂದ ಹೀಗಾಯಿತು. ನಾನು ಹೇಡಿಯಂತೆ ಹಾಸಿಗೆ ಹಿಡಿದು ಮಲಗಿದುದೇ ಇಷ್ಟೆಲ್ಲ ಸೋಲು ಅಪಮಾನಗಳಿಗೆ ಕಾರಣವಾಯಿತು. ಆಗಲಿ, ನಾನು ಕಾಹಿಲೆಯಿಂದ ಹಾಸಿಗೆ ಹಿಡಿದರೇನು? ಮೈಯಲ್ಲಿ ತೊಟ್ಟು ರಕ್ತವಿರುವವರೆಗೆ ಪುಲಿಕೇಶಿಯು ಸೋಲನ್ನು ಒಪ್ಪುವುದಿಲ್ಲ. ಶತ್ರುರಾಯರ ಪಾಲಿಗೆ ಇನ್ನೂ ಸಿಂಹಸ್ವಪ್ನ ಎಂಬುದನ್ನು ಈ ಬಾರಿ ಸಿದ್ಧಮಾಡಿ ತೋರಿಸುತ್ತೇನೆ!...." ಎಂದು

ಉದ್ಘೋಷಿಸಿದನು.

"ಪ್ರಭೂ....!"

"ಹೌದು ಅಮಾತ್ಯರೇ, ಪುಲಿಕೇಶಿ ಎಂದಿಗೂ ಸುಳ್ಳು ಹೇಳುವುದಿಲ್ಲ. ನಾನು ಹಾಸಿಗೆಯಲ್ಲಿ ಇದ್ದಮಾತ್ರಕ್ಕೆ ಹೇಡಿಯಾದೆನೆಂದು ಭಾವಿಸಿದಿರಾ ? ಇಂತಹ ಪರಾಭವ, ವಿದ್ರೋಹಗಳನ್ನು ಕಂಡೂ ಸುಮ್ಮನಿದ್ದರೆ ಮಾತ್ರ ಹೇಡಿತನ! ಇಲ್ಲ ಅಮಾತ್ಯರೇ, ನಾನು ಹೇಡಿಯಾಗಲಾರೆ. ಧೀರನಂತೆ ಬಾಳಿ ಈಗ ಹೇಡಿಯಾಗಿ ಹಾಸಿಗೆಯ ಮೇಲೆ ಉಳಿಯಲಾರೆ. ನಿಮಗೆ ಯಾವುದೇ ರೀತಿಯಲ್ಲಿ ನೆರವಾಗಬೇಕೆಂಬ ಇಚ್ಛೆ ಇದ್ದರೆ, ನಗರ ರಕ್ಷಣೆಗೆ ಇರುವ ನನ್ನ ಸೈನ್ಯಕ್ಕೆ ಕೂಡಲೇ ಪಲ್ಲವರ ಮೇಲೆ ದಾಳಿ ಇಡಲು ಸಿದ್ಧರಾಗಲು ತಿಳಿಸಿ."

"ಪ್ರಭು ! ಈ ರವಿಕೀರ್ತಿಯ ದೇಹ ಸಾಮ್ರಾಟರ ಉಪ್ಪುಂಡು ಬೆಳೆದಿದೆ. ನಾನು ಜೈನಧರ್ಮದಲ್ಲಿ ಹುಟ್ಟಿ, ಅಹಿಂಸೆಯ ವ್ರತವನ್ನು ಪಾಲಿಸುತ್ತಿರಬಹುದು. ವೃತ್ತಿಯಿಂದ ರಾಜಕವಿಯಾಗಿರಬಹುದು ! ಅಂದ ಮಾತ್ರಕ್ಕೆ ನಾನು ರಣಹೇಡಿಯಲ್ಲ, ಕನಸುಗಾರನಲ್ಲವೆಂಬುದನ್ನು ಲೋಕಕ್ಕೆ ತೋರಿಸುವ ಸಲುವಾದರೂ ತಾವು ನನ್ನ ಮಾತನ್ನು ನಡೆಸಿಕೊಡಬೇಕು. ಈ ಬಾರಿ ತಾವು ಮಹಾದಂಡನಾಯಕ ಪದವಿಯನ್ನು ನನಗೆ ಅನುಗ್ರಹಿಸಬೇಕು."

"ಕವಿಶ್ರೇಷ್ಠರೇ, ನಿಮ್ಮ ಸಾಮ್ರಾಜ್ಯನಿಷ್ಠೆ ನನ್ನನ್ನು ಪುಳಕಿತನನ್ನಾಗಿ ಮಾಡಿದೆ. ಆದರೂ ಲೇಖಣಿ ಹಿಡಿಯುವ ಕೈಯಲ್ಲಿ ಖಡ್ಗವೇ ? ಕಾವ್ಯಧಾರೆ ಹರಿಸುವ ಕೈಗೆ ಕರವಾಳವೇ? ಸಲ್ಲದು ಅಮಾತ್ಯರೇ, ಯುದ್ಧರಂಗಕ್ಕೆ ನಿಮ್ಮನ್ನು ಕಳುಹಿಸಿ, ನಿಮ್ಮನ್ನು ಸಮರಮಾರಿಗೆ ಆಹುತಿಕೊಡಲಾರೆ. ನೀವು ಕವಿರಾಜ ಚಕೋರವಾಗಿ ಅರಮನೆಯಲ್ಲಿ ಇರಬೇಕು."

"ಪ್ರಭು ! ನನ್ನನ್ನು ಅಪಮಾನಿಸಬೇಕೆಂದಿದ್ದರೆ ಹೀಗೆ ಹೇಳಿ !"

ಎಂದು ಕೆರಳಿ ಹೇಳಿದ ರವಿಕೀರ್ತಿ.

"ಏಕೆ ಅಮಾತ್ಯರೇ ?"

"ಇನ್ನೇನು ಪ್ರಭು ! ನಾನು ತಮ್ಮೊಡನೆ ಇಷ್ಟು ದಿನ ನೆರಳಿನಂತೆ ಹಿಂಬಾಲಿಸುತ್ತಿದ್ದರೂ, ನನ್ನನ್ನು ತಾವು ಸರಿಯಾಗಿ ಅರ್ಥಮಾಡಿಕೊಂಡಿಲ್ಲವಲ್ಲ ಎಂದು ವ್ಯಥೆಯಾಗುತ್ತಿದೆ; ರವಿಕೀರ್ತಿಯು ಜೈನಧರ್ಮವನ್ನು ಸ್ವೀಕರಿಸಿದ್ದರೂ ದುಷ್ಟಶಿಕ್ಷಣ, ಶಿಷ್ಟರಕ್ಷಣ ಅವನ ಜೀವಿತದ ಗುರಿ. ಅವನು ರಣಹೇಡಿಯಲ್ಲ—

ವಿಲಾಸಿನಿಯರ ಅಂಗಲಾವಣ್ಯವನ್ನೂ, ಕುಸುಮ ಸೌಂದರ್ಯವನ್ನೂ ಮಾತ್ರ ವರ್ಣಿಸುವ ಭಾವುಕ ಕವಿಯಲ್ಲ. ಅವನು ವೀರಶ್ರೀಯನ್ನು ಒಲಿದ ಕವಿ. ಕವಿಯಾಗಿರುವಂತೆ ಕಲಿಯೂ ಹೌದು. ಈ ಮಾತನ್ನು ತಮಗೆ ತಿಳಿಸಿಕೊಡಬೇಕಾದುದಕ್ಕೆ ವಿಷಾದಿಸುತ್ತೇನೆ."

"ನಿಮ್ಮ ವೀರೋದ್ಗಾರಗಳನ್ನು ಕೇಳಿ ಮನಸ್ಸಿಗೆ ತುಂಬಾ ಹರ್ಷವಾಗುತ್ತಿದೆ ಅಮಾತ್ಯರೆ. ನಿಮ್ಮ ಮಾತು ನನಗೆ ಅಮೃತ ಸದೃಶವಾಗಿದೆ. ನಿಮ್ಮಂತಹ ಕವಿಕುಲಶ್ರೇಷ್ಠರನ್ನು–ರಣಕವಿಗಳನ್ನು–ಹಡೆದ ಕನ್ನಡಾಂಬೆ ಬಂಜೆಯಲ್ಲ. ನಿಮ್ಮ ಮಾತು ಕೇಳಿ ನನಗೆ ನಷ್ಟವಾಗುತ್ತಿದ್ದ ಆತ್ಮವಿಶ್ವಾಸ ಮತ್ತೆ ಬಲಿಯುತ್ತಿದೆ. ನಿಮ್ಮ ನಿಷ್ಠೆಯನ್ನು ಕಂಡು,ನಿಮ್ಮ ಮನಸ್ಸನ್ನು ನೋಯಿಸುವುದು ನನಗೆ ಇಷ್ಟವಿಲ್ಲ. ನಿಮ್ಮ ಇಚ್ಛೆಯಂತೆ ಈ ಬಾರಿ ರಣವೀಳ್ಯವನ್ನು ನಿಮಗೆ ಕೊಡುತ್ತಿದ್ದೇನೆ. ನೀವೂ, ಅಮಾತ್ಯ ಸಮಂತಭದ್ರರೂ ಕೂಡಿ ಆ ದುರುಳ ಪಲ್ಲವ ದೊರೆಯ ಅಹಂಕಾರವನ್ನು ಮುರಿದು ಕುಲದ್ರೋಹಿಯಾದ ವಿಷ್ಣುವರ್ಧನನನ್ನು ಸೆರೆಹಿಡಿದು ತರುವಿರೆಂದು ನಂಬಿದ್ದೇನೆ!" ಎಂದು ಹೇಳಿ ರವಿಕೀರ್ತಿಗೆ ಸಮರ ವೀಳ್ಯವನ್ನು ಇತ್ತು ಸನ್ಮಾನಿಸಿದನು.

ಅಂದೇ ರವಿಕೀರ್ತಿಯು ರಾಜಧಾನಿಯಲ್ಲಿ ಇದ್ದ ಅಳಿದುಳಿದ ಚಾಲುಕ್ಯ ಸೈನ್ಯವನ್ನು ಕೂಡಿಸಿಕೊಂಡು, ಪೊಳ್ಳಲೂರಿನ ಮಾರ್ಗಹಿಡಿದನು. ನಡುದಾರಿಯಲ್ಲೇ ಪಲ್ಲವರಿಂದ ಸೋತು ಹಿಂದಿರುಗಿ ಬರುತ್ತಿದ್ದ ಚಾಲುಕ್ಯರ ಸೈನ್ಯ ಸಮಂತಭದ್ರನ ನೇತೃತ್ವದಲ್ಲಿ ರವಿಕೀರ್ತಿಯನ್ನು ಸೇರಿಕೊಂಡಿತು. ಸಮಂತಭದ್ರನು ತನಗೆ ಉಂಟಾದ ಸೋಲಿನಿಂದ ಕುಗ್ಗಿದನು. ಅವನು ರವಿಕೀರ್ತಿಯನ್ನು ನೋಡುತ್ತಲೇ,

"ಅಮಾತ್ಯರೇ, ನನಗೆ ಸೋಲಾದುದಕ್ಕೆ ನಾನು ವ್ಯಥೆಪಡುತ್ತಿಲ್ಲ. ನಮ್ಮವರೇ ನಮಗೆ ಬಗೆದ ದ್ರೋಹಕ್ಕಾಗಿ ವ್ಯಥೆಯುಂಟಾಗುತ್ತಿದೆ. ಸಾಮ್ರಾಟರ ಸೋದರರಾಗಿದ್ದೂ ಆ ವಿಷ್ಣುವರ್ಧನಕುಮಾರರು ನಮಗೆ ಈ ರೀತಿ ದ್ರೋಹ ಬಗೆಯುವರೆಂದು ನಾನು ಕನಸುಮನಸಿನಲ್ಲಿ ಎಣಿಸಿರಲಿಲ್ಲ. ಅವರು ಮಾಡಿದ ದ್ರೋಹ ಚಿಂತನೆಯಿಂದಾಗಿ ನಮಗೆ ಸೋಲಾಯಿತು. ಸೋತ ಈ ಮುಖವನ್ನು ಹೊತ್ತು ಸಾಮ್ರಾಟರಿಗೆ ಈ ಅಪಮಾನದ ಕಥೆಯನ್ನು ಹೇಗೆ ಹೇಳಲಿ?" ಎಂದು ಗದ್ಗದ ಕಂಠದಲ್ಲಿ ಹೇಳಿದನು.

"ಸಮಂತಭದ್ರರೇ, ನೀವು ಇಷ್ಟು ಅಲ್ಪ ಸಂಗತಿಗಾಗಿ ಕೊರಗುವುದೆ?

ನಿಮ್ಮ ದೇಹದ ಒಂದೊಂದು ಸುಕ್ಕೂ ಸಮರಾಂಗಣದಲ್ಲಿ ನಿಮ್ಮ ಸಾಹಸ ಕೃತ್ಯ ಗಳ ಹೆಗ್ಗುರುತುಗಳಾಗಿವೆ. ನಿಮ್ಮ ದೇಹದಲ್ಲಿ ಇರುವ ಗಾಯದ ಕಲೆಗಳು ಒಂದೊಂದೂ ಅರಿರಾಯರಮೇಲೆ ನೀವು ಗಳಿಸಿದ ದಿಗ್ವಿಜಯದ ಪತಾಕೆಗಳಾಗಿವೆ. ನಿಮ್ಮ ಆಯುಷ್ಯದ ಬಹುಪಾಲು ರಣರಂಗದಲ್ಲೇ ಕಳೆದಿದೆ ಎಂದರೆ ಅತಿಶಯೋಕ್ತಿಯಲ್ಲ. ಇಂತವರು ಪಲ್ಲವರ ಮೇಲೆ ಉಂಟಾದ ಯಃಕಶ್ಚಿತ ಸೋಲಿನಿಂದ ಅಧೈರ್ಯಪಡುವುದೆ ? ಈಗ ನಮಗೆ ಏನಾಯಿತೆಂದು ನೀವು ಇಷ್ಟು ಅಧೀರ ರಾಗಬೇಕು ?"

"ರವಿಕೀರ್ತಿ, ನಿಮಗೆ ಇನ್ನೂ ಪಲ್ಲವರ ಬಗ್ಗೆ ತಿಳಿದಂತೆ ಇಲ್ಲ. ಅವರಲ್ಲೂ ಪಲ್ಲವ ದೊರೆ ಮಹೇಂದ್ರವರ್ಮನ ಪುತ್ರ ನರಸಿಂಹವರ್ಮನ ವಿಷಯ ನಿಮಗೆ ತಿಳಿಯದೆಂದು ತೋರುತ್ತದೆ. ಅವನು ರಣಕೇಳಿಗೆ ನಿಂತರೆ ಶತ್ರುಗಳ ಪಾಲಿಗೆ ಕಾಲಭೈರವನಂತೆ ತೋರುತ್ತಾನೆ. ಪೊಳ್ಳಲೂರಿನ ಯುದ್ಧದಲ್ಲಿ ನಮಗೆ ಸೋಲಾಗಲು ಅವನ ಶೌರ್ಯ ಸಾಹಸಗಳೇ ಕಾರಣವೆಂದರೂ ಸಲ್ಲುತ್ತದೆ. ಅದಕ್ಕೆ ತಕ್ಕಂತೆ ಆ ಧೂರ್ತ ವಿಷ್ಣುವರ್ಧನ ನಮಗೆ ದ್ರೋಹ ಬಗೆದು ಶತ್ರುಗಳ ಕಡೆ ಸೇರಿ ನಮಗೆ ಮುಳುವಾದನು. ಇದನ್ನೆಲ್ಲ ನೆನೆದರೆ, ಯಾವುದೋ ಬರಲಿರುವ ಅನಿಷ್ಟದ ಮುನ್ಸೂಚನೆಯಾಗಿ ತೋರುತ್ತದೆ" ಎಂದು ನಿರಾಶೆಯ ಗರ್ಭದಲ್ಲಿ ಮುಳುಗಿದವನಂತೆ ಹೇಳಿದ ಸಮಂತಭದ್ರ.

"ಸಮಂತಭದ್ರರೇ, ಆ ಧೂರ್ತ ವಿಷ್ಣುವರ್ಧನನ ಬಗ್ಗೆ ಇಂತಹ ವರ್ತನೆ ನೋಡುತ್ತಿರುವುದು ಇದು ಮೊದಲಬಾರಿಯೇ ? ಅಂದು ಅವನು ಆ ನೀಚ ಮಂಗಳೇಶರ ಮಾತು ಕೇಳಿಕೊಂಡು, ಸಾಮ್ರಾಟರಮೇಲೆ ಕತ್ತಿ ಕಟ್ಟಿದ. ಇಂದು ಶತ್ರುಗಳ ಸವಿಮಾತುಗಳಿಗೆ ಮರುಳಾಗಿ ನಮ್ಮ ಬೆನ್ನಿನಲ್ಲಿ ಇರಿದ. ಇಂತಹ ದ್ರೋಹಿಯನ್ನು ಈ ಬಾರಿ ಸುಮ್ಮನೆ ಬಿಡಬಾರದು. ಎಲ್ಲೇ ಇರಲಿ, ಅವನನ್ನು ಸೆರೆಹಿಡಿದು ಸಾಮ್ರಾಟರ ಪಾದಗಳ ಮೇಲೆ ಉರುಳಿಸುವುದಾಗಿ ಪ್ರತಿಜ್ಞೆ ಮಾಡಿದ್ದೇನೆ. ಈ ಬಾರಿ ಅವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಲೇಬೇಕು !" ಕೆರಳಿ ಹೇಳಿದ ರವಿಕೀರ್ತಿ.

"ನನಗೆ ಮೊದಲಿನಿಂದಲೂ ವಿಷ್ಣುವರ್ಧನನೆಂತಹ ಚಂಚಲ ಸ್ವಭಾವ ದವನೆಂದು ತಿಳಿದಿದೆ. ಅವನನ್ನು ಯಾರು ಬೇಕಾದರೂ ಕೈಗೊಂಬೆಮಾಡಿಕೊಳ್ಳ ಬಹುದು. ಅವನ ದುಷ್ಟಬಯಕೆಗಳೇನೇ ಇರಲಿ, ತನ್ನ ಸರ್ವಾಪರಾಧಗಳನ್ನು

ಪನ್ನಿಸಿ, ತನಗೆ ಯುವರಾಜ ಪದವಿಯನ್ನಿತ್ತ ದೇವತಾಸ್ವರೂಪರಾದ ಸಾಮ್ರಾ ಟರ ಉಪ್ಪು ತಿಂದು ಅವರಿಗೆ ದ್ರೋಹವೆಸಗಿ ಶತ್ರುಪಕ್ಷ ಸೇರುವಷ್ಟು ಕೀಳಾಗುವ ನೆಂದು ನಾನು ಕನಸುಮನಸಿನಲ್ಲಿ ತಿಳಿದಿರಲಿಲ್ಲ. ಸಾಮ್ರಾಟರ ವಿರುದ್ಧ ದಂಗೆ ಏಳುವಷ್ಟು ಧೈರ್ಯ ಆ ರಣಹೇಡಿಗೆ ಇದೆಯೆ ? ಅಮಾತ್ಯರೇ ಖಂಡಿತ ಯಾರೋ, ದ್ರೋಹಿಗಳು ಅವನನ್ನು ನಮ್ಮ ವಿರುದ್ಧ ಎತ್ತಿಕಟ್ಟಿದ್ದಾರೆ. ನೋಡಿದರೆ ಇದೆಲ್ಲ ಆ ರಾಹಪ್ಪಯ್ಯ, ನರಸಿಂಹವರ್ಮರ ಪಿತೂರಿಯಾಗಿ ಕಾಣುತ್ತಿದೆ. ಇಲ್ಲದಿದ್ದರೆ ವಿಷ್ಣುವರ್ಧನನಿಗೆ ಇಷ್ಟು ಧೈರ್ಯ ಬರುತ್ತಿರಲಿಲ್ಲ. ಈಗ ಅವನು ಅವರ ಆಶ್ರಯದಲ್ಲಿ ಇರುವನೆಂದು ಸುದ್ದಿ ಬಂದಿದೆ. ಅವನನ್ನು ಸೆರೆಹಿಡಿಯಬೇಕಾದರೆ, ನಾವು ಪಲ್ಲವರನ್ನು ಸೋಲಿಸಬೇಕು. ಅಂದರೆ ಸಿಂಹವನ್ನು ಅದರ ಗುಹೆಯಲ್ಲೇ ಸೆರೆ ಹಿಡಿಯಬೇಕು. ಇದು ಸುಲಭದ ಕಾರ್ಯವೆ ?"

"ಇದು ಸುಲಭವೆಂದು ನಾನು ತಿಳಿದಿಲ್ಲ ದಂಡನಾಯಕರೇ, ಆದರೆ ನಮ್ಮಿಂದ ಅಸಾಧ್ಯವಾದ ಕಾರ್ಯವೆಂದೂ ತಿಳಿದಿಲ್ಲ.ನೀವು ಮನಸ್ಸು ಮಾಡಿದರೆ ಕ್ಷಣಾರ್ಧ ದಲ್ಲಿ ಈ ಕಾರ್ಯವನ್ನು ಸಾಧಿಸಬಹುದು. ಆದರೆ ನೀವು ಏಕೋ ಈ ವಿಷಯ ದಲ್ಲಿ ಸಂದೇಹಗ್ರಸ್ತರಾಗಿದ್ದೀರಿ. ಧೈರ್ಯ ತಂದುಕೊಳ್ಳಬೇಕು ಪ್ರಧಾನಿಗಳೇ. ಎಲ್ಲರಿಗೂ ಧೈರ್ಯ ಹೇಳುವ ನೀವೇ ಹೀಗೆ ಧೈರ್ಯಗೆಟ್ಟು ಕುಳಿತರೆ ಉಳಿದವ ರಿಗೆ ಸಮಾಧಾನ ಹೇಳುವವರು ಯಾರು ?"

"ನನ್ನ ಚಿಂತನೆಗೆ ಕಾರಣ ಬೇರೊಂದಿಗೆ ರವಿಕೀರ್ತಿಗಳೇ. ನೀವು ನನ್ನ ಮಾತು ಕೇಳಿ ಏನು ತಿಳಿದರೂ ಸರಿ, ಈ ಬಾರಿ ಪಲ್ಲವರ ಮೇಲೆ ಉಂಟಾದ ಸೋಲನ್ನು ನೆನೆದರೆ ಈ ಮಾತು ದಿಟವಿರಬೇಕೆನಿಸುತ್ತದೆ. ಏಕೆಂದರೆ ಶತ್ರು ಗಳನ್ನು ಹಿಂದೊತ್ತಲು ನಾನು ಮಾಡಿದ ಸಾಹಸವನ್ನೆಲ್ಲಾ ವ್ಯರ್ಥವಾಯಿತು. ನನ್ನ ಕಣ್ಣೆದುರಿಗೇ ನನ್ನ ಸೈನಿಕರು, ಕೆಚ್ಚೆದೆಯ ಭಟರು ಶಸ್ತ್ರಗಳನ್ನುತೊರೆದು ರಣರಂಗದಿಂದ ಓಡಿಹೋಗುವುದನ್ನು ನೋಡಿದರೆ ಹಿಂದೆ ಯಾವ ಯುದ್ಧದಲ್ಲೂ ಹೀಗೆ ಆದುದಿಲ್ಲ. ಅಂತಹ ಉತ್ತರಾಪಥೇಶ್ವರನ ಅಜೇಯ ಸೈನ್ಯಕ್ಕೂ ಕನ್ನಡ ಕಟ್ಟಾಳುಗಳು ಹೆದರಿ ಓಡಲಿಲ್ಲ. ಇದರಲ್ಲಿ ಯಾವುದೋ ವಿಶೇಷಾಂಶವಿರುವಂತೆ ಕಾಣುತ್ತದೆ."

"ಇದರಲ್ಲಿ ಯಾವ ವಿಶೇಷಾಂಶವಿದೆ ? ನಮ್ಮವರೇ ನಮಗೆ ಮೋಸ ಮಾಡಿದುದರಿಂದ ಹೀಗೆ ಆಯಿತು. ದಿಕ್ಕುಗೆಟ್ಟ ಸೈನಿಕರು ಹೀಗೆ ಮಾಡಿದುದರಲ್ಲಿ

ಅಚ್ಚರಿ ಏನು ?"

"ಹಾಗಲ್ಲ ಅಮಾತ್ಯರೇ, ನಮಗೆ ನೆರವಾಗಲು ಬಂದ ವಿಷ್ಣುವರ್ಧನನನ್ನು ಪಲ್ಲವರ ಕಡೆ ಸೇರಲು ರಾಹಪ್ಪಯ್ಯ, ನರಸಿಂಹವರ್ಮನಿಗಿಂತಲೂ ಪ್ರಭಾವ ಬೀರಿ, ಅವನನ್ನು ತಮ್ಮ ಕಡೆ ಒಲಿಸಿಕೊಂಡವನು ಒಬ್ಬ ಸಾಮಾನ್ಯ ದಂಡನಾಯಕ ನಂತೆ. ಅವನು ಮಹಾ ಶಿವಭಕ್ತನಂತೆ, ಅವನಿಗೆ ಸಾಕ್ಷಾತ್ ಶಿವನು ಒಲಿದಿರುವ ನಂತೆ, ಕೈಲಾಸದ ಭೂತ ಗಣಗಳೆಲ್ಲ ಅವನ ಆಜ್ಞೆಯಂತೆ ನಡೆಯುವುದಂತೆ. ಅವನು ತನ್ನ ಮಹಿಮೆಯಿಂದ ನಮ್ಮ ಸೈನಿಕರನ್ನು ನಿರ್ವೀರ್ಯರನ್ನಾಗಿ ಮಾಡಿದನಂತೆ. ಅವನ ಪವಾಡದಿಂದಲೇ ನಮಗೆ ಸೋಲಾಯಿತೆಂದು ಸೈನಿಕರು ಆಡಿಕೊಳ್ಳುತ್ತಿದ್ದಾರೆ! ಈಗ ಅವನನ್ನು ಮತ್ತೆ ಎದುರಿಸುವುದೆಂದರೆ ನಮ್ಮ ಸೈನಿಕರಿಗೆ ಯಾವುದೋ ಅಗೋಚರ ಭೀತಿ ಕಾಡುತ್ತಿದೆ! ಇದೇ ನನ್ನನ್ನು ಕಾಡುತ್ತಿರುವ ಚಿಂತೆ !"

"ಇಷ್ಟೆಲ್ಲಾ ಪವಾಡ ಮಾಡಿದ ಆ ಶಿವಭಕ್ತನಾರು ?"

"ಯಾರೋ ಸಿರಿಯಾಳಶೆಟ್ಟಿಯಂತೆ !"

"ಸಿರಿಯಾಳಶೆಟ್ಟಿ! ಈ ಹೆಸರನ್ನು ಎಲ್ಲೋ ಕೇಳಿದ್ದ ನೆನಪು !"

"ಅವನು ಮಹಾ ಶಿವಭಕ್ತನೆಂದು ಜನರು ಹೇಳುತ್ತಾರೆ. ಈ ಪ್ರಾಂತ್ಯದ ಜನತೆಗೆ ಅವನು ಶಿವನ ಅವತಾರವೇ ಎಂಬ ಭಾವನೆ ತಲೆದೋರಿದೆ. ಅವನು ಇದುವರೆಗೆ ಅನೇಕ ಪವಾಡಗಳನ್ನು ಮೆರೆದಿದ್ದಾನಂತೆ. ಅದೆಷ್ಟು ನಿಜವೋ ಸುಳ್ಳೋ ನನಗೆ ತಿಳಿಯದು. ಪೊಳ್ಳಲೂರಿನ ಸೋಲನ್ನು ನೆನೆದರೆ, ಇದೊಂದು ಪವಾಡವೇ ಎಂದು ನನಗೆ ಅನಿಸುತ್ತಿದೆ! ಈ ಸೋಲು ಸಿರಿಯಾಳಶೆಟ್ಟಿಯ ಪವಾಡದಿಂದ ಉಂಟಾಗಿದ್ದರೆ, ನಮ್ಮ ಸೈನಿಕರನ್ನು ಪಲ್ಲವರ ಮೇಲೆ ಧೈರ್ಯದಿಂದ ಯುದ್ಧ ಮಾಡುವಂತೆ ಮಾಡುವುದು ಕೊಂಚ ಕಷ್ಟ! ಏಕೆಂದರೆ ಸೈನ್ಯದಲ್ಲಿ ಇರುವ ಬಹುಸಂಖ್ಯಾತ ಸೈನಿಕರು ಧರ್ಮಶ್ರದ್ಧೆಯುಳ್ಳ ಹಿಂದುಗಳು! ಅವರು ಪವಾಡ ಪುರುಷನ ಮೇಲೆ ಕೈಮಾಡುವ ಬದಲು, ಅವನಿಂದ ಹತರಾಗುವುದು ಪುಣ್ಯವೆಂದು ತಿಳಿದಿದ್ದಾರೆ!"

"ಆ ಸಿರಿಯಾಳಶೆಟ್ಟಿ ಪವಾಡ ಪುರುಷನೆನ್ನಲು ಮಾಡಿದ ಪವಾಡವಾದರೂ ಏನು ? ತಿಳಿಯಬಹುದೆ ?" ತಿರಸ್ಕಾರದಿಂದ ಪ್ರಶ್ನಿಸಿದ ರವಿಕೀರ್ತಿ. ಅವನಿಗೆ ಇದೆಲ್ಲ ಅರ್ಥವಿಲ್ಲದ ಮಾತುಕತೆಯಾಗಿ ತೋರಿತ್ತು.

"ಅವನು ಮಾಡಿರುವ ಪವಾಡಗಳು ಒಂದೆರಡಲ್ಲ–ಹಲವಾರು ಪವಾಡ ಗಳನ್ನು ಮಾಡಿರುವುದಾಗಿ ಜನರು ಹೇಳುವುದನ್ನು ಕೇಳಿದ್ದೇನೆ. ಎಲ್ಲಕ್ಕಿಂತಲೂ ದೊಡ್ಡ ಪವಾಡವೆಂದರೆ ಅವನು ತನ್ನ ಮಗನನ್ನೇ ಸಂಹರಿಸಿ, ಅಡಿಗೆಮಾಡಿ, ಶಿವಭಕ್ತರಿಗೆ ಬಡಿಸಿದನಂತೆ. ಜಂಗಮ ವೇಷದಿಂದ ಬಂದಿದ್ದ ಶಿವನೇ ಅವನ ಭಕ್ತಿಗೆ ಮೆಚ್ಚಿ, ಅವನ ಮಗನನ್ನು ಬದುಕಿಸಿಕೊಟ್ಟು ಅವನ ಕಿಂಕರನಾಗಿ ನಿಂತಿರುವನಂತೆ !"

"ಇದೆಲ್ಲ ಅಂತೆ, ಕಂತೆಗಳ ಕತೆ. ಇದನ್ನೆಲ್ಲಾ ಸಾಮಾನ್ಯ ಜನ, ಅಜ್ಞರು ನಂಬುವಂತೆ ನೀವೂ ನಂಬುತ್ತೀರಾ ?"

"ನಾನೂ ಮೊದಲು ನಂಬಲಿಲ್ಲ ರವಿಕೀರ್ತಿಗಳೇ. ಆದರೆ ಅನೇಕರ ಬಾಯಿಂದ ಆ ಸಿರಿಯಾಳಶೆಟ್ಟಿಯ ಅದ್ಭುತ ಪವಾಡಗಳ ಕತೆಯನ್ನು ಕೇಳಿದ ಮೇಲೆ, ರಣರಂಗದಲ್ಲಾದ ಸೋಲನ್ನು ಕಣ್ಣಾರೆ ಕಂಡಮೇಲೆ ಈ ಸಂಗತಿ ನಿಜವೇನೋ ಎನಿಸುತ್ತದೆ. ಏಕೆಂದರೆ ಯಾವ ಹುತ್ತದಲ್ಲಿ ಯಾವ ಹಾವು ಅಡಗಿದೆಯೋ ಯಾರು ಬಲ್ಲರು ! ಮಹಾತ್ಮರ ಬಗ್ಗೆ ಹೀಗೆಂದು ಹೇಳಲು ಸಾಧ್ಯವೆ! ನಮಗೆ ತಿಳಿಯದ ಮಾತ್ರಕ್ಕೆ ಮಹಾಪುರುಷರ ಯೋಗ್ಯತೆ ಕಡಿಮೆಯಾದೀತೆ ?"

"ಸಮಂತಭದ್ರರೇ, ನಾನು ಅನ್ಯಮತ ಖಂಡನೆಮಾಡುವೆನೆಂದಾಗಲೀ, ಮಹಾಪುರುಷನನ್ನು ಹೀಗಳೆಯುತ್ತಿರುವೆನೆಂದಾಗಲೀ ನೀವು ತಿಳಿಯಬಾರದು. ನನಗೆ ನೀವು ಹೇಳುವ ಕತೆಯನ್ನು ಕೇಳಿ ನಗಬೇಕೋ ಅಳಬೇಕೋ ತಿಳಿಯ ದಾಗಿದೆ. ಒಬ್ಬ ಸಿರಿಯಾಳಶೆಟ್ಟಿಯಿಂದ ನಮಗೆ ಇಷ್ಟೆಲ್ಲ ಪರಾಭವವಾಗಿದ್ದರೆ, ಪಲ್ಲವರೇಕೆ ಇದುವರೆಗೆ ಕೈಬಿಟ್ಟು ಹೋಗಿದ್ದ ಪಿಷ್ಟಪುರವನ್ನು ಹಿಡಿಯದೆ ಸುಮ್ಮನೆ ಕುಳಿತುಕೊಳ್ಳುತ್ತಿದ್ದರು ! ಹಿಂದೆ ತಮ್ಮದಾಗಿದ್ದ ವಾತಾಪಿಯನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಪಡದೆ ಸುಮ್ಮನಿರುತ್ತಿದ್ದರು ? ನೀವು ಹೇಳುವ ಪವಾಡಪುರುಷನಿಂದ, ಒಂದು ತೊಟ್ಟು ರಕ್ತ ಹರಿಸದೆ ಇದನ್ನು ಸಾಧಿಸಬಹು ದಿತ್ತಲ್ಲ ! ಹಾಗೇಕೆ ಮಾಡಲಿಲ್ಲ ? ಇದೆಲ್ಲ ಕಟ್ಟು ಕಥೆ, ಜನಸಾಮಾನ್ಯರು ಆಡಿ ಕೊಳ್ಳುವ ಅರ್ಥವಿಲ್ಲದ ದಂತಕತೆ ಅಷ್ಟೇ. ಒಂದಿದ್ದರೆ ನಾಲ್ಕು ಕಲ್ಪಿಸಿ ಹೇಳುವ ಜನಸಾಮಾನ್ಯರ ಕಥೆಯನ್ನು ನಂಬಿ ನಾವು ಸುಮ್ಮನೆ ಕುಳಿತುಕೊಳ್ಳುವುದೆ ? ಈಗ ನಾವು ಬಂದಿರುವ ಪರಿಸ್ಥಿತಿಯನ್ನು ಧೈರ್ಯವಾಗಿ ಎದುರಿಸಿ ಶತ್ರುಗಳ

ಆಶ್ಚರ್ಯ ಏನು ?"

"ಹಾಗಲ್ಲ ಅಮಾತ್ಯರೇ, ನಮಗೆ ನೆರವಾಗಲು ಬಂದ ವಿಷ್ಣುವರ್ಧನನು ಪಲ್ಲವರ ಕಡೆ ಸೇರಲು ರಾಹಪ್ಪಯ್ಯ, ನರಸಿಂಹವರ್ಮನಿಗಿಂತಲೂ ಪ್ರಭಾವ ಬೀರಿ, ಅವನನ್ನು ತಮ್ಮ ಕಡೆ ಒಲಿಸಿಕೊಂಡವನು ಒಬ್ಬ ಸಾಮಾನ್ಯ ದಂಡನಾಯಕನಂತೆ. ಅವನು ಮಹಾ ಶಿವಭಕ್ತನಂತೆ, ಅವನಿಗೆ ಸಾಕ್ಷಾತ್ ಶಿವನು ಒಲಿದಿರುವನಂತೆ, ಕೈಲಾಸದ ಭೂತ ಗಣಗಳೆಲ್ಲ ಅವನ ಆಜ್ಞೆಯಂತೆ ನಡೆಯುವುದಂತೆ. ಅವನು ತನ್ನ ಮಹಿಮೆಯಿಂದ ನಮ್ಮ ಸೈನಿಕರನ್ನು ನಿರ್ವೀರ್ಯರನ್ನಾಗಿ ಮಾಡಿದನಂತೆ. ಅವನ ಪವಾಡದಿಂದಲೇ ನಮಗೆ ಸೋಲಾಯಿತೆಂದು ಸೈನಿಕರು ಆಡಿಕೊಳ್ಳುತ್ತಿದ್ದಾರೆ! ಈಗ ಅವನನ್ನು ಮತ್ತೆ ಎದುರಿಸುವುದೆಂದರೆ ನಮ್ಮ ಸೈನಿಕರಿಗೆ ಯಾವುದೋ ಅಗೋಚರ ಭೀತಿ ಕಾಡುತ್ತಿದೆ! ಇದೇ ನನ್ನನ್ನು ಕಾಡುತ್ತಿರುವ ಚಿಂತೆ !"

"ಇಷ್ಟೆಲ್ಲಾ ಪವಾಡ ಮಾಡಿದ ಆ ಶಿವಭಕ್ತನಾರು ?"

"ಯಾರೋ ಸಿರಿಯಾಳಶೆಟ್ಟಿಯಂತೆ !"

"ಸಿರಿಯಾಳಶೆಟ್ಟಿ! ಈ ಹೆಸರನ್ನು ಎಲ್ಲೊ ಕೇಳಿದ್ದ ನೆನಪು !"

"ಅವನು ಮಹಾ ಶಿವಭಕ್ತನೆಂದು ಜನರು ಹೇಳುತ್ತಾರೆ. ಈ ಪ್ರಾಂತ್ಯದ ಜನತೆಗೆ ಅವನು ಶಿವನ ಅವತಾರವೇ ಎಂಬ ಭಾವನೆ ತಲೆದೋರಿದೆ. ಅವನು ಇದುವರೆಗೆ ಅನೇಕ ಪವಾಡಗಳನ್ನು ಮೆರೆದಿದ್ದಾನಂತೆ. ಅದೆಷ್ಟು ನಿಜವೋ ಸುಳ್ಳೊ ನನಗೆ ತಿಳಿಯದು. ಪೊಳ್ಳಲೂರಿನ ಸೋಲನ್ನು ನೆನೆದರೆ, ಇದೊಂದು ಪವಾಡವೇ ಎಂದು ನನಗೆ ಅನಿಸುತ್ತಿದೆ! ಈ ಸೋಲು ಸಿರಿಯಾಳಶೆಟ್ಟಿಯ ಪವಾಡದಿಂದ ಉಂಟಾಗಿದ್ದರೆ, ನಮ್ಮ ಸೈನಿಕರನ್ನು ಪಲ್ಲವರ ಮೇಲೆ ಧೈರ್ಯದಿಂದ ಯುದ್ಧ ಮಾಡುವಂತೆ ಮಾಡುವುದು ಕೊಂಚ ಕಷ್ಟ! ಏಕೆಂದರೆ ಸೈನ್ಯದಲ್ಲಿ ಇರುವ ಬಹುಸಂಖ್ಯಾತ ಸೈನಿಕರು ಧರ್ಮಶ್ರದ್ಧೆಯುಳ್ಳ ಹಿಂದುಗಳು! ಅವರು ಪವಾಡ ಪುರುಷನಮೇಲೆ ಕೈಮಾಡುವ ಬದಲು, ಅವನಿಂದ ಹತರಾಗುವುದು ಪುಣ್ಯವೆಂದು ತಿಳಿದಿದ್ದಾರೆ!"

"ಆ ಸಿರಿಯಾಳಶೆಟ್ಟಿ ಪವಾಡ ಪುರುಷನೆನ್ನಲು ಮಾಡಿದ ಪವಾಡವಾದರೂ ಏನು ? ತಿಳಿಯಬಹುದೆ ?" ತಿರಸ್ಕಾರದಿಂದ ಪ್ರಶ್ನಿಸಿದ ರವಿಕೀರ್ತಿ. ಅವನಿಗೆ ಇದೆಲ್ಲ ಅರ್ಥವಿಲ್ಲದ ಮಾತುಕತೆಯಾಗಿ ತೋರಿತ್ತು.

"ಅವನು ಮಾಡಿರುವ ಪವಾಡಗಳು ಒಂದೆರಡಲ್ಲ–ಹಲವಾರು ಪವಾಡಗಳನ್ನು ಮಾಡಿರುವುದಾಗಿ ಜನರು ಹೇಳುವುದನ್ನು ಕೇಳಿದ್ದೇನೆ. ಎಲ್ಲಕ್ಕಿಂತಲೂ ದೊಡ್ಡ ಪವಾಡವೆಂದರೆ ಅವನು ತನ್ನ ಮಗನನ್ನೇ ಸಂಹರಿಸಿ, ಅಡಿಗೆಮಾಡಿ, ಶಿವಭಕ್ತರಿಗೆ ಬಡಿಸಿದನಂತೆ. ಜಂಗಮ ವೇಷದಿಂದ ಬಂದಿದ್ದ ಶಿವನೇ ಅವನ ಭಕ್ತಿಗೆ ಮೆಚ್ಚಿ, ಅವನ ಮಗನನ್ನು ಬದುಕಿಸಿಕೊಟ್ಟು ಅವನ ಕಿಂಕರನಾಗಿ ನಿಂತಿರುವನಂತೆ !"

"ಇದೆಲ್ಲ ಅಂತೆ, ಕಂತೆಗಳ ಕತೆ. ಇದನ್ನೆಲ್ಲಾ ಸಾಮಾನ್ಯ ಜನ, ಅಜ್ಞರು ನಂಬುವಂತೆ ನೀವೂ ನಂಬುತ್ತೀರಾ ?"

"ನಾನೂ ಮೊದಲು ನಂಬಲಿಲ್ಲ ರವಿಕೀರ್ತಿಗಳೇ. ಆದರೆ ಅನೇಕರ ಬಾಯಿಂದ ಆ ಸಿರಿಯಾಳಶೆಟ್ಟಿಯ ಅದ್ಭುತ ಪವಾಡಗಳ ಕತೆಯನ್ನು ಕೇಳಿದ ಮೇಲೆ, ರಣರಂಗದಲ್ಲಾದ ಸೋಲನ್ನು ಕಣ್ಣಾರೆ ಕಂಡಮೇಲೆ ಈ ಸಂಗತಿ ನಿಜವೇನೋ ಎನಿಸುತ್ತದೆ. ಏಕೆಂದರೆ ಯಾವ ಹುತ್ತದಲ್ಲಿ ಯಾವ ಹಾವು ಅಡಗಿದೆಯೋ ಯಾರು ಬಲ್ಲರು ! ಮಹಾತ್ಮರ ಬಗ್ಗೆ ಹೀಗೆಂದು ಹೇಳಲು ಸಾಧ್ಯವೆ! ನಮಗೆ ತಿಳಿಯದ ಮಾತ್ರಕ್ಕೆ ಮಹಾಪುರುಷರ ಯೋಗ್ಯತೆ ಕಡಿಮೆಯಾದೀತೆ ?"

"ಸಮಂತಭದ್ರರೇ, ನಾನು ಅನ್ಯಮತ ಖಂಡನೆಮಾಡುವೆನೆಂದಾಗಲೀ, ಮಹಾಪುರುಷನನ್ನು ಹೀಗಳೆಯುತ್ತಿರುವೆನೆಂದಾಗಲೀ ನೀವು ತಿಳಿಯಬಾರದು. ನನಗೆ ನೀವು ಹೇಳುವ ಕತೆಯನ್ನು ಕೇಳಿ ನಗಬೇಕೋ ಅಳಬೇಕೋ ತಿಳಿಯದಾಗಿದೆ. ಒಬ್ಬ ಸಿರಿಯಾಳಶೆಟ್ಟಿಯಿಂದ ನಮಗೆ ಇಷ್ಟೆಲ್ಲ ಪರಾಭವವಾಗಿದ್ದರೆ, ಪಲ್ಲವರೇಕೆ ಇದುವರೆಗೆ ಕೈಬಿಟ್ಟು ಹೋಗಿದ್ದ ಪಿಷ್ಟಪುರವನ್ನು ಹಿಡಿಯದೆ ಸುಮ್ಮನೆ ಕುಳಿತುಕೊಳ್ಳುತ್ತಿದ್ದರು ! ಹಿಂದೆ ತಮ್ಮದಾಗಿದ್ದ ವಾತಾಪಿಯನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಪಡದೆ ಸುಮ್ಮನಿರುತ್ತಿದ್ದರು ? ನೀವು ಹೇಳುವ ಪವಾಡಪುರುಷನಿಂದ, ಒಂದು ತೊಟ್ಟು ರಕ್ತ ಹರಿಸದೆ ಇದನ್ನು ಸಾಧಿಸಬಹುದಿತ್ತಲ್ಲ ! ಹಾಗೇಕೆ ಮಾಡಲಿಲ್ಲ ? ಇದೆಲ್ಲ ಕಟ್ಟು ಕಥೆ, ಜನಸಾಮಾನ್ಯರು ಆಡಿಕೊಳ್ಳುವ ಅರ್ಥವಿಲ್ಲದ ದಂತಕತೆ ಅಷ್ಟೇ. ಒಂದಿದ್ದರೆ ನಾಲ್ಕು ಕಲ್ಪಿಸಿ ಹೇಳುವ ಜನಸಾಮಾನ್ಯರ ಕಥೆಯನ್ನು ನಂಬಿ ನಾವು ಸುಮ್ಮನೆ ಕುಳಿತುಕೊಳ್ಳುವುದೆ ? ಈಗ ನಾವು ಬಂದಿರುವ ಪರಿಸ್ಥಿತಿಯನ್ನು ಧೈರ್ಯವಾಗಿ ಎದುರಿಸಿ ಶತ್ರುಗಳ

ಮೇಲೆ ಯುದ್ಧ ಮಾಡಬೇಕು. ಜಯಾಪಜಯಗಳು ದೈವಾಯತ್ತ."

"ನಿಮ್ಮ ಸಲಹೆ ಉಚಿತವಾದುದು ಅಮಾತ್ಯರೇ, ನನಗೂ ನಿಮಗೂ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಯುದ್ಧಮಾಡಬೇಕಾಗಿರುವ ನಮ್ಮ ಸೈನಿಕರೇ ಪವಾಡಪುರುಷನಾದ ಸಿರಿಯಾಳಶೆಟ್ಟಿಗೆ ಅಂಜಿಕುಳಿತಿರುವಾಗ ಅವರನ್ನು ನಾವು ನಂಬಿ ಯುದ್ಧಮಾಡಿದರೆ ನಮಗೆ ಗೆಲುವಾಗುವುದುಂಟೆ ?"

"ಹಾಗಾದರೆ ನಾವು ಒಂದು ಉಪಾಯ ಮಾಡೋಣ."

"ಏನು ?"

"ನಾವು ಈ ಬಾರಿ ಪಲ್ಲವರನ್ನು ಕೂಟಯುದ್ಧದಿಂದ ಸೋಲಿಸೋಣ."

"ಹೇಗೆ ?"

"ಅವರು ನಮ್ಮನ್ನು ವಂಚಿಸಿದಂತೆ, ಈ ಬಾರಿ ನಾವು ಅವರನ್ನು ವಂಚಿಸೋಣ."

"ಇದು ಹೇಗೆ ಸಾಧ್ಯ ?"

"ಆ ಕಾರ್ಯವನ್ನು ನನಗೆ ಬಿಟ್ಟುಕೊಟ್ಟು ನೀವು ನಿಶ್ಚಿಂತೆಯಿಂದ ಇರಿ. ಈಗಲೇ ಜಂಗಮ ವೇಷದಲ್ಲಿ ಹೋಗಿ ಆ ಸಿರಿಯಾಳಶೆಟ್ಟಿಯನ್ನೂ, ನರಸಿಂಹ ವರ್ಮನನ್ನೂ ವಂಚಿಸಿ ಬರುತ್ತೇನೆ. ನಾನು ಕೊಡುವ ಸಂಕೇತ ಅರಿತು, ನೀವು ಹಠಾತ್ತನೆ ಕಾಂಚಿಯ ಮೇಲೆ ದಾಳಿ ಇಡಿ. ಅದು ನಿಮಗೆ ಸುಲಭವಾಗಿ ವಶವಾಗುತ್ತದೆ."

ಈ ಮಾತುಕೇಳಿ ಸಮಂತಭದ್ರನು ಹಿಗ್ಗಿದರೂ, ಮಿತ್ರನಾದ ರವಿಕೀರ್ತಿಯನ್ನು ಶತ್ರುಗಳ ಶಿಬಿರಕ್ಕೆ ಕಳುಹಿಸಿ, ಅಪಾಯಕ್ಕೆಈಡುಮಾಡುವುದು ಅವನಿಗೆ ಇಷ್ಟವಿರಲಿಲ್ಲ. "ಅಮಾತ್ಯರೇ, ನಿಮ್ಮ ಶಕ್ತಿ ಸಾಮರ್ಥ್ಯಗಳ ಬಗ್ಗೆ ನನಗೆ ಸಂದೇಹವೆಂದು ತಾವು ಭಾವಿಸಬಾರದು ! ಮಹಾಪುರುಷರು ಯಾರೇ ಇರಲಿ, ಅವರನ್ನು ಕೆಣಕಲು ಹೋಗಬಾರದು ! ಇದರಿಂದ ಯಾವ ವಿಪತ್ತು ಹೇಗೆ ಬರುವುದೋ ಯಾರೂ ಹೇಳಲಾರರು ! ತಾವು ಕಾಂಚಿಗೆ ಹೋಗಲು ನನ್ನ ಆಕ್ಷೇಪಣೆಯಿಲ್ಲ—ಆದರೆ ಸಿರಿಯಾಳಸೆಟ್ಟಿಯ ಜೊತೆಯಲ್ಲಿ ವ್ಯವಹರಿಸುವಾಗ ಮಾತ್ರ ತುಂಬ ಎಚ್ಚರದಿಂದ ಇರಬೇಕು ! ಏಕೆಂದರೆ, ನಿಮ್ಮ ಹಾನಿವೃದ್ಧಿಗಳ ಮೇಲೆ, ಸಾಮ್ರಾಜ್ಯದ ಅಳಿವು ಉಳಿವುಗಳು ನಿಂತಿವೆ. ನೀವು ಹೋಗಿ ಬನ್ನಿ. ಅರ್ಹಂತರೂ, ಸಿದ್ಧರೂ ನಿಮಗೆ ಮಂಗಳವನ್ನುಂಟುಮಾಡಲಿ !"

ಎಂದು ಬೀಳ್ಕೊಟ್ಟನು.

ರವಿಕೀರ್ತಿಯು ಆಪ್ತಸಂಗಡಿಗರೊಡನೆ ಹೊರಟು ಜಂಗಮ ವೇಷದಲ್ಲಿ ಕಾಂಚಿಪುರವನ್ನು ತಲುಪಿದನು.

ಕಾಂಚಿಪುರವು ಅನಾದಿಕಾಲದಿಂದಲೂ ಶೈವರಿಗೂ ವೈಷ್ಣವರಿಗೂ ಪವಿತ್ರವಾದ ಯಾತ್ರಾಸ್ಥಳವಾಗಿತ್ತು. ಅದು ಪಲ್ಲವರ ರಾಜಧಾನಿಯಾದ ಮೇಲೆ ಇನ್ನಷ್ಟು ಪ್ರಸಿದ್ಧಿಯನ್ನು ಪಡೆಯಿತು. ವಿಷ್ಣುಕಾಂಚಿ, ಶಿವಕಾಂಚಿಗಳು ಯಾತ್ರಾರ್ಥಿಗಳನ್ನು ಆಕರ್ಷಿಸಿ ಪುಣ್ಯಕ್ಷೇತ್ರವಾದಂತೆ ಕಾಂಚಿಯು ಪ್ರಮುಖ ವಾಣಿಜ್ಯ ಕೇಂದ್ರವಾಗಿ, ಪಲ್ಲವ ಸಾಮ್ರಾಜ್ಯಕ್ಕೆ ಕಣ್ಣಾಗಿತ್ತು. ಅಲ್ಲಿ ದೇಶವಿದೇಶಗಳಿಂದ ಬಂದ ವರ್ತಕರು ತಮ್ಮ ಮಳಿಗೆಗಳನ್ನು ತೆರೆದಿದ್ದರು. ಶೈವರಾದರೂ, ಅನ್ಯಮತಗಳನ್ನು ಗೌರವದಿಂದ ನೋಡುತ್ತಿದ್ದ ಪಲ್ಲವರ ಉದಾರ ಆಶ್ರಯದಲ್ಲಿ ಅನ್ಯಮತೀಯರೂ ನೆಮ್ಮದಿಯಿಂದ ಜೀವನ ಮಾಡುತ್ತಿದ್ದರು. ನಗರಕ್ಕೆ ಬಲವಾದ ಕೋಟೆಕೊತ್ತಳಗಳು ಇದ್ದು ಶತ್ರುಬಾಧೆ ಇರಲಿಲ್ಲ. ಎಲ್ಲಿ ನೋಡಿದರೂ ಜಲ ಸಮೃದ್ಧವಾದ ತಟಾಕಗಳೂ ಭವ್ಯವಾದ ಶ್ರೀಮಂತರ ನಿವಾಸಗಳೂ, ಉಪವನಗಳೂ ಕಾಣುತ್ತಿದ್ದವು. ಇದಕ್ಕೆ ನೂರ್ಮಡಿಯಾಗಿ ಎತ್ತ ತಿರುಗಿದತ್ತ ಶೈವ ಇಲ್ಲವೇ ವೈಷ್ಣವ ದೇವಾಲಯಗಳ ಗೋಪುರಗಳು ಎದ್ದು ಕಾಣುತ್ತಿದ್ದವು. ಎಂತಹ ನಾಸ್ತಿಕರಲ್ಲೂ ಆಸ್ತಿಕ ಭಾವನೆಗಳು ಕೆರಳಿಸಲು ಈ ದೇವಾಲಯಗಳ ವಿಹಂಗಮ ದೃಶ್ಯವೊಂದೇ ಸಾಕಾಗಿತ್ತು. ನಗರದ ನಡುವೆ ಸಾಮ್ರಾಟರ ಭವ್ಯವಾದ ಅರಮನೆಯ ಕಳಶಗೋಪುರ ಎದ್ದು ಕಾಣುತ್ತಿತ್ತು. ಅಲ್ಲಿ ಮಹೇಂದ್ರವರ್ಮನು ತನ್ನ ಪತ್ನೀಪುತ್ರರೊಡನೆ ಸುಕಥಾ ವಿನೋದಗಳಲ್ಲಿ ಮಗ್ನನಾಗಿ ಪ್ರಜಾವತ್ಸಲ ದೊರೆಯಾಗಿ ರಾಜ್ಯಭಾರ ಮಾಡುತ್ತಿದ್ದನು.

ಅವನ ಪ್ರಜೆಗಳ ಮಕುಟಮಣಿಯಾಗಿ ಸಿರಿಯಾಳಶೆಟ್ಟಿಯು ನಗರದ ವಣಿಕಕೇರಿಯಲ್ಲಿ ವಾಸಿಸುತ್ತಿದ್ದನು. ಅವನು ಶ್ರೇಷ್ಠಿಯಾದರೂ, ತಂದೆಯಂತೆ ವ್ಯಾಪಾರಕ್ಕೆ ತೊಡಗದೆ, ತನಗೆ ಪ್ರಿಯವಾಗಿದ್ದ ಶಿವಭಕ್ತಿ ಜಂಗಮರ ಆರಾಧನೆಗಳಲ್ಲಿ ಮನಸ್ಸು ಕೊಟ್ಟಿದ್ದನು. ಪುರುಷನಾದವನಿಗೆ ಒಂದು ವೃತ್ತಿ ಬೇಕೆಂದು ಮಹೇಂದ್ರವರ್ಮನ ಸೈನ್ಯದಲ್ಲಿ ದಂಡನಾಯಕನಾಗಿದ್ದನು.

ಸಿರಿಯಾಳಶೆಟ್ಟಿಯು ರಾಜಧಾನಿಯಲ್ಲಿ ಮಾತ್ರವಲ್ಲದೆ ಪಲ್ಲವ ಸಾಮ್ರಾಜ್ಯ

ದಲ್ಲೆಲ್ಲ ಮಹಾಶಿವಭಕ್ತನೆಂಬ ಕೀರ್ತಿಗೆ ಪಾತ್ರನಾಗಿದ್ದನು. ಅವನು ಗುರುಲಿಂಗ ಜಂಗಮರ ಸೇವೆಯಲ್ಲಿ ತನ್ನ ಕಾಲವನ್ನು ಕಳೆಯುತ್ತಿದ್ದನು. ಅಲ್ಲದೆ ವೈದ್ಯ, ಸಾಹಿತ್ಯ, ಕಲೆಗಳಲ್ಲಿ ವಿಶೇಷ ಪರಿಶ್ರಮ ಹೊಂದಿದ್ದನು. ಆನೆ ಕುದುರೆಗಳ ಶಾಸ್ತ್ರವಿದ್ಯೆಯಲ್ಲೂ, ರಣವಿದ್ಯೆಗಳಲ್ಲೂ ಅಸಾಧಾರಣ ಪಾಂಡಿತ್ಯವನ್ನು ಹೊಂದಿ ಪಲ್ಲವ ಮಹೇಂದ್ರವರ್ಮನಿಗೆ ದಕ್ಷಸೇನಾಧಿಪತಿಯಾಗಿದ್ದನು.

ಸಿರಿಯಾಳಶೆಟ್ಟಿಗೆ ಚಂಗಳೆ ಎಂಬ ಎಲ್ಲ ರೀತಿಯಲ್ಲಿ ಅವನಿಗೆ ಅನುರೂಪ ಳಾದ ಪತ್ನಿಯೂ, ಚೀಲಾಳನೆಂಬ ಮಗನೂ ಇದ್ದರು. ಚೀಲಾಳನು ಬಾಲ್ಯ ದಲ್ಲೇ ಭಗವದ್ಭಕ್ತಿಯನ್ನು ತೋರಿಸಿದ್ದನು. ಅವನ ಮುಖದಲ್ಲಿ ಇದ್ದ ತೇಜ ಸ್ಸನ್ನು ಕಂಡು ಜನ ಮುಗ್ಧರಾಗುತ್ತಿದ್ದರು. ಅವನ ಗ್ರಹಣ ಶಕ್ತಿ ಅಸಾಧಾ ರಣವಾಗಿತ್ತು. ಮಗನ ಬಾಲಲೀಲೆಗಳನ್ನು ನೋಡಿ ಸಂತೋಷದಿಂದ ಇದ್ದ ದಂಪತಿಗಳ ಶಿವಭಕ್ತಿಯನ್ನೂ ಅತಿಥಿ ಸತ್ಕಾರವನ್ನೂ ಪರೀಕ್ಷಿಸುವಂತಹ ಒಂದು ದುರ್ಭರ ಪ್ರಸಂಗ ಒದಗಿತು. ಈ ಘಟನೆಯಿಂದ ಸಿರಿಯಾಳಶೆಟ್ಟಿಯ ಕೀರ್ತಿ ದಶದಿಕ್ಕುಗಳಿಗೂ ಹರಡಿತು; ಅವನು ಪವಾಡ ಪುರುಷನೆನಿಸಿದನು.

ಸಿರಿಯಾಳಶೆಟ್ಟಿಯು ಎಂತಹ ಪ್ರಸಂಗವಾದರೂ, ಅತಿಥಿಸತ್ಕಾರ ಮಾಡದೆ ಜಂಗಮರಿಗೆ ಊಟವಿಡದೆ ತಾನು ಊಟ ಮಾಡುತ್ತಿರಲಿಲ್ಲ. ಒಮ್ಮೆ ಅವನ ನಿಷ್ಠೆಯನ್ನು ಪರೀಕ್ಷಿಸಲೆಂಬಂತೆ, ಇಪ್ಪತ್ತೆರಡು ದಿನಗಳವರೆಗೆ ಆಕಾಶವು ಮೋಡ ಗಳಿಂದ ತುಂಬಿ, ಹಿಡಿದ ಮಳೆ ನಿಲ್ಲಲಿಲ್ಲ. ಈ ಸಮಯದಲ್ಲಿ ಹೊರಗಿನಿಂದ ಒಣ ಸೌದೆಯನ್ನು ತಂದು ಅತಿಥಿಗಳಿಗೆ ಅಡಿಗೆ ತಯಾರಿಸಲು ಸಾಧ್ಯವಾಗದೆ, ಸಿರಿಯಾಳನು ಮನೆಯಲ್ಲಿದ್ದ ಶ್ರೀಗಂಧ, ಚಂದನಗಳ ಕೊರಡುಗಳನ್ನೂ, ಅಮೂಲ್ಯವಾದ ಪೀತಾಂಬರ ಮುಂತಾದ ದುಕೂಲಗಳನ್ನೂ ತುಪ್ಪ, ಎಣ್ಣೆಗಳಲ್ಲಿ ಅದ್ದಿ ಅಡಿಗೆ ತಯಾರಿಸಿ, ಬಂದ ಅತಿಥಿಗಳಿಗೆ ಉಣಬಡಿಸಿದನಂತೆ.

ಮಳೆ ನಿಂತಾಗ ಇದಕ್ಕೂ ಕಠಿಣವಾದ ಪರೀಕ್ಷೆಯನ್ನು ಅವನು ಎದುರು ಗೊಳ್ಳಬೇಕಾಯಿತು. ಅವನು ಎಂದಿನಂತೆ ಅತಿಥಿದೇವರನ್ನು ಹುಡುಕಿಕೊಂಡು ಬರಲು, ಮನೆಯಿಂದ ಹೊರಗೆ ಹೊರಟು ನಗರವನ್ನೆಲ್ಲಾ ಸುತ್ತಿದರೂ ಯಾವ ಜಂಗಮರೂ ಕಣ್ಣಿಗೆ ಬೀಳಲಿಲ್ಲ. ಇದು ತನ್ನ ಸತ್ವಪರೀಕ್ಷೆಯೆಂದು ಅತಿಥಿಗಳಿ ಲ್ಲದೆ ಊಟ ಮಾಡೆನೆಂದು ಅವರ ಸಲುವಾಗಿ ಕಾಯುತ್ತಿದ್ದಾಗ ಒಬ್ಬ ವೃದ್ಧ ಜಂಗಮನೂ, ಹಣ್ಣು ಮುದುಕಿಯಾದ ಅವನ ಪತ್ನಿಯೂ ಕಣ್ಣಿಗೆ ಬಿದ್ದರು.

ಅವರನ್ನು ಮನೆಗೆ ಕರೆತಂದು ಸತ್ಕರಿಸಿ, ಆರೋಗಣೆಗೆ ಎಬ್ಬಿಸಿದಾಗ, ವೃದ್ಧ ಜಂಗಮನು "ಅಯ್ಯಾ, ಸಿರಿಯಾಳ, ನಾನು ಒಂದು ವಿಚಿತ್ರ ವ್ರತ ಕೈಗೊಂಡಿದ್ದೇನೆ. ನಾನು ಆರುತಿಂಗಳಿಗೊಮ್ಮೆ ಊಟಮಾಡುತ್ತೇನೆ. ಆ ದಿನ ನಾನು ಪಶುಮಾಂಸದ ಹೊರತು ಬೇರೆ ಏನನ್ನೂ ತಿನ್ನುವುದಿಲ್ಲ!" ಎಂದನು.

"ಸ್ವಾಮಿ, ನನ್ನ ಮನೆಯಲ್ಲಿ ಪಶುಗಳಿಗೆ ಕೊರತೆ ಇಲ್ಲ. ಯಾವ ಪಶುವಿನ ಮಾಂಸ ಬಯಸಿದರೂ ಸಲ್ಲಿಸುತ್ತೇನೆ!" ಎಂದು ಸಿರಿಯಾಳನು ಕೈಜೋಡಿಸಿ ಹೇಳಿದನು.

ಅದಕ್ಕೆ ಆ ವೃದ್ಧನು "ನಾನು ಕೇಳುವುದು ಚತುಷ್ಪಾದದ ಪ್ರಾಣಿಯ ಮಾಂಸವನ್ನಲ್ಲ, ನರಪಶುವಿನ ಮಾಂಸವನ್ನು. ಅದರಲ್ಲೂ ಉತ್ತಮವರ್ಣಕ್ಕೆ ಸೇರಿದ ಸರ್ವಗುಣ ಸಂಪನ್ನನಾದ ಅಂಗಭಂಗವಿಲ್ಲದ ಐದು ವರ್ಷಕ್ಕೆ ಮೀರದ ಸುಂದರ ಬಾಲಕನ ಮಾಂಸವನ್ನು ತಂದೆತಾಯಿಗಳು ಕಣ್ಣೀರಿಡದೆ ಅಡಿಗೆಮಾಡಿ ಬಡಿಸಿದರೆ ಮಾತ್ರ ಸ್ವೀಕರಿಸುತ್ತೇನೆ."

ಈ ಮಾತು ಕೇಳಿ ಪತಿಪತ್ನಿಯರಿಬ್ಬರೂ ಇದು ದೇವರು ತಮ್ಮನ್ನು ಪರೀಕ್ಷಿಸಲು ಒಡ್ಡಿರುವ ಅಗ್ನಿಪರೀಕ್ಷೆ ಎಂದು ಅರಿತು, ಅದಕ್ಕೆ ಸಿದ್ಧರಾದರು. ಅವರು ಹಿಂದುಮುಂದು ಯೋಚಿಸದೆ, ಆ ವೃದ್ಧ ಜಂಗಮನು ಪರೋಕ್ಷವಾಗಿ ಬಯಸಿದ ತಮ್ಮ ಮಗ ಚೀಲಾಳನನ್ನೇ ಅವರಿಗೆ ಅಡಿಗೆಮಾಡಿ ಬಡಿಸಲು ಸಿದ್ಧರಾದರು. ಇದಕ್ಕೆ ಬಾಲಕನಾದ ಚೀಲಾಳನೂ ಸಂತೋಷದಿಂದಲೇ ಒಪ್ಪಿದನು.

ಇನ್ನೇನು ಅವನನ್ನು ಸಂಹರಿಸಿ, ಅವನ ಮಾಂಸದಿಂದ ಅಡಿಗೆಯನ್ನು ತಯಾರಿಸಬೇಕೆಂದಿರುವಾಗ ಆ ವೃದ್ಧ ಜಂಗಮನ ಮನಸ್ಸು ಕರಗಿ, ಅವನು ಸಿರಿಯಾಳಶೆಟ್ಟಿಯನ್ನು ಬಾಚಿತಬ್ಬಿಕೊಂಡು, "ಅಯ್ಯಾ ಸಿರಿಯಾಳಶೆಟ್ಟಿ, ನಿನ್ನ ಶಿವಭಕ್ತಿಯನ್ನೂ, ಅತಿಥಿ ಸೇವೆಯನ್ನೂ ಪರೀಕ್ಷಿಸಲು ಹೀಗೆ ಮಾಡಿದನೇ ಹೊರತು—ಅನ್ಯಥಾ ಅಲ್ಲ. ಈ ಅಗ್ನಿ ಪರೀಕ್ಷೆಯಲ್ಲಿ ನೀನು ಗೆದ್ದಿರುವೆ! ಖಂಡಿತವಾಗಿಯೂ ನೀನು ಮಹಾತ್ಮ, ಅವತಾರಪುರುಷ! ನಿನ್ನ ಕೀರ್ತಿ ಅಜರಾಮರವಾಗಲಿ, ನಿನಗೆ ಶಿವಸಾಕ್ಷಾತ್ಕಾರ ದೊರೆಯಲಿ!" ಎಂದು ಆಶೀರ್ವದಿಸಿ, ಅವನಿಂದ ಸತ್ಕಾರ ಹೊಂದಿ ಅವನು ಅಲ್ಲಿಂದ ಹೊರಟು ಹೋದನಂತೆ.

ಈ ಘಟನೆ ಜನರ ಬಾಯಲ್ಲಿ ಅನೇಕ ರೂಪ ತಳೆದಿತ್ತು. ಅವರು ಈ ಬಗ್ಗೆ ಅನೇಕ ದಂತಕತೆ ಕಟ್ಟಿ ಹರಡಿದ್ದರು. ಸಿರಿಯಾಳಶೆಟ್ಟಿಯು ತನ್ನನ್ನು

ದಲ್ಲೆಲ್ಲ ಮಹಾಶಿವಭಕ್ತನೆಂಬ ಕೀರ್ತಿಗೆ ಪಾತ್ರನಾಗಿದ್ದನು. ಅವನು ಗುರುಲಿಂಗ ಜಂಗಮರ ಸೇವೆಯಲ್ಲಿ ತನ್ನ ಕಾಲವನ್ನು ಕಳೆಯುತ್ತಿದ್ದನು. ಅಲ್ಲದೆ ವೈದ್ಯ, ಸಾಹಿತ್ಯ, ಕಲೆಗಳಲ್ಲಿ ವಿಶೇಷ ಪರಿಶ್ರಮ ಹೊಂದಿದ್ದನು. ಆನೆ ಕುದುರೆಗಳ ಶಾಸ್ತ್ರವಿದ್ಯೆಯಲ್ಲೂ, ರಣವಿದ್ಯೆಗಳಲ್ಲೂ ಅಸಾಧಾರಣ ಪಾಂಡಿತ್ಯವನ್ನು ಹೊಂದಿ ಪಲ್ಲವ ಮಹೇಂದ್ರವರ್ಮನಿಗೆ ದಕ್ಷಸೇನಾಧಿಪತಿಯಾಗಿದ್ದನು.

ಸಿರಿಯಾಳಶೆಟ್ಟಿಗೆ ಚಂಗಳೆ ಎಂಬ ಎಲ್ಲ ರೀತಿಯಲ್ಲಿ ಅವನಿಗೆ ಅನುರೂಪ ಳಾದ ಪತ್ನಿಯೂ, ಚೀಲಾಳನೆಂಬ ಮಗನೂ ಇದ್ದರು. ಚೀಲಾಳನು ಬಾಲ್ಯ ದಲ್ಲೇ ಭಗವದ್ಭಕ್ತಿಯನ್ನು ತೋರಿಸಿದ್ದನು. ಅವನ ಮುಖದಲ್ಲಿ ಇದ್ದ ತೇಜ ಸ್ಸನ್ನು ಕಂಡು ಜನ ಮುಗ್ಧರಾಗುತ್ತಿದ್ದರು. ಅವನ ಗ್ರಹಣ ಶಕ್ತಿ ಅಸಾಧಾ ರಣವಾಗಿತ್ತು. ಮಗನ ಬಾಲಲೀಲೆಗಳನ್ನು ನೋಡಿ ಸಂತೋಷದಿಂದ ಇದ್ದ ದಂಪತಿಗಳ ಶಿವಭಕ್ತಿಯನ್ನೂ ಅತಿಥಿ ಸತ್ಕಾರವನ್ನೂ ಪರೀಕ್ಷಿಸುವಂತಹ ಒಂದು ದುರ್ಭರ ಪ್ರಸಂಗ ಒದಗಿತು. ಈ ಘಟನೆಯಿಂದ ಸಿರಿಯಾಳಶೆಟ್ಟಿಯ ಕೀರ್ತಿ ದಶದಿಕ್ಕುಗಳಿಗೂ ಹರಡಿತು; ಅವನು ಪವಾಡ ಪುರುಷನೆನಿಸಿದನು.

ಸಿರಿಯಾಳಶೆಟ್ಟಿಯು ಎಂತಹ ಪ್ರಸಂಗವಾದರೂ, ಅತಿಥಿಸತ್ಕಾರ ಮಾಡದೆ ಜಂಗಮರಿಗೆ ಊಟವಿಡದೆ ತಾನು ಊಟ ಮಾಡುತ್ತಿರಲಿಲ್ಲ. ಒಮ್ಮೆ ಅವನ ನಿಷ್ಠೆಯನ್ನು ಪರೀಕ್ಷಿಸಲೆಂಬಂತೆ, ಇಪ್ಪತ್ತೆರಡು ದಿನಗಳವರೆಗೆ ಆಕಾಶವು ಮೋಡ ಗಳಿಂದ ತುಂಬಿ, ಹಿಡಿದ ಮಳೆ ನಿಲ್ಲಲಿಲ್ಲ. ಈ ಸಮಯದಲ್ಲಿ ಹೊರಗಿನಿಂದ ಒಣ ಸೌದೆಯನ್ನು ತಂದು ಅತಿಥಿಗಳಿಗೆ ಅಡಿಗೆ ತಯಾರಿಸಲು ಸಾಧ್ಯವಾಗದೆ, ಸಿರಿಯಾಳನು ಮನೆಯಲ್ಲಿದ್ದ ಶ್ರೀಗಂಧ, ಚಂದನಗಳ ಕೊರಡುಗಳನ್ನೂ, ಅಮೂಲ್ಯವಾದ ಪೀತಾಂಬರ ಮುಂತಾದ ದುಕೂಲಗಳನ್ನೂ ತುಪ್ಪ, ಎಣ್ಣೆಗಳಲ್ಲಿ ಅದ್ದಿ ಅಡಿಗೆ ತಯಾರಿಸಿ, ಬಂದ ಅತಿಥಿಗಳಿಗೆ ಉಣಬಡಿಸಿದನಂತೆ.

ಮಳೆ ನಿಂತಾಗ ಇದಕ್ಕೂ ಕಠಿಣವಾದ ಪರೀಕ್ಷೆಯನ್ನು ಅವನು ಎದುರು ಗೊಳ್ಳಬೇಕಾಯಿತು. ಅವನು ಎಂದಿನಂತೆ ಅತಿಥಿದೇವರನ್ನು ಹುಡುಕಿಕೊಂಡು ಬರಲು, ಮನೆಯಿಂದ ಹೊರಗೆ ಹೊರಟು ನಗರವನ್ನೆಲ್ಲಾ ಸುತ್ತಿದರೂ ಯಾವ ಜಂಗಮರೂ ಕಣ್ಣಿಗೆ ಬೀಳಲಿಲ್ಲ. ಇದು ತನ್ನ ಸತ್ವಪರೀಕ್ಷೆಯೆಂದು ಅತಿಥಿಗಳಿ ಲ್ಲದೆ ಊಟ ಮಾಡೆನೆಂದು ಅವರ ಸಲುವಾಗಿ ಕಾಯುತ್ತಿದ್ದಾಗ ಒಬ್ಬ ವೃದ್ಧ ಜಂಗಮನೂ, ಹಣ್ಣು ಮುದುಕಿಯಾದ ಅವನ ಪತ್ನಿಯೂ ಕಣ್ಣಿಗೆ ಬಿದ್ದರು.

ಅವರನ್ನು ಮನೆಗೆ ಕರೆತಂದು ಸತ್ಕರಿಸಿ, ಆರೋಗಣೆಗೆ ಎಬ್ಬಿಸಿದಾಗ, ವೃದ್ಧ ಜಂಗಮನು "ಅಯ್ಯಾ, ಸಿರಿಯಾಳ, ನಾನು ಒಂದು ವಿಚಿತ್ರ ವ್ರತ ಕೈಗೊಂಡಿದ್ದೇನೆ. ನಾನು ಆರುತಿಂಗಳಿಗೊವ್ಮೆ ಊಟಮಾಡುತ್ತೇನೆ. ಆ ದಿನ ನಾನು ಪಶುಮಾಂಸದ ಹೊರತು ಬೇರೆ ಏನನ್ನೂ ತಿನ್ನುವುದಿಲ್ಲ!" ಎಂದನು.

"ಸ್ವಾಮಿ, ನನ್ನ ಮನೆಯಲ್ಲಿ ಪಶುಗಳಿಗೆ ಕೊರತೆ ಇಲ್ಲ. ಯಾವ ಪಶುವಿನ ಮಾಂಸ ಬಯಸಿದರೂ ಸಲ್ಲಿಸುತ್ತೇನೆ!" ಎಂದು ಸಿರಿಯಾಳನು ಕೈಜೋಡಿಸಿ ಹೇಳಿದನು.

ಅದಕ್ಕೆ ಆ ವೃದ್ಧನು "ನಾನು ಕೇಳುವುದು ಚತುಷ್ಪಾದದ ಪ್ರಾಣಿಯ ಮಾಂಸವನ್ನಲ್ಲ, ನರಪಶುವಿನ ಮಾಂಸವನ್ನು. ಅದರಲ್ಲೂ ಉತ್ತಮವರ್ಣಕ್ಕೆ ಸೇರಿದ ಸರ್ವಗುಣ ಸಂಪನ್ನನಾದ ಅಂಗಭಂಗವಿಲ್ಲದ ಐದು ವರ್ಷಕ್ಕೆ ಮೀರದ ಸುಂದರ ಬಾಲಕನ ಮಾಂಸವನ್ನು ತಂದೆತಾಯಿಗಳು ಕಣ್ಣೀರಿಡದೆ ಅಡಿಗೆಮಾಡಿ ಬಡಿಸಿದರೆ ಮಾತ್ರ ಸ್ವೀಕರಿಸುತ್ತೇನೆ."

ಈ ಮಾತು ಕೇಳಿ ಪತಿಪತ್ನಿಯರಿಬ್ಬರೂ ಇದು ದೇವರು ತಮ್ಮನ್ನು ಪರೀಕ್ಷಿಸಲು ಒಡ್ಡಿರುವ ಅಗ್ನಿಪರೀಕ್ಷೆ ಎಂದು ಅರಿತು, ಅದಕ್ಕೆ ಸಿದ್ಧರಾದರು. ಅವರು ಹಿಂದುಮುಂದು ಯೋಚಿಸದೆ, ಆ ವೃದ್ಧಜಂಗಮನು ಪರೋಕ್ಷವಾಗಿ ಬಯಸಿದ ತಮ್ಮ ಮಗ ಚೀಲಾಳನನ್ನೇ ಅವರಿಗೆ ಅಡಿಗೆಮಾಡಿ ಬಡಿಸಲು ಸಿದ್ಧರಾದರು. ಇದಕ್ಕೆ ಬಾಲಕನಾದ ಚೀಲಾಳನೂ ಸಂತೋಷದಿಂದಲೇ ಒಪ್ಪಿದನು.

ಇನ್ನೇನು ಅವನನ್ನು ಸಂಹರಿಸಿ, ಅವನ ಮಾಂಸದಿಂದ ಅಡಿಗೆಯನ್ನು ತಯಾರಿಸಬೇಕೆಂದಿರುವಾಗ ಆ ವೃದ್ಧಜಂಗಮನ ಮನಸ್ಸು ಕರಗಿ, ಅವನು ಸಿರಿಯಾಳಶೆಟ್ಟಿಯನ್ನು ಬಾಚಿತಬ್ಬಿಕೊಂಡು, "ಅಯ್ಯಾ ಸಿರಿಯಾಳಶೆಟ್ಟಿ, ನಿನ್ನ ಶಿವಭಕ್ತಿಯನ್ನೂ, ಅತಿಥಿ ಸೇವೆಯನ್ನೂ ಪರೀಕ್ಷಿಸಲು ಹೀಗೆ ಮಾಡಿದನೇ ಹೊರತು—ಅನ್ಯಥಾ ಅಲ್ಲ. ಈ ಅಗ್ನಿ ಪರೀಕ್ಷೆಯಲ್ಲಿ ನೀನು ಗೆದ್ದಿರುವೆ! ಖಂಡಿತವಾಗಿಯೂ ನೀನು ಮಹಾತ್ಮ, ಅವತಾರಪುರುಷ! ನಿನ್ನ ಕೀರ್ತಿ ಅಜರಾಮರವಾಗಲಿ, ನಿನಗೆ ಶಿವಸಾಕ್ಷಾತ್ಕಾರ ದೊರೆಯಲಿ!" ಎಂದು ಆಶೀರ್ವದಿಸಿ, ಅವನಿಂದ ಸತ್ಕಾರ ಹೊಂದಿ ಅವನು ಅಲ್ಲಿಂದ ಹೊರಟು ಹೋದನಂತೆ.

ಈ ಘಟನೆ ಜನರ ಬಾಯಲ್ಲಿ ಅನೇಕ ರೂಪ ತಳೆದಿತ್ತು. ಅವರು ಈ ಬಗ್ಗೆ ಅನೇಕ ದಂತಕತೆ ಕಟ್ಟಿ ಹರಡಿದ್ದರು. ಸಿರಿಯಾಳಶೆಟ್ಟಿಯು ತನ್ನನ್ನು

ಪರೀಕ್ಷಿಸಲು ಬಂದ ಜಂಗಮರಿಗೆ ಮಗನ ದೇಹವನ್ನೇ ಅಡಿಗೆಮಾಡಿ ಬಡಿಸಿದ ನೆಂದೂ, ಆಗ ಜಂಗಮರು ಪುತ್ರನ ಮೇಲಿನ ವ್ಯಾಮೋಹದಿಂದ ಶಿರವನ್ನು ಅಡಿಗೆ ಮಾಡದೆ, ಅಧಮಾಂಗದ ಅಡಿಗೆಯನ್ನು ಬಡಿಸಿ ತಮ್ಮ ವ್ರತಕ್ಕೆ ಭಂಗ ಮಾಡಿದರೆಂದು ಹೇಳಿ ಅಲ್ಲಿಂದ ಹೊರಟು ಹೋದರೆಂದೂ, ಆಗ ಪುತ್ರಶೋಕ ದಗ್ಧರಾದ ಚಂಗಳೆಯು ಮಗನ ಹೆಸರನ್ನು ಹಿಡಿದು ದುಃಖದಿಂದ ಕೂಗಿ ಕರೆದಾಗ, ಮಗನು ಜೀವಂತವಾಗಿ ಎದ್ದು ಬಂದನೆಂದೂ, ಜನ ಒಂದೊಂದು ರೀತಿಯಾಗಿ ಹೇಳತೊಡಗಿದರು. ಇದು ಜನರ ಬಾಯಲ್ಲಿ ಒಂದು ಅದ್ಭುತ ಪವಾಡವಾಗಿತ್ತು.

ಇಂತಹ ಪವಾಡಪುರುಷನ ಎದುರಿಗೆ ನಿಲ್ಲಲಾರದೆ ಚಾಲುಕ್ಯ ಸೈನ್ಯ ಹೆದರಿ ಓಡಿದುದರಲ್ಲಿ ಅಚ್ಚರಿಯಿಲ್ಲ. ಅವರಿಗೆ ತಮ್ಮವರೇ ಆದ ವಿಷ್ಣುವರ್ಧನ ಹಠಾತ್ತನೆ ತಮ್ಮ ಮೇಲೆ ತಿರುಗಿಬಿದ್ದುದು ಸಿರಿಯಾಳಶೆಟ್ಟಿಯ ಪವಾಡದಿಂದಲೇ ಎಂಬ ಭಾವನೆ ಬಂದುಹೋಗಿತ್ತು. ಈ ಭಾವನೆ ಬಂದ ಮೇಲೆ ಯಾರೆಷ್ಟು ಹೇಳಿದರೂ, ಶತ್ರುಗಳ ಮೇಲೆ ಧೈರ್ಯವಾಗಿ ಯುದ್ಧಮಾಡಲು ಅವರಿಂದ ಸಾಧ್ಯವಾಗದೆ ಹೋಗಿತ್ತು. ಅವರು ಜೀವಗಳ್ಳರಂತೆ ಓಡಿ ಹೋಗಿ ತಲೆ ಮರೆಸಿಕೊಂಡಿದ್ದರು.

ಇದನ್ನೆಲ್ಲಾ ಕೇಳಿ ತಿಳಿದಿದ್ದ ರವಿಕೀರ್ತಿಯು ಜಂಗಮ ವೇಷದಲ್ಲಿ ಬಂದು ಅವನ ಮನೆಯ ಮುಂದೆ ನಿಂತನು. ಪದ್ಧತಿಯಂತೆ ಸಿರಿಯಾಳಶೆಟ್ಟಿಯು ತನ್ನ ದೈನಂದಿನ ಶಿವಾರ್ಚನೆಯನ್ನು ಮುಗಿಸಿಕೊಂಡು ಅತಿಥಿಗಳನ್ನು ಆರಿಸಿಕೊಂಡು ಹೊರಗೆ ಬಂದಾಗ ರವಿಕೀರ್ತಿ ಅವನ ಕಣ್ಣಿಗೆ ಬಿದ್ದನು. ಕೂಡಲೇ ಸಿರಿಯಾಳ ಶೆಟ್ಟಿ ಶಿವನೇ ಈ ರೀತಿಯಲ್ಲಿ ಬಂದಿರುವನೆಂದು ಹಿಗ್ಗಿ ಪತ್ನಿಯೊಡನೆ ಆಗಮಿಸಿ, ಅವರನ್ನು ಮನೆಯೊಳಗೆ ಕರೆದೊಯ್ದು, ಅತಿಥಿದೇವರಂತೆ ಪೂಜಿಸಿ, ಸತ್ಕರಿ ಸಿದನು.

"ಮಹಾತ್ಮ, ತಾವು ಯಾವ ಯಾವ ದೇಶದಿಂದ ಬಂದಿದ್ದೀರಿ ? ತಮ್ಮ ಊರು ಯಾವುದು ? ನೋಡಿದರೆ ತಾವು ಈ ಸ್ಥಳದವರಲ್ಲವೆಂದು ಕಾಣುತ್ತದೆ! ನನ್ನಿಂದ ಯಾವ ಸೇವೆ ಬೇಕಾದರೂ ನಿಸ್ಸಂಕೋಚವಿಲ್ಲದೆ ಬಿನ್ನವಿಸಬೇಕು" ಎಂದು ಪ್ರಾರ್ಥಿಸಿದನು.

"ನಾವು ಉತ್ತರದೇಶಗವರು. ಯಾತ್ರಾರ್ಥಿಗಳಾಗಿ ಹೀಗೆ ಬಂದೆವು.

ಕಾಂಚೀಪುರದ ಶ್ರೀ ಏಕಾಂಬರನಾಥಸ್ವಾಮಿಯ ದರ್ಶನ ಮಾಡಿಕೊಂಡು ಹೋಗಲು ಬಂದೆವು. ಹಾಗೇತಮ್ಮ ಅತಿಥಿಸತ್ಕಾರ, ಶಿವಭಕ್ತಿಗಳ ಕತೆ ಕೇಳಿ ಇತ್ತ ಬಂದೆವು!" ಎಂದ ರವಿಕೀರ್ತಿ.

"ತುಂಬಾ ಸಂತೋಷ! ತಾವು ಇಲ್ಲಿಗೆ ಅಪರಿಚಿತರು. ತಮಗೆ ಇಲ್ಲಿ ಎಷ್ಟು ದಿನ ಬೇಕೋ ಅಷ್ಟು ದಿನ ಇದ್ದು, ನೋಡಬೇಕಾದ ದೇವಮಂದಿರ ಗಳನ್ನೆಲ್ಲಾ ನೋಡಿಕೊಂಡು ನಿಧಾನವಾಗಿ ಮುಂದಕ್ಕೆ ಪ್ರಯಾಣ ಬೆಳೆಸಬೇಕು! ಇದನ್ನು ತಮ್ಮ ಕುಟೀರವೆಂದೇ ತಿಳಿಯಬೇಕು! ತಮ್ಮಂತಹ ಶಿವಭಕ್ತರ ಪಾದಧೂಳಿಯಿಂದ ಈ ಮನೆ ಪಾವನವಾಯಿತು!" ಎಂದು ಹೇಳಿ ಅವನನ್ನು ತನ್ನ ಮನೆಯಲ್ಲಿಯೇ ಉಳಿಸಿಕೊಂಡು, ಅವನಿಗೆ ಬೇಕಾದ ಎಲ್ಲ ವ್ಯವಸ್ಥೆ ಗಳನ್ನೂ ತಾನೇ ಮಾಡಿಕೊಟ್ಟನು.

ಅಲ್ಲಿದ್ದಷ್ಟು ಕಾಲವೂ ರವಿಕೀರ್ತಿಗೆ ಮುಳ್ಳಿನ ಮೇಲೆ ನಿಂತಂತೆ ಆಗಿತ್ತು. ಸಿರಿಯಾಳಶೆಟ್ಟಿಯು ನಿಜವಾದ ಶ್ರದ್ಧಾವಂತ ಶಿವಭಕ್ತನೂ, ಉದಾರಿಯೂ ಆಗಿರುವನೆಂಬುದರ ಬಗ್ಗೆ ಸಂಶಯ ಉಳಿಯಲಿಲ್ಲ. ಅವನು ಅತಿಥಿ ಸತ್ಕಾರ ಕ್ಕಾಗಿ ಏನು ಮಾಡಲೂ ಸಿದ್ಧನಿದ್ದನು. ಆದರೆ, ರಣರಂಗದಲ್ಲಿ ಶಸ್ತ್ರ ಹಿಡಿದು ನಿಂತಾಗ, ವೀರಾಗ್ರಣಿಯಂತೆ, ಜೀವದ ಹಂಗು ತೊರೆದು ಹೋರಾಡಬಲ್ಲವ ನಾಗಿದ್ದನು. ಅಂತಲೇ ಅವನು ಪಲ್ಲವ ಮಹೇಂದ್ರವರ್ಮನ ಪ್ರೀತಿವಿಶ್ವಾಸ ಗಳಿಗೂ, ಅಭಿಮಾನ ಗೌರವಗಳಿಗೂ ಪಾತ್ರನಾಗಿದ್ದನು.

ರವಿಕೀರ್ತಿಯು ಸಿರಿಯಾಳಶೆಟ್ಟಿಯ ಅತಿಥಿಯಾಗಿದ್ದುಕೊಂಡೇ ತಾನು ಚಾಲುಕ್ಯರ ಕಡೆಯ ಗೂಢಚಾರನೆಂಬುದನ್ನು ತೋರ್ಪಡಿಸದೆ, ಅವನಿಂದ ಅನೇಕ ಮಹತ್ವದ ಸಂಗತಿಗಳನ್ನು ಸಂಗ್ರಹಿಸಿದನು. ಅವುಗಳಲ್ಲಿ ಪಲ್ಲವ ಮಹೇಂದ್ರವರ್ಮನು ಪೊಳ್ಳಲೂರಿನ ವಿಜಯದಿಂದ ಹಿಗ್ಗಿ ಚಾಲುಕ್ಯರ ಬಗ್ಗೆ ನಿರ್ಲಕ್ಷ್ಯದಿಂದ ಇರುವನೆಂಬುದು ಒಂದು. ಅಲ್ಲದೆ ಒಮ್ಮೆ ಸೋತು ಓಡಿ ಹೋಗಿರುವ ಚಾಲುಕ್ಯ ದಂಡು ಮತ್ತೆ ಪಲ್ಲವರ ತಂಟೆಗೆ ಬರಲು ಅನೇಕ ವರ್ಷ ಗಳೇ ಬೇಕಾಗುವುದೆಂದು ಅವನು ತಿಳಿದು, ಕಾಂಚಿಯ ರಕ್ಷಣೆಯ ಬಗ್ಗೆ ಔದಾ ಸೀನ್ಯ ವಹಿಸಿದ್ದನು. ಅವನು ತನ್ನ ಕಡೆಗೆ ಒಲಿದು ಬಂದ ವಿಷ್ಣುವರ್ಧನನನ್ನು ತನ್ನ ಮಾಂಡಲೇಶ್ವರನೆಂದು ಪರಿಗ್ರಹಿಸಿ, ಅವನನ್ನು ರಾಜಧಾನಿಯಲ್ಲಿ ಅತಿಥಿ ಯಾಗಿ ಉಳಿಸಿಕೊಂಡು ಸತ್ಕರಿಸುತ್ತಿರುವ ಸಂಗತಿಯೂ ತಿಳಿಯಿತು.

ಇಂದಲ್ಲ ನಾಳೆ ತಾನು ಪಲ್ಲವರ ಸಹಾಯದಿಂದ ಚಾಲುಕ್ಯ ಸಾಮ್ರಾಟ ನಾಗುವ ಕನಸಿನಲ್ಲಿ ವಿಷ್ಣುವರ್ಧನನು ಮೈಮರೆತಿದ್ದನು. ತಾನು ಸ್ವತಂತ್ರ ಸಾಮ್ರಾಟನೆಂದು ಘೋಷಿಸಿಕೊಂಡು, ಪುಲಿಕೇಶಿಯ ವಿರುದ್ಧ ದಂಗೆ ಎದ್ದಿದ್ದರೂ ವೆಂಗಿಮಂಡಲದ ರಕ್ಷಣೆಯ ಬಗ್ಗೆ ಹೆಚ್ಚಿನ ಆಸಕ್ತಿ ಪಡೆದಿರಲಿಲ್ಲ. ಇದೆಲ್ಲಾ ಸಂಗತಿಗಳನ್ನೂ ತಿಳಿದಮೇಲೆ ಚಾಲುಕ್ಯರ ದಂಡು ಹಠಾತ್ತನೆ ಬಂದು ಕಾಂಚಿಯ ಮೇಲೆ ದಾಳಿ ಇಟ್ಟರೆ, ಹೆಚ್ಚು ಕಷ್ಟವಿಲ್ಲದೆ ವಶವಾಗುವುದೆಂದು ರವಿಕೀರ್ತಿ ಯೋಚಿಸಿದನು.

ಅವನು ಸಮಂತಭದ್ರನಿಗೆ ಈ ಎಲ್ಲ ವಾರ್ತೆಯನ್ನು ರಹಸ್ಯವಾಗಿ ಕಳುಹಿಸಿ ಮುಂದೆ ಬರಲಿರುವ ಶಿವರಾತ್ರಿಯ ದಿನ ಹಠಾತ್ತನೆ ದಂಡೆತ್ತಿ ಬಂದು ಕಾಂಚಿಯನ್ನು ಮುತ್ತಬೇಕೆಂದು ಕೇಳಿಕೊಂಡನು. ಈ ಅವಧಿಯಲ್ಲಿ ಶಿವಭಕ್ತರ ವೇಷದಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಂಚಿಯಲ್ಲಿ ಸೇರಿಕೊಂಡು, ಹೆಚ್ಚು ರಕ್ತಪಾತ ವಿಲ್ಲದೆ ರಾಜಧಾನಿಯನ್ನೂ ದೊರೆಯಾದ ಮಹೇಂದ್ರವರ್ಮನನ್ನೂ ವಿಷ್ಣುವರ್ಧನನನ್ನೂ ಸೆರೆಹಿಡಿಯಲು ಒಳಗಿನಿಂದ ಪಿತೂರಿ ಮಾಡುವುದಾಗಿಯೂ ತಿಳಿಸಿದನು. ಅವನ ಆದೇಶದಂತೆ ಉತ್ತರದೇಶದ ಕಡೆಯಿಂದ ಶಿವಭಕ್ತರಂತೆ ವೇಷ ಧರಿಸಿ ಬಂದು, ಚಾಲುಕ್ಯ ಸೈನ್ಯದ ಅನೇಕ ಮಂದಿ ಗೂಢಚಾರರೂ, ಸೈನಿಕರೂ ಶಿವರಾತ್ರಿಯ ವೇಳೆಗೆ ಕಾಂಚಿಯಲ್ಲಿ ನೆರೆದರು.

ಕಾಂಚಿಯ ಏಕಾಂಬರನಾಥಸ್ವಾಮಿಯ ಉತ್ಸವವನ್ನೂ ಕಾಮಾಕ್ಷಮ್ಮನವರ ಉತ್ಸವವನ್ನೂ ಶಿವರಾತ್ರಿಯಂದು ರಾಜಧಾನಿಯ ಜನತೆ ಹೆಚ್ಚು ಸಡಗರ, ವೈಭವಗಳಿಂದ ಆಚರಿಸುತ್ತಿದ್ದರು. ಇವುಗಳಲ್ಲಿ ಪಾಲುಗೊಳ್ಳಲು ಬಂದ ಭಕ್ತರ ಮೇಲೆ ಹೆಚ್ಚಿನ ಕಾವಲು ಇರಲಿಲ್ಲ. ಈ ಉತ್ಸವಗಳಲ್ಲಿ ಅದರ ಸಂಬಂಧದಲ್ಲಿ ನಡೆಯಲಿದ್ದ ವಿವಿಧ ಮನೋರಂಜನೆಗಳಲ್ಲಿ ಭಾಗವಹಿಸಲು ರವಿಕೀರ್ತಿಯ ಕಡೆಯವರು ಸಹಸ್ರಸಹಸ್ರ ಸಂಖ್ಯೆಯಲ್ಲಿ, ಭಿಕ್ಷುಕರಂತೆ, ವರ್ತಕರಂತೆ, ದೊಂಬರಂತೆ, ಹಗಲು ವೇಷದವರಂತೆ, ಶಿವಕೀರ್ತನಕಾರರಂತೆ, ಸಂಗೀತಗಾರರಂತೆ, ಜಂಗಮರಂತೆ, ಬೈರಾಗಿಗಳಂತೆ, ಬಂದು ಬಿಡಾರ ಹೂಡಿದರು.

ಶಿವರಾತ್ರಿಯ ದಿನ ರಾಜಧಾನಿಯ ಜನತೆ, ಉಪವಾಸಗಳಲ್ಲೂ, ಶಿವಚಿಂತನೆ ಧ್ಯಾನಗಳಲ್ಲೂ ಇನ್ನಿತರ ಮನೋರಂಜನೆಗಳಲ್ಲೂ ತೊಡಗಿರುವಾಗ, ಮಧ್ಯರಾತ್ರಿಯ ವೇಳೆಗೆ ನಗರಮಧ್ಯಭಾಗದಲ್ಲಿ ಇದ್ದಕ್ಕಿದ್ದಂತೆ ಕೋಲಾಹಲ

ಉಂಟಾಯಿತು. ಜನ ಗಾಬರಿಗೊಂಡು ಅತ್ತ ಓಡಿದರು.

ಇದೇ ಸಮಯದಲ್ಲಿ ನಗರದ ಇತರ ಕಡೆಗಳಲ್ಲೂ ಗದ್ದಲಕ್ಕೆ ಕಾರಣವಾಯಿತು. ಪುಲಿಕೇಶಿಯ ಸೈನಿಕರು ನಿಶ್ಚಿತವೇಳೆಗೆ ಸರಿಯಾಗಿ ಗುಂಪುಗಳಲ್ಲಿ ಹೊರಟು ಕೋಟೆಬಾಗಿಲನ್ನು ಒಡೆದು ಹೊರಗೆ ಅವರಿಗಾಗಿ ಕಾಯುತ್ತಾ ಕುಳಿತಿದ್ದ ಸಮಂತಭದ್ರನ ಸೈನಿಕರಿಗೆ ಒಳಗೆ ಬರಲು ಸಂಕೇತಕೊಟ್ಟಿದ್ದರು. ಅವನ್ನು ಅರಿತು ಚಾಲುಕ್ಯರ ದಂಡು ಹಠಾತ್ತನೆ ಬಂದು ಕಾಂಚಿಯನ್ನು ಮುತ್ತಿ ಯಾವುದೇ ಪ್ರತಿಭಟನೆಯಿಲ್ಲದೆ ಅದನ್ನು ಆಕ್ರಮಿಸಿತು.

ಮೊದಲು ಸಮಂತಭದ್ರನ ಸೈನಿಕರು ಶಿಬಿರದಮೇಲೆ ಬಿದ್ದು ಅಲ್ಲಿದ್ದ ಶಸ್ತ್ರಾಸ್ತ್ರಗಳನ್ನೂ ಇನ್ನಿತರ ಯುದ್ಧೋಪಕರಣ ವಸ್ತುಗಳನ್ನೂ ವಶಪಡಿಸಿಕೊಂಡರು. ಅವರ ಗುಡಾರಗಳಿಗೆ ಬೆಂಕಿ ಇಟ್ಟಿದ್ದರು. ಹಠಾತ್ತನೆ ಒದಗಿದ ಈ ದಾಳಿಯಿಂದ ಪಲ್ಲವರ ಸೈನ್ಯ ಎಚ್ಚರಗೊಳ್ಳುವ ಮೊದಲೇ ಅವರು ಶತ್ರುಗಳ ಕೈಗೆ ಸಿಕ್ಕಿ ಹತರಾಗಿದ್ದರು. ಇನ್ನು ಕೆಲವರು ಗಾಯಗೊಂಡು ಉರುಳಿದರು. ಮತ್ತೆ ಕೆಲವರು ಸೆರೆಸಿಕ್ಕಿದರು. ಉಳಿದವರು ದಿಗ್ಭ್ರಾಂತರಾಗಿ ಮನಸ್ಸು ಬಂದ ಕಡೆ ಓಡಿ ತಲೆಮರೆಸಿಕೊಂಡರು.

ಇಷ್ಟೆಲ್ಲ ನಡೆಯುವಾಗ, ಸಮಂತಭದ್ರನು ತನ್ನ ದಳದೊಡನೆ ಹೊರಟು ಯಾವುದೇ ಸುಳಿವು ಕೊಡದೆ, ಪಲ್ಲವ ಮಹೇಂದ್ರವರ್ಮ ಹಾಗೂ, ವಿಷ್ಣುವರ್ಧನರ ಅರಮನೆಗಳ ಮೇಲೆ ದಾಳಿ ಇಟ್ಟು, ಅವರನ್ನು ಸೆರೆಹಿಡಿದಿದ್ದನು.

ಇದೆಲ್ಲವೂ ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗೆ ನಡೆದುಹೋಗಿತ್ತು. ಬಂದಿರುವ ಅಪಾಯವೇನೆಂದು ಅರಿಯುವ ಮೊದಲೇ ಮಹೇಂದ್ರವರ್ಮನೂ, ನರಸಿಂಹವರ್ಮನೂ ಶತ್ರುಗಳ ಕೈಸೆರೆ ಸಿಕ್ಕಿದ್ದರು. ಅಷ್ಟೇ ಅಲ್ಲ, ಅವರ ಆಶ್ರಯಕ್ಕೆ ಬಂದಿದ್ದ ವಿಷ್ಣುವರ್ಧನನು ಶತ್ರುಗಳಿಗೆ ಸಿಕ್ಕಿಬಿದ್ದುದರ ಜೊತೆಗೆ ಕಾಂಚಿಯು ಹೆಚ್ಚು ರಕ್ತಪಾತ, ಹೋರಾಟವಿಲ್ಲದೆ ಪಲ್ಲವರ ಕೈಬಿಟ್ಟು ಹೋಗಿತ್ತು. ಇವೆಲ್ಲ ಮಿಂಚಿನಂತೆ ನಡೆದುಹೋಗಿತ್ತು. ಎಲ್ಲವೂ ರವಿಕೀರ್ತಿಯು ಮಾಡಿದ್ದ ಕಾರ್ಯಕ್ರಮದಂತೆ ನಡೆದಿತ್ತು.

ಮರುದಿನ ಬೆಳಗಾದಾಗ, ಪಲ್ಲವರ ರಾಜಧಾನಿಯೂ, ಶೈವರ ಪುಣ್ಯಕ್ಷೇತ್ರವೂ ಆಗಿದ್ದ ಕಾಂಚಿನಗರವು ಚಾಲುಕ್ಯರ ವಶವಾಗಿತ್ತು !

ಚಾಲುಕ್ಯರ ಸೈನ್ಯ ತನಗೆ ದೊರೆತ ದಿಗ್ವಿಜಯದಿಂದ ಹಿಗ್ಗಿ, ರಾಜ

ಥಾನಿಯ ನಿರಪರಾಧಿ ಜನತೆಯ ಮೇಲೆ ಪೊಳ್ಳಲೂರಿನಲ್ಲಿ ಉಂಟಾದ ಸೋಲಿಗೆ ಪ್ರತಿಯಾಗಿ ಸೇಡು ತೀರಿಸಿಕೊಂಡರು. ಅವರು ಮನೆಗಳನ್ನು ಲೂಟಿ ಮಾಡಿದರು. ಕೈಗೆ ಸಿಕ್ಕಿದುದನ್ನು ದೋಚಿದರು. ಪ್ರತಿಭಟಿಸಿದವರನ್ನು ನಿಷ್ಕರುಣೆಯಿಂದ ಕೊಂದರು. ಮನೆಗಳನ್ನು ಬೆಂಕಿ ಇಟ್ಟು ಸುಟ್ಟರು. ಹೆಂಗಸರು ಮಕ್ಕಳೆನ್ನದೆ ವಿರೋಧಿಸಿದವರನ್ನು ಕೂರ್ಗತ್ತಿಗೆ ಬಲಿಗೊಟ್ಟರು. ಇಷ್ಟೆಲ್ಲ ಈ ಹತ್ಯಾಕಾಂಡ ದಂಡನಾಯಕರಾದ ಸಮಂತಭದ್ರ ರವಿಕೀರ್ತಿ ಮುಂತಾದವರಿಗೆ ತಿಳಿಯದಂತೆ ನಡೆದುಹೋಗಿತ್ತು. ಅವರು ಕಾಂಚಿಯ ನಿವಾಸಿಗಳ ನೆರವಿಗೆ ಬರುವ ವೇಳೆಗೆ, ಸಂಪದ್ಭರಿತವಾದ ಕಾಂಚಿಯು ಸ್ಮಶಾನ ಸದೃಶವಾಗಿತ್ತು. ಜನ ದಿಗ್ಭ್ರಾಂತರಾಗಿ ಓಡುತ್ತಿದ್ದರು.

ಸಮಂತಭದ್ರನು ಅವರಿಗೆ ಅಭಯ ನೀಡಿ, ಕೂಡಲೇ ಸೈನಿಕರ ದೌರ್ಜನ್ಯ ಕೃತ್ಯಗಳನ್ನು ನಿಲ್ಲಿಸಿ ಹತೋಟಿಗೆ ತರಲು ತಕ್ಕ ಕ್ರಮ ಕೈಗೊಂಡನು. ಈ ವೇಳೆಗೆ ನಡೆಯಬೇಕಾಗಿದ್ದ ಹತ್ಯಾಕಾಂಡ ನಡೆದುಹೋಗಿತ್ತು. ಕಾಂಚಿನಗರದ ಸಂಪತ್ತೆಲ್ಲವೂ ಶತ್ರು ಸೈನಿಕರಿಗೆ ಸೂರೆಯಾಗಿತ್ತು. ಅವುಗಳನ್ನು ಸೈನಿಕರಿಂದ ಕಿತ್ತುಕೊಂಡು, ಸಂಬಂಧಪಟ್ಟವರಿಗೆ ಹಿಂತಿರುಗಿಸುವ ಪ್ರಯತ್ನ ವಿಫಲವಾಗಿತ್ತು. ಎಲ್ಲೆಲ್ಲೂ ಹಾಹಾಕಾರ! ಎಲ್ಲೆಲ್ಲೂ ಆಕ್ರಂದನ! ಎಲ್ಲೆಲ್ಲೂ ಶಿವಭಕ್ತರ ವೇಷದಲ್ಲಿ ಬಂದು ತಮ್ಮನ್ನು ವಂಚಿಸಿದ ಚಾಲುಕ್ಯ ಸೈನಿಕರನ್ನು ವಾಚಾಮಗೋಚರವಾಗಿ ದೂಷಿಸುವವರೇ !

ಇಷ್ಟಕ್ಕೆಲ್ಲ ತನ್ನ ನಿರ್ಲಕ್ಷವೇ ಕಾರಣವಾಯಿತೆಂದು ಮಹೇಂದ್ರವರ್ಮನಿಗೆ ತುಂಬಾ ವ್ಯಥೆಯಾಗಿತ್ತು. ಅವನು ನಿರ್ವಾಹವಿಲ್ಲದೆ, ಚಾಲುಕ್ಯರ ಕೈಯಿಂದ ಕಾಂಚಿ ಸಂಪೂರ್ಣವಾಗಿ ನಾಶವಾಗುವುದನ್ನು ತಪ್ಪಿಸುವ ಸಲುವಾಗಿ, ಸಮಂತಭದ್ರನಲ್ಲಿ ಸ್ನೇಹಭಿಕ್ಷೆ ಬೇಡಿದನು. ರವಿಕೀರ್ತಿಯ ಪ್ರಯತ್ನದಿಂದ ಪಲ್ಲವರಿಗೂ, ಚಾಲುಕ್ಯರಿಗೂ ಗೌರವಪೂರ್ಣವಾದ ಒಪ್ಪಂದವೇರ್ಪಟ್ಟಿತು.

ಅದರಂತೆ ಮಹೇಂದ್ರವರ್ಮನು ಚಾಲುಕ್ಯರ ಮಹಾಮಂಡಲೇಶ್ವರನಾಗಿರಲು ಒಪ್ಪಿಕೊಂಡನು. ಅಲ್ಲದೆ ತಾನು ಆಶ್ರಯ ಕೊಟ್ಟಿದ್ದ ವಿಷ್ಣುವರ್ಧನನನ್ನು ಶತ್ರುಗಳಿಗೆ ಬಿಟ್ಟುಕೊಡಲು ಸಮ್ಮತಿಸಿದನು. ಚಾಲುಕ್ಯರಿಗೆ ವೆಂಗಿಮಂಡಲವನ್ನು ಬಿಟ್ಟುಕೊಡಲು ಒಪ್ಪಿದನು. ಆದರೆ ತನ್ನ ಬಳಿ ಆಶ್ರಯ ಪಡೆದಿದ್ದ ರಾಹಪ್ಪಯ್ಯನನ್ನಾಗಲಿ, ಚಂದ್ರೋಜರನ್ನಾಗಲೀ ಶತ್ರುಗಳಿಗೆ

ಒಪ್ಪಿಸಲು ಅವನು ಸಮರ್ಥನಾಗಲಿಲ್ಲ. ಚಾಲುಕ್ಯರ ದಾಳಿ ಆರಂಭವಾದ ಕೂಡಲೇ ಇನ್ನು ಅಲ್ಲಿ ಉಳಿದರೆ ತಮಗೆ ಉಳಿಗಾಲವಿಲ್ಲವೆಂದು ಆ ಇಬ್ಬರು ದ್ರೋಹಿಗಳೂ ವೇಷಾಂತರದಿಂದ ಅಲ್ಲಿಂದ ತಪ್ಪಿಸಿಕೊಂಡಿದ್ದರು. ಅವರನ್ನು ಎಷ್ಟು ಹುಡುಕಿದರೂ ಸಿಕ್ಕದೆ ಹೋಗಿದ್ದರು.

ಪುಲಿಕೇಶಿಯು ಪಲ್ಲವರ ಮೇಲೆ ದೊರೆತ ದಿಗ್ವಿಜಯದಿಂದ ಹಿಗ್ಗದೆ ಪಲ್ಲವ ಮಹೇಂದ್ರವರ್ಮನನ್ನು ಗೌರವದಿಂದಲೇ ನಡಸಿಕೊಂಡು ಅವನಿಗೆ ಸ್ನೇಹ ಹಸ್ತವನ್ನು ನೀಡಿದನು. ಆದರೆ ತನಗೆ ದ್ರೋಹಬಗೆದು ರಾಷ್ಟ್ರಘಾತುಕ ಕಾರ್ಯ ದಲ್ಲಿ ತೊಡಗಿ, ಚಾಲುಕ್ಯವಂಶಕ್ಕೆ ಕಳಂಕತಂದ ವಿಷ್ಣುವರ್ಧನನ ಬಗ್ಗೆ ಅವನಿಗೆ ಕರುಣೆ ಉಂಟಾಗಲಿಲ್ಲ. ಅವನನ್ನು ವಿಚಾರಣೆಗೆ ಗುರಿಪಡಿಸಿ, ಸಾಮಾನ್ಯ ಪ್ರಜೆಯಂತೆ ದಂಡಿಸಬೇಕೆಂಬುದೇ ಪುಲಿಕೇಶಿಯ ಆಶಯವಾಗಿತ್ತು. ಅಂತಲೇ ಅವನು ಕೈಸೆರೆ ಸಿಕ್ಕಿದ ವಿಷ್ಣುವರ್ಧನನನ್ನು ಸೋದರನೆಂದು ತಿಳಿಯದೆ, ರಾಷ್ಟ್ರ ದ್ರೋಹಿಯಂತೆಯೇ ನಡೆಸಿಕೊಂಡು, ಸೆರೆಮನೆಯಲ್ಲಿ ಇರಿಸಿದನು.

ನಿಶ್ಚಿತವಾದ ದಿನ ಬಹಿರಂಗ ನ್ಯಾಯಾಲಯಕ್ಕೆ ಸಾಮಾನ್ಯ ಸೆರೆಯಾಳಿ ನಂತೆ ಕರೆತಂದು ಆಸ್ಥಾನಿಕರ ಸಮ್ಮುಖದಲ್ಲಿ ನಿಲ್ಲಿಸಲಾಯಿತು. ನ್ಯಾಯ ತೀರ್ಮಾನದ ವೈಖರಿಯನ್ನು ನೋಡಲು ನಗರದ ಗಣ್ಯರೆಲ್ಲರೂ ಅಲ್ಲಿ ನೆರೆದಿದ್ದರು.

ವಿಚಾರಣೆಗೆ ಆರಂಭವಾಯಿತು.

ಸಾಮ್ರಾಟರ ಆದೇಶದಂತೆ ಪ್ರಧಾನ ಅಮಾತ್ಯ ಸಮಂತಭದ್ರನು ವಿಷ್ಣು ವರ್ಧನನು ಬಗೆದ ದ್ರೋಹಚಿಂತನೆಯನ್ನೆಲ್ಲಾ ನ್ಯಾಯಮೂರ್ತಿಗಳಿಗೂ ಧರ್ಮಾವತಾರರಿಗೂ ನಿವೇದಿಸಿದನು. ಜನ ಅವಾಕ್ಕಾಗಿ ಎಲ್ಲವನ್ನೂ ಆಲಿ ಸಿದರು.

ಅನಂತರ ವಿಷ್ಣುವರ್ಧನನು ಎದ್ದು ನಿಂತು, ಆಸ್ಥಾನಿಕರನ್ನೊಮ್ಮೆ ಸಾಮ್ರಾಟರನ್ನೊಮ್ಮೆ ನೋಡಿ, ಗಂಭೀರವಾಗಿ ಹೇಳಿದನು :

"ಪ್ರಭು, ನಾನು ಸಾಮ್ರಾಜ್ಯದ ಉಪ್ಪುಂಡು ಬೆಳೆದಿದ್ದರೂ, ಸಾಮ್ರಾ ಜ್ಯಕ್ಕೆ ದ್ರೋಹ ಬಗೆದಿರುವ ನೀಚ. ಅಮಾತ್ಯರಾದ ಸಮಂತಭದ್ರರು ಆರೋ ಪಿಸಿರುವ ಎಲ್ಲ ಅಪರಾಧಗಳನ್ನೂ ನಾನು ಮಾಡಿದ್ದೇನೆ. ಇವೆಲ್ಲವೂ ನನ್ನ

ಸ್ವಯಂಕೃತಾಪರಾಧಗಳು. ಆ ಬಗ್ಗೆ ನನಗೆ ಪಶ್ಚಾತ್ತಾಪ ಉಂಟಾಗಿದೆ. ಆದರೆ ಈಗ ಪಶ್ಚಾತ್ತಾಪಪಟ್ಟು ಪ್ರಯೋಜನವಿಲ್ಲ. ಧರ್ಮಾವತಾರರು ಯಾವ ಶಿಕ್ಷೆಯನ್ನು ವಿಧಿಸುವರೋ ಅದನ್ನು ಸಂತೋಷದಿಂದ ಅನುಭವಿಸುತ್ತೇನೆ !" ಎಂದನು.

ಈ ಮಾತು ಸಭಿಕರ ಮೇಲೆ ವಿಲಕ್ಷಣಪರಿಣಾಮ ಉಂಟುಮಾಡಿತು. ಎಲ್ಲರ ಹೃದಯುಗಳಲ್ಲಿ ಸಖೇದಾಶ್ಚರ್ಯಗಳು ಮೂಡಿದವು. ಅವರಿಗೆ ಇಷ್ಟೆಲ್ಲ ದೇಶಪ್ರೇಮದಿಂದ ಕೂಡಿದ ಸ್ವಾಭಿಮಾನಿಯಾದ ಯುವರಾಜಕುಮಾರನು ಕುಲ ಶತ್ರುಗಳಾದ ಪಲ್ಲವರೊಡನೆ ಹೇಗೆ ಸೇರಿಕೊಂಡನೆಂದು ಆಶ್ಚರ್ಯ; ಅವರು ಕೌತುಕದಿಂದ ವಿಚಾರಣೆಯನ್ನು ನಿರೀಕ್ಷಿಸಿದರು.

"ನಿಮ್ಮಂತಹ ಸ್ವಾಮಿನಿಷ್ಠ ರಾಜಬಂಧುಗಳು ಅಧಿಕಾರಲಾಲಸೆಯಿಂದ ಕುಲದ್ರೋಹಿಗಳೊಂದಿಗೆ ಸೇರಿಕೊಂಡರೆ ನಂಬುವುದು ಕಷ್ಟ. ಪಿತೃಸಮಾನರಾದ ಸಾಮ್ರಾಟರಲ್ಲಿ ನಿಮ್ಮ ಹೃದ್ಗತವನ್ನು ತಿಳಿಸಿದ್ದರೆ, ಅವರೇ ನೀವು ಬಯಸುವ ಸಾರ್ವಭೌಮ ಪದವಿಯನ್ನು ಅನುಗ್ರಹಿಸುತ್ತಿರಲಿಲ್ಲವೆ ? ಚಾಲುಕ್ಯ ಸಾಮ್ರಾಜ್ಯದ ಉಪ್ಪುಂಡೂ ಈ ಬಗೆಯ ದ್ರೋಹಕ್ಕೆ ಎಳಸಿದಿರಾ ?"

ಅಮಾತ್ಯ ಸಮಂತಭದ್ರ ಪ್ರಶ್ನಿಸಿದ.

"ಅಮಾತ್ಯರೇ, ನಾನು ತಿಳಿಯದೆ ಎಡುಕಿದೆ. ಆ ದ್ರೋಹಿ ರಾಹಪ್ಪಯ್ಯನ ಮಾತು ಕೇಳಿ ಕೆಟ್ಟೆ. ಆ ದ್ರೋಹಿಯೇ ನನ್ನನ್ನು ರಾಜದ್ರೋಹದ, ಬಂಧು ದ್ರೋಹದ ಈ ಹೇಯಕೃತ್ಯಕ್ಕೆ ಪ್ರೇರೇಪಿಸಿದವನು. ಸಾಮ್ರಾಟರ ವಿರುದ್ಧ ನನ್ನ ಮನಸ್ಸು ಕೆಡಿಸಿದವನೇ ಅವನು. ಅವನ ಮಾತು ಕೇಳಿಕೊಂಡು ತೀರ್ಥ ರೂಪ ಸಮಾನರಾದ ಸಾಮ್ರಾಟರಿಗೆ ಕೇಡು ಬಗೆದೆ. ಉಂಡಮನೆಗೆ ದ್ರೋಹ ಬಗೆದೆ. ಆ ನೀಚನು ಸಾಮ್ರಾಟರು ಒಂದೊಂದು ಕಾರ್ಯವನ್ನು ಬಣ್ಣಗಟ್ಟಿ ಹೇಳಿ ನನ್ನ ಮನಸ್ಸನ್ನು ಕೆಡಿಸಿದ. ನಾನು ರಾಜಧಾನಿಯಲ್ಲಿ ಇದ್ದರೆ ನನ್ನಿಂದ ಸಾಮ್ರಾಜ್ಯಕ್ಕೆ ಅಪಾಯ ಒದಗಬಹುದೆಂದು ಹೆದರಿ ಸಾಮ್ರಾಟರು ನನ್ನನ್ನು ವೆಂಗಿ ಮಾಂಡಲೇಶ್ವರರನ್ನಾಗಿ ಮಾಡಿರುವರೆಂದು ಹೇಳಿದುದನ್ನೇ ನಿಜವೆಂದು ನಂಬಿದೆ. ಪಲ್ಲವರ ನೆರವಿನಿಂದ ಸಿಂಹಾಸನವನ್ನೇರಲು ಬಯಸಿ ರಾಜದ್ರೋಹಿ ಯಾದೆ. ನನ್ನ ಅಪರಾಧ ಎಷ್ಟು ಘೋರವೆಂದು ನನಗೆ ತಿಳಿದಿದೆ. ತಾವು

ಯಾವ ಶಿಕ್ಷೆಯನ್ನಾದರೂ ವಿಧಿಸಬಹುದು. ಸಂತೋಷದಿಂದ ಅನುಭವಿಸುತ್ತೇನೆ !"

"ನಿಮಗೆ ನಿಜವಾಗಿಯೂ ಪಶ್ಚಾತ್ತಾಪವಾಗಿದ್ದರೆ ಈ ಬಗ್ಗೆ ಪ್ರಭುಗಳಲ್ಲಿ ಕ್ಷಮೆ ಯಾಚಿಸುತ್ತೀರಾ ?"

"ನನ್ನಂತಹ ರಾಜದ್ರೋಹಿಗೆ ಕ್ಷಮೆಯೇ ? ಇದಕ್ಕೆ ನಾನು ಅರ್ಹನೆ ?" ಆಶ್ಚರ್ಯದಿಂದ ವಿಷ್ಣುವರ್ಧನ ಕೇಳಿದ.

ಪಶ್ಚಾತ್ತಾಪದಿಂದ ಕಂಠ ಗದ್ಗದಿತವಾಗಿತ್ತು. ಕಣ್ಣೀರು ಅವನಿಗೆ ತಿಳಿಯದಂತೆ ಕಪೋಲದ ಮೇಲೆ ಒರಸುತ್ತಿತ್ತು.

ಚಣಕಾಲ ರಾಜಸಭೆಯಲ್ಲಿ ಮೌನ ಆವರಿಸಿತು. ಜನ ಅವಾಕ್ಕಾಗಿ ಸಾಮ್ರಾಟರ ಕಡೆ ನೋಡಿದರು, ಅವರ ಬಾಯಲ್ಲಿ ಏನು ಬರುವುದೋ ಎಂದು.

ಪುಲಿಕೇಶಿ ಸಾರ್ವಭೌಮರು ಪ್ರಧಾನಾಮಾತ್ಯರ ಕಡೆ ನೋಡಿದರು. ಪ್ರಧಾನ ಅಮಾತ್ಯ ಸಮಂತಭದ್ರನು ಎದ್ದು ನಿಂತು ಗಂಭೀರ ಧ್ವನಿಯಲ್ಲಿ,

"ಪ್ರಭು, ಯುವರಾಜಕುಮಾರ ವಿಷ್ಣುವರ್ಧನರು ತಾವು ನಡೆಸಿದ ಅಕೃತ್ಯಗಳನ್ನೆಲ್ಲಾ ಒಪ್ಪಿಕೊಂಡು ಅದಕ್ಕಾಗಿ ಪಶ್ಚಾತ್ತಾಪಪಡುತ್ತಿದ್ದಾರೆ. ಎಲ್ಲವೂ ಸ್ವಯಂಕೃತಾಪರಾಧವಾಗಿದ್ದರೆ ನಾವು ಈ ಬಗ್ಗೆ ಯೋಚಿಸಬೇಕಾಗಿತ್ತು. ಆದರೆ ಈ ಎಲ್ಲ ರಾಜದ್ರೋಹಕ್ಕೆ ದ್ರೋಹಿ ರಾಹಪ್ಪಯ್ಯನು ಕಾರಣನಾಗಿದ್ದಾನೆ. ಕುಮಾರರು ಸ್ವಾರ್ಥಸಾಧಕರ, ದ್ರೋಹಿಗಳ ಸವಿನುಡಿಗಳಿಗೆ ಮಾರುಹೋಗಿ ದ್ರೋಹಚಿಂತನೆ ಮಾಡಿದ್ದಾರೆ. ಅವರಿಗೆ ತಮ್ಮ ಅಪರಾಧದ ಕಲ್ಪನೆ ಬಂದಿದೆ. ಅದಕ್ಕಾಗಿ ಹೃದಯಾಂತರಾಳದಿಂದ ಪಶ್ಚಾತ್ತಾಪಪಡುತ್ತಿದ್ದಾರೆ. ಧರ್ಮಾವತಾರರಾದ ಮಹಾಪ್ರಭುಗಳು ಇದೊಂದು ಬಾರಿ ಕುಮಾರರು ದುಡುಕಿಮಾಡಿದ ಅಪರಾಧವನ್ನು ಮನ್ನಿಸಿ, ಕ್ಷಮೆದೋರಬೇಕೆಂದು ತಮ್ಮಲ್ಲಿ ನನ್ನ ನಮ್ರ ಪ್ರಾರ್ಥನೆ" ಎಂದನು.

ಸಭಾಸದರು ಇದನ್ನು ಕೇಳಿ ಸಂತೋಷೋದ್ಗಾರ ಮಾಡಿದರು. ಇದರಿಂದ ಸಾಮ್ರಾಟ್ ಪುಲಿಕೇಶಿಗೆ ಆಸ್ಥಾನಿಕರ ಅಭಿಪ್ರಾಯವೇನೆಂದು ತಿಳಿಯಿತು. ಅವನು ಧರ್ಮಾವತಾರರಾಗಿ ಕುಳಿತ ಆಸ್ಥಾನಿಕರ ತೀರ್ಪನ್ನು ಸ್ವಾಗತಿಸಿ, ವಿಷ್ಣುವರ್ಧನನು ಮಾಡಿದ ಸರ್ವಾಪರಾಧಗಳನ್ನು ಕ್ಷಮಿಸಿ ಅವನಿಗೆ ಪ್ರಾಣದಾನ ನೀಡಿದನು. ಅಷ್ಟೇ ಅಲ್ಲ, ಪ್ರಧಾನ ಅಮಾತ್ಯ ಸಮಂತಭದ್ರನ ಸಲಹೆ

ಯಂತೆ, ಮುಂದೆಂದೂ ವಿಷ್ಣುವರ್ಧನನ ಹೃದಯದಲ್ಲಿ ವಿದ್ರೋಹ ಸುಳಿಯು ದಂತೆ, ಅವನಿಗೆ ವೆಂಗಿಮಂಡಲದ ಸಾರ್ವಭೌಮಪದವಿಯನ್ನು ಅನು ಗ್ರಹಿಸಿದನು.

ಹೀಗೆ ಪುಲಿಕೇಶಿಯ ಔದಾರ್ಯ, ನಿರ್ಮಲಾಂತಃಕರಣ, ಸೋದರ ವಾತ್ಸಲ್ಯಗಳು ಕಡೆಗೂ ಮೇಲ್ಗೈಯಾಗಿ ಬಹುಕಾಲದ ಜ್ಞಾತಿ ಕಲಹದ ಬೇಗೆ ಯನ್ನು ನಂದಿಸಿ, ಸಾಮ್ರಾಜ್ಯಕ್ಕೆ ಅಮೃತವರ್ಷವನ್ನೇ ಕರೆಯಿತು.

## ೨೬

ಚಾಲುಕ್ಯ ಸೈನಿಕರು ತಮಗೆ ದೊರೆತ ವಿಜಯೋನ್ಮಾದದಲ್ಲಿ ಸಂಪದ್ಭರಿತ ವಾದ ಪಲ್ಲವ ರಾಜಧಾನಿ ಕಾಂಚಿ ನಗರವನ್ನು ಸುಟ್ಟು, ಅಪರಾಧಿ—ನಿರಪ ರಾಧಿಗಳೆಂದು ನೋಡದೆ ಎದುರಾದವರನ್ನೆಲ್ಲಾ ಖಡ್ಗಕ್ಕೆ ಬಲಿಕೊಟ್ಟು ವಾತಾ ಪಿಗೆ ಹಿಂದಿರುಗಿದರಷ್ಟೇ. ಸೋತು ಅಪಮಾನಿತನಾದ ಮಹೇಂದ್ರವರ್ಮನು ತನ್ನ ಅಳಿದುಳಿದ ಆಸ್ಥಾನಿಕರ ಹಾಗೂ ದಳಪತಿಗಳ ಸಭೆಯನ್ನು ಕರೆದನು. ಅವರ ಸಮ್ಮುಖದಲ್ಲಿ ಹೀಗೆ ಪ್ರತಿಜ್ಞೆ ಮಾಡಿದನು :

"ಕುಲಶತ್ರುಗಳಾದ ಚಾಲುಕ್ಯರ ಮೇಲೆ ಸೇಡು ತೀರಿಸಿಕೊಳ್ಳದಿದ್ದರೆ ನಾನು ಮಹೇಂದ್ರವರ್ಮನಲ್ಲ. ಮದೋನ್ಮತ್ತ ಪುಲಿಕೇಶಿಯ ಸೊಕ್ಕನ್ನು ಮುರಿದು, ವಾತಾಪಿಯನ್ನು ಸುಟ್ಟು, ಚಾಲುಕ್ಯ ಸಾಮ್ರಾಜ್ಯವನ್ನು ನಾಶ ಮಾಡದಿದ್ದರೆ ನಾನು ಪಲ್ಲವ ಮಹೇಂದ್ರವರ್ಮನಲ್ಲ. ಈ ಪ್ರತಿಜ್ಞೆ ಈಡೇರುವ ವರೆಗೆ ನಾನು ಹಂಸತೂಲಿಕಾತಲ್ಪದ ಮೇಲೆ ಪವಡಿಸುವುದಿಲ್ಲ. ಇಂದಿನಿಂದ ನಾನು ನನ್ನ ಎಲ್ಲ ಭೋಗ ಜೀವನಕ್ಕೆ ತಿಲಾಂಜಲಿಯನ್ನು ಕೊಟ್ಟಿದ್ದೇನೆ. ಈ ಮಾತು ದೇವಿ ಕಾಮಾಕ್ಷಿಯ ಆಣೆಗೂ ಸತ್ಯ !"

ಈ ಪ್ರತಿಜ್ಞೆಯನ್ನು ತನ್ನ ಜೀವಿತದಲ್ಲಿ ಈಡೇರಿಸಿಕೊಳ್ಳುವ ಯೋಗ ಮಹೇಂದ್ರವರ್ಮನ ಹಣೆಯಲ್ಲಿ ಬರೆದಿರಲಿಲ್ಲ. ಅವನು ಪುಲಿಕೇಶಿಯ ಕೈಯ

ಲ್ಲಾದ ಸೋಲು, ಅಪಮಾನಗಳ ಕಲಂಕವನ್ನು ತನ್ನ ಜೀವಿತಕಾಲದಲ್ಲಿ ತೊಡೆ ದುಹಾಕಲು ಸಮರ್ಥನಾಗಲಿಲ್ಲ. ಅವನು ಕಡೆತನಕ ಪುಲಿಕೇಶಿಯ ಸಾಮಂತ ನಾಗಿಯೇ ಇದ್ದು ಮರಣ ಹೊಂದಿದನು.

ತನ್ನ ಜೀವಿತದ ಸಂಕಲ್ಪ ಈಡೇರದೆ ಹೋದುದಕ್ಕಾಗಿ ಅವನಿಗೆ ಬಹಳ ವ್ಯಥೆಯಾಗಿತ್ತು. ಅವನು ಹತಾಶಗೊಂಡು ಕಾಹಿಲೆಯಿಂದ ಹಾಸಿಗೆಯ ಮೇಲೆ ಮಲಗಿದ್ದಾಗ, ಅವನ ಹಿರಿಯಮಗ ನರಸಿಂಹವರ್ಮನು ತಂದೆಯ ಬಳಿಗೆ ಬಂದು ತಂದೆಯನ್ನು ಸಂತೈಸಿದನು.

"ಅಪ್ಪಾಜಿ, ನೀವು ಈ ಬಗ್ಗೆ ಚಿಂತಿಸಬಾರದು. ನಾನು ಜೀವದಿಂದ ಇರುವವರೆಗೆ, ನೀವು ನಿಮ್ಮ ಪ್ರತಿಜ್ಞೆ ಈಡೇರಲಿಲ್ಲವೆಂದು ಚಿಂತಿಸಬಾರದು. ನೀವು ಕೈಗೊಂಡ ಪ್ರತಿಜ್ಞೆಯನ್ನು ಈಡೇರಿಸುವುದು ನಿಮ್ಮ ತನಯನಾದ ನನಗೆ ಸೇರಿದೆ. ಅದು ನನ್ನ ಪವಿತ್ರ ಕರ್ತವ್ಯ ಮಾತ್ರವಲ್ಲ—ನನ್ನ ಜೀವಿತದ ಪರಮ ಗುರಿಯಾಗಿದೆ. ಚಾಲುಕ್ಯರಿಂದ ಪಲ್ಲವರಿಗಾದ ಅನ್ಯಾಯ ಅಪಮಾನಗಳ ಕಲಂಕವನ್ನು ತೊಡೆಯದೆ ಇದ್ದರೆ, ನಾನು ಹುಟ್ಟಿದ ಪವಿತ್ರವಾದ ಪಲ್ಲವ ವಂಶಕ್ಕೇ ಅವಮಾನ. ನಾನು ಈ ನಿಮ್ಮ ಪ್ರತಿಜ್ಞೆಯನ್ನು ಈಡೇರಿಸಿ, ಪುಲಿ ಕೇಶಿಯಮೇಲೆ ಸೇಡುತೀರಿಸಿಕೊಳ್ಳುತ್ತೇನೆ. ನೀವು ಈ ಬಗ್ಗೆ ಕೊರಗಬಾರದು" ಎಂದು ಸಮಾಧಾನ ಹೇಳಿದನು.

ರುಗ್ಣಶಯ್ಯೆಯಲ್ಲಿ ಸಾವು ಬದುಕಿನ ಹೋರಾಟದಲ್ಲಿದ್ದ ಮಹೇಂದ್ರವರ್ಮನು ಮಗನ ಮಾತು ಕೇಳಿ ಸಮಾಧಾನದ ನಿಟ್ಟುಸಿರುಬಿಟ್ಟನು. ಅವನ ಆತಂಕ ಗೊಂಡ ಮುಖದಲ್ಲಿ ಶಾಂತಿ ಮೂಡಿತು. ಅವನು ತೃಪ್ತಿಯನ್ನು ಕಣ್ಣುಗಳಲ್ಲಿ ತುಳುಕಿಸುತ್ತಾ ಹೇಳಿದನು :

"ಮಗು, ನರಸಿಂಹ, ನಿನ್ನ ಮಾತು ಕೇಳಿ ನನ್ನ ಹೃದಯಕ್ಕೆ ಅಮೃತ ಸೇಚನೆಯಾಗಿದೆ. ಉರಿಯುತ್ತಿದ್ದ ಸೇಡಿನ ದಾವಾಗ್ನಿಗೆ ಪರ್ಜನ್ಯನ ಅನುಗ್ರಹ ವಾದಂತೆ ಮನಸ್ಸು ನೆಮ್ಮದಿಯಾಯಿತು. ಇನ್ನು ನಾನು ನಿಶ್ಚಿಂತೆಯಿಂದ ಸಾಯುತ್ತೇನೆ. ಆದರೂ ಒಂದು ಮಾತು ನಿನ್ನೊಡನೆ ಹೇಳಲೇಬೇಕು. ನಾನು ಕೈಗೊಂಡ ಪ್ರತಿಜ್ಞೆಯಲ್ಲಿ ವಿಮುಖನಾದೆ. ಇದು ನನ್ನ ಜೀವಿತದ ಸೋಲು. ನಾನು ದೇವಿಯ ಆಣೆ ಹೊತ್ತು ಸ್ವೀಕರಿಸಿದ ಪ್ರತಿಜ್ಞೆಯನ್ನು ಈಡೇರಿಸುವು ದನ್ನು ಕಾಣುವುದು ಜಗದೀಶ್ವರನ ಇಚ್ಛೆಗೆ ಬರಲಿಲ್ಲ. ನಿನ್ನ ಮೇಲೆ ನಾನು

ಗುರುತರ ಜವಾಬ್ದಾರಿಯನ್ನು ಹೊರಿಸಿ ಹೋಗುತ್ತಿದ್ದೇನೆ.

"ಪುಲಿಕೇಶಿಯು ನೀನು ತಿಳಿದಿರುವಷ್ಟು ದುರ್ಬಲನಲ್ಲ—ಅವನು ರಣ ವಿಕ್ರಮ. ಉತ್ತರಾಪಥದ ಸಾಮ್ರಾಟ್ ಹರ್ಷವರ್ಧನನನ್ನೇ ಸೋಲಿಸಿ ಪರ ಮೇಶ್ವರ—ದಕ್ಷಿಣಾಪಥೇಶ್ವರನೆಂಬ ಬಿರುದನ್ನು ಪಡೆದು ಸನ್ಮಾನಿತನಾದವನು. ಅವನಲ್ಲಿ ಅಜೇತವಾದ ಅಸಂಖ್ಯಾತ ಸೇನಾಬಲವಿದೆ. ಅವನನ್ನು ಸೋಲಿಸು ವುದು ಸುಲಭಸಾಧ್ಯವಲ್ಲ. ಅವನ ಹೆಸರನ್ನು ಕೇಳಿದರೆ ಭರತಖಂಡದ ದೊರೆ ಗಳು ನಡುಗುತ್ತಾರೆ. ಪರದೇಶಗಳ ಅರಸರೂ ಅವನ ಸ್ನೇಹಹಸ್ತವನ್ನು ಕೋರಿ ರಾಯಭಾರಿಗಳನ್ನು ಕಳುಹಿಸುತ್ತಿದ್ದಾರೆ. ಅಂದ ಮೇಲೆ ಚಾಲುಕ್ಯರ ಹೆಗ್ಗ ಳಿಕೆ ಎಂತಹುದೆಂದು ಅರಿವಿರಲಿ. ಅವನನ್ನು ಎರಡುಬಾರಿ ಎದುರಿಸಿ, ಎರಡು ಬಾರಿ ನಾವು ಪರಾಭವವನ್ನು ಅನುಭವಿಸಿದೆವು. ಈಗ ನಾವು ಸಾಮಂತರಾಗಿ ಉಳಿದು, ಇನ್ನೂ ನಮ್ಮ ರಾಜ್ಯಕೋಶಗಳನ್ನು ಕಳೆದುಕೊಳ್ಳದೆ ಇರುವುದು ಭಗವತಿ ಕಾಮಾಕ್ಷಿದೇವಿಯ ಅನುಗ್ರಹ ವಿಶೇಷದಿಂದಲೇ.

"ನಾವು ದುಡುಕಿ ಯಾವುದೇ ಕಾರ್ಯ ಕೈಗೊಳ್ಳುವಂತಿಲ್ಲ. ನಮ್ಮ ದುಡುಕು ಪಲ್ಲವಸಾಮ್ರಾಜ್ಯದ ನಾಶವಾಗಬಹುದು. ಆದುದರಿಂದ ನೀನು ಕಾರ್ಯ ಸಾಧಿಸುವ ನೆಪದಲ್ಲಿ ದುಡುಕಿ—ಯಾವುದೇ ವ್ಯರ್ಥ ಸಾಹಸಕ್ಕೆ ತೊಡಗ ಬೇಡ. ಪ್ರಬಲ ಶತ್ರುವನ್ನು ಇದಿರಿಸುವಾಗ ನಾವು ಬಹಳ ಎಚ್ಚರಿಕೆಯಿಂದ ಇರಬೇಕು. ನಾವು ಮೊದಲು ಶಕ್ತಿಸಂಚಯನ ಮಾಡಿಕೊಳ್ಳಬೇಕು. ಅನಂತರ ಸಮಯ ಸಾಧಿಸಿ, ಶತ್ರುಗಳ ಮೇಲೆ ಬಿದ್ದು ಅವರ ನಾಶವನ್ನು ಸಾಧಿಸಬೇಕು. ಸಾಮ ದಾನ ಭೇದ ದಂಡ ನೀತಿಗಳಲ್ಲಿ ಯಾವುದನ್ನೂ ನಾವು ಬಿಡಬಾರದು. ಈ ಬಗ್ಗೆ ಚತುರ ರಾಜನೀತಿಜ್ಞನಾದ ನಿನಗೆ ತಿಳಿಸಿಕೊಡಬೇಕಾದ ಸಂಗತಿ ಯಾವುದೂ ಇಲ್ಲ ನಾನು ಇದುವರೆಗೆ ಪುಲಿಕೇಶಿಯ ಮೇಲೆ ಯುದ್ಧ ಘೋಷಿ ಸದೆ ಇದ್ದುದು ಇದಕ್ಕಾಗಿ.

"ನನ್ನ ಜೀವಿತವೆಲ್ಲಾ ಸಮರ ಸಿದ್ಧತೆಯಲ್ಲೇ ಕಳೆಯಿತು. ಇಂದು ನಿನಗೆ ಸಮರ್ಥವಾದ ಪಲ್ಲವ ಸೇನೆಯನ್ನು ಬಿಟ್ಟುಹೋಗುತ್ತಿದ್ದೇನೆ. ತುಂಬಿದ ಭಂಡಾರವನ್ನೂ, ಶಸ್ತ್ರಾಗಾರವನ್ನೂ ಬಿಟ್ಟುಹೋಗುತ್ತಿದ್ದೇನೆ. ಇವುಗಳ ಸಹಾಯದಿಂದ ನೀನು ಚಾಲುಕ್ಯ ಸೈನಿಕರು ನಮ್ಮ ರಾಜಧಾನಿಯ ನಿರಪರಾಧಿ ಜನತೆಯ ಮೇಲೆ ನಡೆಸಿದ ಭೀಕರ ಅನ್ಯಾಯಗಳಿಗೆ—ಅತ್ಯಾಚಾರಗಳಿಗೆ—ಸೇಡು ತೀರಿಸಿಕೋ. ಸಾಧ್ಯವಾದರೆ, ವಾತಾಪಿಯ ಮೇಲೆ ದಂಡೆತ್ತಿ ಹೋಗಿ, ಅವನ್ನು

ಸುಟ್ಟು, ಇತಿಹಾಸದಿಂದ ಅದರ ಹೆಸರು ತೊಡೆದು ಹೋಗುವಂತೆ ಮಾಡು. ಅಲ್ಲಿಯವರೆಗೆ ನನ್ನ ಜೀವಕ್ಕೆ ಶಾಂತಿ ಇರುವದಿಲ್ಲ. ನಾನು ಈ ದೇಹದಲ್ಲಿ ಇಲ್ಲದಿದ್ದರೂ, ನಾನು ಕೈಗೊಂಡಿದ್ದ ಪ್ರತಿಜ್ಞೆ ಈಡೇರಿದಾಗಲೇ ನನಗೆ ಮುಕ್ತಿ" ಎಂದು ಹೇಳಿ ಶಾಂತನಾಗಿ ಕಣ್ಮುಚ್ಚಿ ತನ್ನ ಕಡೆಯುಸಿರನ್ನು ಬಿಟ್ಟನು.

ಈಗ ತಂದೆಯ ಪ್ರತಿಜ್ಞೆಯನ್ನು ಈಡೇರಿಸುವ ಹೊಣೆಗಾರಿಕೆ ಅವನ ನಂತರ ಸಿಂಹಾಸನವನ್ನೇರಿದ್ದ ನರಸಿಂಹವರ್ಮನ ಹೆಗಲಮೇಲೆ ಬಿದ್ದಿತ್ತು. ಇಂತಹ ಹೊಣೆಗಾರಿಕೆಯನ್ನು ಯಶಸ್ವಿಯಾಗಿ ನಿರ್ವಹಿಸಲು ಅವನು ತಕ್ಕ ಶಿಕ್ಷಣ ಪಡೆದಿದ್ದನು.

ನರಸಿಂಹವರ್ಮನು ತಂದೆಗೆ ತಕ್ಕ ಮಗನಾಗಿದ್ದನು. ಅವನಿಗೆ ಸಿಂಹ ವಿಷ್ಣುವೆಂಬ ಬಿರುದಿತ್ತು. ಶತ್ರುಗಳ ಪಾಲಿಗೆ ತಾನು ಸಿಂಹವಿಷ್ಣು ನರಸಿಂಹನೆಂದು ತಿಳಿದಿದ್ದನು. ಮಹೇಂದ್ರವರ್ಮನು ಬದುಕಿದ್ದಾಗ ಯುವರಾಜಕುಮಾರನಾಗಿ ತಂದೆಗೆ ರಾಜ್ಯಾಡಳಿತದಲ್ಲಿ ನೆರವಾಗಿದ್ದನು ಅವನು ತಂದೆಯ ನೇತೃತ್ವದಲ್ಲಿ ಪೊಳ್ಳಾಲೂರಿನ ಕಾಳಗದಲ್ಲಿ ಚಾಲುಕ್ಯರ ದಂಡನ್ನು ಸೋಲಿಸಿ ಹಿಮ್ಮೆಟ್ಟಿಸಿದ್ದನು. ಆದರೆ ಚಾಣಾಕ್ಷನಾದ ರವಿಕೀರ್ತಿಯು ಮಾಡಿದ ತಂತ್ರದಿಂದಾಗಿ, ಪಲ್ಲವರು ಸೋತು, ಶರಣಾಗಿದ್ದರು. ಅವರು ಸ್ವಾತಂತ್ರ್ಯವನ್ನು ಕಳೆದುಕೊಂಡು, ಚಾಲುಕ್ಯರಿಗೆ ಕಪ್ಪಕೊಡಲು ಒಪ್ಪಿಕೊಳ್ಳಬೇಕಾಯಿತು. ಮಾತ್ರವಲ್ಲ, ತಾವು ದ್ವೇಷಿಸುತ್ತಿದ್ದ ಪುಲಿಕೇಶಿಯನ್ನು ಸಾರ್ವಭೌಮನೆಂದು ಒಪ್ಪಿಕೊಂಡು, ಅವನ ಪಾದಚುಂಬನ ಮಾಡಬೇಕಾದ ಪರಿಸ್ಥಿತಿ ಒದಗಿತ್ತು.

ಇದು ಸ್ವಾಭಿಮಾನಿಯೂ ಸ್ವಾತಂತ್ರ್ಯಪ್ರಿಯನೂ ಆದ ನರಸಿಂಹವರ್ಮನಿಗೆ ನುಂಗಲಾಗದ ತುತ್ತಾಗಿತ್ತು. ಅವನು ತಾರುಣ್ಯದ ಬಿಸಿರಕ್ತದಲ್ಲಿ ಪುಲಿಕೇಶಿಯ ಮೇಲೆ ದಂಗೆ ಎದ್ದು, ಸ್ವಾತಂತ್ರ್ಯವನ್ನು ಘೋಷಿಸಿಕೊಳ್ಳಲು ಹಾತೊರೆಯುತ್ತಿದ್ದರೂ, ತಂದೆ ಮಹೇಂದ್ರವರ್ಮನು ತನ್ನ ಕೊನೆಗಾಲದಲ್ಲಿ ಕೊಟ್ಟಿದ್ದ ಎಚ್ಚರಿಕೆಯ ಮಾತನ್ನು ಮರೆತಿರಲಿಲ್ಲ. ದುಡುಕಿ ಯಾವುದೇ ವ್ಯರ್ಥ ಸಾಹಸ ಕೈಗೊಳ್ಳಲು ಅವನ ಮಂತ್ರಿಗಳು ಅವಕಾಶ ಕೊಟ್ಟಿರಲಿಲ್ಲ. ಅವನು ರಹಸ್ಯವಾಗಿ, ಚಾಲುಕ್ಯ ನೊಗವನ್ನು ಕಿತ್ತುಹಾಕಿ ಸ್ವಾತಂತ್ರ್ಯ ಸಾಧಿಸಿ ಪುಲಿಕೇಶಿಯ ಆಕ್ರಮಣವನ್ನು ಸಮರ್ಥರೀತಿಯಲ್ಲಿ ಎದುರಿಸಲು ಆವಶ್ಯಕವಾದ ಶಕ್ತಿ ಸಂಚಯನ ಕಾರ್ಯದಲ್ಲಿ ತೊಡಗಿದ್ದನು. ದಂಡುಕೂಡಿಸುವ ಕಾರ್ಯವೂ

ಸೈನಿಕರ ಶಿಕ್ಷಣವೂ ಶಸ್ತ್ರಾಸ್ತ್ರಗಳ ಪೂರೈಕೆಯೂ ಎಡೆಬಿಡದೆ ನಡೆದಿತ್ತು. ಅವನು ಚಾಲುಕ್ಯರ ಮೇಲೆ ಯುದ್ಧ ಘೋಷಿಸಲು ಸೂಕ್ತ ಸಮಯಕ್ಕಾಗಿ ಕಾಯುತ್ತ ಕುಳಿತಿದ್ದನು.

ಅವನು ನಿರೀಕ್ಷಿಸುತ್ತಿದ್ದ ಸದವಕಾಶ ಅವನ ಸುದೈವದಿಂದ ದೊರೆತಿತ್ತು. ವಾತಾಪಿಗೆ ಹೋಗಿದ್ದ ಗೂಢಚಾರದಿಂದ ಅವನಿಗೆ ಪ್ರಿಯವಾದ ವಾರ್ತೆ ಬಂದಿತ್ತು. ಸಾಮ್ರಾಟ್ ಪುಲಿಕೇಶಿಯು ರಾಜಯಕ್ಷ್ಮದಿಂದ ಹಾಸಿಗೆ ಹಿಡಿದಿರುವನೆಂಬ ಸಂಗತಿ ಬಂದಿತ್ತು. ಇದನ್ನು ಕೇಳಿ ಅವನಿಗೆ ಅಮೃತ ಕುಡಿದಂತೆ ಆಯಿತು. ಅವನು ಮೊದಲು ಈ ವಾರ್ತೆಯನ್ನು ನಂಬಲಿಲ್ಲ. ಮೇಲಿಂದಮೇಲೆ ಚತುರರಾದ ಗೂಢಚಾರರನ್ನು ಕಳುಹಿಸಿ, ಈ ವಾರ್ತೆ ಅಕ್ಷರಶಃ ನಿಜವೆಂದು ಖಚಿತಪಡಿಸಿಕೊಂಡನು.

ಈಗ ನರಸಿಂಹವರ್ಮನು ದೀರ್ಘಕಾಲದಿಂದ ನಿರೀಕ್ಷಿಸುತ್ತಿದ್ದ ಸುಸಮಯ ಬಂದೊದಗಿತ್ತು. ಸಾಮ್ರಾಟ್ ಪುಲಿಕೇಶಿಯು ತನ್ನ ತಂದೆಯ ದಾರಿಯಲ್ಲೇ ನಡೆದು ಕ್ಷಯರೋಗಕ್ಕೆ ತುತ್ತಾಗಿದ್ದನು. ಕೀರ್ತಿವರ್ಮನನ್ನು ಆಹುತಿ ತೆಗೆದುಕೊಂಡಿದ್ದ ಈ ಭಯಂಕರ ವ್ಯಾಧಿ ಚಾಲುಕ್ಯಕಂಠಾಭರಣನಾಗಿದ್ದ ಪರಮೇಶ್ವರ ಪುಲಿಕೇಶಿಯನ್ನೂ ಆಹುತಿ ತೆಗೆದುಕೊಂಡಿತ್ತು. ಈ ಸುದ್ದಿಯನ್ನು ಕೇಳಿ, ತಾನು ಚಾಲುಕ್ಯರಮೇಲೆ ಸೇಡು ತೀರಿಸಿಕೊಳ್ಳಲು ಇದು ಯೋಗ್ಯ ಸುಸಂಧಿ ಎಂದು ನರಸಿಂಹವರ್ಮನು ಆನಂದದಿಂದ ಹಿಗ್ಗಿದನು. ಬಂಧಮುಕ್ತತೆಯನ್ನು ಬಯಸುತ್ತಿದ್ದ ಹಕ್ಕಿಗೆ ಈಗ ಪಂಜರದ ಬಾಗಿಲು ತೆರೆದಂತೆ ಆಗಿತ್ತು.

ನರಸಿಂಹವರ್ಮನು ತನ್ನ ನಿರ್ಧಾರವನ್ನು ಕಾರ್ಯಗತಗೊಳಿಸಲು ಈ ಬಾರಿ ಹಿಂದುಮುಂದೆ ನೋಡಲಿಲ್ಲ.. ಅವನು ಕಾಂಚಿಯಲ್ಲಿ ಬೀಡುಬಿಟ್ಟಿದ್ದ ಚಾಲುಕ್ಯಸೈನ್ಯವನ್ನೂ, ಅಧಿಕಾರಿಗಳನ್ನೂ, ರಾಯಭಾರಿಗಳನ್ನೂ ಹೊಡೆದಟ್ಟಿ, ಸ್ವಾತಂತ್ರ್ಯವನ್ನು ಘೋಷಿಸಿದನು. ಅಲ್ಲದೆ ಇದುವರೆಗೆ ಚಾಲುಕ್ಯರಾಜಬೊಕ್ಕಸಕ್ಕೆ ಸಲ್ಲಿಸುತ್ತಿದ್ದ ಕಪ್ಪಕಾಣಿಕೆಗಳನ್ನು ನಿಲ್ಲಿಸಿದನು. ಅದನ್ನು ಒತ್ತಾಯದಲ್ಲಿ ಸ್ವೀಕರಿಸಲು ಬಂದ ರಾಜಭಟರನ್ನು ಅಪಮಾನಗೊಳಿಸಿ, ದರ್ಪದ ಉತ್ತರವನ್ನು ಕೊಟ್ಟು ಕಳುಹಿಸಿದನು.

"ನಿಮ್ಮ ಪುಲಿಕೇಶಿ ಸಾರ್ವಭೌಮರಿಗೆ ನಿಶ್ಚಿಂತೆಯಿಂದ ಸಾಯುವುದು ಬೇಕಿದ್ದರೆ, ಪಲ್ಲವಸಿಂಹವನ್ನು ಮತ್ತೆ ಕೆರಳಿಸಬಾರದೆಂದು ತಿಳಿಸಿರಿ, ನಮ್ಮ ಮೇಲೆ

ದಂಡೆತ್ತಿ ಬಂದುದಾದರೆ, ಸಿಂಹವಿಷ್ಣುವಿನ ಕೈಯಿಂದ ಪುಲಿಕೇಶಿಯು ಮುಖ ಭಂಗವಾಗುವುದೆಂದು ತಿಳಿಸಿರಿ."

ಇದು ಕೇವಲ ಬೆದರಿಕೆಯ ಮಾತಲ್ಲವೆಂಬುದನ್ನು ತೋರಿಸಲು ನರಸಿಂಹ ವರ್ಮನು ತಾನು ಸ್ವತಂತ್ರನೆಂದು ಘೋಷಿಸಿಕೊಂಡನು. ತನ್ನ ಸ್ವಾತಂತ್ರ್ಯ ಘೋಷಣೆಯಿಂದ ತೃಪ್ತನಾಗದೆ ನೆರೆಯ ರಾಜ್ಯಗಳಾದ ಚೋಳ, ಕೇರಳ, ಪಾಂಡ್ಯರನ್ನು ಗೆದ್ದು ಅವುಗಳನ್ನು ತನ್ನ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡನು. ಆ ದೊರೆಗಳು ಚಾಲುಕ್ಯ ಸಿಂಹಾಸನಕ್ಕೆ ಅರ್ಪಿಸುತ್ತಿದ್ದ ಪೊಗದಿಯನ್ನು ತಾನೇ ಪಡೆದನು.

ಇದು ಸಾಮ್ರಾಟ್ ಪುಲಿಕೇಶಿಗೆ ನುಂಗಲಾದ ತುತ್ತಾಯಿತು. ಆದರೆ ಅವನು ಸದ್ಯದ ಪರಿಸ್ಥಿತಿಯಲ್ಲಿ ಬೇರೇನೂ ಮಾಡಲು ಸಿದ್ಧನಿರಲಿಲ್ಲ. ಅವನು ಪಲ್ಲವರ ದ್ರೋಹಚಿಂತನೆಯನ್ನು ತಿಳಿದೂ, ಆ ಬಗ್ಗೆ ಯಾವುದೇ ಉಗ್ರಕ್ರಮ ಕೈಗೊಳ್ಳಲಾಗದ ಅಸಹಾಯಸ್ಥಿತಿಯಲ್ಲಿ ಇದ್ದನು.

ನಿಜಕ್ಕೂ ಕಳೆದ ಮೂರು ತಿಂಗಳುಗಳಿಂದ ಪುಲಿಕೇಶಿಯ ದೇಹಸ್ಥಿತಿ ರಾಜಯಕ್ಷ್ಮದಿಂದ ಹದಗೆಡುತ್ತಾ ಹೋಗಿತ್ತು. ಕಳೆದ ನಾಲ್ಕೈದು ವರ್ಷ ಗಳಿಂದ ಒಳಗೊಳಗೇ ಅವನ ಅಂತಃಸತ್ವವನ್ನು ಹೀರುತ್ತಾ ನಡೆದಿದ್ದ ಈ ರಾಜ ಯಕ್ಷ್ಮ ಈಗ ಪ್ರಬಲಬೇನೆಯಾಗಿ, ಪುಲಿಕೇಶಿಯನ್ನು ಹಾಸಿಗೆ ಬಿಟ್ಟೇಳದ ಸ್ಥಿತಿಗೆ ತಂದಿತ್ತು. ಅವನು ಗಂಡುಗಲಿಯಂತೆ ಬಾಳಿ, ಜಗದೇಕಮಲ್ಲನಂತೆ ಬದುಕಿ, ಇಂದು ವೃದ್ಧಾಪ್ಯದಲ್ಲಿ ಹಾಸಿಗೆ ಹಿಡಿದಿದ್ದನು. ಇದು ಅವನಿಗೆ ಅತ್ಯಂತ ಯಾತ ನೆಗೆ ಕಾರಣವಾಗಿತ್ತು. ದೈಹಿಕಯಾತನೆಗಿಂತಲೂ ಮಾನಸಿಕ ಚಿಂತೆ ಹೆಚ್ಚಾ ಗಿತ್ತು. ದುರ್ಬಲವಾದ ದೇಹ, ದುರ್ಬಲವಾದ ಮನಸ್ಸು, ಹೊರಗಿನ ಶತ್ರುಗಳ ದಂಗೆ ಅಂತರಂಗದ ಶತ್ರುಗಳ ವಿದ್ರೋಹ ಚಿಂತನೆ ಇವುಗಳಿಂದ ದಿನದಿನಕ್ಕೂ ಪುಲಿಕೇಶಿಯ ಆರೋಗ್ಯ ಕೆಟ್ಟು, ಚಿಂತಾಜನಕವಾಗುತ್ತಾ ನಡೆದಿತ್ತು.

ಪುಲಿಕೇಶಿಗೆ ಈ ರಾಜಯಕ್ಷ್ಮ ಏಕೆ ಬಂದಿತೆಂಬುದೇ ತಿಳಿಯದಾಗಿತ್ತು. ಇದು ಯಾರದೋ ಶಾಪ, ಇಲ್ಲವೆ ಜನ್ಮಾಂತರದ ಕರ್ಮ; ತಾನು ಮಾಡಿದ ಪಾಪದ ಫಲ ಎಂದು ಅವನಿಗೆ ಮೇಲಿಂದಮೇಲೆ ಅನಿಸುತ್ತಿತ್ತು. ಏಕೆಂದರೆ ಇದುವರೆಗೆ ಸಂಯಮದ, ವೀರಜೀವನದ ಮಲ್ಲಯೋಧನಾಗಿ, ತನ್ನ ಜೀವನದ ಅಮೂಲ್ಯವಾದ ಇಪ್ಪತ್ತು ವರ್ಷಗಳನ್ನು ರಣರಂಗದಲ್ಲಿ ಕಳೆದಿದ್ದರೂ, ತನಗೇಕೆ

ಈ ಭಯಂಕರ ವ್ಯಾಧಿ ತಲೆದೋರಿತೆಂಬುದೇ ತಿಳಿಯದಾಗಿತ್ತು.

ಆದರೆ ರಾಜಪುರೋಹಿತರ, ರಾಜವೈದ್ಯರ, ಅಮಾತ್ಯರ ಪಾಲಿಗೆ ರಾಜಯಕ್ಷ್ಮ ಚಾಲುಕ್ಯವಂಶಕ್ಕೆ ಬಂದ ಶಾಪವಲ್ಲ. ಕೀರ್ತಿಶೇಷ ಕೀರ್ತಿವರ್ಮರನ್ನು ನುಂಗಿದ ಈ ವ್ಯಾಧಿಯು ಪುಲಿಕೇಶಿಯನ್ನು ಸಮೀಪಿಸಲು ಪುಲಿಕೇಶಿಯು ವಿಶ್ರಾಂತಿರಹಿತ, ಕರ್ತವ್ಯನಿಷ್ಠೆಯ ರಾಜಧರ್ಮ, ಸಂತತವಾಗಿ ಮೇಲಿಂದಮೇಲೆ ನಡೆದ ದಂಡಯಾತ್ರೆಗಳೇ ಕಾರಣವೆಂದು ಅವರ ಭಾವನೆ. ಪುಲಿಕೇಶಿಯು ದಕ್ಷಿಣಾ ಪಥವನ್ನೆಲ್ಲಾ ಬಿರುಗಾಳಿಯಂತೆ ಸುತ್ತಿ, ಎಲ್ಲ ದೊರೆಗಳನ್ನೂ ಚಾಲುಕ್ಯ ಸಿಂಹಾಸನಕ್ಕೆ ಸಾಮಂತರನ್ನಾಗಿ ಮಾಡಿದ್ದನು. ಹರ್ಷವರ್ಧನನು ಕೊಟ್ಟಿದ್ದ ದಕ್ಷಿಣಾ ಪಥೇಶ್ವರನೆಂಬ ಬಿರುದು ಕೇವಲ ಹೆಗ್ಗಳಿಕೆಯಾಗದೆ ಅದು ಅವನ ಪಾಲಿಗೆ ಅಕ್ಷರಶಃ ಸತ್ಯವಾಗಿತ್ತು. ಮೇಲಿಂದಮೇಲೆ ನಡೆದ ಈ ದಂಡಯಾತ್ರೆಗಳೂ, ದಿಗ್ವಿಜಯಗಳೂ, ಅವುಗಳಿಗೆ ಸಂಬಂಧಿಸಿದಂತೆ ಎಡೆಬಿಡದೆ ನಡೆದ ಯುದ್ಧಸಿದ್ಧತೆಗಳೂ, ಸಮರಸನ್ನಾಹಗಳೂ, ಅವನನ್ನು ಹಣ್ಣುಮಾಡಿದ್ದವು.

ಪುಲಿಕೇಶಿಯು ಯುದ್ಧವನ್ನು ಇತರ ದಂಡನಾಯಕರಿಗೆ ವಹಿಸದೆ, ಪ್ರತಿಯೊಂದು ಯುದ್ಧದಲ್ಲೂ ಹೋರಾಟದಲ್ಲೂ ತಾನೇ ಪ್ರಮುಖಪಾತ್ರ ತೆಗೆದುಕೊಳ್ಳುತ್ತಿದ್ದನು. ಅವನ ಉತ್ಸಾಹ, ಕಾರ್ಯನಿಷ್ಠೆಗಳನ್ನು ಅವನ ದೇಹ ಭರಿಸಲು ಸಾಧ್ಯವಾಗದೆ ಅದು ದುರ್ಬಲವಾಗುತ್ತಾ ನಡೆದಿತ್ತು. ಆರೋಗ್ಯವಾದ, ಸದೃಢವಾದ ದೇಹಕ್ಕೆ ಅಗತ್ಯವಾದ ಮಾನಸಿಕ ನೆಮ್ಮದಿ, ದೈಹಿಕ ವಿಶ್ರಾಂತಿ ಅವನಿಗೆ ಇಲ್ಲದೆ ದೇಹವು ದುರ್ಬಲವಾಗುತ್ತಾ ನಡೆದಿತ್ತು. ಕಡೆಗೆ ಅದು ಆಯ ತಪ್ಪಿ, ಅನಾರೋಗ್ಯಕ್ಕೆ ತುತ್ತಾಗಿತ್ತು. ಅದನ್ನು ಉಪೇಕ್ಷಿಸಿ, ಸಾಮ್ರಾಟನು ಈಗ ರಾಜಯಕ್ಷ್ಮಕ್ಕೆ ಬಲಿಯಾಗಿದ್ದನು.

ಆ ರೋಗಾಣುಗಳು ಒಳಗಿನ ಅಂತಃಸತ್ವವನ್ನು ಹೀರಿ, ಕಾಯದ ಮೇಲೆ ತನ್ನ ಹತೋಟಿ ಸ್ಥಾಪಿಸಿದಮೇಲೆ, ರಾಜವೈದ್ಯರು ಮಾಡಿದ ಎಲ್ಲ ಔಷಧೋಪಚಾರಗಳೂ ವ್ಯರ್ಥವಾಗಿದ್ದವು. ಅವನ ಸಂತತ ಆರೈಕೆ ಶುಶ್ರೂಷೆಗಳಿಂದ ವ್ಯಾಧಿಯು ಶಮನಕ್ಕೆ ಬಂದಂತೆ ಅನಿಸಿದರೂ ಅದು ಅಂತರ್ಗತವಾಗಿ ಜೀವಸತ್ವವನ್ನು ಹೀರುತ್ತಾ ಬಂದಿತ್ತು.

ಇತ್ತೀಚಿನ ದಿನಗಳಲ್ಲಿ ಪುಲಿಕೇಶಿ ಅದರಿಂದ ಜರ್ಜರಿತನಾಗಿ, ಹಾಸಿಗೆ ಹಿಡಿಯುವ ದುಸ್ಥಿತಿ ಬಂದಿತ್ತು. ಈಗ ಅವನ ಸ್ಥಿತಿ ರಾಜವೈದ್ಯರ ಕೈಮೀರಿತ್ತು. ಆದರೂ ಸತ್ಯಸಂಗತಿಯನ್ನು ಅರಿತರೆ, ಉಳಿದವರು ಅಧೀರರಾಗಬಹುದೆಂದು

ರಾಜವೈದ್ಯರು, ಸಾಮ್ರಾಟರು ಈ ಕಾಹಿಲೆಯಿಂದ ಚೇತರಿಸಿಕೊಳ್ಳುವರೆಂಬ ಭರವಸೆಯ ಮಾತನ್ನೇ ಹೇಳುತ್ತಾ ಬಂದಿದ್ದರು.

ಇದು ಒಂದು ಬಗೆಯ ಆತ್ಮವಂಚನೆಯಾಗಿದ್ದರೂ, ಸಾಮ್ರಾಜ್ಯದ ಸದ್ಯದ ಪರಿಸ್ಥಿತಿಯಲ್ಲಿ ಪುಲಿಕೇಶಿಯನ್ನು ಉಳಿಸಿಕೊಳ್ಳುವುದು ಅತ್ಯಗತ್ಯ ವಾಗಿತ್ತು. ಅವನು ಆರೋಗ್ಯದಿಂದ ಇರುವ ಸಂಗತಿ ಅವನ ಯೋಧರಲ್ಲಿ ಕಲಿ ತನವನ್ನು ಕೊನರಿಸುತ್ತಿತ್ತು. ಅವರು ತಾಯ್ನಾಡಿನ ರಕ್ಷಣೆಗಾಗಿ, ಸಾಮ್ರಾ ಜ್ಯದ ಭದ್ರತೆಗಾಗಿ, ಚಾಲುಕ್ಯ ಸಿಂಹಾಸನದ ಉಳಿವಿಗಾಗಿ ಯಾವ ಸಾಹಸ ಕೃತ್ಯಕ್ಕೂ ತ್ಯಾಗಕ್ಕೂ ಸಿದ್ಧರಾಗುತ್ತಿದ್ದರು. ಅದಕ್ಕಾಗಿ ರಾಜವೈದ್ಯರು ಪುಲಿ ಕೇಶಿಯು ಚೇತರಿಸಿಕೊಳ್ಳುವನೆಂದು ಸುಳ್ಳುಹೇಳಿಕೊಂಡೇ ಬಂದಿದ್ದರು.

ಆದರೆ ತನ್ನ ಸ್ಥಿತಿಯನ್ನು ಚೆನ್ನಾಗಿ ತಿಳಿದಿದ್ದ ಪುಲಿಕೇಶಿಯನ್ನು ಅವರು ವಂಚಿಸಲು ಅಸಮರ್ಥರಾಗಿದ್ದರು. ಅವನಿಗೆ ತನ್ನ ವ್ಯಾಧಿಯ ಯಥಾರ್ಥ ಕಲ್ಪನೆ ಬಂದಿತ್ತು. ತಾನು ಈ ಭಯಂಕರ ವ್ಯಾಧಿಯಿಂದ ಉಳಿಯುವುದಿಲ್ಲ, ಈ ಮಾರಿಗೆ ನಾನು ಬಲಿಯಾಗುವುದೇ ದಿಟ. ತನ್ನ ತಂದೆ ಯೌವ್ವನದಲ್ಲಿ ಬಲಿ ಯಾಗಿ ಅಸು ನೀಗಿದಂತೆ, ತಾನೂ ಯೌವ್ವನದ ಕಡೇಹಂತದಲ್ಲಿ ಅದಕ್ಕೆ ಬಲಿ ಯಾಗುತ್ತಿದ್ದೇನೆ. ಈ ಮೃತ್ಯುವಿನ ಕರಾಳ ಹಸ್ತದಿಂದ ತನ್ನನ್ನು ಯಾರೂ ಉಳಿಸಲಾರರು; ತನ್ನ ಪುಣ್ಯಕಾರ್ಯಗಳೂ, ದಾನಧರ್ಮಗಳೂ ಈ ಗಂಡಾಂತರ ದಿಂದ ತನ್ನನ್ನು ಪಾರು ಮಾಡಲಾರವು; ತಾನು ಈ ವ್ಯಾಧಿಯಿಂದ ಕಣ್ಮುಚ್ಚಿ ಕೊಳ್ಳುವುದೇ ದಿಟ, ಎಂಬುದು ಖಚಿತವಾಗಿ ತಿಳಿದಿತ್ತು.

ಈಗ ಪುಲಿಕೇಶಿಯ ಮುಂದೆ ದೊಡ್ಡದೊಂದು ಸಮಸ್ಯೆ ಇದಿರುಗೊಂಡಿತ್ತು. ತಾನಂತೂ ಈ ರಾಜಯಕ್ಷ್ಮದಿಂದ ಉಳಿಯುವುದಿಲ್ಲವೆಂಬುದು ಅವನಿಗೆ ಖಚಿತ ವಾಗಿ ತಿಳಿದಿತ್ತು. ತನ್ನ ನಂತರ ಸಾಮ್ರಾಜ್ಯದ ಗತಿ ಏನು? ಇದನ್ನು ಚಿಂತಿಸಲೂ ಅವನು ಹೆದರಿದ್ದನು. ಇದೇ ಹೆದರಿಕೆಯಿಂದ ಅವನು ಇದುವರೆಗೆ ತನ್ನ ನಂತರ ಸಾಮ್ರಾಜ್ಯಕ್ಕೆ ಯೋಗ್ಯ ಉತ್ತರಾಧಿಕಾರಿಯನ್ನು ನೇಮಿಸಲು ಹಿಂಜರಿದಿದ್ದನು.

ಚಾಲುಕ್ಯ ಸಿಂಹಾಸನದ ಮೇಲೆ ಹಲವರು ಕಣ್ಣಿಟ್ಟಿದ್ದರು. ಹೊರಗಿನ ಶತ್ರುಗಳಾದ ಪಲ್ಲವರು ಕುಲಶತ್ರುಗಳೇ ಆಗಿದ್ದರು. ತಮ್ಮ ಪೂರ್ವಜರ ವಾತಾಪಿ ಯನ್ನು ಮತ್ತೆ ಆಕ್ರಮಿಸಿಕೊಳ್ಳಲು ಹಾತೊರೆಯುತ್ತಿದ್ದರು. ಈ ಬಗ್ಗೆ ಮಹೇಂದ್ರವರ್ಮನವರೆಗೆ ಎಲ್ಲ ಪಲ್ಲವದೊರೆಗಳು ಮಾಡಿದ್ದ ಪ್ರಯತ್ನಗಳೂ

ವ್ಯರ್ಥವಾಗಿದ್ದವು. ಈಗ ಪಲ್ಲವ ಸಿಂಹಾಸನವನ್ನೇರಿದ್ದ ನರಸಿಂಹವರ್ಮನು ಮಹತ್ವಾಕಾಂಕ್ಷಿಯಾದ ತರುಣ ಸಾಮ್ರಾಟನಾಗಿದ್ದನು. ಪುಲಿಕೇಶಿಯು ಬದುಕಿರುವಂತೆಯೇ ತನ್ನ ಸಾಮಂತ ಪದವಿಯನ್ನು ಕಿತ್ತೊಗೆದು ಸ್ವತಂತ್ರನಾಗಿದ್ದನು. ಅಷ್ಟೇ ಅಲ್ಲ, ಅವನು ಚಾಲುಕ್ಯ ಸಾಮ್ರಾಜ್ಯಕ್ಕೆ ಆಶ್ರಿತ ದೊರೆಗಳಾದ ಚೋರ, ಚೋಳ, ಕೇರಳದರಸುಗಳಿಂದ ಕಪ್ಪ ಪಡೆದಿದ್ದನು. ತನ್ನ ಕಾಹಿಲೆಯನ್ನು ನೆನೆದು ಅವನು ವಾತಾಪಿಯ ಮೇಲೆ ದಂಡೆತ್ತಿ ಬರುವುದಿಲ್ಲವೆಂದು ಯಾವ ನಂಬಿಕೆ ? ಎರಡುಬಾರಿ ಸೋತು ಪರಾಜಿತರಾದ ಪಲ್ಲವರು ಈ ಅನಾರೋಗ್ಯದ ಸುಸಂಧಿಯನ್ನು ಸಾಧಿಸಿ, ಚಾಲುಕ್ಯ ಸಾಮ್ರಾಜ್ಯದ ನಾಶಕ್ಕೆ ಕಂಕಣ ತೊಟ್ಟರೆ ಗತಿ ?

ಅವನನ್ನು ಬಿಟ್ಟರೆ ಮಂಗಳೇಶನ ಪಕ್ಷದವರು ಇನ್ನೂ ತಮ್ಮ ಒಡೆಯನಿಗಾಗಿದ್ದ ಅನ್ಯಾಯಕ್ಕೆ ಪುಲಿಕೇಶಿಯ ಮೇಲೆ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದರು. ಅವರ ಮುಖಂಡನಾಗಿ ರಾಹಪ್ಪಯ್ಯನು ಇನ್ನೂ ಜೀವಂತವಿದ್ದನು. ಅವನಿಗೆ ನೆರವಾಗಿ ಆಜ್ಯವನ್ನು ಹೊಯ್ಯಲು ವರ್ಣಶಿಲ್ಪಿ ಚಂದ್ರೋಜನೂ ಇನ್ನೂ ಜೀವಂತವಿದ್ದನು.

ಅವರಿಬ್ಬರು ಜೀವಂತವಿರುವವರೆಗೆ ಚಾಲುಕ್ಯ ಸಾಮ್ರಾಜ್ಯಕ್ಕೆ ಅಪಾಯ ತಪ್ಪಿರಲಿಲ್ಲ. ಸೇಡಿನಿಂದ ಹುಚ್ಚರಾದ ಅವರು ಯಾವ ಹೇಯ ಕಾರ್ಯಕ್ಕೂ ಹೇಸುತ್ತಿರಲಿಲ್ಲ. ಅವರು ಕೇವಲ ವ್ಯಕ್ತಿಗಳಲ್ಲ. ಪ್ರಬಲ ವಿದ್ರೋಹಿ ಶಕ್ತಿಯ ಸಂಕೇತವೆಂಬುದು ಪುಲಿಕೇಶಿಗೆ ತಿಳಿದಿತ್ತು. ಕುಬ್ಜವಿಷ್ಣುವರ್ಧನನ ವಿದ್ರೋಹದ ಪ್ರಸಂಗದಲ್ಲಿ ಇದು ಚೆನ್ನಾಗಿ ವೇದ್ಯವಾಗಿತ್ತು. ಅವರಿಂದ ಮತ್ತೆ ಯಾವ ನೂತನ ವಿದ್ರೋಹ ನಡೆಯುವುದೋ ಯಾರೂ ಹೇಳುವಂತಿರಲಿಲ್ಲ.

ಇವರನ್ನು ಕಡೆಗಣಿಸಿದರೂ ತನ್ನನಂತರ ಸಿಂಹಾಸನದ ಪ್ರಶ್ನೆ ಸುಸೂತ್ರವಾಗಿ ಬಿಡಿಸಲ್ಪಡುವುದೆಂಬ ನಂಬಿಕೆ ಪುಲಿಕೇಶಿಗೆ ಇರಲಿಲ್ಲ. ತನ್ನ ಮಕ್ಕಳಲ್ಲಿ ಯಾರಿಗೆ ಸಿಂಹಾಸನ ವಹಿಸಿದರೂ ಅದು ಸುಭದ್ರವಾಗುತ್ತಿರಲಿಲ್ಲ. ಸಿಂಹಾಸನವನ್ನು ತನ್ನ ಮಕ್ಕಳ ಪಾಲುಮಾಡಿದರೆ ಸಹೋದರ ಕುಬ್ಜವಿಷ್ಣುವರ್ಧನನು ಮತ್ತೊಮ್ಮೆ ಸ್ವಾರ್ಥಸಾಧಕರ ಮಾತು ಕೇಳಿ ಕತ್ತಿ ಎತ್ತುವುದಿಲ್ಲ ಎಂಬುದಕ್ಕೆ ನಂಬಿಕೆ ಇರಲಿಲ್ಲ. ರಾಜ್ಯಲೋಭಿಯಾಗಿರುವ ಅವನ ವಿಷಯದಲ್ಲಿ ಹೀಗೆಂದು ಖಚಿತವಾಗಿ ಹೇಳಲು ಯಾರಿಂದಲೂ ಸಾಧ್ಯವಿರಲಿಲ್ಲ.

ಇನ್ನು ಮಕ್ಕಳ ವಿಷಯ : ಪುಲಿಕೇಶಿಗೆ ನಾಲ್ಕುಜನ ಗಂಡುಮಕ್ಕಳಿದ್ದರು, ಇವರೆಲ್ಲರೂ ಪ್ರಾಪ್ತವಯಸ್ಕರಾಗಿದ್ದರು.

ಇವರಲ್ಲಿ ಹಿರಿಯವನಾದ ಆದಿತ್ಯವರ್ಮನು ಇಂದಿನ ಚಿತ್ರದುರ್ಗ, ಬಳ್ಳಾರಿ, ಕರ್ನೂಲುಗಳನ್ನು ಒಳಗೊಂಡಿದ್ದ ಅಂದಿನ ನೊಳಂಬವಾಡಿಗೆ ಮಾಂಡಲೇಶ್ವರ ನಾಗಿದ್ದನು. ಎರಡನೆಯವನಾದ ಚಂದ್ರಾದಿತ್ಯನು ಇಂದಿನ ಸಾವಂತವಾಡಿ ಯಾಗಿರುವ ರೇವತೀದ್ವೀಪ ಮತ್ತು ಉತ್ತರ ಕೊಂಕಣಗಳ ಮಾಂಡಲೇಶ್ವರ ನಾಗಿದ್ದನು. ಮೂರನೆಯವನಾದ ಜಯಸಿಂಹನು ಗುರ್ಜರ ಪ್ರಾಂತ್ಯಕ್ಕೆ ಮಾಂಡಲೇಶ್ವರನಾಗಿದ್ದನು. ಇವರೆಲ್ಲರೂ ಪುಲಿಕೇಶಿಯಿಂದ ದೂರವಿದ್ದು ತಮ್ಮ ಪ್ರಾಂತ್ಯಗಳನ್ನು ಆಳುತ್ತಿದ್ದರು.

ಮೋಹದ ಮಗನಾದ ವಿಕ್ರಮಾದಿತ್ಯನು ಮಾತ್ರ ತಂದೆಯ ಆಣತಿಯಂತೆ ರಾಜಧಾನಿಯಲ್ಲೇ ಇದ್ದನು. ಅವನು ಪುಲಿಕೇಶಿಯ ಅನಾರೋಗ್ಯದ ಕಾಲ ದಲ್ಲಿ ಅವನ ಬಳಿ ಇದ್ದು ರಾಜ್ಯಾಡಳಿತದಲ್ಲಿ ತಂದೆಗೆ ನೆರವಾಗುತ್ತಿದ್ದನು. ಇದು ಉಳಿದವರ ಅಸೂಯೆಗೆ ಕಾರಣವಾಗಿತ್ತು.

ತನ್ನ ನಂತರ ಸಿಂಹಾಸನಕ್ಕಾಗಿ ತನ್ನ ಮಕ್ಕಳಲ್ಲೇ ಹೋರಾಟ ನಡೆಯುವ ಬಗ್ಗೆ ಪುಲಿಕೇಶಿಗೆ ಈಗಲೇ ಸುಳಿವು ಹತ್ತಿತ್ತು. ಅದನ್ನು ತಪ್ಪಿಸುವ ಸಲು ವಾಗಿಯೇ ತಾನು ಬದುಕಿರುವಾಗ ಯಾರಿಗೂ ಯುವರಾಜಪದವಿಯನ್ನು ಕೊಟ್ಟಿರಲಿಲ್ಲ. ಯಾರಿಗೆ ಆ ಪದವಿಕೊಟ್ಟರೂ ಸಹೋದರರಲ್ಲಿ ಸಿಂಹಾಸನಕ್ಕಾಗಿ ತಿಕ್ಕಾಟವಾಗುತ್ತಿತ್ತು. ಏಕೆಂದರೆ ಆದಿತ್ಯವರ್ಮನು ಪುಲಿಕೇಶಿಯ ಹಿರಿಯ ಮಗನಾದರೂ, ತನ್ನ ನಂತರ ವಿಸ್ತಾರವಾದ ಚಾಲುಕ್ಯ ಸಾಮ್ರಾಜ್ಯವನ್ನು ಆಳಲು ಅಸಮರ್ಥನಾಗಿದ್ದನು. ಅವನು ಸಮರ್ಥ ರೀತಿಯಲ್ಲಿ ಕುಲಶತ್ರುಗಳಾದ ಪಲ್ಲವರಿಂದ ರಾಜ್ಯವನ್ನು ಉಳಿಸಿಕೊಳ್ಳುವನೆಂಬ ಧೈರ್ಯ ಪುಲಿಕೇಶಿಗೆ ಇರಲಿಲ್ಲ. ಇಂತಹ ಪ್ರಯತ್ನಕ್ಕೆ ಅವನ ಅಮಾತ್ಯರೂ ವಿರೋಧಿಸುತ್ತಿದ್ದರು.

ಅವರ ಅಭಿಪ್ರಾಯದಲ್ಲಿ ಪುಲಿಕೇಶಿಯ ನಂತರ ಸಿಂಹಾಸನವನ್ನೇರಲು ಕೊನೆಯ ಮಗನಾದ ವಿಕ್ರಮಾದಿತ್ಯನೇ ಯೋಗ್ಯ ವ್ಯಕ್ತಿಯಾಗಿದ್ದನು. ಆದರೆ ಅವನಿಗೆ ಯುವರಾಜ ಪದವಿಯನ್ನು ಇತ್ತರೆ ಉಳಿದ ಸಹೋದರರ ಹಕ್ಕನ್ನು ಕಡೆಗಣಿಸಿದಂತೆ ಆಗುತ್ತಿತ್ತು. ಇದು ಎಲ್ಲದಕ್ಕಿಂತಲೂ ಹೆಚ್ಚಿನ ಅಪಾಯವಾಗು ತ್ತಿತ್ತು. ಏಕೆಂದರೆ ಸಿಂಹಾಸನಕ್ಕಾಗಿ ಸಹೋದರರಲ್ಲಿ ವೈಮನಸ್ಸುಂಟಾಗಿ

ಸ್ವಯೂಥಕಲಹಕ್ಕೆ ತನ್ನ ಕಣ್ಣೆದುರಿನಲ್ಲೇ ನಾಂದಿಯಾಗುತ್ತಿತ್ತು.

ಇದನ್ನು ತಪ್ಪಿಸಲೆಂದೇ ಪುಲಿಕೇಶಿಯು ತನ್ನನಂತರ ಸಿಂಹಾಸನಕ್ಕೆ ಬರಲು ಎಲ್ಲ ರೀತಿಯಲ್ಲಿ ಅರ್ಹನಾಗಿದ್ದ ವಿಕ್ರಮಾದಿತ್ಯನನ್ನು ತನ್ನ ಬಳಿಯಲ್ಲಿಟ್ಟು ಕೊಂಡು ಅವನ ಸಹಾಯದಿಂದ ರಾಜ್ಯಾಡಳಿತವನ್ನು ನಿರ್ವಹಿಸುತ್ತಿದ್ದನು. ಅವನೇ ಅನಭಿಷಕ್ತ ಸಾಮ್ರಾಟನಾಗಿದ್ದರೂ, ಅವನಿಗೆ ಮಾತ್ರ ಯುವರಾಜ ಪದವಿಯನ್ನು ಇತ್ತಿರಲಿಲ್ಲ. ದಿನದಿನಕ್ಕೂ ಹದಗೆಡುತ್ತಿದ್ದ ದೇಹಸ್ಥಿತಿಯಲ್ಲಿ ಈ ವಿಷಯವನ್ನು ಅನಿರ್ದಿಷ್ಟಕಾಲದವರೆಗೆ ಬಿಡುವಂತೆ ಇರಲಿಲ್ಲ. ಇದನ್ನು ಹೇಗೆ ಬಗೆಹರಿಸುವುದೆಂಬುದು ಮಾತ್ರ ಅವನಿಗೆ ತಿಳಿದಿರಲಿಲ್ಲ.

## ೨೭

ವಿಕ್ರಮಾದಿತ್ಯನು ಎಲ್ಲ ರೀತಿಯಲ್ಲೂ ಪುಲಿಕೇಶಿಗೆ ತಕ್ಕ ಮಗನಾಗಿದ್ದನು.

ಅವನು ಬಾಲ್ಯದಲ್ಲೇ ತಂದೆಯ ಗರಡಿಯಲ್ಲಿ ಶಿಕ್ಷಣ ಪಡೆದಿದ್ದನು. ತಂದೆಯ ನೆರಳಿನಲ್ಲಿ ರಣರಂಗದ ಹಾಗೂ ರಾಜ್ಯಾಡಳಿತದ ಅನುಭವಗಳನ್ನು ಪಡೆದಿದ್ದನು. ಅವನು ಪುಲಿಕೇಶಿಯ ಧೈರ್ಯ ಸಾಹಸಗಳನ್ನೂ, ಮಹತ್ವಾಕಾಂಕ್ಷೆಯನ್ನೂ ಮೈಗೂಡಿಸಿಕೊಂಡು, ಪುಲಿಕೇಶಿಯಂತೆ ಮಹಾ ಸಾಮ್ರಾಟನಾಗುವ ಯೋಗ್ಯತೆಯನ್ನು ಬಾಲ್ಯದಲ್ಲಿ ಪ್ರಕಟಿಸಿದ್ದನು. ಅದನ್ನು ಅರಿತೇ ಅಮಾತ್ಯಸಮಂತಭದ್ರನೂ, ಪುಲಿಕೇಶಿಯೂ ಅವನನ್ನು ರಾಜಧಾನಿಯಲ್ಲೇ ಇರಿಸಿಕೊಂಡಿದ್ದರು. ಇಂದಲ್ಲ ನಾಳೆ ಚಾಲುಕ್ಯ ಸಾಮ್ರಾಜ್ಯಕ್ಕೆ ಅವನಿಂದಾಗುವ ಸೇವೆ ಮಹತ್ವದ್ದೆಂದು ಅವರು ತಿಳಿದಿದ್ದರು.

ಅವರ ನಿರೀಕ್ಷೆಯನ್ನು ವಿಕ್ರಮಾದಿತ್ಯನು ವ್ಯರ್ಥಗೊಳಿಸಿರಲಿಲ್ಲ. ಅವನು ಇನ್ನೂ ಇಪ್ಪತ್ತರ ಹರೆಯದವನಾಗಿದ್ದರೂ, ನಲವತ್ತರ ಅನುಭವವಿತ್ತು. ಅವನು ತಾಯಿಯಂತೆ ಸುಂದರನೂ, ತಂದೆಯಂತೆ ಮಹತ್ವಾಕಾಂಕ್ಷಿಯೂ ಆಗಿದ್ದನು. ಸಹೋದರರಿಗಿಂತ ಹೆಚ್ಚು ಬುದ್ಧಿವಂತನಾಗಿದ್ದನು. ಅವನ ಸಹೋದರರು ಆಟಪಾಟ ವಿನೋದಗಳಲ್ಲಿ—ವಿಷಯಸುಖಗಳಲ್ಲಿ ತಮ್ಮ ಸಮಯವನ್ನು

ಕಳೆಯುತ್ತಿದ್ದರೆ ಅವನು ತಂದೆಯ ಇಲ್ಲವೇ ಅಮಾತ್ಯ ಸಮಂತಭದ್ರರ ಪದತಲ ದಲ್ಲಿ ಕುಳಿತು ಯುದ್ಧದ ಕಥೆಗಳನ್ನೂ, ರಾಜ್ಯಾಡಳಿತದ ವಿವರಗಳನ್ನೂ ಕೇಳುತ್ತಿದ್ದನು.

ಅವನಿಗೆ ಪ್ರಿಯವಾದ ಆಟಗಳೆಂದರೆ ಕುದುರೆ ಸವಾರಿ, ಮಲ್ಲಯುದ್ಧ, ಖಡ್ಗವಿದ್ಯಾಪ್ರದರ್ಶನ. ಇದನ್ನು ನೋಡಿ ಸಂತೋಷಪಟ್ಟ ಪುಲಿಕೇಶಿಯು ಅವನಿಗೆ ಚಿತ್ರಕಂಠವೆಂಬ ಅಪೂರ್ವ ಕುದುರೆಯನ್ನು ಉಡುಗೊರೆಯಾಗಿ ಕೊಟ್ಟಿ ದ್ದನು. ಇದನ್ನು ಪರ್ಶಿಯಾದೇಶದ ದೊರೆ ಖುಸ್ರು ಪುಲಿಕೇಶಿಗೆ ಕಾಣಿಕೆಯಾಗಿ ಕೊಟ್ಟಿದ್ದನು. ಅದನ್ನು ವಿಕ್ರಮಾದಿತ್ಯನಿಗೆ ಕಾಣಿಕೆಯಾಗಿ ಕೊಟ್ಟಾಗ ಒಂದು ಹಗರಣ ನಡೆದಿದ್ದುದನ್ನು ಪುಲಿಕೇಶಿ ಮರೆತಿರಲಿಲ್ಲ.

ಪುಲಿಕೇಶಿಯು ಕುಮಾರರ ಶಿಕ್ಷಣಕ್ಕೆ ಯೋಗ್ಯ ಗುರುಗಳನ್ನು ನೇಮಿಸಿ ದ್ದನು. ತಾನು ಆರ್ಯಪುರದಲ್ಲಿ ಬೆಣ್ಣಮಸೋಮಯಾಜಿಗಳ ಕೈಯಿಂದ ಪಡೆದ ಶಿಕ್ಷಣವನ್ನು ಸ್ಮರಿಸಿಕೊಂಡು, ಅದೇ ಬಗೆಯ ಶಿಕ್ಷಣ ತನ್ನ ಮಕ್ಕಳಿಗೂ ದೊರಕ ಬೇಕೆಂದು ತನ್ನ ಗೆಳೆಯನೂ ಚತುಶ್ಶಾಸ್ತ್ರಕೋವಿದನೂ, ಕವಿಯೂ ಆಗಿದ್ದ ರವಿಕೀರ್ತಿಯನ್ನು ಗುರುವಾಗಿ ನೇಮಿಸಿದ್ದನು.

ರವಿಕೀರ್ತಿಯು ಲೇಖನಿಯನ್ನು ಪ್ರಯೋಗಿಸುವುದರಲ್ಲಿ ಪಡೆದಿದ್ದ ಸಿದ್ಧಿ ಯನ್ನು ರಣವಿದ್ಯೆಗಳಲ್ಲೂ ಪಡೆದಿದ್ದನು. ಅವನು ರಾಜತಂತ್ರ ವಿಶಾರದನೂ, ಸಮರ್ಥ ದಂಡನಾಯಕನೂ, ಮುತ್ಸದ್ದಿಯೂ ಆಗಿದ್ದು, ಯುದ್ಧದಲ್ಲಿ ಎಂತೋ ಶಾಂತಿಯಲ್ಲೂ ಪುಲಿಕೇಶಿಯನ್ನು ನೆರಳಿನಂತೆ ಅನುಸರಿಸಿದ್ದನು. ಅವನ ಕೈಯಲ್ಲಿ ತನ್ನ ಮಕ್ಕಳು ಸಮರ್ಥ ದಂಡನಾಯಕರೂ, ರಾಜಕಾರಣ ಪಟುಗಳೂ ಆಗುವ ರೆಂಬ ಕನಸು ಕಟ್ಟಿದ್ದನು. ಆದರೆ ಅವನ ಕನಸು ಕನಸಾಗಿಯೇ ಉಳಿಯಿತು. ವಿಕ್ರಮಾದಿತ್ಯನ ಹೊರತು ಬೇರೆ ಕುಮಾರರು ಅವನ ಆಸೆಗಳನ್ನು ಈಡೇರಿಸ ಲಿಲ್ಲ. ವಿಕ್ರಮಾದಿತ್ಯನೊಬ್ಬನೇ ಭಾವೀ ಸಾಮ್ರಾಟನ ಲಕ್ಷಣವನ್ನು ಪ್ರಕಟಿಸಿ ದ್ದನು. ಇದು ಚಿತ್ರಕಂಠ ಕುದುರೆಯ ಪ್ರಕರಣದಲ್ಲಿ ಬೆಳಕಿಗೆ ಬಂದಿತ್ತು.

ಚಿತ್ರಕಂಠವು ರಾಜಲಕ್ಷಣಗಳುಳ್ಳ ಕುದುರೆಯಾಗಿತ್ತು. ಅದನ್ನು ಪರ್ಶಿ ಯಾದ ದೊರೆ ಖುಸ್ರುವು ವಿಶ್ವಾಸದ ಕಾಣಿಕೆಯಾಗಿ ತನ್ನ ರಾಯಭಾರಿಗಳ ಮೂಲಕ ಪುಲಿಕೇಶಿಗೆ ಕಳುಹಿಸಿಕೊಟ್ಟಿದ್ದನು. ಅದನ್ನು ಯಾರಾದರೂ ಏರಿ ಮಣಿಸಬಲ್ಲರೇ ಎಂದು ಪುಲಿಕೇಶಿಯು ಅದನ್ನು ಸ್ಪರ್ಧೆಗೆ ಇಟ್ಟಿದ್ದನು. ಕುದುರೆ

ಯನ್ನು ಮಣಿಸಲು ರಾಜಕುಮಾರರು ಪ್ರಯತ್ನಿಸಿ ವಿಫಲರಾದರು. ಆದರೆ ಯಾರಿಂದಲೂ ಮಣಿಸಲಾಗದಿದ್ದ ಚಿತ್ರಕಂಠವನ್ನು ವಿಕ್ರಮಾದಿತ್ಯನು ಲೀಲಾ ಜಾಲವಾಗಿ ಏರಿ ಮಣಿಸಿದ್ದನು. ಅದನ್ನು ಸಾಮ್ರಾಟನು ಮಗನಿಗೆ ಕಾಣಿಕೆ ಯಾಗಿ ಕೊಟ್ಟನು.

ಈ ವಾರ್ತೆಯನ್ನು ಕೇಳಿ ಹಿರಿಯನಾದ ಆದಿತ್ಯವರ್ಮನು ತಂದೆಯ ಬಳಿ ಸಾರಿ,

"ಚಿತ್ರಕಂಠ ನನಗೆ ಬೇಕು" ಎಂದು ಹಠ ಹಿಡಿದನು.

"ಅದನ್ನು ವಿಕ್ರಮಾದಿತ್ಯನಿಗೆ ಕೊಟ್ಟಿದ್ದೇನೆ. ನಿನಗೆ ಬೇಕಾದರೆ ಇನ್ನೊಂದು ಉತ್ತಮಾಶ್ವವನ್ನು ಕೊಡುತ್ತೇನೆ" ಎಂದು ಪುಲಿಕೇಶಿ ಹೇಳಿದನು.

"ಅಪ್ಪಾಜಿ, ನನಗೆ ಬೇರೆ ಕುದುರೆ ಬೇಡ. ಚಿತ್ರಕಂಠವೇ ಬೇಕು."

"ಅದನ್ನು ನೀನು ಏರಲಾರೆ ಮಗು, ಅದನ್ನು ಕಾಣಿಕೆಯಾಗಿ ಕೊಟ್ಟಿದ್ದೇನೆ. ನಿನಗೆ ಬೇರೆ ಕುದುರೆ ಬೇಕಿದ್ದರೆ ಹೇಳು. ಅರಮನೆಯ ಲಾಯದಲ್ಲಿ ಅದಕ್ಕಿಂತಲೂ ಶ್ರೇಷ್ಠವಾದ ಸಾವಿರಾರು ಕುದುರೆಗಳಿವೆ. ಅವುಗಳಲ್ಲಿ ನಿನಗೆ ಬೇಕಾದುದನ್ನು ಆರಿಸಿಕೊ."

"ನನಗೆ ಬೇರೆ ಕುದುರೆ ಬೇಡ. ಚಿತ್ರಕಂಠವೇ ಬೇಕು."

"ಅದನ್ನು ವಿಕ್ರಮನಿಗೆ ಕೊಟ್ಟಾಗಿದೆ—"

"ಅವನಿಗೆ ಬೇರೆ ಕುದುರೆ ಕೊಟ್ಟು ನನಗೆ ಅದನ್ನು ಕೊಡಬಾರದೇಕೆ ?"

"ಸಾಧ್ಯವಿಲ್ಲ." ಸಿಟ್ಟಿನಿಂದ ಪುಲಿಕೇಶಿ ಹೇಳಿದ.

"ಏಕೆ ?"

"ಅದನ್ನು ನಾನು ವಿಕ್ರಮನಿಗೆ ಉಡುಗೊರೆಯಾಗಿ ಕೊಟ್ಟಿದ್ದೇನೆ, ಅದನ್ನು ಮತ್ತೆ ಪಡೆಯಲಾರೆ !"

"ನಿಮಗೆ ನನ್ನನ್ನು ಕಂಡರೆ ಮೊದಲಿನಿಂದಲೂ ಆಗುವುದಿಲ್ಲ. ಅದಕ್ಕೆ ಈ ಮಾತು ಹೇಳುತ್ತಿದ್ದೀರಿ. ಈಗ ಒಂದು ಕುದುರೆಯನ್ನು ನನಗೆ ನೀವು ಕೊಡಲು ಒಪ್ಪಲಿಲ್ಲ. ನಾಳೆ ಈ ಸಿಂಹಾಸನವನ್ನು ನನಗೆ ಕೊಡುವಿರಾ ? ನಿಮಗೆ ಮೋಹದ ಮಗ ವಿಕ್ರಮನ ಬಗ್ಗೆ ಪಕ್ಷಪಾತ ಹೆಚ್ಚು ಎಂದು ಇದುವರೆಗೆ ಜನ ಹೇಳುತ್ತಿದ್ದರು. ಈಗ ಈ ಮಾತಿಗೆ ಪ್ರತ್ಯಕ್ಷ ನಿದರ್ಶನ ಸಿಕ್ಕಿತು !"

ಎಂದು ಆದಿತ್ಯವರ್ಮ ತನ್ನ ಅಂತರಂಗದ ವಿಷವನ್ನು ಕಾರಿದನು.

ಈ ಮಾತು ಕೇಳಿ ಪುಲಿಕೇಶಿಯ ಮನಸ್ಸಿಗೆ ಮುಳ್ಳು ಚುಚ್ಚಿದಂತಾಯಿತು.

"ಮಗು ಆದಿತ್ಯ, ಈ ಮಾತನ್ನು ನೀನೇ ಆಡುತ್ತಿದ್ದಿಯೋ ಅಥವಾ ಯಾರಾದರೂ ನಿನಗೆ ಹೀಗೆ ಹೇಳಿಕೊಟ್ಟಿದ್ದಾರೊ ?"

"ಕಣ್ಣಿನಿಂದ ಕಂಡ ಸತ್ಯಕ್ಕೆ ಬೇರೆ ಪ್ರಮಾಣ ಬೇಕೇ ?"

"ನೀನು ಕಣ್ಣಿನಿಂದ ಕಂಡ ಸತ್ಯವೇನು ? ಅದಾದರೂ ಹೇಳು ?"

"ನಿಮಗೆ ವಿಕ್ರಮನ ಮೇಲಿರುವ ಪ್ರೀತಿ ಉಳಿದ ಮಕ್ಕಳಾದ ನಮ್ಮ ಮೇಲೆ ಇಲ್ಲವೆಂಬುದು ಲೋಕವಿದಿತವಾಗಿತ್ತು, ಇದುವರೆಗೆ ಇದನ್ನು ನಾನು ನಂಬಿರ ಲಿಲ್ಲ. ಈಗ ನೀವು ಯಃಕಶ್ಚಿತ ಒಂದು ಕುದುರೆಯನ್ನು ನನಗೆ ಕೊಡಲು ಹಿಂಜರಿದಿರಿ. ಇನ್ನು ಸಿಂಹಾಸನದ ವಿಷಯದಲ್ಲಿ ಏನು ಮಾಡುವಿರೋ ಎನ್ನುವ ಸಂಶಯ ಬಂದಿದೆ" ಎಂದು ಮರ್ಮಘಾತಿಸುವಂತೆ ನುಡಿದ.

"ಮಗು ! ಸಾಕುಮಾಡು, ನಿನ್ನ ಮಾತು ಕೇಳಲಾರೆ. ಯಾರೋ ಸ್ವಾರ್ಥಿಗಳು ನಮ್ಮ ವಿರುದ್ಧ ನಿನ್ನ ಮನಸ್ಸನ್ನು ಕೆಡಿಸಿದ್ದಾರೆ. ನೀನು ಆ ಮಾತುಗಳನ್ನು ಕೇಳಬಾರದು....ನಾನು ನಿನ್ನ ತಂದೆ. ನನ್ನ ಮಾತನ್ನು ನಂಬು, ನನ್ನ ಕಣ್ಣಿನಲ್ಲಿ ಎಲ್ಲ ಮಕ್ಕಳೂ ಒಂದೇ. ನನಗೆ ಯಾರ ಮೇಲೂ ಪಕ್ಷಪಾತವಿಲ್ಲ."

"ಈ ಮಾತಿಗೆ ನಿದರ್ಶನ ಬೇಕು" ನಿಷ್ಠುರವಾಗಿ ಆದಿತ್ಯವರ್ಮ ಕೇಳಿದ.

"ಏನು ನಿದರ್ಶನ ಕೊಡಲಿ ?" ವ್ಯಾಕುಲನಾಗಿ ಪುಲಿಕೇಶಿ ಉದ್ಗಾರ ತೆಗೆದ.

"ನನಗೆ ಚಿತ್ರಕಂಠವನ್ನು ಕೊಡಿ, ನಿಮ್ಮ ಮಾತನ್ನು ನಾನು ಸತ್ಯವೆಂದು ನಂಬುತ್ತೇನೆ."

"ಅದೊಂದು ವಿಷಯ ಮಾತ್ರ ಸಾಧ್ಯವಿಲ್ಲ."

"ಏಕೆ ?"

"ಅದನ್ನು ವಿಕ್ರಮನಿಗೆ ಕಾಣಿಕೆಯಾಗಿ ಕೊಟ್ಟುಬಿಟ್ಟಿದ್ದೇನೆ. ಅದನ್ನು ಅವನಿಂದ ಮತ್ತೆ ಕಿತ್ತುಕೊಂಡು ನಾನು ವಚನಭ್ರಷ್ಟನಾಗಲಾರೆ."

"ಹಾಗಾದರೆ ನಾನು ಇನ್ನು ಬರುತ್ತೇನೆ. ನೀವು ವಚನಭ್ರಷ್ಟರಾಗುವುದೂ ಬೇಡ, ನನಗೆ ಚಿತ್ರಕಂಠ ಕೊಡುವುದೂ ಬೇಡ ನೀವೂ ಆ ವಿಕ್ರಮಾದಿತ್ಯನೂ–ಈ ರಾಜ್ಯಕೋಶಗಳನ್ನು ಅನುಭವಿಸಿಕೊಂಡು ನೂರುವರ್ಷ ಬಾಳಿ.

ನಾವು ನಿಮ್ಮ ಕೃಪಾಭಿಕ್ಷೆಯಿಂದ ಹೊಟ್ಟೆಹೊರೆದು ಅಜ್ಞಾತರಾಗಿ ಬದುಕುತ್ತೇವೆ ಎಂದು ಹೇಳಿ ಅಲ್ಲಿಂದ ಹೊರಟು ಹೋದನು.

ಈ ಮಾತು ಶರಾಘಾತದಂತೆ ಪುಲಿಕೇಶಿಯ ಹೃದಯವನ್ನು ಭೇದಿಸಿತು. ಅವನು "ಮಗು, ಆದಿತ್ಯವರ್ಮ...." ಎಂದು ಚೀರಿದ. ಆದಿತ್ಯವರ್ಮನು ಅಲ್ಲಿ ನಿಲ್ಲದೆ ಕಣ್ಮರೆಯಾಗಿದ್ದ.

ಈ ಘಟನೆಯಾದ ಮೇಲೆ ಪುಲಿಕೇಶಿ ಎಚ್ಚೆತ್ತುಕೊಂಡನು. ತನ್ನ ಮಕ್ಕಳಲ್ಲಿ ಯಾರಿಗೂ ಪಕ್ಷಪಾತವಾಗುತ್ತಿಲ್ಲವೆಂಬುದನ್ನು ತೋರಿಸಲು ಅವನು ಮಕ್ಕಳಿಗೆ ತನ್ನ ಸಾಮ್ರಾಜ್ಯದ ಮುಖ್ಯ ಮುಖ್ಯ ಮಂಡಲಗಳನ್ನು ಹಂಚಿಕೊಟ್ಟನು. ಆ ಮೂಲಕ ಅವರ ವಿಶ್ವಾಸವನ್ನು ದೊರಕಿಸಿಕೊಳ್ಳಲು ನೋಡಿದನು.

ಆದರೆ ಇಲ್ಲಿಯೂ ಅವನ ವರ್ತನೆಯನ್ನು ಉಳಿದವರು ತಪ್ಪು ತಿಳಿಯಲು ಅವಕಾಶವಾಯಿತು. ಉಳಿದ ಮಕ್ಕಳಿಗೆ ಮಾಂಡಲೀಕ ಪದವಿಗಳನ್ನು ಇತ್ತರೆ ವಿಕ್ರಮಾದಿತ್ಯನನ್ನು ಬಳಿಯಲ್ಲಿ ಇರಿಸಿಕೊಂಡನೆಂದು ಪುಲಿಕೇಶಿಯ ಬಗ್ಗೆ ಜನರು ತೋರಿದಂತೆ ಮಾತನಾಡಿದರು. ಎಲ್ಲರೂ ಪುಲಿಕೇಶಿಯು ಸಿಂಹಾಸನವನ್ನು ತನ್ನ ಮೋಹದ ಮಗ ವಿಕ್ರಮಾದಿತ್ಯನಿಗೆ ದೊರಕಿಸಿಕೊಡಲು ಮಾಡಿದ ಸಂಚು ಇದು ಎಂದು ತಿಳಿಯಲು ಅವಕಾಶ ಮಾಡಿಕೊಟ್ಟಿತ್ತು. ಸದ್ಯದ ಅನಾರೋಗ್ಯದ ಪರಿಸ್ಥಿತಿಯಲ್ಲಿ ಈ ಅಪವಾದವನ್ನು ತೊಡೆದುಹಾಕಲು ಪುಲಿಕೇಶಿಯು ಅಸಮರ್ಥನಾಗಿದ್ದನು.

ಹೀಗೆ ಪುಲಿಕೇಶಿಯು ಮಾನಸಿಕವಾಗಿಯೂ, ದೈಹಿಕವಾಗಿಯೂ ಚಿಂತೆಯ ಕಡಲಿನಲ್ಲಿ ಮುಳುಗಿದ್ದ ಸಮಯದಲ್ಲೇ ಕಾಂಚಿಯಿಂದ ಭೀಕರವಾದ ವಾರ್ತೆ ಬಂದಿತ್ತು. ಅದು ಪಲ್ಲವ ದೊರೆ ನರಸಿಂಹವರ್ಮನ ದಂಗೆ ಮತ್ತು ಸಮರ ಘೋಷಣೆ, ಈ ವಾರ್ತೆ ಕೇಳಿ ತನ್ನ ಜೀವಿತದ ಮಹತ್ಕಾರ್ಯ ಸಾಧನೆ ಮರಳಿನ ಮನೆಯಂತೆ ಕುಸಿದಂತೆ ಭಾಸವಾಯಿತು. ತನ್ನ ಬಾಳು ವ್ಯರ್ಥವಾದಂತೆ ಅನಿಸಿತು. ಅವನಿಗೆ ತನ್ನ ಕಣ್ಣೆದುರಿಗೆ, ತಾನು ಅನೇಕ ವರ್ಷಗಳು ಅಸಂಖ್ಯಾತ ಯೋಧರ ರಕ್ತಹರಿಸಿ ಕಟ್ಟಿದ ಸಾಮ್ರಾಜ್ಯ ಛಿದ್ರಛಿದ್ರವಾದಂತೆ ಕಂಡಿತು. ಅವನು ಇದೇ ಚಿಂತೆಯಿಂದ ಕಂಗಾಲಾದನು, ದಿನದಿನಕ್ಕೂ ಅವನ ಸ್ಥಿತಿ ಚಿಂತಾಜನಕವಾಗುತ್ತಾ ನಡೆಯಿತು.

ಇದನ್ನು ಕಂಡು ವಿಕ್ರಮಾದಿತ್ಯನಿಗೆ ಸುಮ್ಮನಿರಲಾಗಲಿಲ್ಲ. ಅವನು

ಸಮಯನೋಡಿ, ಪುಲಿಕೇಶಿಯೊಡನೆ ಮಾತು ತೆಗೆದನು.

"ಅಪ್ಪಾಜಿ, ತಾವು ಆ ದ್ರೋಹಿ ನರಸಿಂಹವರ್ಮನ ವಿದ್ರೋಹವಾರ್ತೆಯನ್ನು ಕೇಳಿ ಕಳವಳಗೊಳ್ಳುವ ಕಾರಣವಿಲ್ಲ. ಆ ಮದೋನ್ಮತ್ತನಿಗೆ ಇನ್ನೂ ಚಾಲುಕ್ಯ ಸೈನ್ಯದ ಪೆಟ್ಟು ಬಿದ್ದಿಲ್ಲ. ಅವನು ತಮ್ಮ ಅಸ್ವಸ್ಥತೆಯನ್ನು ನೆನೆದು ವಿದ್ರೋಹಾಚರಣೆಗೆ ಮನಸ್ಸು ಕೊಟ್ಟಿದ್ದಾನೆ. ತಾವು ನನಗೆ ಅಪ್ಪಣೆ ಮಾಡಿರಿ, ಆ ದ್ರೋಹಿಯ ವಿದ್ರೋಹವನ್ನು ಅಡಗಿಸಿ, ನರಸಿಂಹವರ್ಮನನ್ನು ಸೆರೆಹಿಡಿದು ತಂದು ತಮ್ಮ ಪಾದಗಳ ಮೇಲೆ ಉರುಳಿಸುತ್ತೇನೆ."

ಈ ಮಾತು ಕೇಳಿ ಪುಲಿಕೇಶಿಯು ನಕ್ಕನು.

"ಮಗು–ವಿಕ್ರಮಾದಿತ್ಯ, ನಿನ್ನಿಂದ ಈ ಕಾರ್ಯ ಅಸಾಧ್ಯವೆಂದು ನಾನು ತಿಳಿದಿಲ್ಲ. ನೀನು ಮನಸ್ಸುಮಾಡಿದರೆ ಇದನ್ನು ಕಾರ್ಯಗತಗೊಳಿಸಬಲ್ಲೆ, ನಾ ಬಲ್ಲೆ. ಆದರೆ ಆ ದ್ರೋಹಿ ಪಲ್ಲವರು ನಾನು ಬದುಕಿರುವಾಗಲೇ ನನ್ನ ಮೇಲೆ ದಂಗೆ ಏಳುವಷ್ಟು ಸೊಕ್ಕಿರುವರಲ್ಲ ಎಂಬುದನ್ನು ನೆನೆದರೆ ನನ್ನ ಜೀವಿತದ ಸಾಧನೆ ನಿಷ್ಫಲವಾದಂತೆ ಅನಿಸುತ್ತಿದೆ. ನನ್ನ ಜೀವಿತದ ಅನೇಕ ವರ್ಷಗಳನ್ನು ಶತ್ರುನಿಗ್ರಹದಲ್ಲಿ ಕಳೆದಿರುವೆ. ಈಗ ಸಾಮ್ರಾಜ್ಯದಲ್ಲಿ ಚಿರವಾದ ಶಾಂತಿ ನೆಲೆಸಲು ನಾನು ಹಾರೈಸಿದ್ದೆ. ಆದರೆ ಕಡೆಗಾಲದಲ್ಲಿ ಹೀಗಾದೀತೆಂದು ನಾನು ಎಣಿಸಿರಲಿಲ್ಲ. ಇದು ನನ್ನ ಸೋಲು–ನನ್ನ ಬಾಳಿನ ಮಹತ್ಸಾಧನೆಯ ಸೋಲು! ಅದಕ್ಕಾಗಿ ನಾನು ವ್ಯಥೆಪಡುತ್ತಿದ್ದೇನೆ" ಎಂದು ಪುಲಿಕೇಶಿ ವಿಷಣ್ಣನಾಗಿ ನಕ್ಕನು.

"ಪ್ರಭು ತಾವು ಎಂದಿಗೂ ಹಾಗೆ ತಿಳಿಯಬಾರದು. ತಮ್ಮ ಜೀವನ ಎಂದಿಗೂ ನಿಷ್ಪ್ರಯೋಜನವಾಗಲಿಲ್ಲ. ತಾವು ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದರೇನು.ತಾವು ಸಿಂಹಸದೃಶರೆಂಬುದನ್ನು ಮರೆತವನು ಮೂರ್ಖನೇ ಸರಿ. ಆ ಪಲ್ಲವರಿಗೆ ಗ್ರಹಚಾರ ಕೆಟ್ಟಿದೆ ಎಂದೇ ಅವರಿಗೆ ಈ ದುರ್ಬುದ್ಧಿ ಬಂದಿದೆ. ಈ ಬಾರಿ ಅವರ ಸರ್ವನಾಶ ಸಿದ್ಧ!"

"ಮಗು, ಪಲ್ಲವರ ನಾಶಕ್ಕಾಗಿ ನಾನು ಎಂದೂ ಹಾರೈಸಲಿಲ್ಲ–ಈಗಲೂ ಹಾರೈಸುವುದಿಲ್ಲ. ನನಗೆ ಬೇಕಾದುದು ಚಾಲುಕ್ಯಸಿಂಹಾಸನದ–ಸಾಮ್ರಾಜ್ಯದ–ಸುಭದ್ರತೆ. ಆ ದೃಷ್ಟಿಯಲ್ಲಿ ನಮಗೆ ಶತ್ರುಗಳಾಗಿದ್ದವರನ್ನು ನಿಗ್ರಹಿಸಿ, ಅವರನ್ನು ಮಿತ್ರರನ್ನಾಗಿಸಿಕೊಳ್ಳಲು ನಾನು ಮೂವತ್ತು ವರ್ಷಗಳಕಾಲ ಕೈಗೆ

ಶಸ್ತ್ರಹಿಡಿದು, ಹಗಲಿರುಳೆನ್ನದೆ ದುಡಿದೆ. ಇದಕ್ಕಾಗಿ ಅಸಂಖ್ಯಾತ ಕನ್ನಡಿಗರು ತಮ್ಮ ರಕ್ತವನ್ನು ಬಸಿದು, ಹುತಾತ್ಮರಾಗಿದ್ದಾರೆ. ಅವರ ಧೈರ್ಯ ಸಾಹಸ ಬಲಿದಾನಗಳಿಂದ ನಿರ್ಮಿಸಿದ ಅಖಂಡ ಸಾಮ್ರಾಜ್ಯ ಮರಳಿನ ಮನೆಯಂತೆ ಛಿದ್ರವಾಗುವುವನ್ನು ನೋಡಿ ನನಗೆ ವ್ಯಥೆಯಾಗುತ್ತಿದೆ.

"ಇಂದು ಪಲ್ಲವರು ನನ್ನ ಅಸ್ವಸ್ಥತೆಯಿಂದ ಹುರುಪುಗೊಂಡು ಸ್ವತಂತ್ರರಾದರು. ನಾಳೆ ಗಂಗರು ಸ್ವತಂತ್ರರಾಗುತ್ತಾರೆ. ಇನ್ನೊಮ್ಮೆ ಕದಂಬರು ಸ್ವತಂತ್ರರಾಗುತ್ತಾರೆ. ಹೀಗೆ ಒಬ್ಬರನ್ನೊಬ್ಬರು ನೋಡಿಕೊಂಡು ಎಲ್ಲರೂ ಸ್ವತಂತ್ರರಾದರೆ, ಚಾಲುಕ್ಯಸಾಮ್ರಾಜ್ಯ ನಾಮಾವಶೇಷವಾಗುವುದು ಎಷ್ಟು ಹೊತ್ತು ?"

"ನನ್ನ ಅಸ್ವಸ್ಥತೆಯೇ ಇದಕ್ಕೆಲ್ಲ ಕಾರಣ. ನಾನು ಹಿಂದಿನಂತೆ ಶಸ್ತ್ರ ಹಿಡಿಯಬಲ್ಲವನಾಗಿದ್ದರೆ, ರಣರಂಗದಲ್ಲಿ ನುಗ್ಗಿ ವೈರಿಗಳ ರಕ್ತ ಬಸಿಯಬಲ್ಲವನಾಗಿದ್ದರೆ ನನ್ನ ವಿರುದ್ಧ ಕೈ ಎತ್ತಲು, ದ್ರೋಹ ಚಿಂತಿಸಲು ಯಾರಿಗೂ ಧೈರ್ಯ ಬರುತ್ತಿರಲಿಲ್ಲ. ವಿಧಿ ನನ್ನನ್ನು ಈ ಸ್ಥಿತಿಗೆ ತಂದಿದ್ದಾನೆ. ನನ್ನನ್ನು ಜೀವಚ್ಛವವಾಗಿರಿಸಿ, ನನ್ನ ಕಣ್ಣ ಮುಂದೆ ನಾನು ವಿಸ್ತರಿಸಿದ ಸಾಮ್ರಾಜ್ಯದ ಗೋರಿಯನ್ನು ನಿರ್ಮಿಸುತ್ತಿದ್ದಾನೆ. ಇದಕ್ಕಿಂತ ಬಾಳಿನ ದೊಡ್ಡ ದುರಂತ ಬೇಕೆ ? ಇದನ್ನು ನೋಡುವುದಕ್ಕಿಂತ ಸಾಯುವುದು ಮೇಲು" ಎಂದು ನೊಂದು ನುಡಿದು ಪುಲಿಕೇಶಿಯು ಕಣ್ಣುಮುಚ್ಚಿ ಮಲಗಿದನು. ಅವನ ಕಣ್ಣುಗಳಲ್ಲಿ ಅಶ್ರುಬಿಂದು ಕಾಣಿಸಿಕೊಂಡು, ಮುತ್ತಿನಂತೆ ಥಳಥಳಿಸಿತು. ಪುಲಿಕೇಶಿ ಎಂದೂ ಹೀಗೆ ದುಃಖಿಸಿದನಲ್ಲ. ದುಃಖವೆಂಬುದು ಅವನಿಗೆ ತಿಳಿದಿರಲಿಲ್ಲ. ಇಂದು ತನ್ನ ಕೊನೆಗಾಲದಲ್ಲಿ ನಡೆದ ಪಲ್ಲವವಿದ್ರೋಹವನ್ನು ನೆನೆದು ದ್ರಷ್ಟಾರನಂತೆ ಮುಂದಿನ ಸಂಗತಿಯನ್ನು ನೋಡುತ್ತಾ ಮೈಮರೆತು ಮಲಗಿದನು.

"ಪ್ರಭು, ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ. ಒಬ್ಬ ನರಸಿಂಹವರ್ಮನು ಸಾಮ್ರಾಟರ ಎದುರು ದಂಗೆ ಎದ್ದ ಮಾತ್ರಕ್ಕೆ ಸಾಮ್ರಾಜ್ಯಕ್ಷಯವೇನೂ ಆಗಲಿಲ್ಲ. ಅಂತಹ ನೂರು ಮಂದಿ ನರಸಿಂಹವರ್ಮರನ್ನು ಬಗ್ಗುಬಡಿಯುವ ಶಕ್ತಿ ಈ ಬಾಹುಗಳಿಗಿವೆ. ತಾವು ಅಸ್ವಸ್ಥರಾಗಿದ್ದರೇನು ? ತಮ್ಮ ಪವಿತ್ರ ಸ್ಮರಣೆ ಹೇಡಿಗಳ ಹೃದಯದಲ್ಲಿ ಕಲಿತನವನ್ನು ಉಕ್ಕಿಸುವುದು. ತಮ್ಮ ಪೌರುಷದ ಕ್ಷಾತ್ರಜೀವನದ–ಪವಿತ್ರನೆನಪು ಹೇಡಿಗಳ ಹೃದಯದಲ್ಲಿ ಆತ್ಮಾಭಿಮಾನವನ್ನೂ

ಸ್ವಾತಂತ್ರ್ಯಪ್ರೇಮವನ್ನೂ ಕೊನರಿಸಿ, ನಾಡಿನ ರಕ್ಷಣೆಗೆ ಸರ್ವಸ್ವವನ್ನೂ ಧಾರೆ ಎರೆಯುವ ರಣಗಲಿಗಳನ್ನಾಗಿ ಮಾಡುತ್ತದೆ. ತಮ್ಮ ಒಂದು ಆಜ್ಞೆಗಾಗಿ ಕನ್ನಡ ಗಂಡುಗಲಿಗಳ ಸೈನ್ಯ ಸಿದ್ಧವಾಗಿ ನಿಂತಿದೆ. ನನಗೆ ಆಜ್ಞೆಕೊಟ್ಟು ತಾವು ನಿಶ್ಚಿಂತರಾಗಬೇಕು."

"ಮಗು, ನೀನು ನಾಡಿನ ರಕ್ಷಾಮಣಿಯಾಗಿರುವವರೆಗೆ, ನಾಡಿನ ಭದ್ರತೆಗೆ ಯಾವ ಚ್ಯುತಿಯೂ ಬರಲಾರದು. ಆದರೂ ಒಮ್ಮೆ ಆತ್ಮಮಂಥನ ಮಾಡಿಕೊಳ್ಳುವಾಗ, ನನ್ನ ಬದುಕಿನ ಹೋರಾಟ ವ್ಯರ್ಥಸಾಹಸವಾಯಿತೇನೋ ಎಂದು ಅನಿಸುತ್ತದೆ. ನನಗೆ ನಾಳೆ ಚಾಲುಕ್ಯ ಸಿಂಹಾಸನದ ಗತಿ ಏನಾಗುವುದೋ ಎಂಬ ಚಿಂತೆ ಬಾಧಿಸುತ್ತಿದೆ. ಇತ್ತ ಪರಕೀಯರ ದಾಳಿ, ಅತ್ತ ವಿದ್ರೋಹಿಗಳ ಪಿತೂರಿ. ಇವುಗಳೊಂದಿಗೆ ಸಹೋದರರ ನಡುವೆ ಸಿಂಹಾಸನಕ್ಕಾಗಿ ಸ್ವಯುದ್ಧ ಕಲಹ ಉಂಟಾದರೆ, ನಿರ್ಭಾಗ್ಯಜನತೆ ವೃಥಾಕಾರಣವಾಗಿ ಬಲಿಯಾಗುವುದಲ್ಲ, ಎಂದು ಚಿಂತಿಸುತ್ತಿದ್ದೇನೆ."

"ಪ್ರಭು, ತಮ್ಮ ಚಿಂತೆಯನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ತಮಗೆ ನಾನು ಈ ಬಗ್ಗೆ ಅಭಯವನ್ನು ಕೊಡಬಲ್ಲೆ. ನಾನು ಜೀವಂತವಿರುವವರೆಗೆ-ಸಹೋದರರ ನಡುವೆ ಯಾವುದೇ ಯಾದವೀ ಹೋರಾಟ ನಡೆಯಲು ಅವಕಾಶ ಕೊಡಲಾರೆ. ಈ ಮಾತು ನಿಮ್ಮಾಣೆಗೂ ಸತ್ಯ."

"ನನಗೆ ನಿನ್ನ ಬಗ್ಗೆ ಆ ಧೈರ್ಯವಿದೆ ಮಗು. ಆದರೆ ನಿನ್ನ ಉಳಿದ ಸಹೋದರರ ಬಗ್ಗೆ ಆ ಧೈರ್ಯವಿಲ್ಲ. ಅವರು ನಿನ್ನನ್ನು ಸಿಂಹಾಸನದಲ್ಲಿ ಸಹಿಸಲಾಗದೆ, ಆತ್ಮಘಾತವೆನಿಸುವ ಕಾರ್ಯಕ್ಕೆ ಪ್ರವರ್ತಕರಾದರೆ ಗತಿ ? ಅವರಿಂದ ಸಾಮ್ರಾಜ್ಯಲಕ್ಷ್ಮಿಗೆ ವಿದ್ರೋಹವಾಗದೆ ಎಂದು ಯೋಚಿಸುತ್ತಿದ್ದೇನೆ."

"ಪ್ರಭು, ನಾನು ಹಿರಿಯನಾದ ಆದಿತ್ಯವರ್ಮನನ್ನು ನಿರ್ಲಕ್ಷಿಸಿ, ಸಿಂಹಾಸನವನ್ನು ಆಕ್ರಮಿಸಿಕೊಂಡರೆ ತಾನೇ ಈ ಪ್ರಶ್ನೆ ಏಳುವುದು. ಅದಕ್ಕೆ ನಾನು ಅವಕಾಶ ಕೊಡುವುದಿಲ್ಲ. ನನಗೆ ಸಾಮ್ರಾಜ್ಯದ ಹಿತಾಸಕ್ತಿ ಉಂಟೇ ಹೊರತು, ರಾಜ್ಯತೃಷ್ಣೆ ಇಲ್ಲ. ಅಧಿಕಾರ ಪದವಿಗಳ ವ್ಯಾಮೋಹವಿಲ್ಲ, ಅವುಗಳ ಸಲುವಾಗಿ, ತಾಯ್ನಾಡಿನ ಹಿತವನ್ನು ಬಲಿಕೊಡಲಾರೆ. ನನ್ನ ಮಾತನ್ನು ತಾವು ನಂಬಿ ನಿಶ್ಚಿಂತರಾಗಿರಿ."

"ನನ್ನ ನಂತರ ಆದಿತ್ಯವರ್ಮನು ಪಟ್ಟಕ್ಕೆ ಬಂದರೆ, ಅವನಿಂದ ಸಾಮ್ರಾಜ್ಯ

ವನ್ನು ಶತ್ರುಗಳಿಂದ ರಕ್ಷಿಸಿಕೊಳ್ಳುವುದು ಸಾಧ್ಯವೆ? ಅವನ ಬಾಹುಗಳಿಗೆ ಅಷ್ಟು ಶಕ್ತಿ ಇದೆಯೆ ? ವಿಸ್ತಾರವಾದ ಸಾಮ್ರಾಜ್ಯವನ್ನು ಉಳಿಸಿಕೊಳ್ಳುವಷ್ಟು ವಿವೇಕವಿದೆಯೇ ?"

"ಅವನು ನೆಪಮಾತ್ರಕ್ಕೆ ಸಾಮ್ರಾಟನಾಗಲಿ. ನಾನು ಅವನ ನೆರಳಿ ನಂತೆ ನಿಂತು, ತಮ್ಮ ಪ್ರತಿನಿಧಿಯಾಗಿ ಸಾಮ್ರಾಜ್ಯದ ಹಡಗನ್ನು ಮುನ್ನಡೆಸು ತ್ತೇನೆ. ತಾವು ಈ ಬಗ್ಗೆ ಯಾವುದೇ ಕಳವಳಪಡಬಾರದು. ಸ್ವಾಮಿ ಮಕುಟೇಶ್ವರನ ದಯದಿಂದ ತಾವು ಈ ವ್ಯಾಧಿಯಿಂದ ಚೇತರಿಸಿಕೊಂಡು ಗುಣಮುಖರಾಗುತ್ತೀರಿ. ತಾವು ಅಧೈರ್ಯಪಡುವ ಕಾರಣವಿಲ್ಲ" ಎಂದು ಸಮಾಧಾನ ಹೇಳಿದನು.

"ಮಗು, ನಿನ್ನ ಭರವಸೆಯ ನುಡಿಗಳನ್ನು ಕೇಳಿ ಮನಸ್ಸಿಗೆ ಎಷ್ಟು ನೆಮ್ಮದಿಯಾಗಿದೆ ಬಲ್ಲೆಯಾ? ಸಾಮ್ರಾಜ್ಯಲಕ್ಷ್ಮಿಯನ್ನು ನಿನಗೆ ಒಪ್ಪಿಸಿ ಹೋಗುತ್ತಿದ್ದೇನೆ. ಆಕೆಯ ಧವಳಕೀರ್ತಿಯನ್ನು ಎಲ್ಲೆಡೆಯಲ್ಲಿ ಮೆರೆಸಿ, ಜನತೆಯನ್ನು ಕಲ್ಯಾಣದ ಹಾದಿಯಲ್ಲಿ ಮುನ್ನಡೆಸುವ ಹೊಣೆಗಾರಿಕೆ ನಿನ್ನದು" ಎಂದು ಹೇಳಿ ಸಮಾಧಾನದ ನಿಟ್ಟುಸಿರುಬಿಟ್ಟನು.

"ಪ್ರಭು, ತಮ್ಮಲ್ಲಿ ನನ್ನದೊಂದು ಬಿನ್ನಹವಿದೆ."

"ಏನದು ಮಗು ?"

"ತಾವು ಬಾರಿಬಾರಿಗೂ ಸಾವಿನ ಸುದ್ದಿ ತೆಗೆದು ನಮ್ಮ ಮನಸ್ಸನ್ನು ನೋಯಿಸುತ್ತಿದ್ದೀರಿ. ಇನ್ನೊಮ್ಮೆ ತಾವು ಅಂತಹ ಮಾತನ್ನು ಎತ್ತಿದರೆ ನನ್ನಾಣೆಯಿದೆ. ತಾವು ಎಲ್ಲ ಗಂಡಾಂತರಗಳನ್ನು ಹಾದು, ನೂರುವರ್ಷ ಬದುಕ ಬೇಕೆಂದೇ ನಮ್ಮೆಲ್ಲರ ಹಾರೈಕೆ."

ಈ ಮಾತಿಗೆ ಪುಲಿಕೇಶಿಯು ಗಹಗಹಿಸಿ ನಕ್ಕನು.

"ಮಗು, ಸಾವಿನ ಸುದ್ದಿ ಎತ್ತಿದರೆ ನಿನಗೇಕೆ ಇಷ್ಟು ಭೀತಿ ? ನಾನು ಕೆಲವು ದಿನಗಳಿಂದ ಸಾವಿನ ಕೂಡ ಸರಸವಾಡುತ್ತಿದ್ದೇನೆ, ಬಲ್ಲೆಯಾ ? ಮೃತ್ಯು ನನ್ನ ಗೆಳೆಯನಂತೆ ನನ್ನನ್ನು ಆಲಂಗಿಸಲು ಬಂದಿದ್ದಾನೆ. ಅವನನ್ನು ವಂಚಿಸ ಲಾರೆ, ಆ ಮಾತು ಸುಳ್ಳೆಂದು ಹೇಳಿ ನಿಮ್ಮನ್ನೂ ವಂಚಿಸಲಾರೆ, ರಾಜವೈದ್ಯ ರಂತೆ ಆತ್ಮವಂಚನೆ ಮಾಡಿಕೊಳ್ಳಲಾರೆ. ನೀನು ಇದನ್ನು ನೆನೆದರೂ ಅಷ್ಟೇ, ಬಿಟ್ಟರೂ ಅಷ್ಟೆ. ನಾನು ಹೆಚ್ಚು ಕಾಲ ಬದುಕುವುದಿಲ್ಲ, ನನಗೆ ಕಾಲನ ಕರೆ

ಬಂದಿದೆ."

"ಪ್ರಭು, ತಮ್ಮನ್ನು ಮುಟ್ಟಲು ಸಾವಿಗೆ ಧೈರ್ಯವಾದರೂ ಎಲ್ಲಿಯದು? ನೀವು ಅವಕಾಶಕೊಟ್ಟರೆ ಉಂಟು, ಇಲ್ಲದಿದ್ದರೆ ಇಲ್ಲ. ತಾವು ಈ ಹಿಂದೆ ಅನೇಕ ಬಾರಿ ಸಾವಿನ ದವಡೆಯಲ್ಲಿ ಇದ್ದವರು–ಹಿಂದೆ ಪಾರಾದಂತೆ ಈ ಬಾರಿಯೂ ಏಕೆ ಪಾರಾಗಬಾರದೆಂದೇ ನಮ್ಮೆಲ್ಲರ ಆಸೆ."

"ನಮ್ಮ ಸಾವಿರ ಆಸೆ–ಆಕಾಂಕ್ಷೆಗಳನ್ನು ಈಡೇರಿಸಬಲ್ಲ ಪ್ರಭು ಅವನೊಬ್ಬನೇ. ಅವನು ನನ್ನನ್ನು ಕೈ ಬಿಟ್ಟಿದ್ದಾನೆ. ಅಂತಲೇ ನಾನು ಈ ಕುತ್ತದಿಂದ ಹಾಸಿಗೆ ಹಿಡಿದಿದ್ದೇನೆ. ಅವನು ನಮ್ಮ ಪಾಲಿಗೆ ಇದ್ದಿದ್ದರೆ ನಮಗೇಕೆ ಈ ದುಸ್ಥಿತಿ ಒದಗುತ್ತಿತ್ತು !"

ಎಂದು ಪುಲಿಕೇಶಿಯು ವಿಷಣ್ಣನಾಗಿ ನಕ್ಕನು. ಈ ಮಾತಿಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದೆ ವಿಕ್ರಮಾದಿತ್ಯನು ಮೌನವಾಗಿ ಕುಳಿತನು.

## ೨೮

ಕಾಂಚಿಯಿಂದ ಹೊರಬಿದ್ದ ರಾಹಪ್ಪಯ್ಯನು ಸುಮ್ಮನೆ ಕುಳಿತಿರಲಿಲ್ಲ. ಅವನು ವಯಸ್ಸಿನ ಭಾರದಿಂದ ಮುಪ್ಪಡರಿದ್ದರೂ ಅವನ ಸೇಡಿನ ಬೆಂಕಿಯು ಮಾತ್ರ ನಂದಿರಲಿಲ್ಲ. ಅವನು ಮಂಗಳೇಶನ ಸ್ವಾಮಿನಿಷ್ಠ ಸೇವಕನಾಗಿದ್ದು, ತನ್ನೊಡೆಯನಿಗೆ ಕೊನೆಗಾಲದಲ್ಲಿ ಕೊಟ್ಟಿದ್ದ ವಚನವನ್ನು ಪಾಲಿಸಲು ಯಾವ ಮಹತ್ಕಾರ್ಯಕ್ಕೂ ಸಿದ್ಧನಾಗಿದ್ದನು. ಅವನಲ್ಲಿ ಈಗ ಯೌವ್ವನದ ಉತ್ಸಾಹ ತಗ್ಗಿದ್ದರೂ ಪುಲಿಕೇಶಿಯ ಮೇಲಣ ದ್ವೇಷದ ಕಿಚ್ಚುಮಾತ್ರ ತಗ್ಗಿರಲಿಲ್ಲ. ಅವನ ಪ್ರತೀಕಾರಾಕಾಂಕ್ಷೆಯು ಈ ಮೊದಲು ಕುಲಶತ್ರುಗಳಾದ ಪಲ್ಲವರ ಮೊರೆ ಹೋಗುವಂತೆ ಮಾಡಿತ್ತು. ಕುಬ್ಜವಿಷ್ಣುವರ್ಧನನನ್ನು ಪುಲಿಕೇಶಿಯ ವಿರುದ್ಧ ಎತ್ತಿಕಟ್ಟುವಂತೆ ಮಾಡಿತ್ತು. ಈ ಪ್ರಯತ್ನಗಳಿಂದ ನಿರೀಕ್ಷಿಸಿದ ಪ್ರತಿಫಲ ದೊರೆಯದಾಗಲು ಈಗ ಅವನ ಬೇರೊಂದು ದಾರಿ ತುಳಿದಿದ್ದನು.

ಈ ಬಾರಿ ಅವನು ಪುಲಿಕೇಶಿಯ ಮೇಲೆ ಪ್ರತೀಕಾರ ಬಗೆಯಲು ಹೊಸ ದೊಂದು ದಾರಿ ಹುಡುಕಿದ್ದನು. ಪುಲಿಕೇಶಿಯ ವಿರುದ್ಧ ಅವನ ಮಕ್ಕಳನ್ನು ಎತ್ತಿ ಕಟ್ಟಿ ಆ ಮೂಲಕ ತನ್ನ ಸ್ವಾರ್ಥವನ್ನು ಸಾಧಿಸಲು ಯೋಚಿಸಿದ್ದನು.

ರಾಹಪ್ಪಯ್ಯ ಮತ್ತು ಚಂದ್ರೋಜರು ನೊಳಂಬವಾಡಿಗೆ ವೇಶಾಂತರದಲ್ಲಿ ಬಂದು ಒಂದು ಬಿಡದಿ ಮನೆಯಲ್ಲಿ ತಂಗಿದರು. ಚಂದ್ರೋಜನು ಅಲ್ಲಿ ತನ್ನ ಚಿತ್ರಶಾಲೆಯನ್ನು ತೆರೆದು ಜನರನ್ನು ಆಕರ್ಷಿಸಿ ಅವರಿಂದ ಊರಿನ ವರ್ತಮಾನ ವನ್ನು, ಆದಿತ್ಯವರ್ಮನ ವಿಷಯವನ್ನು ಸಂಗ್ರಹಿಸಿಕೊಳ್ಳುತ್ತಾ ಬಂದನು. ರಾಹಪ್ಪಯ್ಯನು ಒಬ್ಬ ತಪಸ್ವಿಯ ಸೋಗಿನಲ್ಲಿ ಮೌನವಾಚರಿಸುತ್ತ, ಏಕಾಂತ ದಲ್ಲಿ ಇರುತ್ತಿದ್ದನು. ಅವನ ಜಡೆಕಟ್ಟಿದ ತಲೆ, ಕ್ಷೌರ ಕಾಣದ ಮುಖ, ಅವನಿಗೆ ತಪಸ್ವಿಯ ಸೋಗು ಹಾಕಲು ಬಹಳ ಅನುವಾಗಿತ್ತು.

ಚಿತ್ರಕಾರ ಚಂದ್ರೋಜನ ಕೀರ್ತಿ ಬಹುಬೇಗ ಅರಮನೆಗೂ ವ್ಯಾಪಿಸಿತು. ಅವನು ನಿರ್ಮಿಸಿದ ಚಿತ್ರಗಳನ್ನು ನೋಡಿ ಮೆಚ್ಚಿದ ಆದಿತ್ಯವರ್ಮನು ಅವನನ್ನು ತನ್ನ ಅರಮನೆಗೆ ಆಹ್ವಾನಿಸಿ, ಅವನಿಂದ ತನ್ನ ಚಿತ್ರ ತೆಗೆಸಲು ನಿಶ್ಚಯಿಸಿದನು.

ಅವನ ಕೋರಿಕೆಯಂತೆ ಚಂದ್ರೋಜನು ಬಂದು ಆದಿತ್ಯವರ್ಮನನ್ನು ಭೇಟಿಮಾಡಿದನು. ಅವನನ್ನು ಎಲ್ಲೋ ನೋಡಿದಂತೆ, ಆದಿತ್ಯವರ್ಮನಿಗೆ ಭಾಸವಾದರೂ—ಅವನೇ ಚಂದ್ರೋಜನೆಂದು ತಿಳಿಯುವುದು ಕಷ್ಟವಾಗಿತ್ತು. ಅವನ ಮಲಿನವಾದ ಉಡಿಗೆ, ಬತ್ತಿಹೋದಮುಖ, ನಿಸ್ತೇಜವಾದ ಗುಳಿಬಿದ್ದ ಕಣ್ಣುಗಳನ್ನು ಕಂಡು, ಯಾವನೋ ನಿರಾಶೆಗೊಂಡ ಚಿತ್ರಕಾರನಿರಬೇಕೆಂದು ಭಾವಿಸಿದನು. ಅವನ ರೂಪು ಹೊರನೋಟಕ್ಕೆ ಎಷ್ಟು ಅಸಹ್ಯವಾಗಿತ್ತೋ ಅವನ ಚಿತ್ರಗಳು ನೋಡಲು ಅಷ್ಟೇ ಮನೋಹರವಾಗಿದ್ದಿತು. ಈ ನಿರ್ಭಾಗ್ಯ ಶಿಲ್ಪಿಗೆ ಇಂತಹ ಸೌಂದರ್ಯದೃಷ್ಟಿ ಹೇಗೆ ಸಿದ್ಧಿಸಿದೆ ಎಂಬುದು ಆದಿತ್ಯವರ್ಮನಿಗೆ ಅಚ್ಚರಿಯನ್ನು ಉಂಟುಮಾಡಿತು.

"ಚಿತ್ರಕಾರರೇ, ನೀವಾರೋ ನನಗೆ ತಿಳಿಯದು. ನಿಮ್ಮ ಚಿತ್ರಗಳನ್ನು ನೋಡಿದರೆ, ನೀವು ರಾಜಾಸ್ಥಾನದಲ್ಲಿ ಬಹುಕಾಲ ಇದ್ದ ಕಲಾವಿದರಂತೆ ಭಾಸ ವಾಗುತ್ತದೆ. ನಿಮ್ಮ ಚಿತ್ರಗಳನ್ನು ನೋಡಿ ನಾನು ಮಾರುಹೋಗಿದ್ದೇನೆ. ನೀವು ನಮ್ಮ ಆತಿಥ್ಯವನ್ನು ಸ್ವೀಕರಿಸಿ ನಮ್ಮ ಆಸ್ಥಾನದ ಕಲಾವಿದರಾಗಿ ಇರಬೇಕೆಂದು ನಮ್ಮ ಪ್ರಾರ್ಥನೆ."

ಎಂದು ಆದಿತ್ಯವರ್ಮ ಬಿನ್ನವಿಸಿದನು.

ಅದಕ್ಕೆ ಚಂದ್ರೋಜನು ಸಂತೋಷದಿಂದಲೇ ಸಮ್ಮತಿಸಿದನು. ಅವನು ಆದಿತ್ಯವರ್ಮನ ವಿಶ್ವಾಸಕ್ಕೆ ಪಾತ್ರನಾಗಿ ಅವನ ಕೋರಿಕೆಯಂತೆ ಅನೇಕ ಚಿತ್ರಗಳನ್ನು ಬಿಡಿಸಿಕೊಟ್ಟನು. ಇದರಿಂದ ಸುಪ್ರೀತನಾದ ಆದಿತ್ಯವರ್ಮನು ಅವನಿಗೆ ಅನೇಕ ಬೆಲೆಬಾಳುವ ಮೆಚ್ಚು ಕಾಣಿಕೆಯನ್ನು ಕೊಟ್ಟನು.

"ನಿಮ್ಮಂತಹ ಕಲಾವಿದರು, ಸಾಮ್ರಾಟರ ಬಳಿ ಹೆಚ್ಚು ಶೋಭಿಸುತ್ತಾರೆ. ನಾನು ನಿಮ್ಮ ವಿಷಯವನ್ನು ಸಾಮ್ರಾಟರಿಗೆ ತಿಳಿಸಬೇಕೆಂದಿದ್ದೇನೆ. ನೀವು ಒಪ್ಪುವುದಾದರೆ ಸಾಮ್ರಾಟರ ಬಳಿಗೆ ಕಳುಹಿಸಿಕೊಡುತ್ತೇನೆ."

ಈ ಮಾತು ಕೇಳಿ ಚಂದ್ರೋಜನು ಹೌಹಾರಿದನು. ಅವನ ಮುಖ ಬಿಳಚಿಕೊಂಡಿತು. ಅವನು ತೊದಲುತ್ತಾ ಹೇಳಿದನು :

"ಪ್ರಭು, ನಾನೆಲ್ಲಿ ? ಸಾಮ್ರಾಟರೆಲ್ಲಿ ? ನನ್ನಂತಹ ಪಾಮರನಿಗೆ ಸಾಮ್ರಾಟರ ಅನುಗ್ರಹವೆ ? ನನಗೆ ಅಂತಹ ಯಾವುದೇ ಆಸೆ ಆಕಾಂಕ್ಷೆಗಳಿಲ್ಲ. ಅಲ್ಲದೆ ನಾನು ಜೀವಿತದಲ್ಲಿ ಒಂದು ಮಹತ್ವಾಕಾಂಕ್ಷೆ ಹೊತ್ತು ನಿಮ್ಮ ಬಳಿ ಬಂದಿದ್ದೇನೆ. ಅದು ನಿಮ್ಮಿಂದ ಮಾತ್ರ ಈಡೇರಬಹುದಾದ ಮಹತ್ಸಂಕಲ್ಪ. ಅದರ ಹೊರತು ನನಗೆ ಬೇರಾವ ರಾಜಸನ್ಮಾನವೂ ಬೇಡ. ಇವುಗಳು ನನ್ನ ಪಾಲಿಗೆ ಕ್ಷುದ್ರಸಾಧನೆ. ಇವುಗಳಿಗಾಗಿ ನಾನು ತಮ್ಮ ಬಳಿಗೆ ಬರಲಿಲ್ಲ."

"ಹಾಗಾದರೆ ತಾವು ಇಲ್ಲಿಗೆ ಏಕೆ ಬಂದಿದ್ದೀರಿ ? ನೀವು ಛದ್ಮವೇಷದ ರಾಜಕರ್ಮಚಾರಿಗಳೆ ?" ಎಂದು ಸಂಶಯದಿಂದ ಆದಿತ್ಯವರ್ಮನು ಹೇಳಿದ.

"ಈ ಪ್ರಶ್ನೆಗೆ ನಾನು ಇಲ್ಲಿ ಉತ್ತರ ಹೇಳಲಾರೆ ಪ್ರಭು. ನಮ್ಮ ಗುರುಗಳು ಉತ್ತರ ಹೇಳಬಲ್ಲರು".

ಎಂದ ನಿರುದ್ವೇಗದ ಧ್ವನಿಯಲ್ಲಿ ಚಂದ್ರೋಜ.

"ಯಾರು ನಿಮ್ಮ ಗುರುಗಳು ? ಅವರು ಎಲ್ಲಿದ್ದಾರೆ ?"

"ಅವರೊಬ್ಬರು ಮಹಾತಪಸ್ವಿಗಳು. ಅವರು ನಿಮ್ಮ ದರ್ಶನಾರ್ಥಿಯಾಗಿ ಇಲ್ಲಿಗೆ ಬಂದು, ನಿಮ್ಮ ಕಲ್ಯಾಣಕ್ಕಾಗಿ ತಪಸ್ಸು ಮಾಡುತ್ತಿದ್ದಾರೆ !"

"ನಾವು ಅವರನ್ನು ನೋಡಬಹುದೆ ?"

"ಖಂಡಿತವಾಗಿ ! ಅವರನ್ನು ನೋಡಬಯಸುವುದಾದರೆ ಇಂದೇ ಅವರ ಸನ್ನಿಧಿಗೆ ತಮ್ಮನ್ನು ಕರೆದೊಯ್ಯುತ್ತೇನೆ."

"ಹಾಗಾದರೆ ನಡೆಯಿರಿ !"

"ಪ್ರಭು, ತಾವು ಈ ವೇಷದಲ್ಲಿ ಅಲ್ಲಿಗೆ ಬರಲಾಗದು. ತಾವು ಸಿದ್ಧರಾಗಿದ್ದರೆ ತಮ್ಮನ್ನು ಈ ರಾತ್ರಿ ಅಲ್ಲಿಗೆ ಕರೆದೊಯ್ದು, ಗುರುಗಳ ದರ್ಶನ ಮಾಡಿಸುತ್ತೇನೆ."

"ಏಕೆ ?"

"ಅವರು ಯಾವುದೋ ಸಂಕಲ್ಪ ಸಾಧನೆಗಾಗಿ ಕಠೋರ ತಪಸ್ಸು ಮಾಡುತ್ತಿದ್ದಾರೆ. ಹಗಲೆಲ್ಲಾ ಧ್ಯಾನಮಾಡುತ್ತಾರೆ, ಮೌನವಾಚರಿಸುತ್ತಾರೆ. ಸಂಜೆ ಮಾತ್ರ ತಮ್ಮ ಸಮಾಧಿಯಿಂದ ಎಚ್ಚೆತ್ತು ಭಕ್ತಜನಕ್ಕೆ ದರ್ಶನ ಕೊಡುತ್ತಾರೆ."

"ಹಾಗಿದ್ದರೆ ಇಂದು ಸಂಜೆ ನಿಮ್ಮ ಗುರುಗಳನ್ನು ನಾವು ಸಂದರ್ಶಿಸುತ್ತೇವೆ. ನೀವು ಗುರುಗಳ ಸಮಯ ಅರಿತು ನಮಗೆ ತಿಳಿಸಿ."

"ಪ್ರಭು, ಗುರುಗಳು ಇಂದು ರಾತ್ರಿ ಎರಡನೆಯ ಯಾಮದಲ್ಲಿ ತಮ್ಮ ಇಷ್ಟದೈವಕ್ಕೆ ವಿಶೇಷ ಪೂಜೆ ನಡೆಸಲಿದ್ದಾರೆ. ಆ ಸಮಯಕ್ಕೆ ಬಂದರೆ ತಮ್ಮನ್ನು ಕರೆದುಕೊಂಡು ಹೋಗುತ್ತೇನೆ."

ಎಂದು ಹೇಳಿ ಚಂದ್ರೋಜನು ಆದಿತ್ಯವರ್ಮನನ್ನು ಬೀಳ್ಕೊಂಡು ಹೊರಟನು.

ಈ ಎಲ್ಲ ಸಂಗತಿಯನ್ನು ರಾಹಪ್ಪಯ್ಯ ಕೇಳಿದಾಗ ತನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಷ್ಟು ಹಿಗ್ಗಿದನು. ತನ್ನ ವಿದ್ರೋಹ ಸಫಲವಾಯಿತೆಂದು ಹರ್ಷಿಸಿದನು. ಅವನು ಆದಿತ್ಯವರ್ಮನನ್ನು ಸ್ವಾಗತಿಸಲು ಸಿದ್ಧನಾದನು.

ಆದಿತ್ಯವರ್ಮನು ಮಿತಪರಿವಾರದೊಡನೆ ಹೊರಟು, ರಾಹಪ್ಪಯ್ಯನಿದ್ದ ನಿವಾಸಕ್ಕೆ ಬಂದನು. ಅವನು ವೇಷಾಂತರದಲ್ಲಿ ಇದ್ದುದರಿಂದ ದಾರಿಹೋಕರಾರೂ ಅವನನ್ನು ಗುರುತಿಸಲಿಲ್ಲ.

ಚಂದ್ರೋಜನು ಅವನನ್ನು ಸ್ವಾಗತಿಸಿ, ಅವನನ್ನು ಗುರುಗಳ ಬಳಿಗೆ ಕರೆದೊಯ್ದನು.

ಆದಿತ್ಯವರ್ಮನು ಗುರುಗಳ ಕಾಲಿಗೆ ಬಿದ್ದು ನಮಸ್ಕರಿಸಿದನು. ಆಗ ಅವರು "ಶೀಘ್ರ ಸಿಂಹಾಸನ ಪ್ರಾಪ್ತಿರಸ್ತು" ಎಂದು ಗಟ್ಟಿಯಾಗಿ ಕೇಳುವಂತೆ ಆಶೀರ್ವಾದ ಮಾಡಿದರು.

ಇದನ್ನು ಕೇಳಿ ಆದಿತ್ಯವರ್ಮನಿಗೆ ಆಶ್ಚರ್ಯವಾಯಿತು. ಅವನು ವಿಸ್ಮಯ ಗೊಂಡು ಗುರುಗಳ ಮುಖ ನೋಡಿದನು. ಅವರು ಮುಗುಳ್ನಕ್ಕು ಚಂದ್ರೋಜನ ಕಡೆ ನೋಡಿದರು. ಚಂದ್ರೋಜನು ಅವರ ಇಂಗಿತ ಅರಿತು, ಆದಿತ್ಯವರ್ಮನ ಜೊತೆಯಲ್ಲಿದ್ದ ಅವನ ಸಂಗಡಿಗರನ್ನು ಹೊರಗೆ ಕಳುಹಿಸಲು ಸೂಚಿಸಿದನು. ಆದಿತ್ಯವರ್ಮನಿಗೆ ಇದೊಂದೂ ಅರ್ಥವಾಗಲಿಲ್ಲ. ಗುರುಗಳು ತನ್ನೊಡನೆ ಏಕಾಂತ ಬಯಸುತ್ತಿರುವರೆಂದು ಜೊತೆಯಲ್ಲಿದ್ದವರನ್ನು ಹೊರಗೆ ಕಳುಹಿಸಿದನು.

"ಗುರುದೇವಾ, ತಾವಾರೋ ಮಹಾತ್ಮರಂತೆ ತೋರುತ್ತಿದ್ದೀರಿ. ತಾವು ಮಾಡಿದ ಆಶೀರ್ವಾದದ ಅರ್ಥವಾಗಲಿಲ್ಲ. ಪುಲಿಕೇಶಿ ಮಹಾಪ್ರಭುಗಳು ಜೀವಂತವಿರುವಾಗ ನನಗೆ ಶೀಘ್ರವಾಗಿ ಸಾಮ್ರಾಟಪದವಿ ಪ್ರಾಪ್ತಿಯಾಗುವು ದೆಂದು ಅಪ್ಪಣೆ ಕೊಡಿಸಿದಿರಿ. ಅದನ್ನು ತಾವು ಕೊಂಚ ಬಿಡಿಸಿ ಹೇಳುವ ಕೃಪೆಮಾಡಬೇಕು."

"ಇದರಲ್ಲಿ ಯಾವುದೇ ರಹಸ್ಯಾರ್ಥ ಇಲ್ಲ ಮಗು. ಇದು ಭಗವಂತನ ಇಚ್ಛೆ! ಸಾಮ್ರಾಟ್ ಪುಲಿಕೇಶಿಯು ಜೀವಂತನಿರುವಾಗಲೇ ನೀನು ಚಾಲುಕ್ಯ ಸಿಂಹಾಸನವನ್ನೇರಬೇಕೆಂದು ಆ ಮಕುಟೇಶ್ವರಸ್ವಾಮಿಯ ಇಷ್ಟ. ಇದನ್ನು ಯಾರೂ ತಪ್ಪಿಸಲಾರರು."

"ಸಾಮ್ರಾಟರು ರಾಜಯಕ್ಷ್ಮದಿಂದ ಕಳೆದ ಮೂರು ನಾಲ್ಕು ವರ್ಷ ಗಳಿಂದ ಹಾಸಿಗೆ ಹಿಡಿದು ಮಲಗಿದ್ದಾರೆ, ದಿಟ. ಆದರೆ ಈ ಚಾಲುಕ್ಯ ಸಿಂಹಾ ಸನ ಎಂದಿದ್ದರೂ ನನ್ನದೇ ಆಗಿದೆ. ಹಾಗೆಂದು ಸಾಮ್ರಾಟರು ನನಗೆ ಆಶ್ವಾ ಸನ ಕೊಟ್ಟಿದ್ದಾರೆ. ತಮ್ಮ ಭವಿಷ್ಯವಾಣಿಯಲ್ಲಿ ಯಾವ ವಿಶೇಷವೂ ಇಲ್ಲ— ಇಂದಲ್ಲ ನಾಳೆ ಘಟಿಸಲೇಬೇಕಾದ ಸಂಗತಿ ಅದು!"

"ನಾನು ಹೇಳಿದುದು ಪುಲಿಕೇಶಿ ಸಾರ್ವಭೌಮರು ಜೀವಂತವಿರುವಾಗಲೇ ಅದು ನಿನಗೆ ದೊರೆಯುತ್ತದೆ ಎಂದು. ಹೌದು, ಈಶ್ವರಾನುಗ್ರಹದಿಂದ ದೊರ ಕುತ್ತದೆ. ಆದರೆ ಪುರುಷಪ್ರಯತ್ನವಿಲ್ಲದೆ ದೈವೇಚ್ಛೆ ಈಡೇರಲಾರದು. ನೀನು ಅದಕ್ಕಾಗಿ ಪ್ರಯತ್ನಿಸಬೇಕು, ಅಷ್ಟೇ."

"ನಿಮ್ಮ ಮಾತು ನನಗೆ ಅರ್ಥವಾಗುತ್ತಿಲ್ಲ. ಕೊಂಚ ಬಿಡಿಸಿ ಹೇಳಿ."

"ಮಗು, ನೀನು ಸಿಂಹಾಸನ ನಿನ್ನದೆಂದು ಕುಳಿತರೆ, ಅದು ನಿನ್ನದಾಗುವು ದಿಲ್ಲ. ಮೊದಲೇ ಅನ್ಯರು ಅದನ್ನು ಆಕ್ರಮಿಸಿ, ತಮ್ಮದು ಮಾಡಿಕೊಳ್ಳುತ್ತಾರೆ.

ನೀನು ಈ ಬಗ್ಗೆ ಉದಾಸೀನನಾದರೆ, ಕೈಗೆ ಬಂದ ತುತ್ತು ಬಾಯಿಗೆ ಬರುವುದಿಲ್ಲ. ನೀನು ಈಗಲೇ ಎಚ್ಚೆತ್ತುಕೊಂಡು ಕಾರ್ಯೋನ್ಮುಖನಾಗು. ನೀನು ಉಪೇಕ್ಷಿಸಿದರೆ, ನಾಳೆ ಇದಕ್ಕಾಗಿ ಪಶ್ಚಾತ್ತಾಪಪಡಬೇಕಾದ ಪ್ರಸಂಗ ಬರಬಹುದು."

"ನಿಮ್ಮ ಮಾತು ತುಂಬ ವಿಚಿತ್ರವಾಗಿದೆ ಗುರುಗಳೇ."

"ಹೌದು ಮಗು, ಸತ್ಯವು ಯಾವಾಗಲೂ ವಿಚಿತ್ರ. ನನ್ನ ಮಾತಿನ ಸರಿಯಾದ ಅರ್ಥವನ್ನು ಗ್ರಹಿಸಿ ಅದರಂತೆ ನಡೆದರೆ ಮಾತ್ರ ಸಿಂಹಾಸನವನ್ನು ಪಡೆದು ಸಾಮ್ರಾಟನಾಗುವೆ. ಇಲ್ಲದಿದ್ದರೆ, ನೀನು ರಾಜ್ಯಕೋಶಗಳನ್ನು ಕಳೆದುಕೊಂಡು ದೇಸಿಗನಂತೆ ಅಲೆಯಬೇಕಾದ ಪ್ರಸಂಗ ಬರಬಹುದು. ಅಷ್ಟೇ ಅಲ್ಲ, ನೂತನ ಸಾಮ್ರಾಟರಿಂದ ನಿನ್ನ ಪ್ರಾಣಕ್ಕೂ ಗಂಡಾಂತರ ಬರಬಹುದು. ನೀನು ಸಕಾಲದಲ್ಲಿ ಎಚ್ಚೆತ್ತುಕೊಳ್ಳದಿದ್ದರೆ ಸರ್ವನಾಶವಾದೀತು! ಅದನ್ನು ಎಚ್ಚರಿಸುವ ಸಲುವಾಗಿ ನಾನು ಇಲ್ಲಿಗೆ ಬಂದಿದ್ದೇನೆ."

"ಹಾಗಾದರೆ ನೀವು ಯಾರು? ನನ್ನ ವಿಷಯದಲ್ಲಿ ತಮಗೆ ಇಷ್ಟೇಕೆ ಆಸಕ್ತಿ? ತಿಳಿಯಬಹುದೆ?"

"ಅದು ಕ್ರಮೇಣ ನಿನಗೆ ಅರ್ಥವಾಗುತ್ತದೆ. ಈಗ ನೀನು ಉಳಿಯಬೇಕಾದರೆ ನಾವು ಹೇಳಿದಂತೆ ನಡೆ. ಇದರಿಂದ ನಿನ್ನ ಉದ್ಧಾರ ಮಾತ್ರವಲ್ಲ— ಸಾಮ್ರಾಜ್ಯವು ಅನ್ಯರ ಪಾಲಾಗುವುದು ತಪ್ಪುತ್ತದೆ. ದ್ರೋಹಿಗಳು ಅದನ್ನು ದುರಾಕ್ರಮಿಸುವುದು ತಪ್ಪಿ ನ್ಯಾಯವಾದ ಹಕ್ಕುದಾರರಿಗೇ ಅದು ದೊರಕುತ್ತದೆ."

"ನನಗೆ ಆ ಚಿಂತೆ ಇಲ್ಲ. ಧರ್ಮಾತ್ಮರೂ, ನ್ಯಾಯಪಕ್ಷಪಾತಿಗಳೂ, ಪ್ರಜಾವತ್ಸಲರೂ ಆಗಿರುವ ಸಾಮ್ರಾಟರು ಎಂದಿಗೂ ಅಧರ್ಮಪ್ರವರ್ತಕರಾಗುವುದಿಲ್ಲ, ನನ್ನದಾದ ಸಿಂಹಾಸನವನ್ನು ಅನ್ಯರಿಗೆ ಕೊಡುವುದಿಲ್ಲ. ಅವರು ಈ ಬಗ್ಗೆ ನನಗೆ ಆಶ್ವಾಸನಕೊಟ್ಟಿದ್ದಾರೆ. ಎಂದಿದ್ದರೂ ಈ ಸಿಂಹಾಸನ—ಸಾಮ್ರಾಜ್ಯ ನನ್ನದು! ಇದು ನನ್ನದಾಗುವುದನ್ನು ಯಾರೂ ತಪ್ಪಿಸಲಾರರು!"

"ನೀನು ಹಾಗೆ ತಿಳಿದು ಸುಮ್ಮನಿದ್ದರೆ, ನಿನಗೆ ದೊರೆಯುವುದು ಈ ಲೋಕದ ಸಾಮ್ರಾಜ್ಯವಲ್ಲ—ಅದು ಪರಲೋಕದ ಸಾಮ್ರಾಜ್ಯ, ಅಷ್ಟೆ."

"ನಿಮ್ಮ ಮಾತು ವಿಚಿತ್ರವಾಗಿದೆ ಗುರುದೇವ, ನೀವು ಪುನಸ್ಸಿನಲ್ಲಿ ಇರು

ವುದನ್ನು ಸ್ಪಷ್ಟಪಡಿಸುವ ಕೃಪೆಮಾಡಬೇಕು."

"ಮಗು, ನೀನು ಬೆಳ್ಳಗಿರುವುದನ್ನೆಲ್ಲ ಅಮೃತವೆಂದು ತಿಳಿದಿರುವೆ. ನಿನ್ನ ಮುಗ್ಧತನವನ್ನು ಸ್ವಾರ್ಥಿಗಳು ದುರುಪಯೋಗಪಡಿಸಿಕೊಂಡು ಸಿಂಹಾಸನ ವನ್ನು ನಿನ್ನಿಂದ ಅಪಹರಿಸಲು, ಸಂಚುಮಾಡುತ್ತಿದ್ದಾರೆ."

"ನನ್ನ ವಿರುದ್ಧ ಸಂಚಿ? ಯಾರು ಆ ದ್ರೋಹಿಗಳು?"

"ನಿನ್ನ ತಂದೆ ಸಾಮ್ರಾಟ್ ಪುಲಿಕೇಶಿ ಮತ್ತು ಮಹಾರಾಣಿ ಶ್ಯಾಮ ವರ್ಣೆ. ಅವರು ಸೇರಿಕೊಂಡು ನ್ಯಾಯವಾಗಿ ನಿನಗೆ ಸಲ್ಲಬೇಕಾಗಿರುವ ಈ ಚಾಲುಕ್ಯ ಸಿಂಹಾಸನವನ್ನು ಕಿರಿಯನಾದ ವಿಕ್ರಮಾದಿತ್ಯನಿಗೆ ದೊರಕಿಸಿ ಕೊಡಲು, ನಿನ್ನ ವಿರುದ್ಧ ಪಿತೂರಿ ಮಾಡುತ್ತಿದ್ದಾರೆ. ಇದಕ್ಕೆ ಅಮಾತ್ಯ ಸಮಂತಭದ್ರ ಹಾಗೂ ರವಿಕೀರ್ತಿಯ ಸಹಕಾರವಿದೆ. ಅವರೆಲ್ಲರೂ ಸಾಮ್ರಾ ಟರು ಬದುಕಿರುವಂತೆಯೇ ಅವರ ಕೈಯಿಂದ ಅದನ್ನು ವಿಕ್ರಮಾದಿತ್ಯನಿಗೆ ಕೊಡಿಸಲು ಸಂಚುಮಾಡಿದ್ದಾರೆ. ನಿಮ್ಮನ್ನೆಲ್ಲಾ ರಾಜಧಾನಿಯಿಂದ ಉದ್ದಿಶ್ಯ ಪೂರ್ವಕವಾಗಿಯೇ ದೂರವಿಟ್ಟು ತಂದೆಗೆ ರಾಜ್ಯಾಡಳಿತದಲ್ಲಿ ನೆರವಾಗುವ ನೆಪ ದಲ್ಲಿ, ವಿಕ್ರಮಾದಿತ್ಯನನ್ನು ಮಾತ್ರವೇ ರಾಜಧಾನಿಯಲ್ಲಿ ಇಟ್ಟುಕೊಂಡಿದ್ದಾರೆ."

"ನಿಮ್ಮ ಮಾತು ಸತ್ಯವೆ?" ಆತಂಕದಿಂದ ಕೇಳಿದ ಆದಿತ್ಯವರ್ಮ.

"ಮಕುಟೇಶ್ವರನಾಣೆಗೂ ಈ ಮಾತು ಸತ್ಯ. ಇಲ್ಲದಿದ್ದರೆ ಈ ಸಂಗತಿ ಯನ್ನು ತಿಳಿಸಲು ನಾವು ಛದ್ಮವೇಷದಲ್ಲಿ ಇಲ್ಲಿಗೆ ಬರಬೇಕಾಗಿರಲಿಲ್ಲ."

"ಹಾಗಾದರೆ ನೀವು ಯಾರು?"

"ನಾನು ರಾಹಪ್ಪಯ್ಯ, ನಿನ್ನ ಕಲ್ಯಾಣಾಕಾಂಕ್ಷಿ; ಇವನು ಚಂದ್ರೋಜ– ನಿನ್ನ ಶ್ರೇಯೋಭಿಲಾಷಿ."

ಈ ಮಾತು ಕೇಳಿ ಆದಿತ್ಯವರ್ಮನು ಹೌಹಾರಿದನು. ಇವರು ಪುಲಿಕೇಶಿಯ ಮೇಲೆ ಸೇಡುತೀರಿಸಿಕೊಳ್ಳಲು ಕಂಕಣತೊಟ್ಟಿದ್ದ, ಸಾಮ್ರಾಜ್ಯದ ಪ್ರಥಮ ಶತ್ರುಗಳಾದ ಮಂಗಳೇಶನ ಅನುಯಾಯಿಗಳೆ? ಅವರ ವಿಷಯದಲ್ಲಿ ಸಂಶಯ ಅವನಿಗೆ ಈ ಮೊದಲೇ ಬಂದಿತ್ತು. ಅವರು ಯಾರೋ ಛದ್ಮರಾಜಕಾರಣಿ ಗಳೆಂದು ಅನಿಸಿತ್ತು. ಅವನ ಊಹೆ ನಿಜವಾಗಿತ್ತು. ಆದರೆ ಈ ರಾಹಪ್ಪಯ್ಯ ಮತ್ತು ಚಂದ್ರೋಜರು ಸಾಮ್ರಾಟರ ಪ್ರಬಲ ಶತ್ರುಗಳಾಗಿದ್ದವರು—ತನ್ನ ಮಿತ್ರರಾಗಲು ಸಾಧ್ಯವೆ? ಚಾಲುಕ್ಯ ಸಾಮ್ರಾಜ್ಯದ ನಾಶಕ್ಕಾಗಿ ಕುಲಶತ್ರು

ಗಳಾದ ಪಲ್ಲವರ ಕಡೆ ಸೇರಿದ್ದ ಇವರು ಇಂದು ತನ್ನ ಕಲ್ಯಾಣವನ್ನು ಹಾರೈ ಸುವರೆಂದರೆ ಯಾರು ನಂಬುವ ಮಾತು ? ಇದರಲ್ಲಿ ಯಾವುದೋ ಸ್ವಾರ್ಥ ಮೋಸವಿರಬೇಕೆಂದು ಅವನು ಭಾವಿಸಿದನು. ಇದನ್ನು ಪ್ರಕಟಿಸುವ ಮುನ್ನ ಅವರ ಹೃದಯಾಂತರಾಳವನ್ನು ಭೇದಿಸಲು ಮುಗ್ಧತನದ ಸೋಗುಹಾಕಿ ಆದಿತ್ಯವರ್ಮ ಪ್ರಶ್ನಿಸಿದ.

"ರಾಹಪ್ಪಯ್ಯನವರೇ, ನಾನು ನಿಮ್ಮ ಕೀರ್ತಿಯನ್ನು ಸಾಕಷ್ಟು ಕೇಳಿ ದ್ದೇನೆ. ತಾವು ಸಾಮ್ರಾಜ್ಯನಿಷ್ಠ ಸೇವಕರಾಗಿದ್ದು, ಸಾಮ್ರಾಟರ ಬಗ್ಗೆ ಪೂರ್ವ ಗ್ರಹಪೀಡಿತರಾಗಿ ಈಗ ಅವರ ವಿಷಯದಲ್ಲಿ ದ್ವೇಷ ಹೊತ್ತು ಪ್ರತೀ ಕಾರ ಬಗೆಯಲು ಹಾತೊರೆಯುತ್ತಿರುವಿರೆಂಬುದೂ ತಿಳಿದಿದೆ. ಆದರೆ ನನಗೆ ನಿಮ್ಮ ಮೇಲೆ ದುರಾಗ್ರಹವಿಲ್ಲ. ನೀವು ನನ್ನ ಶ್ರೇಯಾಕಾಂಕ್ಷಿಗಳಾಗಿರುವುದ ರಿಂದ ನಿಮ್ಮನ್ನು ನಾನು ಮಿತ್ರರೆಂದು ತಿಳಿದಿದ್ದೇನೆ. ಈಗ ಹೇಳಿ, ರಾಜಧಾನಿ ಯಲ್ಲಿ ನಡೆದಿರುವ ಸಂಚು ನಿಮಗೆ ತಿಳಿದ ಬಗೆ ಹೇಗೆ ?"

"ರಾಜಪುತ್ರ, ನೀನು ನಮ್ಮನ್ನು ಶತ್ರು ಪಕ್ಷದವರೆಂದು ತಿಳಿದರೂ ಸರಿ, ಮಿತ್ರಪಕ್ಷದವರೆಂದು ತಿಳಿದರೂ ಸರಿ. ನಾವು ನಿನಗೆ ಮಿತ್ರರು. ನಿನ್ನ ಶ್ರೇಯೋಭಿಲಾಷೆಯಿಂದ ಪ್ರಾಣವನ್ನು ಗಂಡಾಂತರಕ್ಕೆ ನೂಕಿ ಇಲ್ಲಿಗೆ ಬಂದಿ ದ್ದೇವೆ. ನೀನು ನಮ್ಮ ಮಾತನ್ನು ನಂಬದೆ, ನಮ್ಮನ್ನು ಸೆರೆಹಿಡಿದು ಸಾಮ್ರಾ ಟರ ಬಳಿಗೆ ಕಳುಹಿಸಿಕೊಟ್ಟರೂ ಚಿಂತೆ ಇಲ್ಲ. ನಿನಗೆ ಸತ್ಯ ಸಂಗತಿಯನ್ನು ತಿಳಿಸಿ, ಎಚ್ಚರಿಸಿ ಹೋಗಲು ಬಂದೆವು. ಇಷ್ಟರಮೇಲೆ ಇದನ್ನು ನಂಬುವುದೂ ಬಿಡುವುದೂ ನಿನಗೆ ಸೇರಿದೆ."

"ನಿಮ್ಮ ಸದ್ಭಾವನೆಯ ಬಗ್ಗೆ ನನಗೆ ಸಂದೇಹವಿಲ್ಲ. ಆದರೆ ತಂದೆಯವರ ಮೇಲೆ ನೀವು ಹೊರಿಸುತ್ತಿರುವ ಈ ಆರೋಪವನ್ನು ನಂಬಲು ಏಕೋ ಮನಸ್ಸಾಗುತ್ತಿಲ್ಲ."

"ಹೌದು, ಇದನ್ನು ನಂಬುವುದು ಕಷ್ಟ. ಹೆತ್ತ ತಂದೆಯೇ ಒಬ್ಬ ಮಗನ ಮೇಲಣ ಮೋಹದಿಂದ ಇನ್ನೊಬ್ಬ ಮಗನ ಕೊರಳುಕೊಯ್ಯಲು ಉದ್ಯುಕ್ತ ನಾಗುವನೆಂದರೆ, ಯಾರು ತಾನೇ ನಂಬುತ್ತಾರೆ? ಆದರೆ ಇದು ಅಕ್ಷರಶಃ ಸತ್ಯ."

"ನೀವು ಈ ಆರೋಪವನ್ನು ಸಾಮ್ರಾಟರಮೇಲೆ ಹೊರಿಸಲು ನಿಮ್ಮ ಪೂರ್ವಾಗ್ರಹವಲ್ಲದೆ ಬೇರೆ ಪ್ರತ್ಯಕ್ಷ ಪ್ರಮಾಣಗಳಿವೆಯೆ ?"

"ಸಾಮ್ರಾಟರ ವಿದ್ರೋಹಕ್ಕೆ ಇದಕ್ಕಿಂತ ಬೇರೆ ಬಾಹ್ಯ ಸಾಕ್ಷಾಧಾರ ಬೇಕೆ ? ಅವರು ನಿಮ್ಮೆಲ್ಲರನ್ನು ರಾಜಧಾನಿಯಿಂದ ಹೊರಗೆ ಅಟ್ಟಿ, ಆಡಳಿತದ ನೆಪದಲ್ಲಿ ವಿಕ್ರಮಾದಿತ್ಯನೊಬ್ಬನನ್ನು ಬಳಿಯಲ್ಲಿ ಇಟ್ಟುಕೊಂಡಿರುವುದೇ ಸಾಲದೆ? ಇದಕ್ಕಿಂತ ಬೇರೆ ಸಾಕ್ಷಿ ಬೇಕೆ ?"

"ಕುಮಾರ ವಿಕ್ರಮಾದಿತ್ಯನನ್ನು ಆಡಳಿತದ ನಿರ್ವಹಣೆಗೆಂದು ರಾಜಧಾನಿಯಲ್ಲಿ ಇಟ್ಟುಕೊಂಡಿರುವುದಾಗಿ ಸ್ವಯಂಸಾಮ್ರಾಟರೇ ಅಪ್ಪಣೆಕೊಡಿಸಿದ್ದಾರೆ. ಅಮಾತ್ಯ ಸಮಂತಭದ್ರರೂ, ರಾಜಪುರೋಹಿತರೂ ಇದೇ ಮಾತನ್ನು ಮೇಲಿಂದ ಮೇಲೆ ಹೇಳುತ್ತಿದ್ದಾರೆ. ಅವರ ಮಾತು ಸುಳ್ಳೆ ?"

"ಹೌದು. ಸಟೆ ಮಾತ್ರವಲ್ಲ—ಇದು ಧೂರ್ತತನ. ಮುಗ್ಧರಾದ ನಿಮ್ಮನ್ನು ವಂಚಿಸಲು ಮಾಡಿರುವ ಸಂಚು. ಅವರು ನ್ಯಾಯವಾದ ಹಕ್ಕುದಾರರಾದ ನಿಮ್ಮನ್ನು ಮೂಲೆಗೊತ್ತಿ ನಿಮ್ಮ ಸಾಮ್ರಾಜ್ಯವನ್ನು ವಿಕ್ರಮಾದಿತ್ಯನಿಗೆ ದೊರಕಿಸಿಕೊಡಲು ಮಾಡಿರುವ ಹೇಯವಾದ ಪಿತೂರಿ ಇದು. ಈಗ ನೀವು ಎಚ್ಚೆತ್ತುಕೊಳ್ಳದಿದ್ದರೆ ನಿಮಗೆ ಸರ್ವನಾಶ ಸಿದ್ಧ !"

"ನೀವು ಇಷ್ಟು ಹೇಳಿದಮೇಲೂ ಧರ್ಮಾವತಾರರಾದ ಸಾಮ್ರಾಟರು ನ್ಯಾಯಬಾಹಿರರಾಗಿ, ನನಗೆ ದ್ರೋಹ ಬಗೆಯುವರೆಂದು ನಂಬುವುದು ಕಷ್ಟವಾಗಿದೆ."

"ಹಾಗಿದ್ದರೆ ನೀವು ನಮ್ಮ ಮಾತಿನ ಸತ್ಯವನ್ನು ಪರೀಕ್ಷಿಸಲು ರಾಜಧಾನಿಗೆ ಒಮ್ಮೆ ಹೋಗಿಬನ್ನಿ, ನಿಮಗೆ ತಿಳಿಯುತ್ತದೆ"

"ನಿಮ್ಮ ಆರೋಪಣೆ ಒಂದು ವೇಳೆ ಸುಳ್ಳಾಗಿದ್ದರೆ ?"

"ನೀವು ನಮ್ಮನ್ನು ಸೆರೆಹಿಡಿದು, ದ್ರೋಹಿಗಳೆಂದು ಸಾಮ್ರಾಟ್ ಪುಲಿಕೇಶಿಯ ಬಳಿಗೆ ಕಳುಹಿಸಿ, ಉಗ್ರವಾದ ಶಿಕ್ಷೆಗೆ ಗುರಿಮಾಡಬಹುದು. ಆದರೆ ನಾವು ಹೇಳಿದ ಮಾತು ಸತ್ಯವಾದರೆ ?"

"ನೀವು ಹೇಳಿದಂತೆ ನಾನು ನಡೆಯುತ್ತೇನೆ. ನೀವು ಹೇಳುವ ವಿಷಯವನ್ನು ಪರೀಕ್ಷಿಸಿ ಬರಲು ಇಂದೇ ರಾಜಧಾನಿಗೆ ಹೋಗುತ್ತೇನೆ. ನಾನು ಬರುವವರೆಗೂ ನೀವು ಇದೇ ಗೃಹದಲ್ಲಿ ಇರಬೇಕಾಗುತ್ತದೆ."

"ಸಂತೋಷವಾಗಿ ಇರುತ್ತೇವೆ. ಆದರೆ ನೀವು ಈ ಎಲ್ಲ ಮಾತುಕಥೆಯನ್ನೂ ರಹಸ್ಯವಾಗಿ ಇರಿಸಬೇಕು. ರಾಜಧಾನಿಗೆ ವೇಷಾಂತರದಲ್ಲಿ ಹೋಗಿ,

ನಿಮಗೆ ಬೇಕಾದವರಿಂದ ನಡೆದಿರುವುದನ್ನು ಅರಿತುಬರಬೇಕು. ಈ ಬಗ್ಗೆ ಸಾಮ್ರಾಟರೊಂದಿಗೆ ವ್ಯವಹರಿಸುವಾಗ ನೀವು ತುಂಬ ಎಚ್ಚರವಾಗಿ ಇರುವುದು ಒಳಿತು. ನಾವು ನಿಮ್ಮ ಬಳಿ ಬಂದಿರುವ ಸಂಗತಿ ಅವರಿಗೆ ತಿಳಿಯಬಾರದು. ತಿಳಿದರೆ ಅವರು ನಿಮ್ಮನ್ನು ವಂಚಿಸಬಹುದು."

ಇದಕ್ಕೆ ಸಮ್ಮತಿಸಿ ಅಂದೇ ಆದಿತ್ಯವರ್ಮನು ಮಿತಪರಿವಾರದೊಂದಿಗೆ ರಾಜಧಾನಿಗೆ ಪ್ರಯಾಣ ಬೆಳೆಸಿದನು.

ಇದ್ದಕ್ಕಿದ್ದಂತೆ ಯಾವುದೇ ಸುದ್ದಿ ಕೊಡದೆ ರಾಜಧಾನಿಗೆ ಬಂದ ಆದಿತ್ಯವರ್ಮನನ್ನು ನೋಡಿ ಸಮಂತಭದ್ರ ಹಾಗೂ ವಿಕ್ರಮಾದಿತ್ಯರಿಗೆ ಆಶ್ಚರ್ಯವಾಯಿತು.

"ಮೇಲಿಂದ ಮೇಲೆ ಅಪ್ಪಾಜಿಯವರು ಕನಸಿನಲ್ಲಿ ಬರುತ್ತಿದ್ದರು. ಅವರ ಆರೋಗ್ಯ ಹದಗೆಡುತ್ತಾ ನಡೆದಿದೆ ಎಂದು ದೂತರು ವರ್ತಮಾನ ತಂದರು. ಮನಸ್ಸು ನಿಲ್ಲದೆ ಅವರನ್ನು ನೋಡಿಬರಲು ಬಂದೆ" ಎಂದು ಆದಿತ್ಯವರ್ಮನು ಉಪಾಯವಾಗಿ ತಾನು ಬಂದ ವಿಷಯವನ್ನು ಮರೆಮಾಚಿದನು. ಆದರೆ ಅವನು ಯಾವುದೋ ಮಹತ್ವದ ಕಾರ್ಯಸಾಧನೆಗಾಗಿ ಬಂದಿರುವನೆಂಬ ಬಗ್ಗೆ ಅವರಿಗೆ ಸಂಶಯವಾಗದಿರಲಿಲ್ಲ.

ಆದಿತ್ಯವರ್ಮನು ಪುಲಿಕೇಶಿಯನ್ನು ನೋಡಲು ಅಂತಃಪುರಕ್ಕೆ ಬಂದಾಗ ರುಗ್ಣಶಯ್ಯೆಯಲ್ಲಿದ್ದ ಅವನ ಗುರುತು ಸಿಗಲಿಲ್ಲ. ಒಂದು ಕಾಲದಲ್ಲಿ ನೋಡಿದವರ ಎದೆಯಲ್ಲಿ ಭಯವನ್ನೂ, ಗೌರವವನ್ನೂ ಬಿತ್ತುತ್ತಿದ್ದ ಪುಲಿಕೇಶಿಯ ಸದೃಢವಾದ ಮೈಕಟ್ಟು–ಗಂಭೀರವಾದ ನಿಲುವು ಇಂದು ಎಲುಬಿನ ಹಂದರವಾಗಿ ಮಾರ್ಪಟ್ಟಿತ್ತು. ಮೈಯ ರಕ್ತಮಾಂಸಗಳು ಕರಗಿಹೋಗಿ ಅಸ್ಥಿಪಂಜರವೊಂದೇ ಉಳಿದಿತ್ತು. ಅವನು ಸಣ್ಣಮಗುವಿನಂತೆ ಉಡುಗಿದ್ದನು. ಅವನ ಸ್ಥಿತಿಯನ್ನು ನೋಡಿ ಆದಿತ್ಯವರ್ಮನ ಕರುಳಿಗೆ ಬರೆ ಇಟ್ಟಂತೆ ಆಯಿತು. ಅವನು ಮುಮ್ಮಲ ಮರುಗಿದನು. ಅವನಿಗೆ ತಿಳಿಯದಂತೆ, ಕಣ್ಣುಗಳು ತೇವವಾದವು. ಧ್ವನಿ ಗದ್ಗದವಾಯಿತು. ಅವನು ತಂದೆಯ ಬಳಿ ಬಂದು ನಿಂತುಕೊಂಡು, "ಅಪ್ಪಾಜಿ....ಅಪ್ಪಾಜಿ...." ಎಂದನು.

ಪುಲಿಕೇಶಿಯು ಕಣ್ಣುತೆರೆಯದೆ ಮಲಗಿದ್ದನು.

ಒಂದು ಕಾಲದಲ್ಲಿ ಅರಿರಾಯರ ಹೃದಯದಲ್ಲಿ ಭೀತಿಯನ್ನು ಬಿತ್ತಿ,

ಅವರ ಪಾಲಿಗೆ ಸಿಂಹಸ್ವಪ್ನವಾಗಿದ್ದ ಪುಲಿಕೇಶಿಯು ಇಂದು ಹಸು ಮಗುವಿನಂತೆ ಮಲಗಿದ್ದನು. ಅವನ ದೇಹ ಜೀರ್ಣವಾಗುತ್ತ ನಡೆದಿತ್ತು, ಜೀವದ ಸೆಲೆ ಬತ್ತಿಹೋಗಿ, ಅದರ ಪಸೆಯಷ್ಟೇ ಅಂಟಿಕೊಂಡಿತ್ತು. ಒಳಗಿನ ಪ್ರಾಣಪಕ್ಷಿ ಹಾರಿಹೋಗಲಾರದೆ ತೊಳಲಾಡುತ್ತಿರುವಂತೆ ಭಾಸವಾಗುತ್ತಿತ್ತು. ಆಗೊಮ್ಮೆ ಈಗೊಮ್ಮೆ ಕೆಮ್ಮಿನ ದಾಳಿಯಾಗುತ್ತಿತ್ತು. ಜ್ವರ ನಿಯತವಾಗಿ ಬಂದು ಹೋಗುತ್ತಿತ್ತು. ಈ ಜ್ವರದ ಬಾಧೆಯನ್ನೂ, ಕೆಮ್ಮಿನ ದಾಳಿಯನ್ನೂ ತಡೆಯಲು ರಾಜವೈದ್ಯರು ನಡೆಸಿದ್ದ ಎಲ್ಲ ಔಷಧೋಪಚಾರ ವ್ಯರ್ಥವಾಗಿತ್ತು. ಈಗ ಅವರು ಅವನನ್ನು ದೈವದ ಉಡಿಗೆ ಹಾಕಿ ನಿಶ್ಚಿಂತರಾಗಿದ್ದರು.

ಪುಲಿಕೇಶಿಯು ಮಲಗಿದ್ದವನು ಒತ್ತರಿಸಿಕೊಂಡು ಬಂದ ಕೆಮ್ಮಿನಿಂದಾಗಿ ಮೆಲ್ಲಗೆ ಕಣ್ಣು ಬಿಟ್ಟು ನೋಡಿದನು. ಬಳಿಯಲ್ಲಿ ಯಾರೋ ಕುಳಿತಿರುವಂತೆ ತೋರಿತು. ಕಣ್ಣಿನ ದೃಷ್ಟಿ ಮಸಕಾಗಿದ್ದುದರಿಂದ ಪಕ್ಕನೆ ಗುರುತು ಸಿಕ್ಕಲಿಲ್ಲ.

"ಯಾರು, ಆದಿತ್ಯವರ್ಮನೆ?" ಎಂದು ಮೆಲ್ಲಗೆ ಪ್ರಶ್ನಿಸಿದನು.

"ಹೌದು ಅಪ್ಪಾಜಿ, ನಿರ್ಭಾಗ್ಯ ಆದಿತ್ಯವರ್ಮ–ಬಂದಿದ್ದಾನೆ."

"ಮಗು, ಯಾವಾಗ ಬಂದೆ. ಊರಿನಲ್ಲಿ ಎಲ್ಲರೂ ಕುಶಲವಷ್ಟೇ!"

"ಸ್ವಾಮಿ ಮಕುಟೇಶ್ವರನ ಅನುಗ್ರಹದಿಂದ ಎಲ್ಲರೂ ಆರೋಗ್ಯದಿಂದ ಇದ್ದಾರೆ, ಅಪ್ಪಾಜಿ. ಆದರೆ ನಮಗೆ ನಿಮ್ಮ ಚಿಂತೆಯಲ್ಲಿ ಕಣ್ಣಿಗೆ ನಿದ್ರೆ ಹತ್ತುತ್ತಿಲ್ಲ. ಮೇಲಿಂದ ಮೇಲೆ ದುಃಸ್ವಪ್ನಗಳಾಗಿ ನಿಮ್ಮನ್ನು ನೋಡಲು ತವಕಗೊಂಡು ಓಡಿ ಬಂದೆ. ದೇವರ ದಯೆಯಿಂದ ತಾವು ನಮ್ಮ ಭಾಗ್ಯಕ್ಕೆ ದೈವಸ್ವರೂಪರಾಗಿ ಇನ್ನೂ ಉಳಿದಿದ್ದೀರಿ."

"ನನ್ನ ಆರೋಗ್ಯವೇನು ಕೇಳುತ್ತಿ ಮಗು ಇದು ಜನ್ಮಕ್ಕೆ ಅಂಟಿದ ಪ್ರಾರಬ್ಧ ಕರ್ಮದಂತೆ ಕಳೆದೈದು ವರ್ಷಗಳಿಂದಲೂ ಕಾಡುತ್ತಾ ಬಂದಿದೆ. ಆದರೆ ಕೆಲವು ತಿಂಗಳಿಂದೀಚೆಗೆ ಇದು ಉಲ್ಬಣಿಸಿದೆ. ಈಗ ನಾನು ಬದುಕಿರುವ ಜೀವವಲ್ಲ–ಸತ್ತ ಶವವಲ್ಲ; ಬದುಕಿದ್ದೇನೆ–ಸಾಯದೆ ಬದುಕಿದ್ದೇನೆ, ಜೀವಚ್ಛವವಾಗಿ. ನಾನು ಮೂವತ್ತು ವರ್ಷಗಳವರೆಗೆ ಸಂತತವಾದ ದಂಡಯಾತ್ರೆಯನ್ನು ಕೈಗೊಂಡು ದಕ್ಷಿಣಾಪಥೇಶ್ವರನೆಂದೂ, ಪರಮೇಶ್ವರನೆಂದು ಹೊಗಳಿಸಿಕೊಂಡು, ಈಗ ಹೇಡಿಗೆ ಒಪ್ಪುವ ಸಾವನ್ನು ಇದಿರುನೋಡುತ್ತಾ ಹಾಸಿಗೆಯ ಮೇಲೆ

ಮಲಗಿದ್ದೇನೆ. ಈ ಸಾವು ರಣರಂಗದಲ್ಲಿ ಬಂದಿದ್ದರೆ ನನ್ನಂತಹ ಸುಖಿ ಇನ್ನೊಬ್ಬ ನಿರಲಿಲ್ಲ. ಆದರೆ ಆ ವೀರಮರಣ ನನ್ನಂತಹ ಪಾಪಿಗೆ ಹೇಗೆ ತಾನೇ ಲಭ್ಯವಾದೀತು !"

ಎಂದು ವಿಷಾದದಿಂದ ನಕ್ಕನು.

"ಅಪ್ಪಾಜಿ, ನಿಮ್ಮ ಬಾಳು ಬರಡಾಯಿತೆಂದು ನೀವೇಕೆ ತಿಳಿಯಬೇಕು ! ತಮಗೆ ವೀರಮರಣ ಬಾರದಿದ್ದರೇನಂತೆ ? ತಾವು ಮೆಟ್ಟಿದ ನೆಲ ಪುಣ್ಯಭೂಮಿ. ತಮ್ಮಂತಹ ವೀರಪುರುಷರಿಗೆ ಈ ಸಾವೂ ವೀರಮರಣ. ತಾವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ."

"ಮಗು ನನ್ನ ಚಿಂತೆ ಇಷ್ಟೇ ಆಗಿದ್ದರೆ ನಾನು ಶಾಂತಿಯಿಂದ ಕಣ್ಣು ಮುಚ್ಚಿಕೊಳ್ಳುತ್ತಿದ್ದೆ. ಆದರೆ ನನ್ನನ್ನು ನೂರು ಚಿಂತೆಗಳು ಕಿತ್ತುತಿನ್ನುತ್ತಿವೆ. ಈಗ ನಾನು ಅಸ್ವಸ್ಥನಾಗಿ ಮಲಗಿರುವೆನೆಂಬ ಸಂಗತಿ ಕೇಳಿ ಆ ದ್ರೋಹಿ ನರಸಿಂಹವರ್ಮನು ನಮ್ಮ ಮೇಲೆ ಯುದ್ಧ ಘೋಷಿಸಿದ್ದಾನೆ. ಅವನು ನಮ್ಮ ಸಾಮಂತರಿಂದ ಕಪ್ಪ ಪಡೆಯುತ್ತಿರುವನಂತೆ. ನಾನು ಆರೋಗ್ಯವಾಗಿದ್ದು, ಕೈಲಿ ಶಸ್ತ್ರಹಿಡಿಯುವಂತಿದ್ದರೆ, ಆ ದ್ರೋಹಿಗೆ ತಕ್ಕ ಬುದ್ಧಿ ಕಲಿಸುತ್ತಿದ್ದೆ. ಇಂದು ನನ್ನ ಸ್ಥಿತಿ ಪರಿಶೋಚನೀಯವಾಗಿದೆ. ನಾನು ವೀರನಂತೆ ಬಾಳಿ ಬದುಕಿ, ಈಗ ಹೇಡಿಯಂತೆ ಸಾಯುತ್ತಿದ್ದೇನೆ" ಎಂದು ಉದ್ಗಾರ ತೆಗೆದನು.

"ಪ್ರಭು, ತಾವು ಅಸ್ವಸ್ಥರಾದ ಮಾತ್ರಕ್ಕೆ ಚಾಲುಕ್ಯ ಸಿಂಹಾಸನಕ್ಕೆ ಮುಪ್ಪು ಬಂದಿತೆಂದು ತಿಳಿದರೆ ಅವರಿಗಿಂತ ಮೂರ್ಖರು ಬೇರೆ ಇಲ್ಲ. ತಾವು ಅಸ್ವಸ್ಥರಾಗಿದ್ದರೇನು ? ಅನಾಥರಾಗಿಲ್ಲ. ತಮ್ಮ ಪುಣ್ಯಸಂತಾನವು ಬದುಕಿರುವವರೆಗೆ ಚಾಲುಕ್ಯ ಸಿಂಹಾಸನಕ್ಕೂ ಸಾಮ್ರಾಜ್ಯಕ್ಕೂ ಯಾವ ಚ್ಯುತಿಯೂ ಇಲ್ಲ."

"ನನಗೆ ಅಂತಹ ಚಿಂತೆ ಇಲ್ಲ ಮಗು. ನೀವು ನಾಲ್ವರೂ ನನ್ನ ನಾಲ್ಕು ತೋಳುಗಳಂತೆ ಇರುವಾಗ ಚಾಲುಕ್ಯ ಸಾಮ್ರಾಜ್ಯಕ್ಕೆ ಯಾವ ಹಾನಿಯೂ ಇಲ್ಲ. ಆದರೆ ನಾನು ವೀರನಂತೆ ಬಾಳಿ, ಈಗ ಸಿಂಹಾಸನವನ್ನು ಶತ್ರುಬಾಧಿತವಾಗಿ ಮಾಡಿ ತೀರಿಕೊಳ್ಳುತ್ತಿರುವೆನಲ್ಲಾ ಎಂಬ ವ್ಯಥೆ ನನ್ನದು."

"ಅದಕ್ಕೂ ತಾವು ಚಿಂತಿಸುವ ಕಾರಣವಿಲ್ಲ. ನೀವು ನನಗೆ ಯುವರಾಜ ಪದವಿಯನ್ನು ಇತ್ತು ನಿಶ್ಚಿಂತರಾಗಿರಿ. ಶತ್ರುಮರ್ಧನ ಕಾರ್ಯ ನಾನು

ನೋಡಿಕೊಳ್ಳುತ್ತೇನೆ."

"ನಿನಗೆ ಯುವರಾಜ ಪದವಿಯನ್ನು ಎಂದೋ ಕೊಡಬೇಕೆಂದಿದ್ದೆ ಮಗು. ಆದರೆ, ಈ ವ್ಯಾಧಿಯಿಂದ ಕೊಂಚ ಬಿಡುಗಡೆ ದೊರೆಯಲೆಂದು ಕಾದಿದ್ದೆ. ನನ್ನ ನಿರೀಕ್ಷೆ ವ್ಯರ್ಥವಾಯಿತು. ನನ್ನ ಆರೋಗ್ಯ ಹದಗೆಡುತ್ತಾ ಹೋಗಿದೆ. ಈ ಉತ್ಸವದಲ್ಲಿ ಪಾಲುಗೊಳ್ಳುವಷ್ಟು ಆರೋಗ್ಯ ಸುಧಾರಿಸಿದ ಕೂಡಲೇ ನಿನಗೆ ಪಟ್ಟಕಟ್ಟುತ್ತೇನೆ. ಅಲ್ಲಿಯವರೆಗೆ ನೀನು ಕಾಯಬೇಕು ಮಗು."

"ಆ ದಿನ ಬಾರದೇ ಹೋಗಬಹುದು."

ಈ ಮಾತು ಕೇಳಿ ಪುಲಿಕೇಶಿಗೆ ಚಾಟಿಯ ಪೆಟ್ಟು ಬಿದ್ದಂತೆ ಆಯಿತು.

"ಏನೆಂದೆ ಮಗು ? ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳು."

"ಅಪ್ಪಾಜಿ, ನೀವು ಏನಾದರೂ ತಿಳಿಯಿರಿ. ನನ್ನ ಮನಸ್ಸಿನಲ್ಲಿ ಇರುವುದನ್ನು ಸ್ಪಷ್ಟಪಡಿಸಲೆಂದೇ ಬಂದಿದ್ದೇನೆ. ಜನ ತಮ್ಮ ಬಗ್ಗೆ ಅನೇಕ ಊಹಾಪೋಹಗಳನ್ನು ಮಾಡುತ್ತಿದ್ದಾರೆ. ನೀವು ಸಿಂಹಾಸನಕ್ಕೆ ಉತ್ತರಾಧಿಕಾರಿಯಾದ ನನ್ನನ್ನು ವಂಚಿಸಿ ನಿಮ್ಮ ಅಭಿಮಾನದ ಪುತ್ರ ವಿಕ್ರಮಾದಿತ್ಯನಿಗೆ ಕೊಡಲು ಯೋಚಿಸಿರುವಿರಂತೆ. ನಾನು ಇಂತಹ ವಾರ್ತೆಗಳನ್ನು ಇದುವರೆಗೆ ನಂಬಿರಲಿಲ್ಲ. ಆದರೆ ಇಲ್ಲಿಗೆ ಬಂದ ಮೇಲೆ ಇದು ಸತ್ಯದೂರವಲ್ಲವೆಂದು ತಿಳಿಯಿತು."

"ಮಗು, ನಿನಗಾರೋ ಪಿಸುಣರು ಈ ಚಾಡಿ ಮಾತುಗಳನ್ನು ಹೇಳಿ ನಿನ್ನ ತಲೆಯನ್ನು ಕೆಡಿಸಿದ್ದಾರೆ. ಸ್ವಾರ್ಥ ಸಾಧಿಸಲು ನಿನ್ನ ಮನಸ್ಸಿನಲ್ಲಿ ಈ ವಿಷ ಬೀಜವನ್ನು ಬಿತ್ತಿದ್ದಾರೆ. ವಾಸ್ತವ ಸಂಗತಿ ಹಾಗಿಲ್ಲ. ವಿಕ್ರಮಾದಿತ್ಯನನ್ನು ನಾನು ಉಳಿಸಿಕೊಂಡಿರುವುದು ನಿನಗೆ ವಂಚಿಸಿ, ಸಿಂಹಾಸನವನ್ನು ಅವನಿಗೆ ದೊರಕಿಸಿ ಕೊಡಲೆಂದಲ್ಲ. ಸಿಂಹಾಸನವೆಂದಿದ್ದರೂ ಜ್ಯೇಷ್ಠ ಸಂತಾನಕ್ಕೆ ಸಲ್ಲಬೇಕು. ಇದನ್ನು ಉಲ್ಲಂಘಿಸುವಷ್ಟು ನೀತಿಬಾಹಿರನು ನಾನಲ್ಲ. ಎಲ್ಲ ಮಕ್ಕಳ ಬಗ್ಗೆ ಸಮಾನ ಅಭಿಮಾನವಿದೆ, ಯಾರ ಬಗೆಗೂ ಪಕ್ಷಪಾತ ತೋರಿಸುತ್ತಿಲ್ಲ."

"ನಿಮಗೆ ನನ್ನ ಬಗ್ಗೆ ಅಷ್ಟು ಅಭಿಮಾನವಿದ್ದರೆ, ನನಗೆ ಯುವರಾಜ ಪದವಿಯಿತ್ತು, ಸೈನ್ಯದ ಮಹಾದಂಡನಾಯಕ ಪದವಿಯನ್ನು ಅನುಗ್ರಹಿಸಿರಿ. ನಾನು ಕ್ಷಣಮಾತ್ರದಲ್ಲಿ ಪಲ್ಲವರ ದಂಗೆಯನ್ನು ಅಡಗಿಸಿ, ನರಸಿಂಹವರ್ಮನನ್ನು ಶಿಕ್ಷಿಸಿ ಬರುತ್ತೇನೆ."

"ಸೈನ್ಯಕ್ಕೆ ಯಾರು ದಂಡನಾಯಕರಾದರೇನು ಮಗು ? ಈಗ ಸಾಮ್ರಾಜ್ಯ ರಕ್ಷಣೆಯೊಂದೇ ನಮ್ಮ ಗುರಿ. ಸಿಂಹಾಸನದ ಘನತೆಯನ್ನು ಉಳಿಸಲು ನಾವೆಲ್ಲರೂ ಅದರ ಊಳಿಗದವರೇ. ಇದರಲ್ಲಿ ಯಾರು ಹೆಚ್ಚು ? ಯಾರು ಕೀಳು ? ಆದರೆ ಸೈನಿಕರಲ್ಲಿ ಜನಪ್ರಿಯನಾಗಿರುವ ವಿಕ್ರಮಾದಿತ್ಯನಿಗೆ ಈ ಹೊಣೆಗಾರಿಕೆಯನ್ನು ಒಪ್ಪಿಸಿರುವೆ. ಇದರಲ್ಲಿ ಯಾವ ಸ್ವಾರ್ಥವೂ ಇಲ್ಲ— ಯಾವ ದುರಾಲೋಚನೆಯೂ ಇಲ್ಲ."

"ಹಾಗಿದ್ದರೆ ನನಗೇಕೆ ನೀವು ಯುವರಾಜ ಪದವಿಯನ್ನು ಅನುಗ್ರಹಿಸ ಬಾರದು ?"

"ಈ ದಂಡಯಾತ್ರೆಯೊಂದು ಮುಗಿಯಲಿ. ಯುವರಾಜ ಪದವಿ ಮಾತ್ರ ವಲ್ಲ—ಈ ಚಾಲುಕ್ಯ ಸಿಂಹಾಸನವೇ ನಿನ್ನದಾಗುತ್ತದೆ."

"ನನಗೆ ಈಗಲೇ ಸಿಂಹಾಸನಬೇಕು."

"ಈ ಬಗ್ಗೆ ನಿರ್ಣಯಕ್ಕೆ ಬರಲು ನಾನು ಮಂತ್ರಿಪರಿಷತ್ತಿನ, ಹಾಗೂ ರಾಜಪುರೋಹಿತರ ಸಲಹೆಯನ್ನು ತೆಗೆದುಕೊಂಡು ನನ್ನ ನಿರ್ಧಾರ ತಿಳಿಸುತ್ತೇನೆ."

"ಹಾಗಿದ್ದರೆ ನಿಮಗೆ ಸಿಂಹಾಸನವನ್ನು ಬಿಟ್ಟುಕೊಡಲು ಒಮ್ಮನಸ್ಸಿಲ್ಲ."

"ಮಗು, ಈ ಬಗ್ಗೆ ನಾನೊಬ್ಬನೇ ನಿರ್ಣಯಕ್ಕೆ ಬರಲಾರೆ."

"ನನ್ನ ವಿಷಯದಲ್ಲಿ ಅಷ್ಟೇ. ವಿಕ್ರಮಾದಿತ್ಯನಿಗೆ ಸಿಂಹಾಸನ ದೊರಕಿಸಿ ಕೊಡಬೇಕೆಂದರೆ, ಆಗ ಯಾರ ಸಲಹೆಯ ಅವಶ್ಯಕತೆ ಇಲ್ಲ. ನಮಗೆಲ್ಲ ತಿಳಿದಿದೆ, ಅಪ್ಪಾಜಿ. ಇದೆಲ್ಲ ವಿಕ್ರಮಾದಿತ್ಯನಿಗೆ ಸಿಂಹಾಸನವನ್ನು ಸುಭದ್ರ ಗೊಳಿಸಲು ನೀವು ಮಾಡಿರುವ ತಂತ್ರ. ಇಂದು ಅವನು ಸಕಲ ಸೈನ್ಯಗಳಿಗೆ ದಂಡನಾಯಕ; ನಾಳೆ ಯುವರಾಜ. ಯುದ್ಧದಿಂದ ವಿಜೇತನಾಗಿ ಹಿಂದಿರುಗಿ ಬಂದ ಕೂಡಲೇ ಸಾಮ್ರಾಟ ! ನಿಮ್ಮ ಸಂಚಿನ ಪ್ರತಿಯೊಂದು ಸಂಗತಿಯೂ ನನಗೆ ತಿಳಿದಿದೆ. ನೀವು ನನ್ನನ್ನು ಇದುವರೆಗೆ ಮೋಸಮಾಡಿದಂತೆ, ಇನ್ನು ಮುಂದೆ ಮಾಡಲಾರಿರಿ. ಅಂತಹ ಪ್ರಸಂಗ ಬಂದರೆ ಏನು ಮಾಡಬೇಕೆಂಬುದು ನನಗೆ ತಿಳಿದಿದೆ."

"ಏನು ಮಾಡುವೆ ಮಗು ?"

"ಶಸ್ತ್ರ ಹಿಡಿದು, ನನ್ನ ನ್ಯಾಯವಾದ ಹಕ್ಕು ಬಾಧ್ಯತೆಗಳಿಗಾಗಿ

ಹೋರಾಡಿ ಮಡಿಯುತ್ತೇನೆ. ಎಂದಿಗೂ ಅನ್ಯಾಯಕ್ಕೆ ತಲೆಬಾಗುವುದಿಲ್ಲ."

ಎಂದು ಹೇಳಿ ದುರ್ದಾನ ತೆಗೆದುಕೊಂಡಂತೆ ಆದಿತ್ಯವರ್ಮನು ಅಲ್ಲಿಂದ ಎದ್ದು ಹೊರಟು ಹೋದನು.

ಪುಲಿಕೇಶಿಯು ಅವನು ಹೊರಟುಹೋದ ದಿಕ್ಕನ್ನೇ ನೋಡುತ್ತಿದ್ದು ಭಾರವಾದ ನಿಟ್ಟುಸಿರನ್ನು ಬಿಟ್ಟನು. ಅವನ ಪಾಲಿಗೆ ಜಗತ್ತೇ ಶೂನ್ಯವಾಗಿ ಕಂಡಿತು.

## ೨೯

ಆದಿತ್ಯವರ್ಮನು ನೊಳಂಬವಾಡಿಗೆ ಹಿಂತಿರುಗಿ ಬಂದವನೇ ರಾಹಪ್ಪಯ್ಯ ನನ್ನು ಭೆಟ್ಟಿಮಾಡಿದ್ದನು.

"ರಾಹಪ್ಪಯ್ಯನವರೇ, ನೀವು ಹೇಳಿದ ಮಾತು ನಿಜ. ಸಾಮ್ರಾಟರೂ ಸಮಂತಭದ್ರನೂ ಸೇರಿ, ಚಾಲುಕ್ಯ ಸಿಂಹಾಸನವನ್ನು ನನ್ನ ಕೈಯಿಂದ ತಪ್ಪಿಸಿ ವಿಕ್ರಮಾದಿತ್ಯನಿಗೆ ದೊರಕಿಸಿಕೊಡುವ ಸನ್ನಾಹದಲ್ಲಿ ಇದ್ದಾರೆ ಈಗ ನನಗೆ ಇರುವ ಮಿತ್ರರೆಂದರೆ ನೀವೊಬ್ಬರೇ. ನೀವು ಹೇಳಿದಂತೆ ನಾನು ನಡೆಯುತ್ತೇನೆ" ಎಂದನು.

"ಮಗು, ನೀನು ನನ್ನ ಮಾತನ್ನು ಮೊದಲು ನಂಬಲಿಲ್ಲ, ನಾನು ಮಂಗಳೇಶನ ಪಕ್ಷದವನೆಂಬ ಕಾರಣದಿಂದ. ಇನ್ನಾದರೂ ನನ್ನ ಮಾತಿನಲ್ಲಿ ನಂಬಿಕೆಯಾಯಿತಲ್ಲ—ಸಂತೋಷ. ಇದುವರೆಗೆ ನೀನು ನಿಷ್ಕೆಯ ಮಬ್ಬಿನಲ್ಲಿ ಬಿದ್ದು ನಿನ್ನ ನಾಶವನ್ನು ನೀನೇ ಹಾರೈಸಿಕೊಳ್ಳುತ್ತಿದ್ದೆ. ಈಗ ನೀನು ಬದುಕುವ ದಾರಿಯನ್ನು ಹುಡುಕಬೇಕಾಗಿದೆ. ಈಗ ನೀನು ವಿದ್ರೋಹದ ಮೊಟ್ಟೆಯನ್ನು ಒಡೆದು ಬಂದಿರುವೆ. ಇನ್ನು ಅದರಿಂದ ಎಂತಹ ವಿಷಜಂತು ಗಳು ಹೊರಬೀಳುವುದೋ ಆ ಬಗ್ಗೆ ಎಚ್ಚರದಿಂದ ಇರುವುದು ಒಳಿತು" ಎಂದು ಸ್ನೇಹದ ದನಿಯಲ್ಲಿ ರಾಹಪ್ಪಯ್ಯನು ಹೇಳಿದನು.

"ಇದುವರೆಗೆ ನಡೆದ ಈ ಭಯಂಕರ ಪಿತೂರಿಯಿಂದ ನನ್ನನ್ನು

ಎಚ್ಚರಿಸಿದ ನೀವೇ ಇನ್ನು ಮುಂದೆಯೂ ನನಗೆ ಮಾರ್ಗದರ್ಶಕರಾಗಿ ನನ್ನನ್ನು ರಕ್ಷಿಸಬೇಕು. ಚಾಲುಕ್ಯ ಸಾಮ್ರಾಜ್ಯಲಕ್ಷ್ಮಿ ಅನ್ಯರ ಪಾಲಾಗದಂತೆ ರಕ್ಷಿಸುವ ಭಾರ ನಿಮ್ಮದು."

"ನೀನು ಆ ಬಗ್ಗೆ ಯೋಚಿಸುವ ಕಾರಣವಿಲ್ಲ ಮಗು. ಅದಕ್ಕೆ ನಾನು ಒಂದು ವ್ಯವಸ್ಥೆ ಮಾಡಿದ್ದೇನೆ. ಈ ರಾಹಪ್ಪಯ್ಯ ಬದುಕಿರುವವರೆಗೆ ಪುಲಿಕೇಶಿಯ ವಿದ್ರೋಹಾಚರಣೆ ಈಡೇರಲಾರದು."

"ಆದರೆ ವಿಕ್ರಮಾದಿತ್ಯನು ಈಗಾಗಲೇ ಸಮಸ್ತ ರಾಜ್ಯಸೂತ್ರಗಳನ್ನು ಹಸ್ತಗತಮಾಡಿಕೊಂಡಿದ್ದಾನೆ. ಈಗ ಅವನು ಚಾಲುಕ್ಯ ಸೇನೆಗಳ ಮಹಾದಂಡ ನಾಯಕನಾಗಿ ನಿಯೋಜಿಸಲ್ಪಟ್ಟಿದ್ದಾನೆ. ಇಂತಹವನನ್ನು ನಾವು ಎದುರು ಹಾಕಿಕೊಂಡು ಬದುಕಲು ಸಾಧ್ಯವೆ ?"

"ಹೌದು, ಇದು ವಿಚಾರಮಾಡಬೇಕಾಗಿರುವ ಸಂಗತಿ. ಆದರೆ ಇದಕ್ಕೆಲ್ಲ ಸೊಪ್ಪು ಹಾಕುವವನು ರಾಹಪ್ಪಯ್ಯನಲ್ಲ. ಅವನ ತಲೆಯಲ್ಲಿ ಇಂತಹ ನೂರು ವಿಕ್ರಮಾದಿತ್ಯರನ್ನು ಸೋಲಿಸಿ, ಸದೆಬಡಿಯಲು ಬೇಕಾಗುವ ತಂತ್ರಕೌಶಲ ಸಿದ್ಧವಾಗಿದೆ. ನೀನು ಆ ಬಗ್ಗೆ ಅಧೀರನಾಗುವ ಕಾರಣವಿಲ್ಲ."

"ನಿಮ್ಮ ಯೋಜನೆ ಏನು ?"

"ಈಗ ಸಾಮ್ರಾಟರ ವಿದ್ರೋಹವನ್ನು ಜನತೆಗೆ ತಿಳಿಸಿ ಅವರ ಸಹಾನುಭೂತಿ—ಬೆಂಬಲಗಳನ್ನು ಪಡೆಯುವುದು ಒಂದು ದಾರಿ. ಇದರೊಂದಿಗೆ ಉಳಿದ ಮಾಂಡಲೇಶ್ವರರ ಸಹಾನುಭೂತಿಯನ್ನೂ ದೊರಕಿಸಿಕೊಂಡು ಧರ್ಮಯುದ್ಧಕ್ಕಾಗಿ ಅವರ ಸೇನಾಬಲವನ್ನು ಉಪಯೋಗಿಸಲು ಪ್ರೇರೇಪಿಸುವುದು ಇನ್ನೊಂದು ದಾರಿ. ಹೇಗೂ ಗುರ್ಜರದೇಶದ ಮಾಂಡಲೇಶ್ವರ ಜಯಸಿಂಹನು ನಿನ್ನ ಸಹೋದರ. ಅವನು ನೀನು ಹೇಳಿದಂತೆ ನಡೆಯುತ್ತಾನೆ. ಉಳಿದ ಮಾಂಡಲೇಶ್ವರರ ವಿಷಯದಲ್ಲಿ ನಾವು ಈಗಿನಿಂದಲೇ ರಹಸ್ಯದ ಮಂತ್ರಾಲೋಚನೆ, ಪತ್ರ ವ್ಯವಹಾರ, ರಾಯಭಾರಗಳನ್ನು ಕೈಗೊಳ್ಳುವುದು ಒಳ್ಳೆಯದು."

"ಪ್ರಯತ್ನಪಟ್ಟರೆ ರೇವತೀದ್ವೀಪದ ಮಾಂಡಲೇಶ್ವರಚಂದ್ರಾದಿತ್ಯನನ್ನೂ ನಾವು ನಮ್ಮ ಪಕ್ಷಕ್ಕೆ ಒಲಿಸಿಕೊಳ್ಳಬಹುದು. ಅವನಿಗೂ ವಿಕ್ರಮಾದಿತ್ಯನಿಗೂ ಅಷ್ಟು ವಿಶ್ವಾಸವಿಲ್ಲ. ಅವನ ಏಳಿಗೆಯನ್ನು ಸಹಿಸದೆ ಇರುವ ವ್ಯಕ್ತಿಗಳಲ್ಲಿ

ಚಂದ್ರಾದಿತ್ಯನೂ ಒಬ್ಬನು."

"ಅವನ ಸಹಕಾರ ದೊರೆತರೆ ನಮ್ಮ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆಯೇ ಸರಿ. ನೀವು ಮೂವರೂ ಒಂದಾದರೆ, ವಿಕ್ರಮಾದಿತ್ಯನನ್ನು ಬಗ್ಗುಬಡಿಯುವುದು ದುಸ್ಸಾಧ್ಯವೇನಲ್ಲ."

"ಜಯಸಿಂಹ, ಚಂದ್ರಾದಿತ್ಯರನ್ನು ಈ ಒಕ್ಕೂಟಕ್ಕೆ ಒಡಂಬಡಿಸುವ ಭಾರ ನನಗೆ ಇರಲಿ" ಎಂದ ಆದಿತ್ಯವರ್ಮ.

"ಉಳಿದ ಮಾಂಡಲೀಶ್ವರರ ಹಾಗೂ ಸಾಮಂತರ ನೆರವು ದೊರಕಿಸಿ ಕೊಂಡು ಬರುವ ಹೊಣೆಗಾರಿಕೆ ನನಗೆ ಇರಲಿ. ಸಮಯ ಬಂದರೆ ಪಲ್ಲವ ನರಸಿಂಹವರ್ಮನ ಸಹಾಯವೂ ನಮಗೆ ದೊರೆಯುತ್ತದೆ."

"ನಿಮ್ಮ ಮಾತು ನಿಜವೆ?"

"ಹೌದು."

"ಅವನಿಂದ ಚಾಲುಕ್ಯ ಸಾಮ್ರಾಜ್ಯ ನಮಗೆ ದೊರಕುವುದಾದರೆ ನಾವೇಕೆ ಅವನ ಸ್ನೇಹ ಹಸ್ತವನ್ನು ಸ್ವೀಕರಿಸಬಾರದು?"

"ಚಾಲುಕ್ಯ ಹಾಗೂ ಪಲ್ಲವರೊಡನೆ ಮತ್ತೆ ಹೋರಾಟ ನಡೆಯುವ ಸಂಭವವಿದೆ. ನಾವು ವಿಕ್ರಮಾದಿತ್ಯನ ಮಿತ್ರರಂತೆ ನಟಿಸಿ ಸಮಯದಲ್ಲಿ ಕೈಬಿಟ್ಟರೆ ಪಲ್ಲವರಿಂದ ಅವನು ಸೋಲು ಅನುಭವಿಸುತ್ತಾನೆ. ನಾವು ಪಲ್ಲವ ದೊರೆಯ ಸಹಕಾರದಿಂದ, ಚಾಲುಕ್ಯ ಸಿಂಹಾಸನವನ್ನು ಪಡೆದು ಪಲ್ಲವರೊಡನೆ ಸ್ನೇಹ ಒಪ್ಪಂದಮಾಡಿಕೊಳ್ಳಬಹುದು."

"ಇದು ಅತ್ಯುತ್ತಮ ಸಲಹೆ" ಎಂದು ಆದಿತ್ಯವರ್ಮನು ತಲೆದೂಗಿದನು. ಇದನ್ನು ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ಅವನು ರಾಹಪ್ಪಯ್ಯ ಮತ್ತು ಚಂದ್ರೋಜರಿಗೆ ಒಪ್ಪಿಸಿದನು.

ಹೀಗೆ ರಾಹಪ್ಪಯ್ಯನ ತಂತ್ರ ಫಲಿಸಿ ಅವನ ನೇತೃತ್ವದಲ್ಲಿ ಚಾಲುಕ್ಯ ಸಾಮ್ರಾಜ್ಯವನ್ನು ಕಬಳಿಸುವ ವಿದ್ರೋಹದ ಬೆಂಕಿಗೆ ಅಂಕುರಾರ್ಪಣೆಯಾಯಿತು.

ಸಮಂತಭದ್ರನ ಸಲಹೆಯಂತೆ ಪುಲಿಕೇಶಿಯು ಹಿಂಗೆ ಎದ್ದ ಪಲ್ಲವದೊರೆ ನರಸಿಂಹವರ್ಮನಮೇಲೆ ಯುದ್ಧ ಘೋಷಿಸಿದ್ದನು. ದ್ರೋಹಿಯಾದ ಅವನನ್ನು ಶಿಕ್ಷಿಸಲು ಈ ಬಾರಿ ವಿಕ್ರಮಾದಿತ್ಯನನ್ನು ಅಸಂಖ್ಯಾತ ಸೈನ್ಯದೊಡನೆ ಕಳುಹಿಸಿ

ಕೊಟ್ಟಿದ್ದನು. ಈ ಹೋರಾಟ ತಮ್ಮ ಅಂತಿಮ ಹೋರಾಟವೆಂದೂ ಇದರ ಜಯಾಪಜಯಗಳಮೇಲೆ ಚಾಲುಕ್ಯ ಸಾಮ್ರಾಜ್ಯದ ಅಳಿವು ಉಳಿವು ನಿಂತಿದೆ ಎಂದು ಪುಲಿಕೇಶಿಯು ತನ್ನ ಚಕ್ರಾಧಿಪತ್ಯದ ಸಮಸ್ತ ಮಾಂಡಲೇಶ್ವರರಿಗೂ, ಸಾಮಂತರಿಗೂ ವಿಶೇಷವಾದ ನಿರೂಪಗಳನ್ನು ಬರೆಸಿ ಅವರ ನೆರವನ್ನು ಕೋರಿದ್ದನು.

ಆದರೆ ಆದಿತ್ಯವರ್ಮ, ಚಂದ್ರಾದಿತ್ಯ, ಜಯಸಿಂಹರು ರಾಹಪ್ಪಯ್ಯನ ಸಲಹೆಯಂತೆ ನಡೆದುಕೊಂಡರು. ವಿಕ್ರಮಾದಿತ್ಯನು ತನ್ನ ಸೈನ್ಯಸಮೇತ ಪಲ್ಲವ ರಾಜಧಾನಿಯ ಮೇಲೆ ದಂಡೆತ್ತಿ ಹೋಗಿ ದಾಳಿ ಇಡಲು ನಿಶ್ಚಯಿಸಿ ಸಹೋದರರ ನೆರವು ಬೇಡಿದನು. ಆದಿತ್ಯವರ್ಮನು ತಾನು ಹಿಂದೆ ನಿಂತು ಉಳಿದ ಸಾಮಂತರ ಬಲದೊಡನೆ ಅವನ ನೆರವಿಗೆ ಬರುವುದಾಗಿ ಪತ್ರ ಬರೆದನು. ಅವನ ಪತ್ರದಿಂದ ವಿಕ್ರಮಾದಿತ್ಯನಿಗೆ ಸಮಾಧಾನವಾಗಲಿಲ್ಲ. ಆದಿತ್ಯವರ್ಮ ನಿಂದ ಕಷ್ಟ ಕಾಲದಲ್ಲಿ ಇಂತಹ ವರ್ತನೆ ಅವನು ನಿರೀಕ್ಷಿಸಿರಲಿಲ್ಲ. ಅವನು ತನ್ನ ನೆರವೀಯಲು ಇಚ್ಛಿಸದೆ, ಹಿಂದೆ ಉಳಿದಿರಬಹುದೆಂದು ಊಹಿಸಿ, ಆ ಬಗ್ಗೆ ಆತಂಕಗೊಂಡನು. ಆದಿತ್ಯವರ್ಮನಿಗೆ ಬುದ್ಧಿ ಹೇಳಿ ಪತ್ರ ಬರೆದನು. ಇದರಿಂದ ಯಾವ ಪ್ರಯೋಜನವೂ ಆಗಿಲ್ಲ. ವಿಕ್ರಮಾದಿತ್ಯನು ಸಹೋದರರ ನೆರವಿಲ್ಲದೆಯೇ ತಾನು ಪಲ್ಲವರನ್ನು ಸೋಲಿಸಿಬರುವ ಪ್ರತಿಜ್ಞೆಮಾಡಿ ಸೈನ್ಯ ಸಮೇತ ಯುದ್ಧಕ್ಕೆ ಹೊರಟನು.

ವಿಕ್ರಮಾದಿತ್ಯನು ಪುಲಿಕೇಶಿಯ ಅಸ್ವಸ್ಥತೆಯನ್ನು ನೆನೆದು ಸಮಂತ ಭದ್ರನನ್ನು ರಾಜಧಾನಿಯಲ್ಲೇ ನಿಲ್ಲಿಸಿ, ರಾಜಧಾನಿಯ ರಕ್ಷಣೆಗೆ ಸೂಕ್ತ ಸೈನ್ಯವನ್ನು ಬಿಟ್ಟು, ಕಾಂಚಿಯಮಾರ್ಗ ಹಿಡಿದನು.

ವಿಕ್ರಮಾದಿತ್ಯನು ತನ್ನ ವಿದ್ರೋಹವನ್ನು ಅಡಗಿಸಲು ಪ್ರಚಂಡ ಸೈನ್ಯ ದೊಡನೆ ಕಾಂಚಿಯ ಮೇಲೆ ದಂಡೆತ್ತಿ ಬರುತ್ತಿರುವ ವಾರ್ತೆಯನ್ನು ಕೇಳಿ ನರಸಿಂಹವರ್ಮನು ಹರ್ಷಿಸಿದನು. ಈ ಬಾರಿ ತನ್ನ ತಂದೆಗೆ ಕೊಟ್ಟಿದ್ದ ವಚನ ವನ್ನು ಪಾಲಿಸಲು ಯೋಗ್ಯ ಅವಕಾಶ ಸಿಕ್ಕಿತೆಂದು ಹಿಗ್ಗಿದನು. ಅವನಿಗೆ ರಾಹಪ್ಪಯ್ಯನ ಪಿತೂರಿಯಿಂದ ಆದಿತ್ಯವರ್ಮ ಮತ್ತು ಅವನ ಸಹೋದರರ ಬೆಂಬಲ ದೊರೆತುದು ಮಹತ್ಕಾರ್ಯ ಸಾಧಿಸಿದಂತೆ ಆಗಿತ್ತು. ಚಾಲುಕ್ಯ ಬಲದಲ್ಲಿ ಉಂಟಾಗಿದ್ದ ಈ ಒಡಕನ್ನು ಉಪಯೋಗಿಸಿಕೊಂಡು, ಸಾಮ್ರಾಜ್ಯ

ವನ್ನು ಕಬಳಿಸಿ, ಚಾಲುಕ್ಯ ವಂಶವನ್ನು ನಾಮಾವಶೇಷಗೊಳಿಸಬೇಕೆಂಬ ಸಂಕಲ್ಪದಿಂದ ಅವನು ಯುದ್ಧಸನ್ನಾಹಕ್ಕೆ ತೊಡಗಿದನು.

ವಿಕ್ರಮಾದಿತ್ಯನ ಸೈನ್ಯ ಕಾಂಚಿಯವರೆಗೆ ಬರಲು ಬಿಡಬಾರದೆಂದು ನಿಶ್ಚಯಿಸಿದ ನರಸಿಂಹವರ್ಮನು ತನ್ನ ದಂಡನ್ನು ಪೆರಿಯಾಳದ ಬಳಿ ನಿಲ್ಲಿಸಿದ್ದನು. ಅಲ್ಲಿ ಎರಡು ಸೈನ್ಯಗಳಿಗೂ ಭಯಂಕರ ಹೋರಾಟ ನಡೆಯಿತು.

ಕಾಳಗದಲ್ಲಿ ಎರಡು ಕಡೆಯ ಸೈನಿಕರೂ ಅಸಂಖ್ಯಾತವಾಗಿ ಮಡಿದರು. ಬಹುಸಂಖ್ಯೆಯಲ್ಲಿ ಸೈನಿಕರು ಗಾಯಗೊಂಡರು. ರಕ್ತದ ಕಾಲುವೆ ಕೋಡಿ ಹರಿಯಿತು. ಮೊದಲು ಚಾಲುಕ್ಯರ ಕೈ ಮೇಲಾದಂತೆ ತೋರಿದರೂ, ಕಡೆ ಕಡೆಗೆ ಪಲ್ಲವರ ಕೈ ಮೇಲಾಯಿತು.

ಅವರ ಕಡೆ ಪವಾಡಪುರುಷನೆನಿಸಿದ, ಸಿರಿಯಾಳ ಶೆಟ್ಟಿಯು ಮಹಾ ದಂಡನಾಯಕನಾಗಿ ನಿಂತಿದ್ದನು. ಅವನನ್ನು ಎದುರಿಸಲಾರದೆ, ಚಾಲುಕ್ಯ ಸೈನಿಕರು ಓಡಿದರು; ಅವನ ಭೂತಗಣಗಳ ಸದೃಶ ಸೈನಿಕರ ಪೆಟ್ಟಿಗೆ ತತ್ತರಿಸಿ, ಪಲಾಯನ ಮಾಡಿದರು. ವಿಜಯವಧು ಪಲ್ಲವರಿಗೆ ಮಾಲೆ ಹಾಕಿದಳು.

ವಿಕ್ರಮಾದಿತ್ಯನು ಸಂಪೂರ್ಣ ಸೋಲು ನಾಶಗಳನ್ನು ತಪ್ಪಿಸಲು ಹಿಮ್ಮೆಟ್ಟಿ ಮಣಿಮಂಗಳದ ಬಳಿ ಬೀಡುಬಿಟ್ಟನು. ಅಲ್ಲಿಂದಲೇ ಪಲ್ಲವರೊಡನೆ ಕಾಳಗಕ್ಕೆ ಸಿದ್ಧನಾದನು. ತನಗೆ ಪೆರಿಯಾಳ ಯುದ್ಧದಲ್ಲಿ ಉಂಟಾದ ಸೋಲಿನ ಸಂಗತಿ ತಿಳಿಸಿ, ಕೂಡಲೇ ತಮ್ಮ ಸೈನ್ಯಗಳೊಡನೆ ಹೊರಟು ಬಂದು ತನ್ನನ್ನು ಮಣಿಮಂಗಳದಲ್ಲಿ ಕೂಡಿಕೊಳ್ಳಲು ಸಹೋದರರಿಗೆ ಪತ್ರ ಬರೆದನು.

ಚಾಲುಕ್ಯ ಸಾಮ್ರಾಜ್ಯದ ಅದೃಷ್ಟವೋ ಎಂಬಂತೆ, ಆದಿತ್ಯವರ್ಮನೂ ಜಯಸಿಂಹ, ಚಂದ್ರಾದಿತ್ಯರೂ ತಮ್ಮ ಬಲಗಳೊಡನೆ ಬರುತ್ತಿರುವುದಾಗಿ ವಾರ್ತೆ ಬಂತು. ಅದನ್ನು ಕೇಳಿ ಅವನು ಹಿಗ್ಗಿದನು. ಆ ಸಹೋದರರ ಸಹಾಯದಿಂದ, ಸೋಲಿನ ಕಳಂಕವನ್ನು ಮಣಿಮಂಗಳದಲ್ಲಿ ತೊಡೆದು ಹಾಕಬಹುದೆಂದು ಆಶಿಸಿದನು.

ಆದರೆ ಅವನೊಂದು ನೆನೆದರೆ ದೈವವೊಂದು ನೆನೆದಿತ್ತು.

ವಿಕ್ರಮಾದಿತ್ಯನು ಆದಿತ್ಯವರ್ಮನ ಆಶ್ವಾಸನವನ್ನು ನಂಬಿ, ಅವನ ಸೈನ್ಯದ ಸಹಾಯ ನಿರೀಕ್ಷಿಸುವುದರಲ್ಲಿ ಅನೇಕ ದಿನಗಳು ಕಳೆದುವು. ಈ ಅವಧಿ ಯಲ್ಲಿ ನರಸಿಂಹವರ್ಮನು ತನಗೆ ದೊರೆತ ಜಯದಿಂದ ಹಿಗ್ಗಿ, ದೊರೆತ ಯುದ್ಧದ

ಸೂರೆಯಿಂದ ಸೈನಿಕರನ್ನು ಹುರಿದುಂಬಿಸಿ, ಹಠಾತ್ತನೆ ಚಾಲುಕ್ಯ ಶಿಬಿರದ ಮೇಲೆ ದಾಳಿ ಇಟ್ಟನು.

ಇಂತಹ ದಾಳಿ ಒದಗುವುದೆಂದು ಮೊದಲೇ ನಿರೀಕ್ಷಿಸಿದ್ದ ವಿಕ್ರಮಾದಿತ್ಯನು ಹೆದರಲಿಲ್ಲ. ಅವನು ಈ ದಾಳಿಗೆ ಸಿದ್ಧನಾಗಿಯೇ ಇದ್ದನು. ಆದರೆ ಅವನು ನಿರೀಕ್ಷಿಸಿದ್ದ ಅವನ ಸಹೋದರರ ಸಹಾಯ ಮಾತ್ರ ಬಂದಿರಲಿಲ್ಲ. ಆದರೂ ಧೃತಿಗೆಡದೆ ಅವನು ತನ್ನ ಸೈನ್ಯದೊಡನೆ ಪಲ್ಲವರ ಮೇಲೆ ಬಿದ್ದನು.

ಮಣಿಮಂಗಳದಲ್ಲಿ ನಡೆದ ಯುದ್ಧದಲ್ಲಿ ಚಾಲುಕ್ಯ ಸೈನಿಕರು. ಎಷ್ಟೇ ಧೈರ್ಯಸಾಹಸಗಳಿಂದ ಹೋರಾಡಿದರೂ—ಪಲ್ಲವರ ಮುಂದೆ ನಿಲ್ಲಲಾರದೆ ಹೋದರು. ಅವರು ವೀರಾವೇಶದಿಂದ ಕಾದಿ, ಶತ್ರುಸೈನಿಕರನ್ನು ಕತ್ತಿಗೆ ಬಲಿ ಕೊಟ್ಟು, ತಾವೂ ಅಧಿಕ ಸಂಖ್ಯೆಯಲ್ಲಿ ಹತರಾದರು. ವಿಜಯವಧು ಮಾತ್ರ ಪಲ್ಲವರಿಗೇ ಒಲಿದಳು.

ಯುದ್ಧದ ಸ್ವರೂಪವನ್ನು ಅರಿತ ವಿಕ್ರಮಾದಿತ್ಯನು ಎಚ್ಚೆತ್ತುಕೊಂಡು, ತನ್ನ ದಳಗಳನ್ನು ಸುರಮಾರ ಎಂಬೆಡೆಗೆ ಹಿಮ್ಮೆಟ್ಟಲು ಆಜ್ಞೆಮಾಡಿದನು. ಅಂದಿನ ಯುದ್ಧವು ನರಸಿಂಹವರ್ಮನ ಶೌರ್ಯಸಾಹಸಗಳಿಂದಾಗಿ, ಸಿರಿಯಾಳ ಶೆಟ್ಟಿಯ ಪ್ರಭಾವಪೂರ್ಣ ಹೋರಾಟದಿಂದಾಗಿ, ಮತ್ತೆ ಪಲ್ಲವರ ದಿಗ್ವಿಜಯದಲ್ಲಿ ಪರ್ಯವಸಾನಗೊಂಡಿತ್ತು.

ಸುರಮಾರದಲ್ಲಿ ತನ್ನ ಅಳಿದುಳಿದ ಬಲದೊಡನೆ ತಂಗಿದ್ದ ವಿಕ್ರಮಾದಿತ್ಯನು ಈಗ ತನ್ನ ಸಹೋದರರ ಸಹಾಯವನ್ನು ಬಹುವಾಗಿ ನೆಚ್ಚಿ ಕುಳಿತಿದ್ದನು. ಅವನ ನಿರೀಕ್ಷೆಗೂ ಮೀರಿ ಎರಡು ಯುದ್ಧಗಳಲ್ಲೂ ಚಾಲುಕ್ಯ ಸೈನಿಕರು ಬಹು ಸಂಖ್ಯೆಯಲ್ಲಿ ಹತರಾಗಿ, ಗಾಯಗೊಂಡು ಮಡಿದಿದ್ದರು. ವಿಪುಲವಾದ ಸೂರೆ ಶತ್ರುಗಳ ವಶವಾಗಿತ್ತು. ಅದರಿಂದ ವಿಕ್ರಮಾದಿತ್ಯನಿಗೆ ಭಾರಿ ಪೆಟ್ಟು ಬಿದ್ದಿತ್ತು; ಪಲ್ಲವ ನರಸಿಂಹನು ಮಾತ್ರ ತನಗೆ ದೊರೆತ ವಿಜಯಗಳಿಂದ ವಿಜೃಂಭಿಸುತ್ತಿದ್ದನು.

ಈಗ ವಿಕ್ರಮಾದಿತ್ಯನಿಗೆ ಇದ್ದ ಒಂದೇ ಒಂದು ಆಸೆ—ಆದಿತ್ಯವರ್ಮನ ಸಹಾಯದ ನಿರೀಕ್ಷೆ. ಅದಕ್ಕಾಗಿ ಚಾತಕ ಪಕ್ಷಿಯಂತೆ ಕಾಯುತ್ತಾ ಕುಳಿತಿದ್ದನು.

ಅವನು ನಿರೀಕ್ಷಿಸಿದ್ದ ಸೈನ್ಯಸಹಾಯ ಇನ್ನೂ ಬರಲಿಲ್ಲ. ಏಕೆಂಬುದು

ಅವನಿಗೆ ತಿಳಿಯದಾಯಿತು. ಅವನು ಆದಿತ್ಯವರ್ಮನಿಗೆ ಪತ್ರಗಳಮೇಲೆ ಪತ್ರಗಳನ್ನು ಬರೆದು ಅವನ ನೆರವನ್ನು ಯಾಚಿಸಿದನು. ಯಾವುದಕ್ಕೂ ಉತ್ತರ ಬರಲಿಲ್ಲ. ಪರಿಸ್ಥಿತಿ ಹೀಗೇ ಮುಂದುವರೆದರೆ, ತಾನು ಸೋಲುವುದೇ ದಿಟ, ಪಲ್ಲವರ ಕೈಯಲ್ಲಿ ಪರಾಭವಗೊಳ್ಳುವುದೇ ದಿಟ, ಎಂದು ಅರಿತನು.

ತಾನು ಸೋತರೂ ಸರಿ, ಅಪಮಾನದ ಮೋರೆ ಹೊತ್ತು ರಾಜಧಾನಿಗೆ ಮಾತ್ರ ಹಿಂದಿರುಗಬಾರದೆಂದು ವಿಕ್ರಮಾದಿತ್ಯನು ನಿರ್ಧರಿಸಿದ್ದನು. ಅಂತಹ ಬಾಳಿಗಿಂತಲೂ, ಸಾವು ಸುಖಕರವಾಗಿತ್ತು. ಅದನ್ನು ನಿರ್ಧರಿಸುವ ಮುನ್ನ ಅಂತಿಮ ಜಯಾಪಜಯಗಳನ್ನು ಸುರಪಾರದಲ್ಲಿ ನಿರ್ಧರಿಸಿಬಿಡಬೇಕೆಂದು ಯೋಚಿಸಿದ್ದನು. ಇಷ್ಟಾದರೂ ಆದಿತ್ಯವರ್ಮ ಸಹೋದರರಿಂದ ಬರಬೇಕಾಗಿದ್ದ ಸೈನ್ಯಸಹಾಯ ಬರಲಿಲ್ಲ. ಅವರು ಇಂತಹ ದಾರುಣ ಸಮಯದಲ್ಲಿ ದ್ರೋಹವನ್ನೇ ಚಿಂತಿಸಿದರೆಂದು ಅವನಿಗೆ ಹೇಗೆ ತಿಳಿಯಬೇಕು?

ಈಗ ಪಲ್ಲವ ನರಸಿಂಹವರ್ಮನು ತನಗೆ ದೊರೆತ ದಿಗ್ವಿಜಯದಿಂದ ಬೀಗಿ, ಶತ್ರು ಬಲಾಢ್ಯನಾಗುವ ಮೊದಲೇ ಅವನ ಮೇಲೆ ಬಿದ್ದು ಮೂಲೋತ್ಪಾಟನ ಮಾಡಬೇಕೆಂದು ನಿಶ್ಚಯಿಸಿದನು. ಅವನು ಸಮಯವನ್ನು ಹಾಳುಮಾಡದೆ, ಸುರಮಾರದ ಮೇಲೆ ಸೈನ್ಯಸಮೇತ ನುಗ್ಗಿದನು.

ಅವನ ಪ್ರಚಂಡದಾಳಿಯನ್ನು ಎದುರಿಸಲು ವಿಕ್ರಮಾದಿತ್ಯನು ಸಮರ್ಥನಾಗಲಿಲ್ಲ. ಅವನು ವೀರನಾದರೂ, ಚಾಲುಕ್ಯ ಸೈನಿಕರು ಗಂಡುಗಲಿಗಳಾಗಿದ್ದರೂ, ಅಸಂಖ್ಯಾತ ಪಲ್ಲವ ಸೇನಾಸಮುದ್ರದ ಮುಂದೆ ನಿಲ್ಲಲಾರದೆ, ಕೊಚ್ಚಿ ಹೋದರು.

ಈ ಯುದ್ಧದಲ್ಲಿ ವಿಕ್ರಮಾದಿತ್ಯನು ಸಂಪೂರ್ಣವಾಗಿ ಸೋತುದಲ್ಲದೆ, ಅವನ ಸೇನೆಯು ಬಹುಪಾಲು ನಾಶವಾಗಿತ್ತು. ಇನ್ನು ರಣರಂಗದಲ್ಲಿ ಉಳಿದರೆ ತಾನು ಶತ್ರುಗಳಿಗೆ ಕೈಸೆರೆ ಸಿಕ್ಕಿ, ಅಪಮಾನಗೊಳ್ಳಬೇಕಾಗುವುದೆಂದು ಯೋಚಿಸಿ, ವಿಕ್ರಮಾದಿತ್ಯನು ತನ್ನ ಸಂಗಡಿಗರೊಡನೆ ಪಲಾಯನಮಾಡಿದನು.

ಅವನು ಸಾಯಲು ಅಂಜಿರಲಿಲ್ಲ. ಆದರೆ ಇಂತಹ ಅಪಮಾನ ಸಾವುಗಳು ಅವನಿಗೆ ಇಷ್ಟವಿರಲಿಲ್ಲ. ಮತ್ತೊಮ್ಮೆ ತನ್ನ ಸಹೋದರರ ಸೈನ್ಯದೊಡನೆ ಬಂದು ಪಲ್ಲವರ ಮೇಲೆ ಬಿದ್ದು, ಆ ಅಂತಿಮ ಹೋರಾಟದಲ್ಲಿ ಈ ಅಸುವನ್ನು ಧರೆಗೆ ಚೆಲ್ಲಿ ವೀರಮರಣವನ್ನು ಅಪ್ಪಬೇಕೆಂದು ನಿರ್ಧರಿಸಿದ್ದನು.

ಈ ಯುದ್ಧದಲ್ಲಿ ಪಲ್ಲವರಿಗೆ ಚಾಲುಕ್ಯರಮೇಲೆ ಸಂಪೂರ್ಣ ಜಯ ಉಂಟಾಗಿತ್ತು. ಈಗ ನರಸಿಂಹವರ್ಮನನ್ನು ಹಿಡಿಯುವವರೇ ಇರಲಿಲ್ಲ. ಅವನು ತಂದೆಗೆ ಕೊಟ್ಟಿದ್ದ ವಚನದಲ್ಲಿ ಪ್ರಥಮಾರ್ಧ ಈಡೇರಿತ್ತು. ಇದನ್ನು ವಾತಾಪಿಯ ನಾಶವನ್ನು ನೆರವೇರಿಸಲು ಸಂಕಲ್ಪಿಸಿದನು. ಈ ಮಹತ್ತರ ಕಾರ್ಯಕ್ಕೆ ಸೈನಿಕರನ್ನು ಹುರಿದುಂಬಿಸಲು, ತನಗೆ ಚಾಲುಕ್ಯ ಸೇನೆಯಲ್ಲಿ ಸಮಸ್ತ ಬೆಲೆ ಬಾಳುವ ವಸ್ತುವನ್ನೂ ಸೈನಿಕರಿಗೆ ಉಡುಗೊರೆಯಾಗಿ ಹಂಚಿದನು. ವಾತಾಪಿಯು ತಮ್ಮ ಕೈವಶವಾದರೆ, ಅದರ ಸಮಸ್ತ ಸಂಪತ್ತೂ ತಮ್ಮದಾಗುವುದೆಂಬ ಪ್ರಲೋಭವನ್ನು ಒಡ್ಡಿದನು. ಇದರಿಂದ ಉನ್ಮತ್ತರಾದ ಸೈನಿಕರು; ವಾತಾಪಿಯ ಮೇಲೆ ಬಿರುಗಾಳಿಯಂತೆ ನುಗ್ಗಿದರು.

ಎಲ್ಲವೂ ಮಿಂಚಿನ ವೇಗದಲ್ಲಿ ನಡೆದಿತ್ತು. ಹೀಗಾಗಬಹುದೆಂದು ಪುಲಿಕೇಶಿಯಾಗಲೀ, ಸಮಂತಭದ್ರನಾಗಲೀ ಕನಸುಮನಸಿನಲ್ಲಿ ಊಹಿಸಿರಲಿಲ್ಲ. ಪಲ್ಲವರು ವಿಕ್ರಮಾದಿತ್ಯನ ನೇತೃತ್ವದಲ್ಲಿ ಹೊರಟ ಅಜೇಯ ಚಾಲುಕ್ಯಸೈನ್ಯವನ್ನು ಸೋಲಿಸಿ, ವಾತಾಪಿಯ ಮೇಲೆ ದಂಡೆತ್ತಿ ಬರುವರೆಂದು ಊಹಿಸಿರಲಿಲ್ಲ. ಇದೆಲ್ಲವೂ ಅನಿರೀಕ್ಷಿತವೆಂಬಂತೆ ನಡೆದುಹೋಗಿತ್ತು.

ಹೀಗಾಗಬಹುದೆಂದು ಪುಲಿಕೇಶಿಯು ಇತ್ತೀಚಿನ ದಿನಗಳಲ್ಲಿ ಮೇಲಿಂದ ಮೇಲೆ ಬೀಳುತ್ತಿದ್ದ ದುಃಸ್ವಪ್ನಗಳಿಂದಲೂ, ದುಃಶಕುನಗಳಿಂದಲೂ ತಿಳಿದಿದ್ದನು. ಅವನಿಗೆ ಇದೆಲ್ಲವೂ ಪೂರ್ವಯೋಜಿತ ಘಟನೆಗಳಂತೆ ಭಾಸವಾಗಿತ್ತು. ದೈವವೇ ತನ್ನ ವಿರುದ್ಧ ನಿಂತು, ತನ್ನ ಮೇಲೆ ಸೇಡು ತೀರಿಸಿಕೊಳ್ಳುತ್ತಿರುವಂತೆ ಭಾಸವಾಗಿತ್ತು.

ಯಾವುದೋ ಜನ್ಮದ ಪಾಪಶೇಷ, ಇಲ್ಲವೇ ಈ ಜನ್ಮದಲ್ಲಿ ಸಂಚಿತವಾದ ಯಾವುದೇ ಅಗೋಚರವಾದ ಪಾಪ ತನ್ನ ಮೇಲೆ ಹೀಗೆ ಸೇಡು ತೀರಿಸಿಕೊಳ್ಳುತ್ತಿದೆ. ದೈವಹತನಾದ ತಾನು ಈ ಬಾರಿ ಸರ್ವನಾಶ ಹೊಂದುವುದು ದಿಟ. ತನ್ನ ನಾಶವನ್ನೂ, ವಾತಾಪಿಯ ನಾಶವನ್ನೂ, ಚಾಲುಕ್ಯ ಸಾಮ್ರಾಜ್ಯದ ನಾಶವನ್ನೂ ಯಾರೂ ತಡೆಯಲಾರರು, ತಮ್ಮನ್ನು ಯಾರೂ ಉಳಿಸಲಾರರು ಎಂಬ ಅಂತರ್ವಾಣಿ ಮೇಲಿಂದಮೇಲೆ ಮೊಳಗುತ್ತಿತ್ತು.

ಬರಲಿರುವ ಗಂಡಾಂತರದ ಮುನ್ಸೂಚನೆಯೆಂಬಂತೆ, ದಿನದಿನಕ್ಕೂ ಅವನ ಕಾಹಿಲೆ ಹೆಚ್ಚಾಗುತ್ತಾ ಹೋಗಿತ್ತು. ತಾನು ಇದೆಲ್ಲ ವಿಪತ್ಪರಂಪರೆಗಳನ್ನು–

ಸರ್ವನಾಶವನ್ನು ಕಾಣುವುದು ದೈವೇಚ್ಛೆಗೆ ಬಂದಿಲ್ಲ. ವಾತಾಪಿ ಪಲ್ಲವರ ವಶವಾಗುವ ಮೊದಲೇ, ಅವರ ಕೈಯಿಂದ ನಾಶವಾಗುವ ಮೊದಲೇ ಸಾಯುವುದು ಒಳ್ಳೆಯದು. ಈ ಪುಣ್ಯ ತನ್ನದಾಗುವುದೇ ಎಂಬ ಸಂಶಯ ಒಮ್ಮೊಮ್ಮೆ ಬಾಧಿಸದೆ ಇರಲಿಲ್ಲ. ಎಲ್ಲವನ್ನೂ ಸ್ವಾಮಿ ಮಕುಟೇಶ್ವರನಿಗೆ ಬಿಟ್ಟು, ಎಲ್ಲವನ್ನೂ ಭಗವದರ್ಪಣಮಾಡಿ, ಜೀವ ಹಿಡಿದಿದ್ದನು. ಸಾಯುವ ಮುನ್ನ ತನ್ನ ಪ್ರೀತಿಯ ಮಗ ವಿಕ್ರಮಾದಿತ್ಯನನ್ನು ನೋಡಿ ಸಾಯಬೇಕೆಂಬ ಹಂಬಲ ಹೊತ್ತು ಬದುಕಿದ್ದನು. ಆದರೆ ಅವನ ಅಂತಿಮ ಆಸೆ ಈಡೇರುವುದು ದೈವೇಚ್ಛೆಗೆ ಬಂದಿರಲಿಲ್ಲ.

ನರಸಿಂಹವರ್ಮನು ಹಠಾತ್ತನೆ ತನ್ನ ಅಸಂಖ್ಯಾತ ಬಲದೊಡನೆ ಬಂದು ವಾತಾಪಿಯ ಮೇಲೆ ದಾಳಿ ಇಟ್ಟು ಮಿಂಚಿನವೇಗದಲ್ಲಿ ಕೋಟೆಯನ್ನು ವಶಪಡಿಸಿಕೊಂಡನು.

ಊರಿನೊಳಗೆ ನುಗ್ಗಿ, ಪುಲಿಕೇಶಿಯನ್ನು ಹಿಡಿಯಲು ಅರಮನೆಯತ್ತ ಬಿರುಗಾಳಿಯಂತೆ ಹೊರಟಿರುವ ವಾರ್ತೆ ಬಂತು. ವಾತಾಪಿಯನ್ನು ಸಮಂತಭದ್ರನು ಶತ್ರುಗಳಿಂದ ರಕ್ಷಿಸಲು ಸರ್ವಸಾಹಸ ಮಾಡಿದ್ದನು. ಆದರೆ ರಾಹಪ್ಪಯ್ಯನ ಕಡೆಯ ದ್ರೋಹಿಗಳು ಕೋಟೆಯ ಬಾಗಿಲನ್ನು ತೆರೆದು ಶತ್ರುಗಳನ್ನು ಒಳಗೆ ಬಿಟ್ಟು, ಬೆನ್ನಿನಲ್ಲಿ ಇರಿದಿದ್ದರು. ಅವರ ಮಹಾಪೂರವನ್ನು ತಡೆಯಲಾಗದೆ, ಅರಮನೆಯನ್ನಾದರೂ ರಕ್ಷಿಸಲು ಬೆಟ್ಟದಮೇಲಿನ ಅರಮನೆಯ ಕೋಟೆಗೆ ಬಂದನು.

ಅದನ್ನು ಶತ್ರುಸೈನಿಕರಿಂದ ರಕ್ಷಿಸಿಕೊಳ್ಳಲು ಅವನಿಂದ ಸಾಧ್ಯವಾಗಲಿಲ್ಲ. ಅವನು ತನ್ನ ಕಡೆಯ ಉಸಿರು ಇರುವವರೆಗೂ ಶತ್ರುಗಳೊಡನೆ ಹೋರಾಡಿ, ರಣರಂಗದಲ್ಲಿ ಅಸುವನ್ನು ನೀಗಿ, ವೀರಮರಣವನ್ನು ಹೊಂದಿದನು.

ಸಮಂತಭದ್ರನ ಪ್ರತಿಭಟನೆಯನ್ನು ಮುಂದೊತ್ತಿ, ಅವನನ್ನು ನಾಶ ಮಾಡಿದ ಮೇಲೆ ನರಸಿಂಹವರ್ಮನು ಪುಲಿಕೇಶಿಯ ಅರಮನೆಯ ಮೇಲೆ ಏರಿ ಹೋದನು. ಅರಮನೆಯ ದ್ವಾರವನ್ನು ರವಿಕೀರ್ತಿಯು ತನ್ನ ನೆಚ್ಚಿನ ದಂಡಾಳುಗಳೊಡನೆ ರಕ್ಷಿಸುತ್ತಿದ್ದನು. ಅವನು ನರಸಿಂಹವರ್ಮನ ಸೈನ್ಯವನ್ನು ಎದುರಿಸಿ, ಶಕ್ತಿಮೀರಿ ಹೋರಾಡಿ, ಗಾಯಗೊಂಡು ನೆಲಕ್ಕೆ ಉರುಳಿದನು. ಅವನನ್ನು ತುಳಿದುಕೊಂಡೇ ನರಸಿಂಹವರ್ಮನು ಪುಲಿಕೇಶಿಯನ್ನು ಜೀವಂತ

ಹಿಡಿಯಲು ಅಂತಃಪುರಕ್ಕೆ ನುಗ್ಗಿದನು.

ಈ ವೇಳೆಗೆ ಇಡೀ ನಗರವು ಪಲ್ಲವರ ವಶವಾಗಿತ್ತು. ಅರಮನೆಯ ಕೋಟೆಯೂ, ಅಲ್ಲಿದ್ದ ಶಸ್ತ್ರಾಗಾರ, ರಾಜಭಂಡಾರಗಳೂ ಶತ್ರುಗಳಿಗೆ ವಶವಾಗಿದ್ದವು. ಸೈನಿಕರು ತಮಗೆ ದೊರೆತ ಜಯದಲ್ಲಿ ಉನ್ಮತ್ತರಾಗಿ ಜಯ ಕಾರಗಳನ್ನು ಮಾಡುತ್ತಿದ್ದರು. ಅವರ ಜಯಕಾರ ನಭೋಮಂಡಲವನ್ನು ಮುಟ್ಟುತ್ತಿತ್ತು.

ಅದು ರುಗ್ಣಶಯ್ಯೆಯಲ್ಲಿದ್ದ ಪುಲಿಕೇಶಿಯ ಕಿವಿಗೂ ಅಸ್ಪಷ್ಟವಾಗಿ ಬಿದ್ದಿತ್ತು. ಅವನು ಎದ್ದು ಕುಳಿತು ಕತ್ತಿಯನ್ನು ಹಿರಿಯಲು ನೋಡಿದನು. ಆದರೆ ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ರಾಜವೈದ್ಯರು ಆ ಕೋಣೆಯನ್ನು ಭದ್ರ ಪಡಿಸಿ ಹೊರಗೆಹೋದರು.

ಅವರಿಗೆ ಸೋಲಿನ ಸುದ್ದಿ ತಿಳಿಯಿತು. ಈ ಸೋಲಿನ ಸುದ್ದಿಯನ್ನು ಯನ್ನು ಪುಲಿಕೇಶಿಗೆ ಹೇಳಲು ಮುಖವಿಲ್ಲದೆ ಅವರು ಅರಮನೆಯ ಗೋಪುರ ದಿಂದ ಬಿದ್ದು, ಆತ್ಮಹತ್ಯೆಮಾಡಿಕೊಂಡು ಹುತಾತ್ಮರಾದರು.

ಪುಲಿಕೇಶಿಯು ಮೈಯೆಲ್ಲಾ ಕಿವಿಯಾಗಿಸಿಕೊಂಡು ಸಮಂತಭದ್ರನಿಂದ ಬರಲಿರುವ ವಾರ್ತೆಗಾಗಿ ಆಲಿಸುತ್ತಾ ಕುಳಿತಿದ್ದನು.

ಆದರೆ ಸಮಂತಭದ್ರನು ಮಾತ್ರ ಬರಲಿಲ್ಲ. ಒಂದು ನಿಮಿಷವಾಯಿತು.... ಎರಡು ನಿಮಿಷವಾಯಿತು....ಹತ್ತು ನಿಮಿಷವಾಯಿತು....ಅವನ ಸುಳಿವೇ ಇಲ್ಲ. ಹೊರಗೆ ಹೋಗಿದ್ದ ರಾಜವೈದ್ಯರೂ ಹಿಂದಿರುಗಿ ಬರಲಿಲ್ಲ.

ಪುಲಿಕೇಶಿ ಕಾತುರಗೊಂಡನು. ಅರಮನೆಯ ದ್ವಾರದ ಕಡೆಯಿಂದ ಗದ್ದಲ ಹೆಚ್ಚಾಗುತ್ತ ಬಂದಿತು. ಹೋರಾಡುವ ಸೈನಿಕರ ಉದ್ಗಾರ, ಕತ್ತಿಗಳ ಝುಣತ್ಕಾರ, ಗಾಯಗೊಂಡವರ ಚೀತ್ಕಾರ ಕಿವಿಕಿವುಡಾಗುವಂತೆ ಕೇಳಿಸಿದವು. ಇದರ ಜೊತೆಗೆ ಪಲ್ಲವರ ಜಯಘೋಷಗಳು ಎಲ್ಲೆಡೆಯಲ್ಲೂ ಮಾರ್ದನಿಗೊಳ್ಳು ತ್ತಿದ್ದವು.

"ಜಯ ಜಯ ನರಸಿಂಹವರ್ಮ ಸಾಮ್ರಾಟ! ಜಯ ಜಯ ಸಿಂಹವಿಷ್ಣು ಭೂಪಾಲ ! ಜಯ ವಾತಾಪಿಕೊಂಡ ದೇವ!" ಎಂದು ಸೈನಿಕರು ಆರ್ಭಟಿಸು ತ್ತಿದ್ದರು.

ಈ ರಣಗರ್ಜನೆಯನ್ನು ಕೇಳಿ ಪುಲಿಕೇಶಿಯು ಹಾಗೆಯೇ ಕಣ್ಮುಚ್ಚಿ

ಮಲಗಿದ. ಅವನ ಕಿವಿಯ ಮೇಲೆ "ವಾತಾಪಿ ಕೊಂಡ" ಎಂಬ ಶಬ್ದ ಕೇಳಿದುದೇ ತಡ, ಕಣ್ಣಿಗೆ ಕತ್ತಲೆ ಕವಿಯಿತು. ತಾನು ತಳವಿಲ್ಲದ ತಮದ ಕಡಲಿಗೆ ಬಿದ್ದಂತೆ ಭಾಸವಾಯಿತು.

"ಸ್ವಾಮಿ ಮಕುಟೇಶ್ವರ, ಇದು ನಿನಗೆ ಪ್ರಿಯವಾಗಿದ್ದರೆ, ಇದನ್ನೇ ಸ್ವೀಕರಿಸು" ಎಂದು ಹೇಳಿ ಕಣ್ಣುಮುಚ್ಚಿ ಮಲಗಿದವನು ಮೇಲೇಳಲಿಲ್ಲ. ಅವನ ಆತ್ಮಪಕ್ಷಿ ವಾತಾಪಿಕೊಂಡ ನರಸಿಂಹವರ್ಮನನ್ನು ನೋಡುವ ಮೊದಲೇ ಹಾರಿ ಹೋಗಿತ್ತು. ಅವನ ಕೈಯಿಂದ ಪುಲಿಕೇಶಿಯು ಅಪಮಾನಗೊಳ್ಳುವ ಮೊದಲೇ ಅವನ ಇಹಲೀಲೆ ಮುಗಿದಿತ್ತು. ಕಡೆಗೂ ದೈವಹತನಾದ ಪರಮೇಶ್ವರ ಪುಲಿಕೇಶಿಯು ತನ್ನ ಬಾಳಿನ ಸ್ವರ್ಣಮಂದಿರ ನಾಶವಾಗುವ ಮೊದಲೇ ಇಹಲೋಕದಿಂದ ಕಣ್ಮರೆಯಾಗಿದ್ದನು!

ನರಸಿಂಹವರ್ಮನು ಪುಲಿಕೇಶಿಯನ್ನು ಜೀವಂತವಾಗಿ ಕೈಸೆರೆ ಹಿಡಿಯಲು ಅವನ ರುಗ್ಣಶಾಲೆಗೆ ನುಗ್ಗಿದನು. ಕೈಯಲ್ಲಿ ಖಡ್ಗ ಝಳಪಿಸುತ್ತಿತ್ತು. ಅವನ ಮುಖದಲ್ಲಿ ಉದ್ವೇಗ ತುಂಬಿತ್ತು.

ಪುಲಿಕೇಶಿಯನ್ನು ಸೆರೆ ಹಿಡಿಯಲು ಅವನು ಮಲಗಿದ್ದ ಹಾಸಿಗೆಯ ಬಳಿ ಬಂದನು. ಹಾಸಿಗೆಯ ಮೇಲೆ ಶಾಂತವಾಗಿ ಮಲಗಿದ್ದ ಪುಲಿಕೇಶಿಯೇ ಕಣ್ಣಿಗೆ ಬಿದ್ದನು. ಆದರೆ ಅವನು ಅಲ್ಲಿಗೆ ಬರುವುದರೊಳಗಾಗಿ ಪುಲಿಕೇಶಿಯು ಅವನ ಕೈಗೆ ಸಿಕ್ಕದಂತೆ, ಪಾರಾಗಿ ಹೋಗಿದ್ದನು. ಅವನು ನರಸಿಂಹವರ್ಮನಿಂದ ಸ್ಪರ್ಶಿಸಲು ಸಾಧ್ಯವಿಲ್ಲದ ಲೋಕಕ್ಕೆ ಹೋಗಿದ್ದನು!

## ೩೦

ವಾತಾಪಿ ತನ್ನ ವಶವಾದ ಮೇಲೆ ನರಸಿಂಹವರ್ಮನು ತನ್ನ ತಂದೆ ಮಹೇಂದ್ರವರ್ಮನಿಗೆ ಕೊಟ್ಟಿದ್ದ ವಚನವನ್ನು ಅಕ್ಷರಶಃ ಪಾಲಿಸಲು ಕಂಕಣ ತೊಟ್ಟನು. ಅವನು ಕಾಂಚಿಯನ್ನು ಸುಟ್ಟು ನಾಶಪಡಿಸಿದ ಚಾಲುಕ್ಯರ ರಾಜಧಾನಿ ವಾತಾಪಿಯನ್ನು ನಿಷ್ಕರುಣೆಯಿಂದ ಸುಟ್ಟು ಹಾಳುಗೆಡಹಿದನು. ಅಲ್ಲಿನ

ಜನರನ್ನು ಅಪರಾಧಿಗಳು—ನಿರಪರಾಧಿಗಳೆನ್ನದೆ ಖಡ್ಗಕ್ಕೆ ಬಲಿಕೊಟ್ಟನು. ಕೈಗೆ ಸಿಕ್ಕಿದ ಬೆಲೆಬಾಳುವ ವಸ್ತುಗಳನ್ನು ಸೂರೆಮಾಡಿದನು. ವಾತಾಪಿಯನ್ನು ನೆಲಸಮಗೊಳಿಸಿ ಮಸಣಮಾಡಿ, ತನ್ನ ರಾಜಧಾನಿಗೆ ಹಿಂತಿರುಗಿದನು.

ಅವನು ಹಿಂತಿರುಗಲು ಸೈನ್ಯಕ್ಕೆ ಬೇಕಾಗುವ ನೀರು ದೊರೆಯದೆ ಹೋಗಿತ್ತು. ಊರಿನಲ್ಲಿದ್ದ ಹೊಂಡವನ್ನು ಶತ್ರುಗಳಿಗೆ ಪ್ರಯೋಜನಕ್ಕೆ ಬಾರದಂತೆ ಮಾಡಲು ಯಾರೋ ಅದಕ್ಕೆ ವಿಷವನ್ನು ಬೆರೆಸಿದ್ದರು. ಪುಲಿಕೇಶಿಯ ಪೂರ್ವಜರು ಜತನದಿಂದ ಕಾಯ್ದಿರಿಸಿದ್ದ ಬೆಲೆಬಾಳುವ ಸಂಪತ್ತು, ದೊರೆಯದೆ ಹೋಗಿತ್ತು, ಪುಲಿಕೇಶಿಯೂ ದೊರೆಯದೆ ಹೋಗಿದ್ದನು.

ಇದು ನರಸಿಂಹವರ್ಮನಿಗೆ ಭಾರಿ ಸೋಲಾಗಿತ್ತು. ಅವನು ನಿಧಿಗಾಗಿ ಶೋಧಿಸಿ ವಿಫಲನಾಗಿ ಕಾಂಚಿಗೆ ಹಿಂದಿರುಗಬೇಕಾಯಿತು.

ನರಸಿಂಹವರ್ಮನು ಚಾಲುಕ್ಯಸೇನೆಯನ್ನು ಸೋಲಿಸಿ ಅದರ ರಾಜಧಾನಿಯನ್ನು ಮಸಣಗೊಳಿಸಿ ಕಾಂಚಿಗೆ ಹಿಂದಿರುಗಿದ ಸಮಯದಲ್ಲಿ ವಿಕ್ರಮಾದಿತ್ಯನು ಆದಿತ್ಯವರ್ಮನನ್ನು ಕೂಡಿಕೊಳ್ಳಲು ನೊಳಂಬವಾಡಿಗೆ ಹೊರಟಿದ್ದನು!

ನೊಳಂಬವಾಡಿಯಲ್ಲಿ ಅವನಿಗೆ ಸೋತ ದಳಪತಿಗೆ ದೊರೆಯಬಹುದಾದ ನಿರುತ್ಸಾಹದ ಸ್ವಾಗತವೇ ದೊರೆಯಿತು. ಅವನು ಅರಮನೆಗೆ ಹೋಗಿ ಸಹೋದರ ಆದಿತ್ಯವರ್ಮನನ್ನು ಕಂಡು, ತನಗಾದ ಸೋಲು ಅಪಮಾನಗಳ ಕಥೆಯನ್ನು ಸವಿಸ್ತಾರವಾಗಿ ತಿಳಿಸಿದನು. ಇದಕ್ಕೆ ಆದಿತ್ಯವರ್ಮನ ಅನಾದರವೇ ಮೂಲ ಕಾರಣವೆಂದು ಆಕ್ಷೇಪಿಸಿದನು.

ಈ ಮಾತು ಕೇಳಿ ಆದಿತ್ಯವರ್ಮನು ಸಿಟ್ಟಿನಿಂದ ಕೆರಳಿದನು:

"ವಿಕ್ರಮಾದಿತ್ಯ, ನೀನು ಯಾರೊಡನೆ ಮಾತನಾಡುತ್ತಿರುವೆ—ಏನು ಮಾತನಾಡುತ್ತಿರುವೆ ಎಂಬುದರ ಮೇಲೆ ಗಮನವಿರಲಿ. ನೀನು ಒಬ್ಬನೇ ಅಸಹಾಯಶೂರನೆಂದು ಹೇಳಿಕೊಂಡು ನಮ್ಮನ್ನೆಲ್ಲಾ ತಿರಸ್ಕರಿಸಿ, ಪಲ್ಲವರ ಮೇಲೆ ದಂಡೆತ್ತಿ ಹೋದುದಕ್ಕೆ ಸರಿಯಾದ ಶಿಕ್ಷೆಯಾಯಿತು. ಈಗ ನಿನ್ನ ದುಡುಕಿನ ಪ್ರತ್ಯಕ್ಷಫಲವನ್ನು ಅನುಭವಿಸುವುದನ್ನು ಬಿಟ್ಟು ನಮ್ಮನ್ನು ಅಕಾರಣವಾಗಿ ನಿಂದಿಸುವೆಯಾ?"

"ಏನು? ನಾನು ವೃಥಾ ದುಡುಕಿ ಸರ್ವನಾಶವನ್ನು ತಂದುಕೊಂಡೆನೆ?" ವಿಕ್ರಮಾದಿತ್ಯ ಆತಂಕದಿಂದ ಕೇಳಿದ.

"ಹೌದು, ನೀನು ನಮ್ಮ ಸಲಹೆಯನ್ನು ಕೇಳದೆ, ಸ್ವತಂತ್ರವಹಿಸಿ, ಪಲ್ಲವರ ಮೇಲೆ ದಾಳಿ ಇಟ್ಟೆ. ಆದರೆ ಪೆರಿಯಾಳದ ಯುದ್ಧದಲ್ಲಿ ಸೋಲಾಗಲು ನಮ್ಮ ನೆರವನ್ನೂ ಯಾಚಿಸಿ ಪತ್ರ ಬರೆದೆ. ನಿನ್ನಂತಹ ಸ್ವಾರ್ಥಸಾಧಕನಿಗೆ ರಾಜದ್ರೋಹಿಗೆ ನಾವು ನೆರವೀಯುವುದೆ ? ಬೇಕೆಂದೇ ನಿನಗೆ ನಾವು ನೆರವು ಕೊಡಲಿಲ್ಲ. ನಿನ್ನ ಅಹಂಕಾರಕ್ಕೆ, ಸಿಂಹಾಸನವನ್ನು ಕಬಳಿಸಲು ಮಾಡಿದ ತಂತ್ರಕ್ಕೆ ಪಲ್ಲವರಿಂದ ತಕ್ಕ ಶಾಸ್ತಿಯಾಗಲೆಂದೇ ನಾವು ನಿನಗೆ ನೆರವೀಯಲಿಲ್ಲ. ಈಗಲಾದರೂ ತಿಳಿಯಿತೆ ?" ಕರ್ಕಶನಾಗಿ, ವ್ಯಂಗ್ಯ ತುಳುಕುವ ಧ್ವನಿಯಲ್ಲಿ ಹೇಳಿದನು.

ಈ ಮಾತು ಕೇಳಿ, ವಿಕ್ರಮಾದಿತ್ಯನಿಗೆ ಶಲ್ಯ ಇರಿದಂತೆ ಆಯಿತು. ಅವನು ಯಾತನೆಯ ದನಿಯಲ್ಲಿ ಹೇಳಿದನು:

"ಅಯ್ಯೋ ಅಣ್ಣಾಜಿ, ನೀವು ನನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಎಂತಹ ಕೆಲಸಮಾಡಿಬಿಟ್ಟಿರಿ ! ನಾನು ಎಂದಿಗೂ ನಿಮಗೆ ದ್ರೋಹ ಚಿಂತಿಸಿದವನಲ್ಲ, ಕನಸುಮನಸಿನಲ್ಲೂ ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಯೋಚಿಸಿದವನಲ್ಲ. ನನ್ನ ವಿಷಯದಲ್ಲಿ ಸ್ವಾರ್ಥಿಗಳ ಮಾತು ಕೇಳಿಕೊಂಡು ಅನ್ಯಾಯವಾಗಿ ಬೆನ್ನಿನಲ್ಲಿ ಇರಿದಿರಾ ? ಅಯ್ಯೋ, ತಪ್ಪು ಕಲ್ಪನೆಯಿಂದ ಎಂತಹ ಪ್ರಮಾದವಾಯಿತು!" ಎಂದು ಉದ್ಗಾರ ತೆಗೆದನು ವಿಕ್ರಮಾದಿತ್ಯ.

"ಹಾಗಾದರೆ ನೀನು ರಾಜ್ಯದಾಹದಿಂದ ಸಾಮ್ರಾಜ್ಯವನ್ನು ಕಬಳಿಸಲು ಯೋಚಿಸಿ, ರಾಜಧಾನಿಯಲ್ಲಿ ಉಳಿದುದು ಸುಳ್ಳೆ ?"

"ಸುಳ್ಳು."

"ನೀನು ಸಮಂತಭದ್ರ ಮತ್ತಿತರ ಸ್ವಾಮಿನಿಷ್ಠ ಸೇವಕರ ಬೆಂಬಲದಿಂದ ನನಗೆ ಸಲ್ಲಬೇಕಾಗಿದ್ದ ಸಿಂಹಾಸನವನ್ನು ಏರಲು ಪ್ರಯತ್ನಿಸಿದುದು ಸುಳ್ಳೆ ?"

"ಸುಳ್ಳು—ಮಕುಟೇಶ್ವರನ ಆಣೆಗೂ ಸುಳ್ಳು ! ನನಗಾಗದ ದ್ರೋಹಿಗಳು ಈ ತಪ್ಪು ಕಲ್ಪನೆ ಬರುವಂತೆ, ನಿಮ್ಮ ಮನಸ್ಸನ್ನು ಕೆಡಿಸಿದ್ದಾರೆ."

"ಹಾಗಾದರೆ ನಮ್ಮೆಲ್ಲರನ್ನೂ ಬಿಟ್ಟು ಸಾಮ್ರಾಟರು ನಿನ್ನನ್ನೇಕೆ ರಾಜಧಾನಿಯಲ್ಲಿ ಇರಿಸಿಕೊಂಡರು ?"

"ರಾಜ್ಯಾಡಳಿತದಲ್ಲಿ ಸಾಮ್ರಾಟರಿಗೆ ನೆರವಾಗಲು ನನ್ನನ್ನು ಸಾಮ್ರಾಟರು

ತಮ್ಮ ಬಳಿ ಇಟ್ಟುಕೊಂಡರು. ಇದರಲ್ಲಿ ಯಾವ ಸ್ವಾರ್ಥವಿಚಾರವೂ ಇಲ್ಲ."

"ಹಾಗಾದರೆ ಅವರು ನಿನಗೇಕೆ ಪಲ್ಲವರ ಮೇಲೆ ದಂಡೆತ್ತಿ ಹೋಗಲು ಅಧಿಕಾರ ಕೊಟ್ಟರು ? ನಿನ್ನನ್ನೇಕೆ ಸೈನ್ಯಗಳಿಗೆ ಮಹಾದಂಡನಾಯಕರನ್ನಾಗಿ ಮಾಡಿದರು ?"

"ನನಗೆ ರಣರಂಗದಲ್ಲಿ ಭಾಗವಹಿಸಿ ಪರಿಶ್ರಮವಿದ್ದುದರಿಂದ ಹೀಗೆ ಮಾಡಿರಬಹುದು."

"ಹಾಗಿದ್ದರೆ ನಮಗೂ ಯುದ್ಧದಲ್ಲಿ ಭಾಗವಹಿಸುವ ಸದವಕಾಶಕೊಡ ಬಹುದಿತ್ತಲ್ಲ—ಏಕೆ ಈ ಬಗ್ಗೆ ನಿಷ್ಠುರರಾಗಿ ವರ್ತಿಸಿದರು ?"

"ಸೈನಿಕರು ನನ್ನ ವಿಷಯದಲ್ಲಿ ಮೊದಲಿನಿಂದಲೂ ಅಭಿಮಾನ ತಳೆ ದಿದ್ದರು. ಅವರನ್ನು ಮುನ್ನಡೆಸಲು ನಾನೇ ಸಮರ್ಥನೆಂದು ಪೂಜ್ಯಪಾದರು ಯೋಚಿಸಿ ನನಗೆ ದಂಡನಾಯಕ ಪದವಿಯನ್ನು ಅನುಗ್ರಹಿಸಿರಬಹುದು."

"ನೀನು ಸೈನ್ಯದ ಮುಖಂಡನಾದರೆ, ನಿನ್ನ ಕೈಯಲ್ಲಿ ಸಿಂಹಾಸನ ಭದ್ರ ವಾಗಬಹುದೆಂದು ಸಾಮ್ರಾಟರು ಯೋಚಿಸಿದ್ದಿರಬಾರದೇಕೆ ?"

"ಅಂತಹ ಹೇಯ ಆಸೆ ಅವರಿಗೆ ಖಂಡಿತ ಇರಲಿಲ್ಲ. ಇದ್ದಿದ್ದರೆ ನನ್ನನ್ನು ರಾಜಧಾನಿ ಬಿಟ್ಟು ಕಳುಹಿಸುತ್ತಿರಲಿಲ್ಲ—ಅಪಾಯದಿಂದ ತುಂಬಿದ್ದ ರಣರಂಗಕ್ಕೆ ಕಳುಹಿಸುತ್ತಿರಲಿಲ್ಲ."

"ಪ್ರಭುಗಳು ಅಷ್ಟು ನಿಷ್ಪಕ್ಷಪಾತರಾಗಿದ್ದರೆ ಅವರೇಕೆ ನನಗೆ ಯುವರಾಜ ಪದವಿಯನ್ನು ಕೊಡಲು ನಿರಾಕರಿಸಿದರು ?"

"ಅವರು ಅದಕ್ಕೆಂದಿಗೂ ಹಿಂಜರಿಯಲಿಲ್ಲ. ಪವಿತ್ರವಾದ ಸಿಂಹಾಸನ ಎಂದಿದ್ದರೂ ಅದು ಜ್ಯೇಷ್ಠ ಸಂತತಿಗೆ ಸೇರತಕ್ಕದೆಂಬುದು ಅವರಿಗೂ ಚೆನ್ನಾಗಿ ತಿಳಿದಿತ್ತು. ಅವರೆಂದೂ ಕ್ರಮವಿಪರ್ಯ ಮಾಡಲು ಪ್ರಯತ್ನಿಸಲಿಲ್ಲ—ಇದಕ್ಕಾಗಿ ಸಾಮ್ರಾಜ್ಯವನ್ನು ಬಲಿಗೊಡುವುದು ತಪ್ಪು. ಇದು ಅಕ್ಷಮ್ಯ ಅಪರಾಧ."

"ನಮ್ಮ ಅಪರಾಧದ ಆರೋಪಣೆ ಅನಂತರ ಸಾಗಲಿ. ನಮಗೆ ನ್ಯಾಯ ವಾಗಿ ದೊರೆಯಬೇಕಾಗಿದ್ದ ಸಿಂಹಾಸನವನ್ನು ದೊರಕಿಸಿಕೊಡಲು ಪ್ರಭುಗಳೇಕೆ ನನ್ನನ್ನು ಯುವರಾಜ ಪದವಿಗೇರಿಸಲಿಲ್ಲ. ಈ ಬಗ್ಗೆ ಅಮಾತ್ಯರ ಅಭಿಪ್ರಾಯ ದಂತೆ ನಡೆಯಬೇಕಾಗುವುದೆಂದು ಏಕೆ ಹೇಳಿದರು ? ಇದರಲ್ಲಿ ಸ್ವಾರ್ಥ ವಿರಲಿಲ್ಲವೆ ?"

"ಖಂಡಿತವಾಗಿಯೂ ಇಲ್ಲ–ನನ್ನ ಮಾತು ಶ್ರೀ ಮಕುಟೇಶ್ವರನ ಆಣೆಗೂ ಸತ್ಯ" ಎಂದು ಹೇಳಿ ಆ ದಿನ ತನಗೂ ಪುಲಿಕೇಶಿಗೂ ನಡೆದಿದ್ದ ಅಂತರಂಗದ ಸಂಭಾಷಣೆಯನ್ನು ಸವಿಸ್ತಾರವಾಗಿ ವರ್ಣಿಸಿದ. ಇದನ್ನು ಕೇಳಿ ಆದಿತ್ಯವರ್ಮ ಮುಂತಾದ ಸೋದರರು ಮಾತಿಲ್ಲದೆ ಕುಳಿತರು.

"ಹಾಗಾದರೆ ನಮಗೆ ರಾಹಪ್ಪಯ್ಯ ಹೇಳಿದ-ಸಂಗತಿ ಸುಳ್ಳೆ ?"

"ಯಾರು ? ರಾಹಪ್ಪಯ್ಯ ! ಆ ದ್ರೋಹಿ–ನೀಚ ರಾಹಪ್ಪಯ್ಯ ನಿಮಗೆ ಹಾಗೆ ತಿಳಿಸಿದನೆ ? ದೈವಸದೃಶರಾದ ಪ್ರಭುಗಳ ವಿಷಯದಲ್ಲಿ ತಪ್ಪು ತಿಳಿಯು ವಂತೆ ಸಂಚು ಮಾಡಿದನೇ ? ಆ ದ್ರೋಹಿ ಎಲ್ಲಿ–ಕರೆಯಿರಿ ಅವನನ್ನು ! ಈ ಮಾತುಗಳು ಸತ್ಯವಾದರೆ, ಅವನು ಹೇಳಿದಂತೆ ನಾನು ನಡೆಯುತ್ತೇನೆ. ಅವು ಸುಳ್ಳಾಗಿದ್ದರೆ—ಆ ಧೂರ್ತನ ಶಿರವನ್ನು ನೆಲಕ್ಕೆ ಉರುಳಿಸುತ್ತೇನೆ" ಎಂದು ವೀರಗರ್ಜನೆ ಮಾಡಿದ ವಿಕ್ರಮಾದಿತ್ಯ.

ಈ ಮಾತು ಕೇಳಿ ಉಳಿದ ಸಹೋದರರಿಗೆ ಇದೆಲ್ಲವೂ ರಾಹಪ್ಪಯ್ಯನ ಪಿತೂರಿ ಎಂದು ತಿಳಿಯಿತು. ಅವರು ಆ ದ್ರೋಹಿಯನ್ನು ಸಮ್ಮುಖಕ್ಕೆ ಕರೆ ತರಲು ಒತ್ತಾಯ ಮಾಡಿದರು.

"ಅವನು ಮಾತ್ರವಲ್ಲ–ಅವನ ಜೊತೆಯಲ್ಲಿ ಚಂದ್ರೋಜನೂ ಇದ್ದಾನೆ."

"ಹಾಗಿದ್ದರೆ, ಅವರಿಬ್ಬರೂ ನಿಮಗೆ ಸುಳ್ಳು ಹೇಳಿದ್ದಾರೆ. ಅವರನ್ನು ಇಲ್ಲಿಗೆ ಕರೆಸುವ ಕೃಪೆಮಾಡಿ, ಸತ್ಯಸಂಗತಿ ಇಲ್ಲೇ ಬಯಲಿಗೆ ಬರಲಿ" ಎಂದು ವಿಕ್ರಮಾದಿತ್ಯ ಒತ್ತಾಯ ಮಾಡಿದ.

ಈ ಮಾತು ಕೇಳಿ ಆದಿತ್ಯವರ್ಮನು, ಸೇವಕನನ್ನು ಕರೆದು "ರಾಹ ಪ್ಪಯ್ಯ ಚಂದ್ರೋಜರನ್ನು ಸಮ್ಮುಖಕ್ಕೆ ಬರಲು ನಾವು ಆಜ್ಞೆ ಮಾಡಿರುವು ದಾಗಿ ತಿಳಿಸಿ ಕರೆದು ತನ್ನಿ" ಎಂದು ಅಪ್ಪಣೆ ಮಾಡಿದ.

"ಅಣ್ಣಾಜಿ, ಅವರೆಂತಹ ಧೂರ್ತರೆಂಬುದು ಈಗ ಪ್ರಕಟವಾಗುತ್ತದೆ. ಅವರು ಸಮ್ಮುಖಕ್ಕೆ ಬರದೆ, ಇಲ್ಲಿಂದ ತಲೆ ತಪ್ಪಿಸಿಕೊಳ್ಳಬಹುದು. ಆದುದ ರಿಂದ ಸೈನಿಕರನ್ನು ಜೊತೆಯಲ್ಲಿ ಕಳುಹಿಸಿಕೊಡಿ. ಆ ನೀಚರು ಈ ಹಿಂದೆ ನಮ್ಮ ಕೈಯಿಂದ ಪಾರಾದಂತೆ ಈಗ ಪಾರಾಗಲು ಅವಕಾಶಕೊಡಬಾರದು. ದ್ರೋಹಿ ಗಳು ಯಾರೇ ಇರಲಿ–ನಾನಾಗಲೀ, ಅವರಾಗಲೀ–ಶಿಕ್ಷೆಯನ್ನು ಅನುಭವಿಸದೆ ಹೋಗಬಾರದು."

ಈ ಮಾತಿಗೆ ಉಳಿದ ಸಹೋದರರು ಸಮ್ಮತಿಸಿದರು.

ಆದಿತ್ಯವರ್ಮನ ಕೋರಿಕೆಯಂತೆ, ಸಹೋದರ ಜಯಸಿಂಹನು ಇಪ್ಪತ್ತು ಮಂದಿ ಶಸ್ತ್ರಸಜ್ಜಿತ ಸೈನಿಕರ ಜೊತೆಯಲ್ಲಿ ರಾಹಪ್ಪಯ್ಯನ ನಿವಾಸಕ್ಕೆ ತೆರಳಿದನು.

ಅವನು ಒಳಗೆ ಹೋಗಿ ನಡೆದ ಸಂಗತಿಯನ್ನು ರಾಹಪ್ಪಯ್ಯನಿಗೆ ತಿಳಿಸುತ್ತಲೇ ಅವನಿಗೆ ಜಂಘಾಬಲ ಉಡುಗಿತು. ಅವನ ಮುಖ ಬಿಳಿಚಿಕೊಂಡಿತು. ಅವನು ತೊದಲುತ್ತ "ನಾವು ನಿರಪರಾಧಿಗಳು" ಎಂದು ಹೇಳಿದನು.

"ಅದರ ವಿಚಾರಣೆ, ಅಣ್ಣಾಜಿಯವರ ಸಮ್ಮುಖದಲ್ಲಿ ನಡೆಯಲಿ."

"ನಮ್ಮನ್ನು ವಿಚಾರಣೆಗೆ ಗುರಿಪಡಿಸಲು ಅವರಿಗೆ ಅಧಿಕಾರವೇನು ?"

"ಅದನ್ನು ಅಲ್ಲಿಗೆ ಬಂದಾಗ ಪ್ರಶ್ನಿಸಿರಿ."

"ನಾವು ಅಲ್ಲಿಗೆ ಬರಬೇಕಾದ ಪ್ರಮೇಯವಿಲ್ಲ–ಬರುವುದಿಲ್ಲ."

"ನಾವು ಒತ್ತಾಯಮಾಡಿ ಕರೆದೊಯ್ಯಬೇಕಾಗುತ್ತದೆ."

"ಏಕೆ ? ಅಂತಹ ಅಪರಾಧ ನಮ್ಮಿಂದ ಏನು ಘಟಿಸಿದೆ ?"

"ಅದನ್ನು ವಿಕ್ರಮಾದಿತ್ಯರನ್ನು ಕೇಳಿ."

"ಅವರನ್ನು ಕೇಳಲು ಅವರು ಯಾರು ? ನಾವು ಅವರ ಪ್ರಜೆಗಳಲ್ಲ— ನಮ್ಮ ಮೇಲೆ ಯಾರಿಗಾದರೂ ಅಧಿಕಾರವಿದ್ದರೆ ಅದು ಆದಿತ್ಯವರ್ಮರಿಗೆ ಮಾತ್ರ. ನಾವು ಯಾರಿಗೂ ತಲೆ ಬಾಗುವುದಿಲ್ಲ."

"ಅವರೇ ಈ ಆಜ್ಞೆ ಮಾಡಿರುವುದು."

"ಹಾಗಾದರೆ, ಅವರಿಗೂ ನಮ್ಮ ನಿಷ್ಠೆಯ ಬಗ್ಗೆ ಸಂದೇಹ ಬಂದಿದೆಯೇ?"

"ಅದು ನನಗೆ ತಿಳಿಯದು !"

"ಹಾಗಿದ್ದರೆ ನಾವು ಬರುತ್ತೇವೆ. ನಮಗೆ ಯಾವ ಹೆದರಿಕೆಯೂ ಇಲ್ಲ. ತಪ್ಪುಮಾಡಿದ್ದರೆ ಹೆದರಬೇಕು. ನಿರಪರಾಧಿಗಳಾದ ನಾವು ಏಕೆ ಹೆದರಬೇಕು?" ಎಂದು ಚಣಕಾಲ ಮೌನವಾಗಿ ಕುಳಿತ ರಾಹಪ್ಪಯ್ಯ.

"ಹಾಗಿದ್ದರೆ, ಹೊರಡಲು ಸಿದ್ಧರಾಗಿ ಏಳಿ ! ನಿಮ್ಮ ಆಗಮನವನ್ನು ಎಲ್ಲರೂ ಎದುರುನೋಡುತ್ತಿದ್ದಾರೆ !"

"ಎಲ್ಲರೂ ಅಂದರೆ ಯಾರು ಯಾರು ?"

"ವಿಕ್ರಮಾದಿತ್ಯ, ಅಣ್ಣಾಜಿಯವರು, ಚಂದ್ರಾದಿತ್ಯರು..."

"ಹಾಗಿದ್ದರೆ ಅವರನ್ನೆಲ್ಲಾ ಆ ಧೂರ್ತ ವಿಕ್ರಮಾದಿತ್ಯನು ತನ್ನ ಕಡೆಗೆ ಒಲಿಸಿಕೊಂಡಿದ್ದಾನೆಯೇ ?" ಎನ್ನುವ ಉದ್ಗಾರ ಹೊರಬಿತ್ತು.

"ಅದು ನನಗೆ ತಿಳಿಯದು."

"ನಾನು ಸಿದ್ಧವಾಗಿ ಬರುತ್ತೇನೆ. ನೀವು ಹೋಗಿ."

"ಜೊತೆಯಲ್ಲಿ ಕರೆತರಬೇಕೆಂದು ಅಣ್ಣಾಜಿಯವರ ಆಜ್ಞೆಯಾಗಿದೆ."

ಈ ಮಾತು ಕೇಳಿ ಅವನಿಗೆ ನೊಣ ಕಡಿದಂತೆ ಆಯಿತು. ಅವನು ವಿಕ್ರಮಾದಿತ್ಯನ ಎದುರಿಗೆ ಬಂದರೆ ತನ್ನ ವಿದ್ರೋಹ ಬಯಲಾಗುವುದೆಂದು ಹೆದರಿದನು. ಹೇಗಾದರೂ ಮಾಡಿ ಅಲ್ಲಿಂದ ತಪ್ಪಿಸಿಕೊಳ್ಳಬೇಕೆಂದು ಆಲೋಚಿಸಿದನು. ಬಟ್ಟೆ ಬದಲಾಯಿಸುವ ನೆಪದಲ್ಲಿ ಒಳಗೆ ಹೋಗಿ, ಹಿತ್ತಲಿನಿಂದ ಪಾರಾಗಲು ನೋಡಿದನು.

ಆದರೆ ಅವನ ಆಶ್ಚರ್ಯಕ್ಕೆ ತನ್ನ ಮನೆಯನ್ನು ಶಸ್ತ್ರಸಜ್ಜಿತ ಸೈನಿಕರು ಕಾಯುತ್ತಿರುವುದು ಗೋಚರಿಸಿತು. ಅವನಿಗೆ ಈಗ ನಿಜಕ್ಕೂ ಹೆದರಿಕೆಯಾಯಿತು. ಈಗ ಏನು ಮಾಡಲೂ ದಿಕ್ಕುತೋರದೆ ಚಣಕಾಲ ಯೋಚಿಸುತ್ತಾ ಕುಳಿತನು. ತನ್ನ ವಿದ್ರೋಹ ಬಯಲಾಗಲು ಅವಕಾಶ ಕೊಡಬಾರದು ಎಂದುಕೊಳ್ಳುತ್ತಾ ಅಲ್ಲಿಂದ ಎದ್ದನು.

ಅನಂತರ ರಾಹಪ್ಪಯ್ಯನು ಚಂದ್ರೋಜನನ್ನು ಕರೆದು, ಅವನಿಗೆ ನಡೆದಿರುವ ಸಂಗತಿಯನ್ನೆಲ್ಲಾ ತಿಳಿಸಿದನು.

"ಇದಕ್ಕೆಲ್ಲಾ ನಾವು ಹೆದರುವುದೇ" ಎಂದು ಅವನು ಅಪಾಯದ ಕಲ್ಪನೆ ಇಲ್ಲದೆ ಉದ್ಗಾರ ತೆಗೆದ.

"ನಮ್ಮ ವಿದ್ರೋಹ ಬಯಲಾದರೆ ಆ ಧೂರ್ತ ವಿಕ್ರಮಾದಿತ್ಯನು ನಮ್ಮನ್ನು ಕೊಲ್ಲಲು ಹಿಂಜರಿಯುವುದಿಲ್ಲ. ಅವನ ಕೈಗೆ ಸಿಕ್ಕಿದರೆ, ವೃಥಾ ಅಪಮಾನ ಜೊತೆಗೆ ಸಾವು."

"ಈ ವಿದ್ರೋಹ ತಿಳಿದಿರುವುದು ನಮ್ಮಿಬ್ಬರಿಗೆ ಮಾತ್ರ. ಇದರಲ್ಲಿ ನಿಮ್ಮದೇ ಮುಖ್ಯಪಾತ್ರ ! ತಾವು ಹೋಗಿಬನ್ನಿ. ನಾನು ಹಿಂದೆ ಉಳಿದು ನಿಮ್ಮ ರಕ್ಷಣೆಯ ಪ್ರಯತ್ನ ಮಾಡುತ್ತೇನೆ."

"ನನ್ನ ರಕ್ಷಣೆಯ ಪ್ರಯತ್ನವೋ? ನಿನ್ನ ಆತ್ಮರಕ್ಷಣೆಯ ಪ್ರಯತ್ನವೋ ?" ರಾಹಪ್ಪಯ್ಯ ಸಂದೇಹಿಸುತ್ತಾ ಕೇಳಿದ.

ಈ ಮಾತು ಕೇಳಿ ಚಂದ್ರೋಜನ ಮುಖ ಬಿಳಿಚಿತು. ಅವನು ಪ್ರೇತ ಕಂಡಂತೆ ಹೆದರಿದ.

"ಅದು ಸಾಧ್ಯವಿಲ್ಲ—ನಾವಿಬ್ಬರೂ ದ್ರೋಹಚಿಂತನೆಯಲ್ಲಿ ಸಮಭಾಗಿಗಳು. ಉಳಿದರೆ ಇಬ್ಬರೂ ಉಳಿಯಬೇಕು—ಇಲ್ಲವೇ ಇಬ್ಬರೂ ಅಳಿಯಬೇಕು!" ಎಂದ ನಿಷ್ಠುರವಾಗಿ ರಾಹಪ್ಪಯ್ಯ.

"ನಾನು ನಿರಪರಾಧಿ—ಈ ವಿದ್ರೋಹದಲ್ಲಿ ನನ್ನ ಪಾಲು ಅಲ್ಪ."

ಈ ಮಾತು ಕೇಳಿ ರಾಹಪ್ಪಯ್ಯನು ತೀಕ್ಷ್ಣವಾಗಿ ಚಂದ್ರೋಜನ ಮುಖ ನೋಡಿದ. ಮರುಕ್ಷಣದಲ್ಲಿ ಏನನ್ನೋ ನೆನೆದು,

"ಹಾಗೇ ಮಾಡುವೆಯಂತೆ; ಈಗ ಜೊತೆಗೆ ನಡೆ" ಎಂದು ಹೇಳಿ ಅವನನ್ನು ಹೊರಗೆ ಕರೆದ. ಅವನು ಬರುತ್ತಲೂ ಅವನ ಮೇಲೆ ಹುಲಿಯಂತೆ ಬಿದ್ದು, ಸೊಂಟದಲ್ಲಿದ್ದ ಕಠಾರಿಯನ್ನು ಕೈಗೆ ತೆಗೆದುಕೊಂಡು "ದ್ರೋಹಿ! ನನ್ನನ್ನು ಹಿಡಿದುಕೊಟ್ಟು ನೀನೊಬ್ಬನೇ ಪಾರಾಗಲು ಯೋಚಿಸಿದೆಯಾ?" ಎಂದೆನ್ನುತ್ತಾ, ಕಠಾರಿಯನ್ನು ಬಲವಾಗಿ ಎದೆಗೆ ತಿವಿದನು.

ಚಂದ್ರೋಜನು "ಅಯ್ಯೋ, ಸತ್ತೆ!" ಎಂದು ಚೀರುತ್ತಾ, ರಕ್ತ ಕಾರಿ ನೆಲಕ್ಕೆ ಬಿದ್ದನು; ರಕ್ತದ ಮಡುವಿನಲ್ಲಿ ಹೊರಳಿ, ಸಂಕಟದಿಂದ ಚೀರಿ ಪ್ರಾಣ ಬಿಟ್ಟನು.

ಅವನು ಸತ್ತಮೇಲೆ, ರಾಹಪ್ಪಯ್ಯನು ರಕ್ತಸಿಕ್ತವಾದ ಕೈತೊಳೆದುಕೊಂಡು, ಅಲ್ಲಿಂದ ಎದ್ದು ತನ್ನ ಶಯನಾಗಾರಕ್ಕೆ ಬಂದನು. ಅಲ್ಲಿ ಆಪತ್ಕಾಲದಲ್ಲಿ ಉಪಯೋಗಕ್ಕೆ ಇರಲೆಂದು ಬಹಳ ಜತನದಿಂದ ಕಾಪಾಡಿಕೊಂಡು ಬಂದಿದ್ದ ವಿಷವನ್ನು ಭರಣಿಯಿಂದ ಹೊರತೆಗೆದನು. ನೀರಿದ್ದ ಪಾತ್ರೆಗೆ ಅದನ್ನು ಹಾಕಿ ಚೆನ್ನಾಗಿ ಕಲಕಿ, ಹಿಂದುಮುಂದೆ ನೋಡದೆ, ಗಟಗಟನೆ ಕುಡಿದು, ತೂರಾಡುತ್ತ ಬಂದು ಹಾಸಿಗೆಯಮೇಲೆ ಬಿದ್ದುಕೊಂಡನು.

"ಅಯ್ಯೋ, ನೋವು, ಚಂಡಾಲ ಪುಲಿಕೇಶಿ, ನಿನಗೆ ಇದೀಗ ತೃಪ್ತಿಯಾಯಿತೇ? ಮಂಗಳೇಶ ಪ್ರಭು! ನಿಮಗೆ ನಾನು ದ್ರೋಹ ಬಗೆದೆ ನಿಮಗೆ ಕೊಟ್ಟಿದ್ದ ವಚನ ಪಾಲಿಸಲು ಅಸಮರ್ಥನಾದೆ. ನನ್ನ ಅಪರಾಧವನ್ನು ಕ್ಷಮಿಸಿ. ಇಗೋ ನಿಮ್ಮ ಬಳಿಗೆ ಬಂದೆ....ಅಯ್ಯೋ ನೋವು" ಎಂದು ಚೀರಿ ಪ್ರಾಣ ಬಿಟ್ಟನು.

ರಾಹಪ್ಪಯ್ಯನ ಚೀತ್ಕಾರ ಕೇಳಿ ಕೆಳಗಿದ್ದ ಜಯಸಿಂಹ ಗಾಬರಿಯಿಂದ ಓಡಿಬಂದನು. ಉಪ್ಪರಿಗೆಯ ದಾರಿಯಲ್ಲೇ ಚಂದ್ರೋಜನು ರಕ್ತದ ಮಡುವಿನಲ್ಲಿ ಸತ್ತು ಬಿದ್ದಿದ್ದನು. ಅದಕ್ಕೆ ಸಮೀಪದಲ್ಲಿ ಶಯ್ಯಾಗಾರದಲ್ಲಿ ರಾಹಪ್ಪಯ್ಯನು ಸತ್ತು ಬಿದ್ದಿದ್ದನು. ಅವನ ಬಳಿಗೆ ಬಂದು ಜಯಸಿಂಹನು ನಿಂತುಕೊಂಡನು. ಅವನಿಗೆ ನಡೆದಿರುವ ಹತ್ಯಾಕಾಂಡವೇನೆಂದು ತಿಳಿದುಹೋಯಿತು. ಆದಿತ್ಯ ವರ್ಮನ ಎದುರಿಗೆ ಬಂದರೆ ತಮ್ಮ ವಿದ್ರೋಹ ಬಯಲಾಗುವುದೆಂದು ಹೆದರಿ, ದ್ರೋಹಿ ರಾಹಪ್ಪಯ್ಯನು ಚಂದ್ರೋಜನನ್ನು ಕೊಂದು, ತಾನೂ ಆತ್ಮಹತ್ಯೆ ಮಾಡಿಕೊಂಡಿದ್ದನು.

ಓಡಿಬಂದು ಈ ಸಂಗತಿಯನ್ನು ಜಯಸಿಂಹನು ಆದಿತ್ಯವರ್ಮನಿಗೆ ತಿಳಿಸಿದಾಗ, ವಿಕ್ರಮಾದಿತ್ಯನು "ಅಣ್ಣಾಜಿ, ಈಗಲಾದರೂ ನಾನು ಹೇಳಿದ ಸಂಗತಿ ಸತ್ಯವೆಂಬುದು ತಿಳಿಯಿತೆ? ಆ ದ್ರೋಹಿ ಇಲ್ಲಿಗೆ ಬರಲು ಮುಖವಿಲ್ಲದೆ ಆತ್ಮ ಹತ್ಯೆ ಮಾಡಿಕೊಂಡನು. ಅವನಿಂದಲೇ ಇಷ್ಟೆಲ್ಲ ವಿದ್ರೋಹಾಚರಣೆಯಾದುದು. ವೃಥಾ ಕಾರಣವಾಗಿ ಅವನ ಮಾತನ್ನು ನಿಜವೆಂದು ನಂಬಿ, ನೀವು ನನಗೆ ಮಾತ್ರವಲ್ಲ, ತಾಯ್ನಾಡಿಗೂ ದ್ರೋಹ ಬಗೆದಿರಿ" ಎಂದು ದುಗುಡದಿಂದ ಹೇಳಿದನು.

ಈ ಮಾತಿಗೆ ಆದಿತ್ಯವರ್ಮನು ಅಪರಾಧಿಯ ಮುಖಹೊತ್ತು ತಲೆ ತಗ್ಗಿಸಿದನು.

"ಅಣ್ಣಾಜಿ, ಈಗ ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ. ಆದುದು ಆಗಿಹೋಯಿತು. ಈಗ ನಾವು ನಮ್ಮ ವೈಮನಸ್ಸನ್ನು ಮರೆತು, ಒಂದು ದೇಹದ ನಾಲ್ಕು ಅಂಗಗಳಂತೆ ಕೂಡಿ ಸಹಕರಿಸಿ ಕೆಲಸ ಮಾಡೋಣ, ಆಗ ನಮ್ಮನ್ನು ಜಯಿಸಲು ಯಾರಿಂದಲೂ ಸಾಧ್ಯವಿಲ್ಲ" ಎಂದು ಹೇಳಿದನು.

ಅಷ್ಟರಲ್ಲಿ ದೂತನೊಬ್ಬನು ಓಡಿಬಂದು ವಿಕ್ರಮಾದಿತ್ಯನ ಕಾಲಿಗೆ ಬಿದ್ದು, ಏದುತ್ತಾ ನಿಂತುಕೊಂಡನು.

"ಏನು ಸಂಗತಿ, ಏಕಿಷ್ಟು ಅವಸರ?"

"ಪ್ರಭು, ಸರ್ವನಾಶವಾಯಿತು. ವಾತಾಪಿಯನ್ನು ಪಲ್ಲವದೊರೆ ನರಸಿಂಹ ವರ್ಮನು ಮುತ್ತಿ ವಶಪಡಿಸಿಕೊಂಡನು. ಸಮಂತಭದ್ರರು ಹೋರಾಡುತ್ತಾ ಮಡಿದರು."

"ಮಹಾಪ್ರಭುಗಳು ?"

"ಅವರು ವಾತಾಪಿಯ ಪತನ ಕೇಳಿ ಎದೆಯೊಡೆದು ತೀರಿಕೊಂಡರು."

"ಅಯ್ಯೋ ಎಂತಹ ಅನ್ಯಾಯವಾಯಿತು" ಎಂದು ವಿಕ್ರಮಾದಿತ್ಯನು ಚೀರಿ ನೆಲಕ್ಕೆ ಉರುಳಿ ಮೂರ್ಛೆ ಹೋದನು.

ಆದಿತ್ಯವರ್ಮನು ಮಾಡಿದ ಶೈತ್ಯೋಪಚಾರದಿಂದ ಎಚ್ಚತ್ತು, ಸುತ್ತಲೂ ಕಣ್ಣುಬಿಟ್ಟು ನೋಡಿದನು. ಎದುರಿಗೆ ಆದಿತ್ಯವರ್ಮನು ತಲೆತಗ್ಗಿಸಿಕೊಂಡು, ಕಂಬನಿ ಸುರಿಸುತ್ತಾ ಕುಳಿತಿದ್ದನು. ಉಳಿದ ಸಹೋದರರು ವಿಗ್ರಹಗಳಂತೆ ನಿಂತಿದ್ದರು.

"ಅಯ್ಯೋ ಪ್ರಭು, ನಮ್ಮನ್ನು ಕೈಬಿಟ್ಟು ನಡೆಯಲು ನಿಮಗೆ ಹೇಗೆ ಮನಸ್ಸಾಯಿತು" ಎಂದು ಕೋಪದಿಂದ ವಿಕ್ರಮಾದಿತ್ಯ ಒರಲಿದನು.

"ವಿಕ್ರಮಾದಿತ್ಯ, ಪ್ರಭುಗಳ ಅಕಾಲಮರಣಕ್ಕೆ ಕಾರಣ ನಾನು. ನಾನು ಬಗೆದ ದ್ರೋಹಚಿಂತನೆಯ ಫಲ ಇದು. ನನ್ನ ವಿದ್ರೋಹದಿಂದ ದೈವಸಮಾನ ರಾದ ಸಾಮ್ರಾಟರು ಆತ್ಮಾರ್ಪಣೆ ಮಾಡಬೇಕಾಯಿತು" ಎಂದು ಹೇಳಿ ಆದಿತ್ಯ ವರ್ಮ ಸೊಂಟದಲ್ಲಿದ್ದ ಒರೆಯಿಂದ ಕತ್ತಿಯನ್ನು ತೆಗೆದು "ವಿಕ್ರಮಾದಿತ್ಯ, ನನ್ನಂತಹ ದ್ರೋಹಿ ಬದುಕಿರಬಾರದು. ಈ ನೀಚನನ್ನು ತುಂಡರಿಸಿ ಕೆಡಹು, ಈ ನೀಚಬಾಳಿಗೆ ಅದೇ ಶಿಕ್ಷೆ!" ಎಂದು ಉದ್ಗರಿಸಿದನು.

ಈ ಮಾತು ಕೇಳಿ ವಿಕ್ರಮಾದಿತ್ಯನು ವಿಷಣ್ಣನಾಗಿ,

"ಅಣ್ಣಾಜಿ, ಅಂತಹ ಪರಮೇಶ್ವರ ಸದೃಶ ಪ್ರಭುಗಳನ್ನು ಕಳೆದುಕೊಂಡ ನಾವು ನಿಜವಾದ ನಿರ್ಭಾಗ್ಯರು. ಈಗ ಆಗಿಹೋದುದನ್ನು ನೆನೆದು ಚಿಂತಿಸಿ ಫಲವಿಲ್ಲ. ಪೂಜ್ಯಪಾದರು ಆರಂಭಿಸಿದ ಕಾರ್ಯವನ್ನು ಸಂಪೂರ್ಣಗೊಳಿಸು ವುದರಲ್ಲಿ ನಮ್ಮ ಕರ್ತವ್ಯ ಅಡಗಿದೆ. ಅದೇ ಗತಿಸಿದ ಪ್ರಭುಗಳಿಗೆ ನಾವು ಅರ್ಪಿಸಬಹುದಾದ ಶ್ರದ್ಧಾಂಜಲಿ" ಎಂದು ಹೇಳಿ ಅಲ್ಲಿಂದ ಎದ್ದನು.

ಈ ಮಾತನ್ನು ಕಾರ್ಯರೂಪಕ್ಕೆ ತರಲು ಆ ಸಹೋದರರಿಗೆ ಹದಿನಾರು ವರ್ಷಗಳು ಹಿಡಿದವು.

●

# ಪರಿಶಿಷ್ಟಗಳು

## ೧. ರವಿಕೀರ್ತಿಯ ಐಹೊಳೆ ಶಾಸನ

ಐಹೊಳೆ ಅಥವಾ ಅಯ್ಯೊಳೆ ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿರುವ ಒಂದು ಇತಿಹಾಸ ಪ್ರಸಿದ್ಧವಾದ ಸ್ಥಳ. ಇದಕ್ಕೆ ಆರ್ಯಪುರವೆಂಬ ಹೆಸರೂ ಇತ್ತು. [ಆಯ್ + ಪೊಳಲ್=ಅಯ್ಯೊಳಲ್>ಅಯ್ಯೊಳೆ. ಸಂಸ್ಕೃತ ರೂಪ ಆರ್ಯಪುರ] ಇದು ಪುಲಿಕೇಶಿಯ ಕಾಲದಲ್ಲಿ ಒಂದು ಸುಪ್ರಸಿದ್ಧ ವಿದ್ಯಾಕೇಂದ್ರವಾಗಿದ್ದು, ಅಲ್ಲಿ ಚತುರ್ವಿದ್ಯಾ ಪಂಡಿತರಾದ ಐದುನೂರು ವಿದ್ವಾಂಸರು ಇದ್ದರು. ಅದು ನಲಂದ, ತಕ್ಷಶಿಲೆ, ನವದ್ವೀಪಗಳಂತೆ ಕರ್ನಾಟಕದ ಮಹಾ ವಿದ್ಯಾಪೀಠವಾಗಿತ್ತು. ಅಲ್ಲಿನ ಮೇಗುಟಿ ಗುಡ್ಡದಲ್ಲಿ ಇರುವ ರವಿಕೀರ್ತಿಯ ಶಾಸನವು ಅನೇಕ ದೃಷ್ಟಿಗಳಲ್ಲಿ ಮಹತ್ವವಾದುದು. ಅದರಲ್ಲಿ ರವಿಕೀರ್ತಿಯು ಪುಲಿಕೇಶಿಯ ದಿಗ್ವಿಜಯದ ವರ್ಣನೆಯನ್ನು ಮಾಡಿರುವುದಲ್ಲದೆ ಪ್ರಥಮತಃ ಕಾಳಿದಾಸನ ಉಲ್ಲೇಖನಮಾಡಿದ್ದಾನೆ. ಕಾಳಿದಾಸ ಮಹಾಕವಿಯ ಉಲ್ಲೇಖನವುಳ್ಳ ಶಾಸನಗಳಲ್ಲಿ ಇದೇ ಪ್ರಪ್ರಥಮ. ಈ ಬಗ್ಗೆ ಕನ್ನಡಿಗರು ಹೆಮ್ಮೆಪಡಬಹುದಾಗಿದೆ.

ರವಿಕೀರ್ತಿಯ ಶಾಸನದ ಕೆಲವು ಭಾಗ ಹೀಗಿದೆ:

ಜಯತಿ ಭಗವಾಜ್ಜಿನೇನ್ದ್ರೋ ವೀತಜರಾಮರಣ ಜನ್ಮನೋ ಯಸ್ಯ ಜ್ಞಾನ ಸಮುದ್ರಾನ್ತರ್ಗ್ಗ (ತ) ಮಖಿಲ ಜ್ಜಗದನ್ತರೀಪಮಿವ ‖

ತದನು ಚಿರಮಪ್ರ (ಮೇ) ಯಶ್ಚಳುಕ್ಯ ಕುಲವಿಪುಲ ಜಲನಿಧಿರ್ಜಯತಿ ‖

ಪೃಥ್ವೀ ಮೌಲಿಲಲಾಮ್ನಾಂ ಯಃ ಪ್ರಭವತಿ ಪುರುಷರತ್ನಾನಾಂ ‖

...ಶ್ರಿತಕಾಳಿದಾಸ ಭಾರವಿಕೀರ್ತಿಃ ಶ್ರೀಮೂಲವಳ್ಳಿವಳ್ಮ ಮಟ್ಟಿಕವಾಟ ಮಚ್ಚನೂರ್ಗ್ಗ ಪೂರ್ಪ್ಪ ಲಿಗೆಟಿಗಣ್ಡವಗ್ರಾಮಾಂ ಇತಿ ಅಸ್ಯ ಭುಕ್ತಿಃ ‖

ಗಿರೇಸ ಟಾತ್ಪಕ್ಷಿಮಾಭಿಗತ ನಿಮೂವಾರಿಯ್ಯಾವ (ಶ್) ಮಹಾವಥಾನ್ತ ಪುರಸ್ಯಸೀಮಾ ಉತ್ತರತಃ ದಕ್ಷಿಣೋ...

## ೨. ಹ್ಯೂವೆನ್ ತ್ಸಾಂಗನ ಬರೆವಣಿಗೆ

ಪುಲಿಕೇಶಿಯ ಆಳ್ವಿಕೆಯ ಕೊನೆಯಭಾಗದಲ್ಲಿ ಅಂದರೆ ಕ್ರಿ.ಶ. ೬೪೧ರಲ್ಲಿ ಹ್ಯೂವೆನ್ ತ್ಸಾಂಗನೆಂಬ ಬೌದ್ಧ ಯಾತ್ರಿಕನು ಭಾರತಕ್ಕೆ ಭೇಟಿ ಇತ್ತು ಸುಮಾರು ಹದಿನೈದು

ವರ್ಷಗಳವರೆಗೆ ಬುದ್ಧ ಭಗವಾನನ ಜೀವನಕ್ಕೆ ಸಂಬಂಧಿಸಿದ ಸ್ಥಳಗಳನ್ನು ಸಂದರ್ಶಿಸಿದನು. ಆ ಸಂಚಾರದಲ್ಲಿ ಒಮ್ಮೆ ಅವನು ಪುಲಿಕೇಶಿಯು ಬೀಡುಬಿಟ್ಟಿದ್ದ ನಗರಕ್ಕೆ ಕ್ರಿ.ಶ. ೬೪೧ ರಲ್ಲಿ ಬರೆದಿದ್ದನು.* ಇದು ಯಾವ ನಗರವೆಂಬುದು ನಿಶ್ಚಿತವಾಗಿ ತಿಳಿಯದಿದ್ದರೂ, ಪುಲಿಕೇಶಿಯ ರಾಜಧಾನಿಯ ಬಗ್ಗೆ ಸಾಕಷ್ಟು ವಿವರಗಳನ್ನು ತಿಳಿಸಿದ್ದಾನೆ. ಕನ್ನಡನಾಡುನುಡಿ ಜನಗಳ ಬಗೆಗೆ ಅವನು ಬರೆದಿರುವ ಸಂಗತಿಗಳನ್ನು ಇಲ್ಲಿಕೊಟ್ಟಿದೆ.

ಪುಲಿಕೇಶಿಯ ರಾಜ್ಯದ ಸುತ್ತಳತೆಯು ೫೦೦೦ ಲೀ. (೮೩೫ ಮೈಲಿ) ಇರುತ್ತದೆ. ಅದರ ರಾಜಧಾನಿಯು ಪಶ್ಚಿಮದಲ್ಲಿ ಹರಿಯುವ ಒಂದು ನದಿಯ ದಂಡೆಯ ಮೇಲೆ ಇದೆ. ಅದರ ಸುತ್ತಳತೆಯು ೩೦ ಲೀ.

ಭೂಮಿಯು ಸಂಪದ್ಭರಿತವೂ ಫಲವತ್ತಾಗಿಯೂ ಇರುವುದು. ಇದನ್ನು ಪ್ರತಿವರ್ಷವೂ ಬೇಸಾಯಮಾಡಿ ಒಳ್ಳೇ ಬೆಳೆ ಪಡೆಯುತ್ತಾರೆ. ಇಲ್ಲಿನ ಹವೆಯು ತುಂಬಾ ಸೆಕೆಯಿಂದ ಕೂಡಿದೆ.

ಜನರು ಪ್ರಾಮಾಣಿಕರೂ ಸರಳರೂ ಆಗಿದ್ದಾರೆ. ಅವರು ಭೀಮಕಾಯರಾಗಿದ್ದು ಸೇಡು ತೀರಿಸಿಕೊಳ್ಳುವುದರಲ್ಲಿ ಅಗ್ರಗಣ್ಯರು. ಆದರೆ ಉಪಕಾರ ಮಾಡಿದವರಿಗೆ ಅವರು ಕೃತಜ್ಞರಾಗಿರುತ್ತಾರೆ. ಶತ್ರುಗಳ ಪಾಲಿಗೆ ಮಾತ್ರ ಭಯಂಕರವಾಗಿರುತ್ತಾರೆ.

ತಮಗೇನಾದರೂ ಅಪಮಾನವಾದರೆ, ಅಪಮಾನಮಾಡಿದವರನ್ನು ಶಿಕ್ಷಿಸುವುದಕ್ಕೋಸ್ಕರ ಪ್ರಾಣವನ್ನಾದರೂ ಬಲಿಗೊಡಬಲ್ಲರು. ಅಂತೆಯೇ ತೊಂದರೆಯಲ್ಲಿರುವ ಆರ್ತರಿಗೆ ನೆರವು ನೀಡಲು ಯಾವ ಕಾರ್ಯಕ್ಕೂ ಹಿಂದು ಮುಂದೆ ನೋಡುವುದಿಲ್ಲ. ತಮ್ಮ ಹಗೆಗಳ ಮೇಲೆ ಸೇಡು ತೀರಿಸಿಕೊಳ್ಳುವ ಪ್ರಸಂಗ ಬಂದರೆ ಮೊದಲು ಅವರಿಗೆ ತಮ್ಮ ಉದ್ದಿಶ್ಯವನ್ನು ತಿಳಿಸಿ ಶಸ್ತ್ರಾಸ್ತ್ರಗಳನ್ನು ಹಿಡಿದು ಹೋರಾಡುತ್ತಾರೆ. ಶತ್ರುವೇನಾದರೂ ಸೋತು ಹೋದರೆ ಅವನನ್ನು ಬೆನ್ನಟ್ಟಿ ಹಿಡಿಯುತ್ತಾರೆ ಸೋತು ಶರಣಾದವರನ್ನು ಮಾತ್ರ ಕೊಲ್ಲುವುದಿಲ್ಲ.

---

*ಚೀನದ ಈ ಪ್ರವಾಸಿಯು ದೇವಗಿರಿ ಅಥವಾ ಇಂದಿನ ದೌಲತಾಬಾದನ್ನು ವರ್ಣಿಸಿರುವನೆಂದು ಎಂ. ವಿ. ಡಿಸೆಂಟ್ ಮಾರ್ಟಿನ್ನರೂ, ಕಲ್ಯಾಣವನ್ನು ವರ್ಣಿಸಿರುವನೆಂದು ಜಿ. ಕನಿಂಗ್ಹಾಮರೂ, ಟೋಕ, ಫುಲ್ಥಾಂಬಾ ಅಥವಾ ಪೈಠಣಗಳನ್ನು ವರ್ಣಿಸಿರುತ್ತಾನೆಂದು ಫರ್ಗುಸನ್ನರೂ, ನಾಸಿಕವನ್ನು ವರ್ಣಿಸಿರುವನೆಂದು ಡಾ. ಫ್ಲೀಟರೂ ಬರೆಯುತ್ತಾರೆ.

ಅಕಸ್ಮಾತ್ ಒಬ್ಬ ದಂಡನಾಯಕನು ಯುದ್ಧದಲ್ಲಿ ಸೋತು ಸೆರೆಸಿಕ್ಕಿದರೆ ಅವನನ್ನು ಅವರು ಶಿಕ್ಷಿಸುವುದಿಲ್ಲ. ಅದರ ಬದಲು ಅವನಿಗೆ ಸ್ತ್ರೀಯರ ಉಡಿಗೆ ತೊಡಿಗೆಯನ್ನು ಉಡುಗೊರೆಯಾಗಿ ಇತ್ತು, ಆ ಮೂಲಕ ಅವನು ಅಪಮಾನ ದಿಂದ ಆತ್ಮಹತ್ಯ ಮಾಡಿಕೊಳ್ಳುವಂತೆ ಮಾಡುತ್ತಾರೆ.

ಈ ನಾಡಿನಲ್ಲಿ ಹೋರಾಡಲು ಸಿದ್ಧರಾದ ಗಂಡುಗಲಿ ಸೈನಿಕರು ಅಸಂಖ್ಯಾತರಾಗಿದ್ದಾರೆ. ಯುದ್ಧಕ್ಕೆ ಹೊರಡುವ ಮುನ್ನ ಅವರು ಮದ್ಯವನ್ನು ಕುಡಿಸು ಮತ್ತರಾಗುತ್ತಾರೆ. ಆಗ ಅವರು ಒಂಟಿಯಾಗಿ ಸಹಸ್ರ ಸಹಸ್ರ ಸಂಖ್ಯೆಯ ಸೈನಿಕರನ್ನು ಎದುರಿಸಲು ಸಿದ್ಧರಾಗುತ್ತಾರೆ.

ದಂಡಾಳುಗಳು ನಿಷ್ಕಾರಣವಾಗಿ ಶತ್ರುಭಟರನ್ನು ಕೊಂದರೆ ಅವರಿಗೆ ಶಿಕ್ಷೆಯಿಲ್ಲ. ಅವರು ಯುದ್ಧಕ್ಕೆ ಹೊರಡುವಾಗ ತಮ್ಮ ಮುಂಭಾಗದಲ್ಲಿ ರಣ ವಾದ್ಯಗಳನ್ನು ನುಡಿಸುತ್ತಾರೆ. ಅವರು ತಮ್ಮ ಅಸಂಖ್ಯಾತ ಆನೆಗಳಿಗೆ ಮದ್ಯ ಕುಡಿಸುತ್ತಾರೆ. ಅಲ್ಲದೆ ತಾವೂ ಮದ್ಯ ಸೇವಿಸಿ ಅವುಗಳೊಡನೆ ಯುದ್ಧಕ್ಕೆ ಹೊರಟು ಕೈಗೆ ಸಿಕ್ಕಿದುದನ್ನೆಲ್ಲಾ ತುಳಿದು ನಾಶಮಾಡಿ, ತಮ್ಮೆದುರು ಯಾವ ಶತ್ರುವೂ ನಿಲ್ಲದಂತೆ ಮಾಡುತ್ತಾರೆ. ಇಂತಹ ರಣಗಲಿಗಳನ್ನೂ ಯುದ್ಧದ ಆನೆ ಗಳನ್ನೂ ಈ ದೊರೆ ಉಪೇಕ್ಷೆಯಿಂದ ಕಾಣುತ್ತಾನೆ. ಅವನು ಕ್ಷತ್ರಿಯವಂಶಕ್ಕೆ ಸೇರಿದ್ದಾನೆ. ಹೆಸರು ಪುಲಿಕೇಶಿ. (pu-lo-ki-she) ಅವನು ಮಹತ್ವಾ ಕಾಂಕ್ಷಿಯೂ ಲೋಕೋಪಕಾರಿಯೂ ಆಗಿದ್ದಾನೆ. ಅವನ ಯೋಜನೆ ಹಾಗೂ ಕಾರ್ಯಸಾಧನೆ. ಬಹುದೂರ ವ್ಯಾಪಿಸಿವೆ. ಅವನ ಜನೋಪ ಕಾರದ ಕಾರ್ಯಗಳು ಬಹುದೂರದವರೆಗೂ ಹರಡಿವೆ. ಅವನ ಪ್ರಜೆ ಗಳು ಅತ್ಯಂತ ವಿಧೇಯರಾಗಿದ್ದಾರೆ. ಈಗ ಶಿಲಾದಿತ್ಯ ಮಹಾರಾಜನು (ಹರ್ಷ ವರ್ಧನ) ಪೂರ್ವ ಪಶ್ಚಿಮದವರೆಗೆ ಇರುವ ಎಲ್ಲ ಪ್ರದೇಶಗಳನ್ನು ಗೆದ್ದಿದ್ದರೂ, ಅವನು ದೂರದ ಪ್ರದೇಶಗಳ ಮೇಲೆ ದಂಡೆತ್ತಿ ಹೋದರೂ ಈ ರಾಜ್ಯದ ಜನತೆ ಮಾತ್ರ ಅವನಿಗೆ ಅಧೀನರಾಗಿಲ್ಲ. ಶಿಲಾದಿತ್ಯನು ಈ ರಾಜ್ಯವನ್ನು ಗೆಲ್ಲಬೇಕೆಂಬ ಆಸೆಯಿಂದ ತನ್ನ ಸಾಮ್ರಾಜ್ಯದ ಪಂಚಸಿಂಧೂ ಪ್ರಾಂತ್ಯ ಗಳಿಂದಲೂ, ಇತರ ಎಲ್ಲ ದೇಶಗಳಿಂದಲೂ ಸೈನಿಕರನ್ನು ಸೇರಿಸಿ ದಂಡೆತ್ತಿ ಬಂದಿದ್ದರೂ ಅವನಿಂದ ಅದನ್ನು ಗೆಲ್ಲಲು ಇದುವರೆಗೆ ಸಾಧ್ಯವಾಗಿಲ್ಲ.

ಇಲ್ಲಿಯ ಜನ ವಿದ್ಯಾಪ್ರೇಮಿಗಳಾಗಿದ್ದು ಲೌಕಿಕ ಹಾಗೂ ಶಾಸ್ತ್ರಗಳಲ್ಲಿ

ಅಪೂರ್ವ ಪಾಂಡಿತ್ಯವಿದೆ. ಇಲ್ಲಿ ಐದುನೂರಕ್ಕೂ ಹೆಚ್ಚಿನ ಸಂನ್ಯಾಸಿಗಳು ಇರುವ ನೂರು ಸಂಘಾರಾಮಗಳು ಇವೆ. ಅವರು ಮಹಾಯಾನ ಮತ್ತು ಹೀನಯಾನ ಪಂಥಗಳನ್ನು ಅನುಸರಿಸುತ್ತಾರೆ. ಇಲ್ಲಿ ನೂರು ದೇವಾಲಯಗಳು ಇವೆ. ಅನೇಕ ಧರ್ಮಗಳ ಜನರು ವಾಸಿಸುತ್ತಾರೆ.

(Beal's SI = LU—KI, II P. 256, Quoted by C. Hayavadana Rao in Mysore Gazetteer.)

## ೩. ಚಾಲುಕ್ಯರು ಯಾರು?

ಚಾಲುಕ್ಯರು ಕನ್ನಡನಾಡನ್ನು ಆಳಿದ ಮುಖ್ಯ ರಾಜಮನೆತನಗಳಲ್ಲಿ ಒಬ್ಬರು. ಇವರು ಯಾರು ಎಲ್ಲಿಂದ ಬಂದರು ಎಂಬ ವಿಷಯದಲ್ಲಿ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ.'ಚಾಲುಕ್ಯರು ಅಥವಾ ಸೋಲಂಕಿಯವರು ಚಾಪರೆಂಬ ಗುರ್ಜರ ಬಣಕ್ಕೆ ಸೇರಿದವರಾಗಿದ್ದಿರಬಹುದು. ಇವರು ದಕ್ಷಿಣಾಪಥಕ್ಕೆ ಬಂದು ತಮ್ಮ ರಾಜ್ಯವನ್ನು ಸ್ಥಾಪಿಸಿದರು' ಎಂದು ವಿನ್‌ಸೆಂಟ್ ಸ್ಮಿತ್‌ರು ಅಭಿಪ್ರಾಯ ಪಟ್ಟಿದ್ದಾರೆ. "ಚಾಲುಕ್ಯ ಬೃಹತ್ಸಂಹಿತೆಯಲ್ಲಿ ಬರುವ ಶೌಲಿಕರೆಂಬ ವಿದರ್ಭ ಅಥವಾ ವರ್ಹಾಡಕ ನಿವಾಸಿಗಳು. ಇವರು ಶಾಸನಗಳ ಶುಳಿಕ, ಸೋಲಿಕ, ಸೋಲಂಕಿ, ಚಾಲುಕ್ಯರೂ ಬಹುಶಃ ಒಂದೇ ಆಗಿರಬಹುದು" ಎಂದು ಪಂಡಿತ ರಾಯ್‌ಚೌದರಿಯವರು ತಿಳಿಸುತ್ತಾರೆ ಜಿ. ಜೆ. ಡುಬ್ರಲರ ಹೇಳಿಕೆಯಂತೆ ಚಾಲುಕ್ಯರು ಉಂಡಿ ವಾಟಿಕಾದ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಹರಿ ವಾತ್ಸಕೊಟ್ಟ ಕೋಟಗೆ ಸೇರಿದವರು. ಇವರ ಮೂಲಪುರುಷ ಜಯಸಿಂಹ. ಇಂದುಕಾಂತಿಪುರದ ಒಂದನೇ ಪುಲಿಕೇಶಿಯು ಕದಂಬರ ಹರಿವರ್ಮನನ್ನು ಸೋಲಿಸಿ ವಾತಾಪಿಯನ್ನು ರಾಜಧಾನಿಮಾಡಿಕೊಂಡನು.

ಆದರೆ ಲೂಯಿ ರೈಸರು ಚಾಲುಕ್ಯರು ಹೊರಗಿನಿಂದ ಬಂದವರೆಂದು ಹೇಳುತ್ತಾರೆ. ಕ್ರಿಸ್ತಶಕದ ಆರಂಭದಲ್ಲಿ ಏಷ್ಯಾಖಂಡದ ಮಧ್ಯಭಾಗದಲ್ಲಿ ಟೈಗ್ರೀಸ್ ಮತ್ತು ಯೂಫ್ರಿಟೀಸ್ ನದಿಗಳ ದಂಡೆಯಮೇಲೆ ವಾಸವಾಗಿದ್ದ ಸೆಲುಸಿಡಿ, ಅರಸಿಡಿ ಜನರು ಭಾರತಕ್ಕೆ ಬಂದು ನೆಲಸಿದರು. ಸೆಲುಸಿಡಿಯ (ಇನ್ನೊಂದು ಹೆಸರು ಸೆಲುಕಿಯಾ) ಪಂಗಡದವರಿಗೂ ಅರಸಿಡಿ ಪಂಗಡದ ಪಾರ್ಥಿಯನರಿಗೂ ಬದ್ಧದ್ವೇಷವಿದ್ದು, ಅದೇ ಚಾಲುಕ್ಯರ ಪಾರ್ಥಿಯನರ ದ್ವೇಷಕ್ಕೆ ಕಾರಣವಾಯಿ

ತೆಂದು ಹೇಳುತ್ತಾರೆ. ಡಾ. ಹೂರ್ನೆಲ್ ಅವರು ಚಾಲುಕ್ಯ ಎನ್ನುವುದು ಸಂಸ್ಕೃತ ಜನ್ಯವಲ್ಲವೆಂದೂ ಅದು ಹೂಣರಿಂದ ಬಂದದ್ದೆಂದೂ ಹೇಳಿ ತುರ್ಕಿಯಲ್ಲಿ ಚಾಪ್‌ದುಲ್ ಎಂಬ ಶಬ್ದವಿದ್ದು ಇದರ ಅರ್ಥ ಕುದುರೆ ರಾವುತನೆಂದಾಗುತ್ತದೆ—ಚಾಲುಕ್ಯ ಶಬ್ದಕ್ಕೆ ಇದೇ ಮೂಲವಾಗಿರಬಹುದೆಂದು ಹೇಳುತ್ತಾರೆ.

ಈ ವಾದಗಳನ್ನು ನಂಬುವಂತಿಲ್ಲ. ಇವುಗಳು ಸತ್ಯದೂರವಾದ ತರ್ಕವೆಂದು ಬಹುಮಂದಿ ಪಂಡಿತರ ವಾದ. ಚಾಲುಕ್ಯರು ಭಾರತೀಯರೆಂದೂ ಅವರು ಮಾನವ್ಯಗೋತ್ರದ ಹಾರೀತೀ ಪುತ್ರರೆಂದೂ ಶಾಸನದಲ್ಲಿ ಬರೆದಿರುವ ಸಂಗತಿ ಹೆಚ್ಚು ಐತಿಹಾಸಿಕ ಸಂಗತಿಯಾದಂತೆ ತೋರುತ್ತದೆ. ಅವರು ಕಾರ್ತಿಕೇಯನ ಔಪಾಸಕರು, ಸಪ್ತಮಾತೃಕೆಯರು ಇವರ ಪೋಷಕರು. ವರಾಹ ಇವರ ಲಾಂಛನ.

ಚಾಲುಕ್ಯರು ಮಹಾವಿಷ್ಣುವಿನ ಸಂಜಾತರು. ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದ ಹಿರಣ್ಯಗರ್ಭ ಬ್ರಹ್ಮನ ವಂಶದವನಾದ ಹಾರೀತೀ ಪಂಚಶಿಖಿಯು ಅರ್ಘ್ಯ ಕೊಡುವಾಗ ಅವನ ಚುಲುಕ (ಬೊಗಸೆ)ದಿಂದ ಹುಟ್ಟಿದ ವಿಷ್ಣುವರ್ಧನ—ವಿಜಯಾದಿತ್ಯ ಈ ವಂಶಕ್ಕೆ ಮೂಲಪುರುಷನು. ಅವನಿಂದ ಅಯೋಧ್ಯೆಯಲ್ಲಿ ಆಳಿದ ಐವತ್ತೊಂಬತ್ತು ಅರಸರ ಅನಂತರ ವಿಜಯಾದಿತ್ಯನೆಂಬುವನು ತೆಂಕಲಿಗೆ ಬಂದು ತ್ರಿಲೋಚನಪಲ್ಲವನೆಂಬ ದೊರೆಯೊಡನೆ ಯುದ್ಧಮಾಡಿ ವಾತಾಪಿಯಲ್ಲಿ ಚಾಲುಕ್ಯ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದನೆಂಬ ಸಂಗತಿ ಶಾಸನಗಳಲ್ಲಿ ಬರುತ್ತದೆ. ಇವುಗಳ ಆಧಾರದ ಮೇಲೆ ಚಾಲುಕ್ಯರು ಕನ್ನಡನಾಡಿನವರೆಂಬುದು ಸುಸ್ಪಷ್ಟವಾಗಿದೆ. ಅವರು ರಾಜ್ಯವನ್ನು ಕಟ್ಟಿ ಆಸೇತು ನರ್ಮದೆಯ ವರೆಗೆ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿ, ದಕ್ಷಿಣಾಪಥೇಶ್ವರರಾಗಿ ಮೆರೆದರು.

ಇವರಲ್ಲಿ ಪ್ರಖ್ಯಾತನಾದ ಪುಲಿಕೇಶಿಯ ಹೆಸರಿನ ಬಗ್ಗೆ ಇಂತಹುದೇ ಭಿನ್ನಾಭಿಪ್ರಾಯವಿದೆ. ಚಾಲುಕ್ಯ ಸಿಂಹಾಸನವನ್ನೇರಿದ ಮೊದಲನೆಯ ಪುಲಿಕೇಶಿಗೆ ಶಾಸನಗಳಲ್ಲಿ ಪೊಲೆಕೇಶಿನ್, ಪೊಲಿಕೇಶಿನ್, ಪುಲಿಕೇಶಿನ್, ಪುಲಕೇಶಿನ್ ಎಂಬ ಹಲವಾರು ರೂಪಗಳಿವೆ. ಬಾದಾಮಿ ಗುಡ್ಡಗಳ ಬಳಿ ಇವನನ್ನು ಹೆತ್ತವರು ಶತ್ರುಗಳಿಗೆ ಹೆದರಿ ಓಡಿಹೋದಾಗ ಇವನನ್ನು ಹಿಂದೆ

ಬಿಟ್ಟರೆಂಬುದೂ ಒಂದು ಹೆಣ್ಣು ಹುಲಿ ಇವನನ್ನು ಸಲಹಿತೆಂಬುದೂ ದಂತ ಕಥೆಯೇ ಆಗಿದೆ.

ಈ ಹೆಸರಿನಲ್ಲಿ ಕನ್ನಡದ ಪುಲಿ, ಸಂಸ್ಕೃತದ ಕೇಶಿನ್ ಎಂಬ ಶಬ್ದಗಳು ಸೇರಿ ಅರಿಸಮಾಸವಾಗಿದೆ. ಪೊಲೆಕೇಶಿ ಎಂದರೆ ಹೊಲಸು ಕೂದಲನ್ನುಳ್ಳವನೆಂಬುದು ದೇವಾಂಶನಾದ ದೊರೆಗೆ ಸಮನ್ವಯಮಾಡುವುದು ಕಷ್ಟ. ಅಥವಾ ಯಾವನ ಹೆಸರು ಕೇಳಿದರೆ ಸಂತೋಷದಿಂದ ಕೂದಲು ಎದ್ದು ನಿಲ್ಲುವುದೋ ಅವನು ಎಂಬ ಕಾಲ್ಪನಿಕ ಅರ್ಥ ಹೇಳುವುದು ವ್ಯರ್ಥಸಾಹಸ. ಆದುದರಿಂದ ಈ ಶಬ್ದದ ಅರ್ಥಕ್ಕೆ ಹೆಚ್ಚು ಮಹತ್ವ ಕೊಡದೆ, ಪುಲಿಕೇಶಿ—ಎಂಬುದು ಬಳಕೆಗೆ ಅರ್ಹವೆಂದು ರಾ. ಹ. ದೇಶಪಾಂಡೆಯವರು ಅಭಿಪ್ರಾಯಪಡುತ್ತಾರೆ.

ಈ ಕಾದಂಬರಿಯಲ್ಲಿ ಜನ ಸಾಮಾನ್ಯರಿಗೆ ಪರಿಚಿತವಾದ ಹೆಸರು—ಪುಲಿಕೇಶಿ ಎಂಬ ಹೆಸರನ್ನೇ—ಬಳಸಿದೆ.

## ೪. ಅಜಂತೆಯಲ್ಲಿರುವ ಪುಲಿಕೇಶಿಯ ಚಿತ್ರ

ಭಾರತೀಯ ಕಲಾಚರಿತ್ರೆಯಲ್ಲಿ ಅಜಂತ ಮತ್ತು ಎಲ್ಲೋರ ಗುಹಾಂತರ್ ದೇವಾಲಯಗಳ ಹೆಸರು ಚಿರಸ್ಮರಣೀಯವಾಗಿ ಉಳಿಯುತ್ತವೆ. ಅಜಂತೆಯ ಭಿತ್ತಿ ಚಿತ್ರಗಳು—ವರ್ಣಚಿತ್ರಗಳು–ಜಗತ್ ಪ್ರಸಿದ್ಧಿಯನ್ನು ಪಡೆದಿವೆ. ಎಲ್ಲೋರದ ಶಿಲ್ಪಕೃತಿಗಳು—ಅದ್ಭುತ ಪವಾಡಗಳಾಗಿ ಮೆರೆಯುತ್ತಿವೆ. ಇವುಗಳ ಉಲ್ಲೇಖನವಿಲ್ಲದೆ ಭಾರತದ ವಾಸ್ತುಶಿಲ್ಪ ಇತಿಹಾಸವು ಅಪೂರ್ಣವೆಂದೇ ಹೇಳಬೇಕು. ಇವುಗಳು ಕನ್ನಡ ಕಲಾವಿದರು ವಿಶ್ವಕಲೆಗೆ ನೀಡಿರುವ ಅಪೂರ್ವ ಕಾಣಿಕೆ.

ಅಜಂತ ಎಲ್ಲೋರಗಳು ಇಂದು ಮಹಾರಾಷ್ಟ್ರದಲ್ಲಿ ಸೇರಿಹೋಗಿದ್ದರೂ ಅವು ಕನ್ನಡ ಸಂಸ್ಕೃತಿಯ ನೆಲೆಗಳೇ ಆಗಿವೆ. ಈ ಗುಹಾಂತರ್ದೇವಾಲಯಗಳು ಔರಂಗಾಬಾದಿಗೆ ಐವತ್ತೈದು ಮೈಲಿ ದೂರದಲ್ಲಿವೆ. ಅಜಂತೆಯು ವಾಘೋರ ನದಿಯ ದಂಡೆಯ ಮೇಲಿದೆ. ಇಲ್ಲಿನ ಗುಡ್ಡವನ್ನು ಕಡೆದು ಬೌದ್ಧ ಭಿಕ್ಷುಗಳು ತಮ್ಮ ಧ್ಯಾನಕ್ಕೂ ಏಕಾಂತಕ್ಕೂ ಅನುಕೂಲವಾದ ಗುಹೆಗಳನ್ನು ನಿರ್ಮಿಸಿದ್ದಾರೆ. ಅವುಗಳ ಸಂಖ್ಯೆ ಇಪ್ಪತ್ತೊಂಬತ್ತು. ಈ ಗುಹೆಗಳಲ್ಲಿನ ಕಂಬಗಳ ಮೇಲೆ, ಗೋಡೆಗಳ ಮೇಲೆ, ಬಾಗಿಲುಗಳ ಮೇಲೆ ಕೆತ್ತಿರುವ ಶಿಲ್ಪಕೃತಿಗಳೂ, ಭಿತ್ತಿಗಳ

ಮೇಲೆ ನಿರ್ಮಿಸಿರುವ ವರ್ಣಚಿತ್ರಗಳೂ ಲೋಕೋತ್ತರವಾದವು.

ಇಲ್ಲಿನ ಬಹು ಸಂಖ್ಯಾತ ಚಿತ್ರಗಳು ಬುದ್ಧ ದೇವನ ಜನ್ಮಾಂತರಕ್ಕೆ ಸಂಬಂಧಿಸಿದ ಜಾತಕದ ಕಥೆಗಳಿಗೆ ಸಂಬಂಧಿಸಿವೆ.ಕೆಲವು ಸಮಕಾಲೀನ ಜೀವನದ ಕಲಾತ್ಮಕ ನಿರೂಪಣೆಯೂ ಆಗಿದೆ. ಅವುಗಳಲ್ಲಿ ಪರಮೇಶ್ವರ ಪುಲಿಕೇಶಿಯ ಓಲಗದಲ್ಲಿ ಪರ್ಶಿಯಾದೇಶದ ರಾಯಭಾರಿಯು ತಮ್ಮ ಕಾಣಿಕೆಗಳನ್ನು ಒಪ್ಪಿಸುತ್ತಿರುವ ಚಿತ್ರವು ಇತಿಹಾಸದ ದೃಷ್ಟಿಯಲ್ಲಿ ಮಹತ್ವವಾದುದು. ಇದಕ್ಕೆ ಪೂರಕವಾಗಿ ಖುಸ್ರೂದೊರೆಯು ತನ್ನ ಪತ್ನಿಯೊಡನೆ ಮದ್ಯಪಾನ ಮಾಡುತ್ತಿರುವ ಚಿತ್ರವೂ ಇದೆ.*

ಅಜಂತೆಯ ಮೊದಲನೆಯ ಗವಿಯಲ್ಲಿರುವ ಪುಲಿಕೇಶಿಯು ಪರ್ಶಿಯಾದೇಶದ (ಇಂದಿನ ಇರಾನ್) ರಾಯಬಾರಿಗೆ ದರ್ಶನಕೊಟ್ಟ ವೈಭವದ ದೃಶ್ಯ ಕಣ್ಣಿಗೆ ಕಟ್ಟುವಂತಹುದು. ಇದನ್ನು ಬರೆದವ ಕನ್ನಡದ ಕಲಾವಿದನೇ— ಎಂಬುದರ ಬಗ್ಗೆ ಸಂಶಯವಿಲ್ಲ. ಅವನು ಚಿತ್ರದಲ್ಲಿ ಕೃಷ್ಣವರ್ಣಕ್ಕೆ ಕೊಟ್ಟಿರುವ ಪ್ರಾಮುಖ್ಯತೆ, ಕಲಾವಿದನ ಸಹಜ ಒಲವಿನ ಪ್ರತೀಕವಾಗಿದೆ. ಅದು ಕನ್ನಡಿಗರ ಮೈಬಣ್ಣ. ಪಂಪ ಮಹಾಕವಿಯ ಮಾತಿನಲ್ಲಿ ಹೇಳುವುದಾದರೆ 'ಕದಳೀಗರ್ಭ ಶ್ಯಾಮ'ರು, ಕನ್ನಡಿಗರು. ಅದೇ ಶಿಲ್ಪಿಯಿಂದ ಖುಸ್ರು ದೊರೆಯು ಮದ್ಯಪಾನ ಗೈಯುತ್ತಿರುವ ಚಿತ್ರವೂ ಚಿತ್ರಿತವಾಗಿರಬೇಕು.

ಈ ಕಲಾವಿದನು—ಅವನು ಯಾರೇ ಆಗಿರಲಿ—ಪುಲಿಕೇಶಿಯನ್ನೂ, ಖುಸ್ರು ದೊರೆಯನ್ನೂ ಕಂಡವನಾಗಿರಬೇಕು. ಇಲ್ಲದೆ ಇದ್ದರೆ ಸಮಕಾಲೀನ ಐತಿಹಾಸಿಕ ಸಂಗತಿಗಳನ್ನೂ, ವ್ಯಕ್ತಿಗಳನ್ನೂ ವಿಪರ್ಯಾಸಗೊಳಿಸಿ ಬರೆಯಲು ಎಂಟೆದೆ ಬೇಕು. ಅವುಗಳು ಪುಲಿಕೇಶಿಯ ಕಾಲದಲ್ಲಿ ನಿರ್ಮಿತವಾದ ಚಿತ್ರಗಳೆಂದು ಪರಿಗಣಿಸಿದರೆ, ಅವುಗಳ ಕರ್ತೃವು ದೊರೆಯಿಂದ ಆದೇಶ ಪಡೆದು ಜನಸಾಮಾನ್ಯರ ಪ್ರಯೋಜನಕ್ಕೆಂದು ಅವುಗಳನ್ನು ನಿರ್ಮಿಸಿರಬೇಕು.

ಹಿಂದಿನ ಕಾಲದಲ್ಲಿ ದೊರೆಗಳು ತಮ್ಮ ಅಂತಃಪುರದ ಸ್ತ್ರೀಯರ ಸಲುವಾಗಿ, ವಿವಿಧ ದೇಶಗಳ ಉಡುಗೆ, ತೊಡಿಗೆಗಳನ್ನು ಚಿತ್ರಿಸುವ ವರ್ಣ ಚಿತ್ರಗಳನ್ನು ತಮ್ಮ ಅರಮನೆಗಳಲ್ಲಿ ಚತುರ ಶಿಲ್ಪಿಗಳಿಂದ ಬರೆಸುತ್ತಿದ್ದರೆಂಬುದಕ್ಕೆ ಪೋರ್ಚುಗೀಸ್ ಅಶ್ವವ್ಯಾಪಾರಿ ಪೊರೋನೋಪೋನನ್ನಿಜನು ವಿಜಯ

*ಇದರ ವರ್ಣನೆ ... [illegible]

ನಗರದ ಅರಸರ ಅಂತಃಪುರದ ಚಿತ್ರಗಳ ಬಗ್ಗೆ ಬರೆದಿಟ್ಟಿರುವ ಉಲ್ಲೇಖನಗಳೇ ಆಧಾರ. ವಿಜಯನಗರದ ಅರಸರ ಅರಮನೆಯ ಗೋಡೆಗಳ ಮೇಲೆ ಅನೇಕ ದೇಶಗಳ ಜನಜೀವನವನ್ನು ಪರಿಚಯ ಮಾಡಿಕೊಡುವ ಚಿತ್ರಗಳು ಇದ್ದವೆಂದು ಅವನು ಬರೆದಿದ್ದಾನೆ.

ಅವನು ಖುಸ್ರು ದೊರೆಯ ಬಳಿಗೆ ಪುಲಿಕೇಶಿಯು ಕಳುಹಿಸಿಕೊಟ್ಟ ರಾಯಭಾರಿಗಳಲ್ಲಿ ಒಬ್ಬನಾಗಿರಬೇಕು. ಈ ರಾಯಭಾರಕ್ಕೆ ಕಾರಣವೇನು ? ಖುಸ್ರು ದೊರೆಯು ಎಲ್ಲರನ್ನೂ ಬಿಟ್ಟು ಪುಲಿಕೇಶಿಯ ಬಳಿಗೆ ಮಾತ್ರವೇ ಏಕೆ ಬಂದ ? ಅದರ ಪರಿಣಾಮವೇನಾಯಿತು ? ಈ ಬಗ್ಗೆ ಇತಿಹಾಸವು ಮೌನ ಧರಿಸಿದೆ. ಪರ್ಶಿಯಾ ದೇಶದ ದೊರೆಗಳ ಇತಿಹಾಸವನ್ನು ಬರೆದಿರುವ ಬ್ರಿಗೇಡಿಯರ್ ಜನರಲ್ ಸರ್ ಪರ್ಸಿಸೈಕ್ಸರವರೂ ಈ ಬಗ್ಗೆ ಮೌನವಾಗಿದ್ದಾರೆ. ಪ್ರಥಮ ಬಾರಿಗೆ ಈ ಸಂಗತಿಯನ್ನು ಮಹಮದೀಯ ಇತಿಹಾಸಕಾರ ತಬಾರಿ ಎಂಬುವನು ಉಲ್ಲೇಖಿಸಿ, ಇಮ್ಮಡಿ ಖುಸ್ರುವು ತನ್ನ ಆಳ್ವಿಕೆಯ ಮೂವತ್ತಾರನೇ ವರ್ಷದಲ್ಲಿ, ಅಂದರೆ ಕ್ರಿ.ಶ. ೬೨೫-೬ರಲ್ಲಿ ಪರಮೇಶ್ವರನ (ಪುಲಿಕೇಶಿಯ) ರಾಯಭಾರಿಗಳನ್ನು ಸ್ವೀಕರಿಸಿದನೆಂದು ಬರೆಯುತ್ತಾನೆ. ಅದರ ಬಗ್ಗೆ ಈ ಕಾದಂಬರಿಯಲ್ಲಿ ಲೇಖಕನ ಊಹೆ ಐತಿಹಾಸಿಕ ಆಧಾರಗಳ ಮೇಲೆ ಹರಿದಿದೆ. ಇದು ಎಷ್ಟರಮಟ್ಟಿಗೆ ಸಮಂಜಸವೆಂಬುದನ್ನು ರಸಿಕರು ನಿರ್ಣಯಿಸಬೇಕು. ಕನ್ನಡಿಗರ ದುರ್ದೈವದಿಂದ ಪುಲಿಕೇಶಿಯ ಈ ಚಿತ್ರಕ್ಕೆ ಯಾರೋ ದುರಾತ್ಮರು ಅಪಚಾರ ಮಾಡಿದ್ದಾರೆ. ಆ ದುರಾತ್ಮರು ಪುಲಿಕೇಶಿಯ ಮುಖವನ್ನು ಕೆತ್ತಿ ಹಾಕಿ ವಿರೂಪಗೊಳಿಸಿದ್ದಾರೆ. ಅವರು ಇತಿಹಾಸದ ದೃಷ್ಟಿಯಲ್ಲಿ ಕೊಲೆಗಾರರೇ ಸರಿ.

## ೫. ಶ್ರೀ ಹರ್ಷವರ್ಧನ ಹಾಗೂ ಪಲ್ಲವ ನರಸಿಂಹನೊಡನೆ ಪುಲಿಕೇಶಿಯ ಸಂಬಂಧ

ಕನ್ನಡ ನಾಡನ್ನು ಆಳಿದ ಮಹಾಪುರುಷರಲ್ಲಿ ಪರಮೇಶ್ವರ ಪುಲಿಕೇಶಿಯು ಶ್ರೇಷ್ಠನಾದ ದೊರೆ. ಅವನ ವಿಷಯದಲ್ಲಿ ಇತಿಹಾಸದಿಂದಲೂ, ಸಮಕಾಲೀನ ಬರಹಗಳಿಂದಲೂ ನಮಗೆ ತಿಳಿದು ಬಂದಿರುವ ಅಂಶಗಳು ಅತ್ಯಲ್ಪ. ಅವನ ಜೀವನದ ಮಹತ್ವಸಂಗತಿಗಳಾದ ಪಟ್ಟಾಭಿಷಕ್ತನಾದ ವರ್ಷ, ಉತ್ತರಾಪಥದ ಸಾಮ್ರಾಟ್ ಹರ್ಷವರ್ಧನನನ್ನು ಗೆದ್ದ ವರ್ಷ, ಮತ್ತೆ ಅವನ ಜೀವಿತದ

ಕೊನೆಯ ಹತ್ತು ವರ್ಷಗಳ ಇತಿಹಾಸ ಮತ್ತು ಅವನು ಮರಣಹೊಂದಿದ ವರ್ಷ ಹಾಗೂ ಮರಣ ಹೊಂದಿದ ರೀತಿ ಇವುಗಳು ಇನ್ನೂ ಬಗೆಹರಿಯದ ಸಂಗತಿಗಳೇ ಆಗಿವೆ. ಅವುಗಳ ವಿಷಯದಲ್ಲಿ ಸಮಕಾಲೀನ ಬರಹಗಳೂ ಶಾಸನಗಳೂ ಯಾವ ಬೆಳಕನ್ನೂ ಚೆಲ್ಲುವುದಿಲ್ಲ. ಹೀಗಾಗಿ ಇವುಗಳ ಬಗ್ಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಾಶವಾಗಿದೆ.

ಪುಲಿಕೇಶಿಯು ಕ್ರಿ.ಶ. ೬೧೦–೧೧ರಲ್ಲಿ ಸಿಂಹಾಸನವನ್ನೇರಿದನು. ಅವನಿಗಿಂತ ನಾಲ್ಕು ವರ್ಷದ ಮೊದಲು ಅಂದರೆ ಕ್ರಿ.ಶ. ೬೦೬ ರಲ್ಲಿ ಸಾಮ್ರಾಟ್ ಹರ್ಷವರ್ಧನನು ಕನೌಜಿನಲ್ಲಿ (ಕನ್ಯಾಕುಬ್ಜ) ತನ್ನ ತಂದೆ ಹಾಗೂ ಅಣ್ಣಂದಿರ ಮರಣದನಂತರ ಪಟ್ಟಾಭಿಷಕ್ತನಾಗಿದ್ದನು.

ಇಬ್ಬರು ದೊರೆಗಳೂ ತಮ್ಮ ಸಾಮ್ರಾಜ್ಯವನ್ನು ಹಗೆಗಳಿಂದ ಸಂರಕ್ಷಿಸಿಕೊಳ್ಳುವ, ರಾಜ್ಯವನ್ನು ವಿಸ್ತರಿಸುವ, ಸಾಮ್ರಾಜ್ಯವನ್ನು ಸುಭದ್ರಗೊಳಿಸುವ, ಸುವ್ಯವಸ್ಥಿತ ಆಡಳಿತವನ್ನು ಏರ್ಪಡಿಸುವ ಮಹತ್ಕಾರ್ಯದಲ್ಲಿ ತಮ್ಮ ಆರಂಭದ ವರ್ಷಗಳನ್ನು ಕಳೆದಿರಬೇಕೆಂಬುದು ನಿರ್ವಿವಾದವಾದ ವಿಷಯ.

ಈ ದೃಷ್ಟಿಯಲ್ಲಿ ವಿಚಾರಮಾಡಿದರೆ ಈಗ ಕೆಲವರು ನಿರ್ಧರಿಸಿರುವಂತೆ ಹರ್ಷವರ್ಧನನ ಹಾಗೂ ಪುಲಿಕೇಶಿಯರ ನಡುವೆ ನಡೆದ ನರ್ಮದೆಯ ದಂಡೆಯ ಯುದ್ಧ ೭ನೆಯ ಅಗಸ್ಟ ೬೧೩ರಲ್ಲಿ(ಕೆಲವರ ಹೇಳಿಕೆಯಂತೆ ೨೩ ಜುಲೈ ೬೧೩) ಬಹುಶಃ ಸಂಭವಿಸಿರಲಾರದು. ಅದು ಕ್ರಿ.ಶ. ೬೩೪–೩೫ರ ಒಳಗೆ ಎಂದೊ ನಡೆದಿರುವ ಘಟನೆಯಾಗಿರಬಹುದು* ಈ ಬಗ್ಗೆ ಖಚಿತವಾಗಿ ಯಾವ ಸಂಗತಿಯನ್ನೂ ಹೇಳಲು ಸಾಧ್ಯವಿಲ್ಲವಾಗಿದೆ.

ಅದರಂತೆಯೇ ಪುಲಿಕೇಶಿ ಹಾಗೂ ಹರ್ಷವರ್ಧನರ ಯುದ್ಧಕ್ಕೆ ಕಾರಣವಾದ ಸಂಗತಿಯು ಐತಿಹಾಸಿಕ ಬೆಳಕಿನಿಂದ ಮರೆಯಾಗಿದೆ. ಅದು ಹೇಗೆ ಘಟಿಸಿತೆಂಬುದರ ಒಂದು ಊಹೆ ಕಾದಂಬರಿಯಲ್ಲಿ ಮಾಡಲಾಗಿದೆ.

ಹರ್ಷವರ್ಧನನ ಚರಿತ್ರೆಯನ್ನು ಬರೆದ ಬಾಣಭಟ್ಟನು ಈ ವಿಷಯದಲ್ಲಿ ಸ್ಪಷ್ಟವಾದ ವಿವರಣೆಯನ್ನು ಕೊಟ್ಟಿಲ್ಲ. ಅವನು ಈ ಘಟನೆಯನ್ನು ಪರೋಕ್ಷ

---

*ಡುಬ್ರಿಲರು ಈ ಘಟನೆ ಕ್ರಿ.ಶ. ೬೩೩-೮ರಲ್ಲಿ ನಡೆದಿರಬೇಕೆಂದು ಊಹಿಸುತ್ತಾರೆ.

ವಾಗಿ ಉಲ್ಲೇಖಿಸಿರುವನು. ಅವನ ಕಾವ್ಯದಲ್ಲಿ ಬರುವ ಈ ಮಾತುಗಳಿಂದ ನಡೆದ ಸಂಗತಿಯನ್ನು ಊಹಿಸಿಕೊಳ್ಳಬಹುದಾಗಿದೆ:—ಹರ್ಷ ವಿಚ್ಛೇದ ಹೇತು (ಹರ್ಷನನ್ನು ಗೆದ್ದವನು)ಭಯವಿಚಲಿತ ಹರ್ಷೋಯೇನ ಚಕಾರಿ ಹರ್ಷ........ (ಯಾವನಿಂದ ಹರ್ಷನು ಸಂತೋಷವಿಲ್ಲದವನಾದನೋ ಅವನು) ಸಮರ ಸಂಸಕ್ತ ಸಲೋತ್ತರಾಪಥೇಶ್ವರ ಶ್ರೀ ಹರ್ಷವರ್ಧನ ಪರಾಜಯೋಪಲಬ್ಧ ಪರಮೇಶ್ವರಾಪರನಾಮಧೇಯಃ (ಯುದ್ಧದಲ್ಲಿ ಉದ್ಯುಕ್ತನಾದ ಉತ್ತರಾಪಥದ ಒಡೆಯನಾದ ಶ್ರೀ ಹರ್ಷನನ್ನು ಸೋಲಿಸಿದುದರಿಂದ ಪಡೆದ ಪರಮೇಶ್ವರನೆಂಬ ಮತ್ತೊಂದು ಹೆಸರನ್ನೂ ಉಳ್ಳವನು)—ಈ ಮಾತುಗಳನ್ನು ಬರೆದ ಕವಿ ತನಗೆ ಆಶ್ರಯವಿತ್ತ ದೊರೆಯ ಬಗ್ಗೆ ಸ್ಪಷ್ಟವಾಗಿ ಸೋಲಿನ ಕಲಂಕ ಹಚ್ಚಲು ಇಷ್ಟ ಪಡದೆ ಇದ್ದರೆ ಆಶ್ಚರ್ಯವಿಲ್ಲ.

ಆಶ್ಚರ್ಯದ ಸಂಗತಿ ಎಂದರೆ ಪುಲಿಕೇಶಿಯ ಶಾಸನಗಳಲ್ಲಿ ಇದರ ಸ್ಪಷ್ಟ ಉಲ್ಲೇಖನ ದೊರೆಯದೆ ಇರುವುದು. ರವಿಕೀರ್ತಿಯ ಶಾಸನದಲ್ಲಾಗಲೀ ಪುಲಿಕೇಶಿಯ ಲೋಹನೇರ ಶಾಸನ (ಕಾಲ ಕ್ರಿ.ಶ. ೬೩೦) ದಲ್ಲಾಗಲೀ ಈ ಮಹತ್ವದ ಘಟನೆಯ ಬಗ್ಗೆ ಉಲ್ಲೇಖವಿಲ್ಲದ್ದು, ಇದರ ಐತಿಹ್ಯದ ಬಗ್ಗೆ ಪಂಡಿತ ರಲ್ಲಿ ಸಂಶಯವನ್ನು ಉಂಟುಮಾಡಿದೆ.

ಇದಕ್ಕೆ ಕೆಲವು ಸಮಾಧಾನಗಳನ್ನು ಕೊಡಬಹುದಾದರೆ, ಪುಲಿಕೇಶಿಯ ದಿಗ್ವಿಜಯ ಯಾತ್ರೆಯನ್ನು ಮಾರ್ಮಿಕವಾಗಿ ಚಿತ್ರಿಸುವ ರವಿಕೀರ್ತಿಯ ಶಾಸನದ ಉದ್ದಿಶ್ಯ ಪುಲಿಕೇಶಿಯು ಗೆದ್ದ ರಾಜ್ಯಗಳ ಸಂಗತಿ ಹೇಳುವುದೇ ಆಗಿದೆ. ಈ ದೃಷ್ಟಿಯಲ್ಲಿ ನರ್ಮದೆಯ ದಂಡೆಯಲ್ಲಿ ನಡೆದ ಯುದ್ಧದಿಂದ ಯಾವ ಹೊಸ ರಾಜ್ಯವೂ ಪುಲಿಕೇಶಿಗೆ ಸಂಪಾದನೆಯಾಗಲಿಲ್ಲ. ಕೇವಲ ಪರಸ್ಪರ ಸ್ನೇಹ ಒಪ್ಪಂದ ಉಂಟಾಯಿತು. ಇದನ್ನು ಅಷ್ಟು ಮಹತ್ವವಲ್ಲವೆಂದು ರವಿಕೀರ್ತಿ ಕೈಬಿಟ್ಟಿರಬಹುದು. ಮತ್ತೊಂದು ಕಾರಣ ಪುಲಿಕೇಶಿಯ ಈ ದಿಗ್ವಿಜಯ ಕೋಸಲದ ದಂಡಯಾತ್ರೆಯಲ್ಲಿ ಸಮಾವೇಶವಾಗಿರಲೂ ಬಹುದು. ಹೇಗೇ ಇರಲಿ, ಈ ಐತಿಹಾಸಿಕ ಮಹತ್ವದ ಘಟನೆಯ ಬಗ್ಗೆ ಆ ಕಾಲದ ಶಾಸನಗಳಿಂದ ಸ್ಪಷ್ಟ ಉಲ್ಲೇಖನ ದೊರೆಯುವುದಿಲ್ಲ.

ಅಂತೆಯೇ ಪುಲಿಕೇಶಿ ಹಾಗೂ ಪಲ್ಲವರ ಸಂಬಂಧ ಇತಿಹಾಸದ ಕತ್ತಲಲ್ಲೇ ಅಡಗಿಹೋಗಿದೆ. ಪುಲಿಕೇಶಿಯ ಅನಂತರದ ದೊರೆಗಳ ಶಾಸನಗಳಲ್ಲಿ

ಚಾಲುಕ್ಯರು ಅನೇಕ ಬಾರಿ ಪಲ್ಲವರನ್ನು ಸೋಲಿಸಿ, ಕಾಂಚಿಯನ್ನು ಸುಟ್ಟ ರೆಂದು ಹೇಳಿಕೊಂಡಿದ್ದಾರೆ. ಆದರೆ ಪಲ್ಲವರು ಚಾಲುಕ್ಯರನ್ನು ಪೆರೆಯಾಳ, ಮಣಿಮಂಗಳ ಮತ್ತು ಸುರಮಾರಗಳಲ್ಲಿ ಸೋಲಿಸಿ, ಪುಲಿಕೇಶಿಯ ಬೆನ್ನಿನ ಮೇಲೆ "ಸೋಲು" ಎಂಬುದನ್ನು ಬರೆದುದಾಗಿ ತಮ್ಮ ಶಾಸನಗಳಲ್ಲಿ ತಿಳಿಸುತ್ತಾರೆ.

ಬಾದಾಮಿಯಲ್ಲಿ ದೊರೆತ ಒಂದು ಶಾಸನದಲ್ಲಿ ಸಿಂಹವಿಷ್ಣು ನರಸಿಂಹ ವರ್ಮನು ಪುಲಿಕೇಶಿಯನ್ನು ಕೊಂದು, ವಾತಾಪಿಯನ್ನು ನಾಶಮಾಡಿ 'ವಾತಾಪಿಕೊಂಡ'ನೆಂಬ ಬಿರುದನ್ನು ಧರಿಸಿದನೆಂಬ ಉಲ್ಲೇಖನ ದೊರೆ ಯುತ್ತದೆ.

ಇದು ಸತ್ಯಸಂಗತಿಯಾಗಿರಬಹುದು— ಸತ್ಯದೂರವಾಗಿರಬಹುದು. ಯಾವುದನ್ನೂ ಖಚಿತವಾಗಿ ಹೇಳುವಂತಿಲ್ಲ. ಏಕೆಂದರೆ ಸಾಮ್ರಾಟ್ ಹರ್ಷ ವರ್ಧನನನ್ನು ಗೆದ್ದ ಪುಲಿಕೇಶಿಯು, ಯಾರ ಪರಾಕ್ರಮದ ಕೀರ್ತಿ ಪರ್ಶಿಯಾದ ಖುಸ್ರು ದೊರೆಯವರೆಗೆ ವ್ಯಾಪಿಸಿತ್ತೋ ಆ ಪುಲಿಕೇಶಿಯು—ಪಲ್ಲವ ನರಸಿಂಹ ನಿಗೆ ಸೋತು, ಕೊಲೆಯಾದನೆಂದು ನಂಬುವುದು ಕಷ್ಟ.

ಹಾಗಾದರೆ ಪುಲಿಕೇಶಿಯ ಅಂತ್ಯ ಹೇಗಾಯಿತು ? ವಾತಾಪಿಯು ನಾಶ ವಾಗಿ 'ವಾತಾಪಿಕೊಂಡ'ನೆಂಬ ಬಿರುದು ನರಸಿಂಹವರ್ಮನಿಗೆ ಹೇಗೆ ದೊರೆ ಯಿತು ? ಈ ಬಗ್ಗೆ ನಿರ್ದಿಷ್ಟವಾಗಿ ಉತ್ತರ ಕೊಡುವುದು ಕಷ್ಟ. ಈ ಬಗ್ಗೆ ಇತಿಹಾಸವು ಮೌನವನ್ನು ಧರಿಸಿದೆ. ಇದು ಕರ್ನಾಟಕದ ಚರಿತ್ರೆಯಲ್ಲಿ ಅತ್ಯಂತ ಕಗ್ಗತ್ತಲ ಕಾಲವೆನ್ನಬಹುದು. ಇದಕ್ಕೆ ಉತ್ತರವನ್ನು ಊಹಿಸಿ ತಿಳಿಯಬೇಕಾಗಿದೆ.

ಶ್ರೀ ದೇಶಪಾಂಡೆಯವರು ಊಹಿಸುವಂತೆ-ಪುಲಿಕೇಶಿಯು ತನ್ನ ಕೊನೆಯ ದಿನಗಳನ್ನು ರಾಜಯಕ್ಷ್ಮ ಇಲ್ಲವೇ ಪಾರ್ಶ್ವವಾಯು ವ್ಯಾಧಿಯಿಂದ ಹಾಸಿಗೆ ಹಿಡಿದು, ಅಸ್ವಸ್ಥನಾಗಿ ಕಳೆದಿರಬೇಕು. ಈ ಸಮಯದಲ್ಲಿ ಅವನ ಮಕ್ಕಳಲ್ಲಿ ಸಿಂಹಾಸನಕ್ಕಾಗಿ ಜಗಳ ಉಂಟಾಗಿ, ಅವರು ಸಹಕರಿಸಿ ಶತ್ರುಗಳಾದ ಪಲ್ಲವ ರನ್ನು ಎದುರಿಸದೆ, ಪಲ್ಲವರ ಕೈಯಲ್ಲಿ ಸೋಲು ಅನುಭವಿಸಿರಬೇಕು. ಈ ಘಟನೆಯಿಂದ ಪುಲಿಕೇಶಿ ಎದೆಯೊಡೆದು ಸತ್ತಿರಬೇಕು.

ಈ ವಿಚಾರ ಸರಣಿಯಲ್ಲಿ ಕಾದಂಬರಿಯ ಕಥಾನಕ ಬೆಳೆದಿದೆ. ಇದನ್ನು ಸಹೃದಯರು ವಿಮರ್ಶಿಸಬೇಕು—

ಇಲ್ಲಿ ವಿಚಾರಮಾಡಬೇಕಾದ ಒಂದು ವಿಶೇಷಾಂಶವಿದೆ—ಚಾಲುಕ್ಯರನ್ನು ಸೋಲಿಸುವುದರಲ್ಲಿ ಸಿರಿಯಾಳಶೆಟ್ಟಿಯ ಪಾತ್ರ. ಅವನು ಅರವತ್ತುಮೂರು ಪುರಾತನರಲ್ಲಿ ಒಬ್ಬನು—ಮಹಾಶಿವಭಕ್ತ. ಅವನ ಬಗ್ಗೆ ಅನೇಕ ದಂತಕಥೆಗಳೂ, ಪವಾಡಗಳೂ ಇವೆ. ಅವನು ಶಿವನನ್ನು ಮೆಚ್ಚಿಸಲು ಮಗನನ್ನೇ ಕೊಂದು ಅಡಿಗೆ ಮಾಡಿ ಬಡಿಸಿದ ಕಥೆ ಸುಪ್ರಸಿದ್ಧವೇ ಆಗಿದೆ. ಈ ವ್ಯಕ್ತಿ ಕಾಲ್ಪನಿಕ ವ್ಯಕ್ತಿಯಾಗಿರದೆ ಐತಿಹಾಸಿಕ ವ್ಯಕ್ತಿ ಎಂಬುದು ಶಾಸನಗಳಿಂದ ತಿಳಿಯುತ್ತದೆ. ಅವನು ಪಲ್ಲವ ನರಸಿಂಹನ ದಂಡನಾಯಕರಲ್ಲಿ ಒಬ್ಬನಾಗಿದ್ದು, ಚಾಲುಕ್ಯರ ಸೇನೆಯನ್ನು ಸೋಲಿಸಿ ಹಿಮ್ಮೆಟ್ಟಿಸಲು ಮಹತ್ವದ ಪಾತ್ರವಹಿಸಿರಬೇಕು. ಇವನು ಶಿವಶರಣನಾದುದರಿಂದ ಇವನನ್ನು ಇದಿರಿಸಲಾರದೆ, ದೈವಭಕ್ತರಾದ ಪುಲಿಕೇಶಿಯ ಸೈನಿಕರು ಸೋತು ಹಿಮ್ಮೆಟ್ಟಿರಬೇಕು, ಇಲ್ಲವೇ ಶಸ್ತ್ರವೆತ್ತದೆ ಶರಣಾಗಿರಬೇಕು.

ಇದು ಕೇವಲ ಕಲ್ಪನೆಯಲ್ಲ—ಐತಿಹಾಸಿಕ ಸತ್ಯವಾಗಿರಬಹುದು. ಏಕೆಂದರೆ ಇಂತಹುದೇ ಒಂದು ಅದ್ಭುತ ಘಟನೆ ವಿಜಯನಗರದ ಇತಿಹಾಸದಲ್ಲಿ ದೊರೆಯುತ್ತದೆ. ಅಳಿಯ ರಾಮರಾಯನ ಕಾಲದಲ್ಲಿ ಅವನ ಸಂಬಂಧಿಯಾದ ರಾಮರಾಜ ವಿಠಲನು ತಿರುವೇದಿಯ ಉನ್ನಿ ಕೇರಳವರ್ಮನ ಮೇಲೆ ದಂಡೆತ್ತಿ ಹೋದಾಗ, ಕೇರಳವರ್ಮನು ಪೋರ್ಚುಗೀಸ್ ಪಾದ್ರಿ ಸೆಂಟ್ ಸೇವಿಯರನ ಮೊರೆಹೊಕ್ಕನೆಂದೂ, ಅವನು ಭೂತಾಕಾರನಾಗಿ ನಿಂತು ರಾಮರಾಜನ ಸೈನ್ಯವನ್ನು ಸೋಲಿಸಿ, ಹಿಮ್ಮೆಟ್ಟಿಸಿದನೆಂದೂ, ನಮಗೆ ಪೋರ್ಚುಗೀಸರ ಐತಿಹಾಸಿಕ ವರದಿಗಳಿಂದ ಸ್ಪಷ್ಟವಾಗಿದೆ. ಅಂತೆಯೇ ಸಿರಿಯಾಳಶೆಟ್ಟಿಯ ಪವಾಡಗಳ ಮಹಿಮೆ ಪುಲಿಕೇಶಿಯ ಸೈನಿಕರನ್ನು ಸೋಲಿಸಲು ಕಾರಣವಾಗಿದ್ದರೆ ಅಚ್ಚರಿಪಡಬೇಕಾಗಿಲ್ಲ.

ಚಾಲುಕ್ಯ ಹಾಗೂ ಪಲ್ಲವ ಹಗೆತನದ ಬಗ್ಗೆ ಒಂದು ಮಾತು. ಅವರು ಕುಲಶತ್ರುಗಳೆಂಬ ಕಾರಣ, ಅವರು ಪಾರ್ಥಿಯನ್ನರ ಪಂಗಡಕ್ಕೆ ಸೇರಿದ್ದು, ತಮ್ಮ ಪೂರ್ವ ಹಗೆತನವನ್ನು ಭಾರತಕ್ಕೆ ತಂದರೆಂಬುದಲ್ಲ. ಇದು ಸುಳ್ಳೆಂದು ಪಂಡಿತರು ಈಗಾಗಲೇ ತೀರ್ಮಾನಕ್ಕೆ ಬಂದಿದ್ದಾರೆ. ಅವರ ಹೋರಾಟ

ಆರಂಭವಾದುದು ವಿಜಯಾದಿತ್ಯನೆಂಬುವನು ಪಲ್ಲವ ದೊರೆ ತ್ರಿಲೋಚನ ಮಲ್ಲನನ್ನು ಯುದ್ಧದಲ್ಲಿ ಸೋಲಿಸಿ, ಅವನಿಂದ ವಾತಾಪಿಯನ್ನು ಗೆದ್ದುಕೊಂಡು, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ ದಿನದಿಂದ. ತಮ್ಮದಾದ ವಾತಾಪಿಯನ್ನು ಪಡೆಯಲು ಪ್ರತಿಯೊಬ್ಬ ಪಲ್ಲವ ದೊರೆಯೂ ಪ್ರಯತ್ನ ನಡೆಸಿದನು. ಪಲ್ಲವರು ಕಾಂಚಿಯಲ್ಲಿ ನೆಲೆಯೂರಿ ನಿಂತರೂ, ಹಲವು ಬಾರಿ ವಾತಾಪಿಯನ್ನು ಗೆಲ್ಲುವ, ಅದನ್ನು ನಾಶಮಾಡುವ ಪ್ರಯತ್ನಗಳು ನಡೆದವು.

ಪುಲಿಕೇಶಿಯ ಪ್ರಿಯತನಯನೂ, ಶ್ರೀ ಪೃಥ್ವಿವಲ್ಲಭ, ಸತ್ಯಾಶ್ರಯ, ರಣರಸಿಕ, ಮಹಾರಾಜಾಧಿರಾಜ, ಭಟ್ಟಾರಕ, ಪರಮೇಶ್ವರನೆಂಬ ಬಿರುದಾಂಕಿತನೂ ಆದ ಒಂದನೇ ವಿಕ್ರಮಾದಿತ್ಯನು ಪಲ್ಲವ ನರಸಿಂಹವರ್ಮ, ಎರಡನೇ ಮಹೇಂದ್ರವರ್ಮ ಮತ್ತು ಒಂದನೇ ಪರಮೇಶ್ವರವರ್ಮರನ್ನು ಸೋಲಿಸಿ, ಪುಲಿಕೇಶಿಗಾದ ಸೋಲು ಅಪಮಾನಗಳನ್ನು ತೊಡೆದುಹಾಕಿದನೆಂಬುದು ಐತಿಹಾಸಿಕ ಸಂಗತಿಯೇ ಆಗಿದೆ.

